# ದೇವುಡು ಅವರ ಕೃತಿಗಳು

★

( ನಮ್ಮ ಪ್ರಕಟನೆಗಳು )

| | | |
|---|---|---|
| ಆಶಾತರಂಗ | [ ಕಾದಂಬರಿ ] | 2 4 0 |
| ಕಳ್ಳರ ಕೂಟ | ,, | 1 8 0 |
| ಸೋಲೋ ಗೆಲುವೋ | | 1 8 0 |
| ದೇಶಾಂತರದ ಕಥೆಗಳು | | 1 8 0 |

( ಅಚ್ಚಿನಲ್ಲಿ )

ಸಂಗ್ರಹ ರಾಮಾಯಣ

ಕಾಳಿದಾಸ

ಮಕ್ಕಳ ಭಂಡಾರ

( ಸಚಿತ್ರ ಸಣ್ಣ ಪುಸ್ತಕಗಳು )

# ಮುನ್ನುಡಿ

ಮಹಾಬ್ರಾಹ್ಮಣದ ಕಥೆ ಪ್ರಸಿದ್ಧರಾದ ವಸಿಷ್ಠ ವಿಶ್ವಾಮಿತ್ರರದು. ಬಹು ಪುರಾತನವಾದುದು. ಋಗ್ವೇದ, ಯಜುರ್ವೇದ, ಐತರೇಯ, ಕೌಷೀತಕೀ, ಗೋಪಥ, ಶಾಟ್ಯಾಯನ, ಷಡ್ವಿಂಶ ಬ್ರಾಹ್ಮಣಗಳು, ರಾಮಾಯಣ, ಮಹಾಭಾರತ, ಹರಿವಂಶ, ವಿಷ್ಣುಪುರಾಣ, ವಾಯುಪುರಾಣ, ಯೋಗವಾಸಿಷ್ಠ, ಇವುಗಳಲ್ಲಿ ಬಂದಿದೆ. ಆದರೂ ರಾಮಾಯಣದ ಕಥೆಯನ್ನು ಮುಖ್ಯವಾಗಿಟ್ಟುಕೊಂಡು, ಮಿಕ್ಕ ಕಡೆಗಳಲ್ಲಿ ಸಿಕ್ಕುವ ಅಂಶಗಳನ್ನು ಅದರಲ್ಲಿ ಸಂದರ್ಭೋಚಿತವಾಗಿ ಸೇರಿಸಿಕೊಂಡು ಹೆಣೆದಿರುವ ಕಥೆ ಈ ಮಹಾಬ್ರಾಹ್ಮಣ.

ಅಲ್ಲಲ್ಲಿ ಉಪನಿಷತ್ತುಗಳ ರಹಸ್ಯವಿದ್ಯೆಗಳೂ ಬಂದಿವೆ. ಈ ವಿದ್ಯಾಪ್ರತೀಕಗಳಲ್ಲಿ ಕೆಲವು ಸ್ವಾನುಭವ, ಕೆಲವು ಪರಾನುಭವ, ಕೆಲವು ಬರೆಯುತ್ತಿದ್ದಾಗ ತಾವಾಗಿ ಬಂದವು. ರುದ್ರನು ಪ್ರತ್ಯಕ್ಷವಾಗುವುದು, ದೇವತೆಗಳು ಬಂದು ಮಾತಾಡುವುದು, ಇವೆಲ್ಲ ಸ್ವಾನುಭವ. ಪ್ರಾಣಾಗ್ನಿಹೋತ್ರ, ಪಂಚಾಗ್ನಿವಿದ್ಯಾ, ಇವು ಅದನ್ನು ಮಾಡಿ ನೋಡಿದ್ದವರ ಬಾಯಿಂದ ಕೇಳಿದುದು: ಮದನನು ಹೇಳುವ ಅಹಂಕಾರ ವಿವರ್ಧನ, ಜಗನ್ನಾಥನ ತೇರು, ಗಾಯತ್ರೀ ಸಾಕ್ಷಾತ್ಕಾರಕ್ಕಿಂತ ಮುಂಚೆ ಬರುವ ಬ್ರಹ್ಮಣಸ್ಪತಿ, ಪೂಷಾ, ದೇವರ ಅನುಗ್ರಹ ಮೊದಲಾದವು ತಾವಾಗಿ ಬಂದವು.

ಹಾಗೆಯೇ ದಿವ್ಯಸ್ತ್ರೀಯರು ಮಾನವನೊಡನೆ ಸಂಸಾರವನ್ನು ಮಾಡಿರುವ ಚಿತ್ರಗಳು, ಕವಷ ಐಲೂಷನೆಂಬ ಶೂದ್ರರ್ಷಿಯು ವಿಶ್ವಾಮಿತ್ರರ ಅನುಗ್ರಹದಿಂದ ಋಷಿಯಾದನೆಂಬುದು, ಋಗ್ವೇದ ನಾಲ್ಕನೆಯ ಮಂಡಲಕ್ಕೆ ತನ್ನ ಹೆಸರು ಕೊಟ್ಟಿರುವ ವಾಮದೇವರು ಏಳನೆಯ ಮಂಡಲದ ವಸಿಷ್ಠರ ಶಿಷ್ಯರಾಗಿ ಮೂರನೆಯ ಮಂಡಲದ ವಿಶ್ವಾಮಿತ್ರರ ಆಧ್ಯಾತ್ಮಿಕ ಪುರೋಭಿ

ವೃದ್ಧಿಯ ಕಾರಣರಾದವರು ಎಂಬುದು, ಇವೆಲ್ಲ ಬರೆದವನ ಸೃಷ್ಟಿ. ಪ್ರಾಣವು ಲೋಕದಲ್ಲಿ ವ್ಯಕ್ತಿವ್ಯಕ್ತಿಗಳಲ್ಲಿ ಹರಡಿದ್ದರೂ ಮೂಲತಃ ಒಂದೇ! ಕಾಲವು ಖಂಡವಾಗಿ ವ್ಯವಹಾರ ಗೋಚರವಾಗುತ್ತಿದ್ದರೂ ಇರುವುದೆಲ್ಲ ಒಂದೇ ಕಾಲ! ಧರ್ಮಪರಿಷತ್ತು, ಬ್ರಹ್ಮಪರಿಷತ್ತು, ನೋಡುತ್ತಿದ್ದ ಹಾಗೆಯೇ ಒಳಗಿನ ಅಂತಸ್ಥವನ್ನು ಗೊತ್ತುಮಾಡಿಕೊಳ್ಳುವುದು, ಇವೆಲ್ಲ ಶಾಸ್ತ್ರಗಳ ವಿಷಯಗಳು. ಹೀಗೆ ಏನೇನೋ ಎಷ್ಟೆಷ್ಟೋ ಓದಿ, ಅಷ್ಟಷ್ಟು ಕೇಳಿ, ಇನ್ನಷ್ಟು ಸ್ವಾನುಭವ ದಿಂದ ಸಂಪಾದಿಸಿಕೊಂಡು, ಎಲ್ಲವನ್ನೂ ಗುರುಕೃಪೆಯೆಂಬ ಮೂಸೆಯಲ್ಲಿಟ್ಟು ಕರಗಿ ಎರಕ ಹೊಯ್ದಿರುವ ಬೊಂಬೆ ಇದು.

ಇದನು ಮೊದಲು ಬರೆಯಬೇಕೆಂಬ ಹಂಬಲ ಹುಟ್ಟಿದ್ದು ೧೯೩೬ರಲ್ಲಿ. ಆವೇಳೆಗೆ ಗಾಯತ್ರಿಯ ಮಹಿಮೆ ಗೊತ್ತಾಗಿ, ಗಾಯತ್ರಿಯನ್ನು ಬಲ್ಲವನು ಚತುರ್ವಿಂಶತಿ ತತ್ವಗಳನ್ನೂ ತಿರುಗಿಸಬಲ್ಲನು ಎಂಬ ನಂಬಿಕೆಯು ಬಂದಿತ್ತಾಗಿ, ಆ ಗಾಯತ್ರಿಯನ್ನು ಕಂಡು ಲೋಕಕ್ಕೆ ಸಾರಿ ಪರಮೋಪಕಾರ ಮಾಡಿದ ಮಹಾನುಭಾವನ ಕಥೆಯನ್ನು ಬರೆಯಬೇಕು ಎನ್ನಿಸಿತು. ಆದರೆ, ಸಚ್ಛಾಸ್ತ್ರವೊಂದನ್ನು ಸಂಪ್ರದಾಯಶುದ್ಧವಾಗಿ ಓದಿ ಆರ್ಷಋಣವನ್ನು ತೀರಿಸುವವರೆಗೂ ಆ ಮಹಾಮಹಿಮನ ಕಥೆಯನ್ನು ಬರೆಯುವುದು ಸರಿಯಲ್ಲ ಎಂದು ಸುಮಾರು ಇಪ್ಪತ್ತು ವರ್ಷ ಹಾಗೆಯೇ ಇರಲು, ೧೯೫೬ರಲ್ಲಿ ಬರೆಯುವ ಪ್ರವೃತ್ತಿ ಬಲಿತು ಲೇಖನಕಾರ್ಯ ಮೊದಲಾಯಿತು. ಸುಮಾರು ೧೯೫೮ರ ಆಗಸ್ಟ್ ವೇಳೆಗೆ ಮುಗಿಯಿತು.

ಮಹಾಕೃತಿಗಳನ್ನು ಸಾಧಿಸಿದವರಿಗೆಲ್ಲ ಒಂದು ವಿಷಯ ಅನುಭವಕ್ಕೆ ಬರುತ್ತದೆ. ತಾನು ತಾನು ಎಂದು ಹಗಲಿರುಳೂ ಒದ್ದಾಡುತ್ತಿರುವ ಈ ಜೀವ ತನ್ನ ಸಣ್ಣತನವನ್ನು ಬಿಟ್ಟು ಚಿಮ್ಮಿದ ಕವಡೆಯಂತೆ ಮೇಲಕ್ಕೆ ಹಾರಿ ಅದುವರೆಗೆ ತನಗೆ ತಿಳಿಯದ ವಿಷಯವನ್ನು ಸಂಪಾದಿಸಿಕೊಂಡು ಬಂದು ಹೃದಯಕ್ಕೆ ತುಂಬುತ್ತದೆ: ಆ ತುಂಬು ಕೃತಿರೂಪವಾಗಿ ಹೊರಗೆ ಬರುತ್ತದೆ. ಈ ಅಜ್ಞಾತ ವಿಷಯಗಳು ಇರುವ ಅಮೃತಖಂಡವನ್ನು ಪುರುಷಸೂಕ್ತವು ದಶಾಂಗುಲಗಳ ಆಚೆ ಇದೆಯೆನ್ನುತ್ತದೆ. ಗೀತೆಯ ದಿವ್ಯದರ್ಶನವೂ ಇದೇ! ಇದೇ ಮಂತ್ರ ಯೋಗದ ಉನ್ಮನೀಭಾವ! ಗುರುಭಕ್ತನು ಇದನ್ನೇ ಗುರುಕೃಪೆ, ಗುರು ಪ್ರಸಾದ ಎನ್ನುವುದು. ಉಪನಿಷತ್ತುಗಳು ಇದನ್ನೇ ದೇವಾಪ್ಯಯ ಎನ್ನುತ್ತವೆ.

"ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ । ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ" ಎಂಬ ಗೀತೋಕ್ತಿಯು ಅನುಭವಕ್ಕೆ ಬರುವವರೆಗೂ ಈ ಮಾತು ಅರ್ಥವಾಗುವುದು ಕಷ್ಟ. ಅದೆಂತಾದರೂ ಇರಲಿ, ಈ ಕೃತಿಯನ್ನು ಓದಿದವರಿಗೆಲ್ಲಾ ಎಷ್ಟೋ ಹೊಸ ವಿಷಯಗಳು ಬಂದಿವೆಯೆನ್ನುವುದು ಸ್ಪಷ್ಟವಾಗುವಾಗ ಈ ವಿಷಯವನ್ನೇಕೆ ಪ್ರಲಂಬಿಸುವುದು ?

ಈಗ ಸಾಹಿತ್ಯವು ಮನುಷ್ಯಸಾಮಾನ್ಯನನ್ನು ಚಿತ್ರಿಸುವ ಕಾರ್ಯದಲ್ಲಿದೆ. ತುಂಬೆಯ ಗಿಡದಲ್ಲಿ ತೆಂಗಿನಕಾಯಿ ಸಿಕ್ಕುವುದಿಲ್ಲವೆಂದು ತೆಂಗಿನತೋಟ ನೆಡುವ ಕಾರ್ಯ ಇಲ್ಲಿ ನಡೆದಿರುವುದು. ಕೆಲವರಿಗೆ ಹಿಮಾಲಯ ಹತ್ತುವ ಹಂಬಲ. ಅನೇಕಾನೇಕರು ಬೆಂಗಳೂರಿನಲ್ಲಿಯೇ ಇದ್ದರೂ ಬ್ಯೂಗಲ್ ರಾಕ್ ಹತ್ತಿರುವುದಿಲ್ಲ. ಯಾರು ಸರಿ ? ಅಲ್ಲದೆ, ಸಾಣೆಗೆ ಒಡ್ಡುವುದು ರತ್ನವನ್ನಲ್ಲದೆ ಕಲ್ಲನ್ನಲ್ಲ. ಹಾಗೆ ಮಹಾವಿಷಯಗಳನ್ನು ವಿಮರ್ಶಿಸಬೇಕೆಂಬ ಆಶೆ ಇದ್ದವರು ಮಹಾಪುರುಷರನ್ನು ಚಿತ್ರಿಸಲು ಹೊರಡದೆ ಬೇರೆ ದಾರಿಯಿದೆಯೇನು ? ಗುಡಿಸಲಿನ ಚಿತ್ರ ಬರೆಯುವಾಗ ಭಾರಿಯ ಬ್ಯಾಂಕ್ ವಿಷಯ ಬರುವುದಾದರೂ ಹೇಗೆ ?

ಜಗತ್ತು ಹೊಸ ಯುಗದ ಹಾದಿಯಲ್ಲಿದೆ. ಭಾರತವಿಂದು ಸ್ವತಂತ್ರವಾಗಿದೆ. ಜಗತ್ತಿಗೆ ಹೊಸಬೆಳಕು ಬೇಕಾಗಿದೆ. ಹಿಂದಿನ ಧರ್ಮಾಚಾರ್ಯರ ಹಾದಿಹಿಡಿದು, ವಿವೇಕಾನಂದ-ರಾಮಕೃಷ್ಣರಂತೆ, ಅನುಭವ ವೇದಾಂತವನ್ನು ಲೋಕಕ್ಕೆ ನೀಡಿ ತಾನೂ ಉದ್ಧಾರವಾಗಿ ಲೋಕವನ್ನೂ ಉದ್ಧಾರಮಾಡುವ ಕಾರ್ಯ ಭಾರತದ್ದು ಎಂಬ ನಂಬಿಕೆಯುಳ್ಳವರು 'ಶೂದ್ರ'ನನ್ನೂ 'ಬ್ರಾಹ್ಮಣ'ನನ್ನು ಮಾಡುವ ಗಾಯತ್ರಿಯ ಕರ್ತೃವಿನ ಕಥೆಯನ್ನು ಗೌರವಿಸುವರು: ಸೂಪರ್‌ಮ್ಯಾನ್ ಹಂಬಲದವರು ಆತನ ಜಾಡುಹಿಡಿದು ಕೃತಾರ್ಥರಾಗುವರು.

ಈ ಕಥೆಯನ್ನು ಅಷ್ಟಷ್ಟಾಗಿ ಓದಿದವರೂ ಸಂತೋಷಪಟ್ಟಿದ್ದಾರೆ: ಭಾರತೀಯ ಮನೋವೃತ್ತಿ, ಭಾರತೀಯನ ವ್ಯಕ್ತಿತ್ವ, ಇಲ್ಲಿ ಒಡೆದು ಕಾಣುತ್ತಿದೆ ಎನ್ನುತ್ತಾರೆ. ಈ ಮಾತುಗಳನ್ನು ಒಪ್ಪಿದವರು ಈ ಕಥೆ ಭಾರತದಿಂದ ಹೊರಕ್ಕೂ ಹೋಗಿ ವೈದಿಕ ಸಂಸ್ಕೃತಿಯ ಮಹತ್ತ್ವವನ್ನು ಮೆರೆಸಲಿ ಎಂದು ಹರೆಸುತ್ತಾರೆ.

ಬ್ರಾಹ್ಮಣದ್ವೇಷ, ವೈದಿಕ ಸಂಸ್ಕೃತಿ ತಿರಸ್ಕಾರ ತುಂಬಿರುವ ಈ ಕಾಲ ದಲ್ಲೇ ಈ ಜಾತಿಯ ಕಥೆ? ಎಂದು ಕೆಲವರು ಮಿತ್ರರು ಶಂಕಿಸಿದ್ದಾರೆ. ಹೌದು. ಕತ್ತಲು ಇರುವಾಗಲೇ ಬೆಳಕು ಬೇಕಾಗಿರುವುದು. ಜಗತ್ತು ಯಾವಾಗಲೂ ಹೀಗೆಯೇ ಇತ್ತು. ಅದೂ ಇತ್ತು : ಇದೂ ಇತ್ತು. ಮಿತ್ರರು ಇದ್ದಮೇಲೆ ಶತ್ರುಗಳೂ ಇರಲೇ ಬೇಕು. ಇದನ್ನು ಯಾರು ಕಾಣರು? ಅಲ್ಲದೆ ಸಾಹಿತ್ಯ ಸೃಷ್ಟಿಯಾಗುವುದು ಸನ್ಮಿತ್ರರಿಗಾಗಿ. ಬಾಳೆಯ ಹಣ್ಣು ಹಲಸಿನ ಹಣ್ಣು ಹುಟ್ಟಿರುವುದು ಹೊಟ್ಟೆಯ ನೋವಿನಿಂದ ನರಳುವವರಿಗಲ್ಲ: ಹಸಿ ವನ್ನು ತಡೆಯಲಾರದವರಿಗಾಗಿ.

ಕಾಲದೇಶಗಳ ಕಟ್ಟಿಗೆ ಒಳಪಟ್ಟವರು ವೇದೋಪನಿಷತ್ತುಗಳ ಬ್ರಹ್ಮರ್ಷಿ ಗಳ ಬಳಗವೆಲ್ಲ ಒಂದೇ ಎಡೆ ಸೇರಿರುವುದನ್ನು ಕಂಡು ಚಾರಿತ್ರಿಕವಾಗಿ ಇದು ಅಬದ್ಧವೆಂದಾರು. ಹೀಗೆಯೇ ಇನ್ನೂ ಎಷ್ಟೋ ಸಂದೇಹಗಳೂ ಬಂದಾವು. ಅವಕ್ಕೆಲ್ಲ ಗ್ರಂಥದಲ್ಲಿಯೇ ಸಮಾಧಾನವಿದೆಯಾಗಿ ಆ ವಿಚಾರ ಪ್ರತ್ಯೇಕವಾಗಿ ಪ್ರಸ್ತಾಪಿಸಿಲ್ಲ.

ಒಟ್ಟಿನಲ್ಲಿ ಆಸ್ತಿಕರಿಗೆ ಅಮೃತಖಂಡವಾಗಿ ತದಿತರರಿಗೆ ಒಂದು ಕಲ್ಲು ಸಕ್ಕರೆಯ ತುಂಡಾದರೂ ಆಗಲಿ ಎಂದು ಹುಟ್ಟಿದ ಈ ಕಥೆ ಎಲ್ಲರಿಗೂ ಅಮೃತ ಖಂಡವೇ ಎನಿಸಿದರೆ ಅದು ನಮ್ಮ ಜನತೆಯ ಭಾಗ್ಯ. ಏಕೆಂದರೆ ಈ ಕಥೆ ಯಲ್ಲಿ ಚಿತ್ರಿತವಾಗಿರುವುದು ಭರತಖಂಡದ ಆತ್ಮ : ಪರಕೀಯರ ಧಾಳಿಗೆ ಸಾವಿ ರಾರು ವರ್ಷದಿಂದ ಸಂತತವಾಗಿ ಸಿಕ್ಕಿದ್ದರೂ ಇನ್ನೂ ಪಾತಾಳಕ್ಕಿಳಿಯದೆ ನಿಂತಿರಲು ಈ ಜನತೆಗೆ ಸಾಮರ್ಥ್ಯವಿತ್ತಿರುವ ಅಂತಶ್ಶಕ್ತಿ : ಶ್ರೀರಾಮಕೃಷ್ಣ, ದಯಾನಂದ, ತಿಲಕ್, ಟಾಗೋರ್, ಗಾಂಧಿಯವರಂತಹ ಸತ್ಪುತ್ರರನ್ನು ಪಡೆ ಯುವ ಬಸುರಿನ ಭಾಗ್ಯ.

ಈ ಕಥೆಯಲ್ಲಿ ವಿಶ್ವಾಮಿತ್ರನು ಪಡೆದ ಸಿದ್ಧಿಗಳನ್ನೆಲ್ಲ ಪಡೆದವರು, ಪಡೆಯಬಲ್ಲವರು, ನಮ್ಮ ದೇಶದಲ್ಲಿ ಎಷ್ಟೋ ಜನರು ಇದ್ದಾರೆ. ಅದರಿಂದ ಈ ಗ್ರಂಥ ಕಥೆಯೆಂದವರಿಗೆ ಕಥೆ : ಶಾಸ್ತ್ರವೆಂದವರಿಗೆ ಶಾಸ್ತ್ರ ; ವಿದ್ಯೆ ಯೆಂದವರಿಗೆ ವಿದ್ಯೆ. ಇದು ಎಲ್ಲಿಂದಲೋ, ಯಾರಿಗೋ ಬಂದಿದೆ. ಲೇಖಕನು

ಫಲಭೋಕ್ತೃವು ತಾನಾದ್ದರಿಂದ ಕರ್ತೃತ್ವವೂ ಸ್ವನಿಷ್ಠವಾಗಿರಬಹುದು ಎಂದುಕೊಂಡು, ಇದನ್ನು ಕೊಟ್ಟವರಿಗೆ ಕೃತಜ್ಞನಾಗಿದ್ದಾನೆ.

* * *

ಈ ಗ್ರಂಥದ ವಿಲೇಖನ ಕಾಲದಲ್ಲಿ ಪ್ರೋತ್ಸಾಹವಿತ್ತ ಶ್ರೀ ಮಂಚಲ ದೊರೆ ರಾಮರಾಯರಿಗೆ, ಈ ಗ್ರಂಥದ ಒಂದೆರಡು ಅಧ್ಯಾಯಗಳನ್ನು ತಮ್ಮ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿದ ಪ್ರಜಾಮತದ ಸಂಪಾದಕರಿಗೆ, ವಿಶ್ವಾಸ ದಿಂದ ಮುದ್ರಣಕಾರ್ಯವನ್ನು ನಿರ್ವಹಿಸಿದ ಸುಬೋಧ ಮುದ್ರಣಾಲಯದವ ರಿಗೆ ವಂದನೆಗಳು. ಈ ಕಥೆಯ ಪ್ರಕಾಶನವನ್ನು ವಹಿಸಿರುವ ಶ್ರೀ ಆನಂದ್ ಬ್ರದರ್ಸ್ ಅವರಿಗೆ ಲೇಖಕನು ಬಹಳ ಕೃತಜ್ಞನಾಗಿದ್ದಾನೆ. ಇಂತಹ ಗ್ರಂಥಗಳನ್ನು ಅವರಿಂದ ಬಹುವಾಗಿ ಪಡೆಯುವ ಭಾಗ್ಯವು ನಮ್ಮ ಸಮಾಜಕ್ಕೆ ಲಭಿಸಲಿ.



ಯದ್ವಾಕ್ಯಾಮೃತಪಾಯಿನಾಂ ಪ್ರತಿಪದಂ ಸತ್ಯಂ ಸುಧಾ ನೀರಸಾ ।
ಯದ್ವಾಕ್ಯಾರ್ಥವಿಚಾರಣಾದಭಿಮತಃ ಸ್ವರ್ಗೋऽಪಿ ಕಾರಾಗೃಹಂ ॥
ಯದ್ವಾಣೀವಿಶದಾತ್ಮಪೂರ್ಣಮನಸಾಂ ತುಚ್ಛಂ ಜಗತ್ತೂಲವತ್ ।
ತಸ್ಮೈ ಶ್ರೀಗುರುವೇ ವಸಿಷ್ಠಮುನಯೇ ನಿತ್ಯಂ ನಮಸ್ಕುರ್ಮಹೇ ॥

ಯಸ್ಯಾರ್ಷಂ ಪ್ರಥಿತಾ ಜಗತ್ತ್ರಯಹಿತಾ ಸಾ ವೇದಮಾತಾ ಪುರಾ ।
ಯಶ್ಚಕ್ರೇ ತಪಸಾ ವಶೇ ಸುರಗಣಾನನ್ಯತ್ ಸಿಸೃಕ್ಷುರ್ಜಗತ್ ॥
ತಂ ವೇದಾಂಬುನಿಧಿಂ ತಪಸ್ವಿಮಕುಟಾಲಂಕಾರ ಚಿಂತಾಮಣಿಂ ।
ವಿಶ್ವಾಮಿತ್ರಮುನಿಂ ಶರಣ್ಯಮನಘಂ ಭೂಯೋ ನಮಸ್ಯಾಮ್ಯಹಂ ॥



" Man is simultaneously a material object, a living being, a focus of mental activities.... But he belongs to another world : a world, which, although enclosed within himself, stretches beyond space and time. And of this world, if his will is indomitable, he may travel over the infinite cycles: the cycle of beauty, contemplated by scientists, artists and poets : the cycle of grace, ultimate reward of those who passionately seek the principle of all things........"

DR. ALEXIS CARREL,
Man, the unknown ; Chap. VIII, Sec. 13.

# ಮಹಾ ಬ್ರಾಹ್ಮಣ

## ಒಂದನೆಯ ತರಂಗ

ಭಗವಾನ್ ಆದಿತ್ಯದೇವನು ಉಷೆಯಿತ್ತ ಹಸ್ತಲಾಘವವನ್ನು ಸ್ವೀಕರಿಸಿ, ಜಗತ್ತಿನ ಚರಾಚರಗಳಿಗೆಲ್ಲ ಚೈತನ್ಯವನ್ನು ದಾನಮಾಡುತ್ತ ಪ್ರಾಚೀನ ಸಿಂಹಾಸನವನ್ನು ಏರಬರುತ್ತಿದ್ದಾನೆ. ನಕ್ಷತ್ರಗಳು ದೂರದಲ್ಲಿ ಪಶ್ಚಿಮ ದಿಗಂತದಲ್ಲಿ ಅಲ್ಲೊಂದು ಇಲ್ಲೊಂದು ಇದ್ದು, ಹೊಸ ರಾಜನ ಪ್ರಾದುರ್ಭಾವ ಕಾಲದಲ್ಲಿ ಇರುವ ಹಳೆಯ ರಾಜನ ಕಡೆಯವರಂತೆ ಅಸ್ತತೇಜರಾಗುತ್ತಿವೆ. ಮಹಾನುಭಾವರ ಕೀರ್ತಿಯಂತೆ ಆಶ್ರಮಗಳಲ್ಲಿ ಹೋಮಧೂಮವು ಸೂಕ್ಷ್ಮವಾದರೂ ಸುಗಂಧಭೂಯಿಷ್ಠವಾಗಿ ಮೇಲಕ್ಕೇಳುತ್ತಿದೆ. ಸರ್ವಾತ್ಮನಾದ ಸವಿತೃದೇವನ ಕೀರ್ತಿಯನ್ನು ಹೊಗಳುವ ಭಂಟರೋ ಎಂಬಂತೆ, ಸಾಮಗಾನ ಮಾಡುವ ಬ್ರಾಹ್ಮಣರನ್ನು ಅನುಕರಿಸುತ್ತಿವೆಯೋ ಎಂಬಂತೆ, ಹಕ್ಕಿಗಳು ಹಾಡುತ್ತಿವೆ. ಪ್ರಕೃತಿಯು ಪ್ರಾತಃಕಾಲದ ಮನೋಹರವಾದ ತಂಗಾಳಿಯಲ್ಲಿ ಮಿಂದ ಸುಂದರಿಯಂತೆ ಮನೋಹರವಾಗಿದೆ.

ವಸಿಷ್ಠರು ಅಗ್ನಿಗೇಹದಲ್ಲಿ ಆಗತಾನೇ ಉಪಾಸನೆಯನ್ನು ಮುಗಿಸಿ ಮೂರು ಅಗ್ನಿಗಳ ಜೊತೆಗೆ ನಾಲ್ಕನೆಯ ಉರಿಯದ ಅಗ್ನಿಯಂತೆ ತೇಜೋವಿರಾಜಿತರಾಗಿ ಕುಳಿತಿದ್ದಾರೆ. ಅರುಂಧತೀದೇವಿಯು ತಮ್ಮ ಕಾರ್ಯವನ್ನು ಮುಗಿಸಿ ಮೇಲಕ್ಕೆದ್ದಿದ್ದಾಳೆ. ಆಕೆಯು ಎಂದಿನಂತೆ ಪತಿದೇವನೂ ಏಳುವರು ಎಂದು ಅಷ್ಟುಹೊತ್ತು ಕಾದಳು. ಅವರು ಏಳಲಿಲ್ಲ. ಕಣ್ಣುಗಳು ನೆಟ್ಟ ನೋಟದಿಂದ ದೂರದ ದಿಗಂತದ ಆಚೆ ದೃಗ್ಗೋಚರವಾಗಿರುವುದನ್ನು ನೋಡುತ್ತಿರುವಂತೆ ನೋಡುತ್ತಿವೆ. ಹುಬ್ಬುಗಳು ಕೊಂಚ ಮುರಿದಂತಾಗಿ ಕಾಣು

ತ್ತಿರುವ ನೋಟದ ಗಭೀರತೆಯನ್ನು ಸೂಚಿಸುತ್ತಿವೆ. ಮುಖವೂ ಗಂಭೀರ ವಾಗಿ, ಕಾಣುತ್ತಿರುವುದು ಅಷ್ಟು ಸುಖಮಯವಾಗಿಲ್ಲ ಎಂಬುದನ್ನು ತೋರಿಸು ತ್ತಿದೆ. ಹಾಗೆ ಅಷ್ಟು ಹೊತ್ತಿದ್ದು ಮುಖವು ಪ್ರಸನ್ನವಾಯಿತು. ಅರುಂಧತೀ ದೇವಿಗೂ ಮನಸ್ಸು ನಿರಾಳವಾಯಿತು. ಬಹಳದೂರ ಸಂಚಾರಹೋಗಿದ್ದ ಮನಸ್ಸು ಹಿಂತಿರುಗಿ ಬಂದುದನ್ನು ತೋರಿಸುವಂತೆ ಒಂದು ನಿಟ್ಟುಸಿರು ಬಂತು. ಅದರ ಹಿಂದೆಯೇ ಇಷ್ಟೇ ತಾನೇ ಎಂಬ ನಿಶ್ಚಲ ದೃಢ ಭಾವದ ಸಣ್ಣನಗುವು, ಪ್ರಶಾಂತ ಸರಸಿಯಲ್ಲಿ ಸಹಜವಾಗಿ ಬರುವ ಸಣ್ಣಲೆಯಂತೆ ಪ್ರಕಟವಾಯಿತು.

ದೇವಿಯು ಅಲ್ಲೇ ನಿಂತಿದ್ದರು. ಅವರಿಗೆ ಇದೇನು ಎಂದು ಕೇಳ ಬೇಕೆಂಬ ಕುತೂಹಲ. ಆದರೆ ಆ ದೇವನ ಸನ್ನಿಧಿಯಲ್ಲಿ ತಾನಾಗಿ ಮಾತಾ ಡಿದುದಿಲ್ಲ. ಅದರಿಂದ ಮೌನವಾಗಿದ್ದರು. ಆ ಮೌನವೇ ಬಹುಶಃ ವಸಿಷ್ಠರಿಗೆ ಆಕೆಯ ಕುತೂಹಲವನ್ನು ಸೂಚಿಸಿತೇನೋ ? ಅವರು ಮಾತನಾಡಿದರು : "ಆಗುವುದೆಲ್ಲಾ ಆಗಲಿ" ಎಂದರು.

ಆಕೆಯು ಆ ಸೂತ್ರವಾಕ್ಯದ ಮೇಲೆ ವ್ಯಾಖ್ಯಾನಮಾಡಬೇಕೆಂದಿರ ಲಿಲ್ಲ. ಆದರೂ ಸ್ತ್ರೀಸಹಜವಾದ ಕುತೂಹಲವೇ ಆಕೆಯು ನಿರೋಧಿಸ ಬೇಕೆನ್ನುವುದರೊಳಗಾಗಿ "ಹಾಗೆಂದರೆ ?" ಎಂದುಬಿಟ್ಟಿತು.

ವಸಿಷ್ಠರು ನಕ್ಕು ಹೇಳಿದರು : "ನ್ಯಾಯ, ನಾನೇ ಎಲ್ಲವನ್ನೂ ಹೇಳ ಬೇಕಾಗಿತ್ತು. ಆಶ್ರಮದ ಅಧಿರಾಜ್ಞಿಗೆ ಆಶ್ರಮದ ವಿಷಯ ತಿಳಿದಿರಬೇಡವೆ ? ಹೊಸದೊಂದು ಸೃಷ್ಟಿಯಾಗಲಿದೆ. ಆ ನಾಟಕದ ಪೂರ್ವರಂಗವು ನಮ್ಮ ಆಶ್ರಮದಲ್ಲಿ ನಡೆಯುವುದು. ದೇವಿ, ನಿಮ್ಮಾಶ್ರಮದಲ್ಲಿ ರಕ್ತಪಾತವಾಗು ವುದು. ಅದೂ ಅಷ್ಟುಇಷ್ಟಲ್ಲ. ಆಶ್ರಮದ ಭೂಮಿಯ ಬಾಯಾರಿಕೆಯಡಗು ವಷ್ಟು ರಕ್ತಪಾತ. ಅಷ್ಟು ಬಲಿಯಾಗಬೇಕೆ ? ಎಂದು ನಿಟ್ಟುಸಿರು ಬಂತು. ಬಲಿಯಿಲ್ಲದೆ ಫಲವೆಲ್ಲಿ ? ಪ್ರಕೃತಿಯ ರುದ್ರಭಯಂಕರ ನರ್ತನದ ಫಲವಾಗಿ ಆಗುವ ಆ ಹೊಸ ಸೃಷ್ಟಿಯ ಸತ್ಫಲವನ್ನೂ ಕಂಡೆ. ತಾನಾಗಿ ಕಣ್ಣಿಗೆ ಬಿತ್ತು. ಸಂತೋಷವಾಗಿ ನಗು ಬಂತು."

ಅರುಂಧತಿಯು ಕಾತರಳಾದಳು, ವಿಷಣ್ಣಳಾದಳು. "ಏನು ! ರಕ್ತ ಪಾತವೇ ? ಆಶ್ರಮದಲ್ಲಿ, ಅದೂ ನಮ್ಮ ಆಶ್ರಮದಲ್ಲಿ ?"

ಆಕೆಯ ಆ ಭಾವವನ್ನು ಕಂಡು ವಸಿಷ್ಠರಿಗೆ ಇನ್ನೂ ನಗೆ ಬಂತು. ಹಿತ ವಾಗಿ ಮಿತವಾಗಿ ಒಂದು ಸಲ ನಕ್ಕು, "ಏನು ದೇವಿಯವರೆ? ಪ್ರಕೃತಿಯು ತನ್ನ ಮುಖವನ್ನು ಗಂಟಿಕ್ಕಿ ಸಿಡಿಲು ಗುಡುಗುಗಳಿಂದ ಅಬ್ಬರಿಸಿ ದೊಡ್ಡಮಳೆ ಕರೆದಾಗ, ನಿಮ್ಮ ಆಶ್ರಮದ ಭೂಮಿಯಲ್ಲಿ ಮಣ್ಣು ಕೊಚ್ಚಿಹೋಗುವು ದಿಲ್ಲವೆ? ಹಾಗೆಂದು ಸಿಡಿಲು ಗುಡುಗು ದೊಡ್ಡಮಳೆಗಳನ್ನು ಬೇಡವೆನ್ನು ವಿರಾ? ಹಾಗೆಯೇ ಇದು. ಹೌದು, ನಿಮ್ಮ ಆಶ್ರಮದಲ್ಲಿ ರಕ್ತಪಾತವಾಗು ವುದು. ಅಷ್ಟೇ ಅಲ್ಲ. ರಕ್ತದ ಹೊಳೆಯು ಹರಿಯುವುದು. ಏಕಾಗಬಾರದು? ತ್ರಿಗುಣಗಳಿಂದ ಆಗಿರುವ ಈ ಪಂಚಭೂತಗಳಲ್ಲಿ, ಪಂಚಭೂತಗಳಿಂದ ಆಗಿರುವ ಈ ಜಗತ್ತಿನಲ್ಲಿ ಆ ಮೂರು ಗುಣಗಳೂ ಇದ್ದೇ ಇವೆ. ಅಲ್ಲಲ್ಲಿ, ಒಂದೊಂದು ಕಾರಣಾಂತರದಿಂದ, ಒಂದು ಗುಣವು ಮಾತ್ರ ಕಾಣುತ್ತಿದ್ದರೂ, ಇತರ ಗುಣಗಳು ಅಲ್ಲಿ ಇರಲೇ ಇಲ್ಲವೆ? ಅಡಗಿ ಕುಳಿತಿದ್ದುವು. ಇದು ಜಗತ್ತು ದೇವಿ. ಗಳಿಗೆ ಗಳಿಗೆಗೂ ಬದಲಾಯಿಸುತ್ತಿರುವುದೇ ಇದರ ಗುಣ. ಮಾನವನ ಮನಸ್ಸು ಆ ಬದಲಾವಣೆಯನ್ನು ಸಹಿಸಿಕೊಳ್ಳಲಾರದೆ ಒಂದೇ ಸ್ಥಿತಿಯಿರಲಿ ಎಂದು ಹಂಬಲಿಸುವುದು. ಆದರೆ ಕರ್ತನ ನಿಯಮವು ಹಾಗಿಲ್ಲ. ಹಳದು ಹೋಗಬೇಕು, ಹೊಸದು ಬರುತ್ತಿರಬೇಕು. ಅದಕ್ಕಾಗಿಯೇ, ಆಗಾಗ ಇದ್ದ ಸ್ಥಿತಿಯು ಹಠಾತ್ತಾಗಿ ಬದಲಾಗುವುದು. ಅಡಗಿದ್ದ ಗುಣಗಳು ರೇಗಿ ಮೇಲಕ್ಕೇಳುವುವು. ನದಿಯಲ್ಲಿ ಹೊಸ ನೀರು ಬಂದು ಎಲ್ಲವನ್ನೂ ಹೊಡೆದುಕೊಂಡೋಡುವಂತೆ, ತಮೋಗುಣವು ರೇಗಿ ಎಲ್ಲವನ್ನೂ ತೊಡೆಯು ವುದು. ಅದನ್ನು ಕಂಡು ನಾವು ಅಳುಕುವುದೇ? ತಮೋಗುಣವು ಬಂದು ಗುಡಿಸಿಕೊಂಡು ಹೋಗದಿದ್ದರೆ, ರಜೋಗುಣವು ಬಂದು ಹೊಸ ಆಟವನ್ನು ಹೂಡುವುದೆಲ್ಲಿ? ಮೃತ್ಯುವಿನ ರುದ್ರನರ್ತನವಲ್ಲವೇ ದೇವಿ, ಹೊಸ ಸೃಷ್ಟಿಯ ನಾಂದಿ? ಈ ತಮಸ್ಸು, ಈ ರಜಸ್ಸುಗಳು ಇಷ್ಟು ಸಂಭ್ರಮದಿಂದ ವಿಜೃಂ ಭಿಸದಿದ್ದರೆ ಸತ್ತ್ವಗುಣವು ಎಲ್ಲಿಂದ ಬರಬೇಕು? ರಸಮಯವಾದ ಫಲವು ಬೇಕು ಎನ್ನುವವನು ಹೀಚು ಕಾಯಿಗಳ ಒಗರು ಹುಳಿಗಳನ್ನು ಬೇಡವೆಂದರೆ ಹೇಗೆ? ಎಲ್ಲವನ್ನೂ ಮಾಡುವುದು ಕಾಲ. ಆ ಕಾಲದ ಒಂದು ಕೊನೆ ಕರಾಳವಾದರೆ ಇನ್ನೊಂದು ಶಾಂತ, ಸುಖ. ಅದೇ ಪ್ರಕೃತಿಯ ಧರ್ಮ ಕಾರ್ಯತಃ ಎರಡೂ ಒಂದೇ. ಆದರೂ ಆರಂಭ ಮುಕ್ತಾಯಗಳೆರಡರಲ್ಲೂ

ಒಂದೇ ಭಾವವಿರುವುದು ಅಪರೂಪ, ದೇವಿ. ಅಲ್ಲದೆ, ಸುಖ ದುಃಖ ಎರಡೂ ವಿಕಾರಗಳು. ಒಂದು ಚಿನ್ನದ ಬಳೆ: ಇನ್ನೊಂದು ಕಬ್ಬಿಣದ ಬಳೆ. ಕಬ್ಬಿಣದ ಬಳೆ ಬೇಡ, ಚಿನ್ನದ ಬಳೆ ಬೇಕು ಎಂದುಕೊಂಡ ನಮ್ಮ ಮನಸ್ಸಿಗೆ ಒಂದು ಒಗ್ಗಿದೆ. ಇನ್ನೊಂದು ಒಗ್ಗಿಲ್ಲ. "ಒಗ್ಗಿರುವುದು ಇನ್ನಷ್ಟುಕಾಲ ಇರಲಿ. ಬೇಡವಾದುದು ಬೇಗ ಮುಗಿಯಲಿ" ಎನ್ನುವೆವು. ಅದೇಕೆ ಹಾಗಾಗಬೇಕು? ಬೇಕಾಗಿರುವುದು ಬೇಗ ಮುಗಿದು, ಬೇಡವಾದುದೇ ಇನ್ನಷ್ಟುಕಾಲ ನಡೆಯಬಾರದೇಕೆ? ನಮಗೆ ಬೇಕುಬೇಕಾದುದನ್ನೆಲ್ಲ ಕೊಡುವ ನಂದಿನಿಯೂ ಒಂದೊಂದು ಸಲ ತಲೆಯನ್ನು ಹಾಗೆನ್ನುವುದಿಲ್ಲವೆ? ದಿವ್ಯಧೇನುವಿನಲ್ಲಿಯೂ ಒಂದುಸಲ ಅನಿಷ್ಟಚೇಷ್ಟೆಯು ಕಾಣುವುದಿಲ್ಲವೆ? ಹಾಗೆ! ಬರಲಿ. ಏನೇನು ಬರಬೇಕೋ ಅದೆಲ್ಲ ಬರಲಿ. ಕಾಲಗರ್ಭದಲ್ಲಿ ಅಡಗಿರುವುದೆಲ್ಲ ಈಚೆಗೆ ಬರಲಿ. ಅದೂ ಒಂದು ಲೀಲೆಯೆಂದರೆ ಮುಗಿಯಿತು. ಲೀಲೆಯೆಂದರೆ ಅದರ ಕರಾಳ ರೂಪವಡಗಿತು: ಅದರ ಸುಖಮಯರೂಪದ ದರ್ಶನವಾಯಿತು. ಆಗ ಕಾಲನ ಜೊತೆಯಲ್ಲಿ ನಾವೂ ಲೋಲರು. ಅಲ್ಲವೆ?"

ಗುರುದೇವನ ಮಾತು ಕೇಳಿ ಅರುಂಧತಿಗೆ ಆಶ್ಚರ್ಯವಾಯಿತು: "ಎರಡೆರಡು ಮಾತಿನಲ್ಲಿ ಎಲ್ಲವನ್ನೂ ಮುಗಿಸುವವರು ಇವೊತ್ತು ಇಷ್ಟು ದೀರ್ಘವಾಗಿ ಮಾತನಾಡುತ್ತಿರುವುದೇಕೆ? ಏನೋ ಭಯಂಕರವಾದ ಪ್ರಸಂಗವಿರಬೇಕು. ಆಶ್ರಮದಲ್ಲಿ ರಕ್ತಪಾತ. ಅದರಲ್ಲಿಯೂ ಬ್ರಹ್ಮರ್ಷಿಗಳ ಆಶ್ರಮದಲ್ಲಿ. ಎಲ್ಲೆಲ್ಲಿಯೂ ಶಾಂತಿಯು ತುಂಬಿ ತುಳುಕುತ್ತಿರುವ ಬ್ರಹ್ಮಭೂಮಿಯಲ್ಲಿ ರಕ್ತಪಾತ. ಹಾರುವ ಹಕ್ಕಿ, ಈಜುವ ಮೀನು ಕೂಡ ಜಗಳವನ್ನರಿಯದ ಭೂಮಿಯಲ್ಲಿ ರಕ್ತಪಾತ. ಹುಂ. ನನಗೇಕೆ? ದೇವರು ಇಷ್ಟು ಹೇಳಿದುದೂ ನೀನು ಸಿದ್ಧವಾಗಿರು ಎಂದು ಹೇಳುವುದಕ್ಕೆ. ಅವರ ಬಾಯಲ್ಲಿ ಬಂದಮೇಲೆ ಅದು ನಿಜ. ಆಗಿಯೇ ತೀರುವುದು. ಮನಸ್ಸಿನಲ್ಲಿ ನೆನಪಿಟ್ಟುಕೊಳ್ಳಬೇಕು. ಮನೋವಿಕಾರದ ಒಂದು ಮುಖ ಸುಖ: ಇನ್ನೊಂದು ಮುಖ ದುಃಖ. ಆಗಲಿ, ಒಂದು ಮುಖ ಕಂಡಾಗ, ಕೊಂಚ ಶ್ರಮಪಟ್ಟು ಇನ್ನೊಂದು ಮುಖವನ್ನು ಇತ್ತ ತಿರುಗಿಸಿಕೊಂಡರಾಯಿತು" ಎಂದು ಧೈರ್ಯಮಾಡಿಕೊಂಡಳು. ಆದರೂ ರಕ್ತಪಾತ, ನೆಲವು ಕುಡಿದು ಉಗುಳುವಷ್ಟು ರಕ್ತಪಾತ, ಎಂದರೆ ಆಕೆಯ ಎದೆಯು ನಡುಗಿತು. ಅಲ್ಲಿಯೇ ಕುಳಿತು ಎಲ್ಲ

ವನ್ನೂ ವಿಸ್ತಾರವಾಗಿ ಕೇಳಬೇಕು ಎನ್ನಿಸಿತು. ಆದರೆ ಬಹುದಿನದಿಂದ ನಡೆದುಬಂದು ಅಭ್ಯಾಸವಾಗಿರುವುದನ್ನು ಮೀರುವುದೆಂತು? ಪತಿಯಪ್ಪಣೆ ಯಿಲ್ಲದೆ ಅಗ್ನಿಗೃಹದಲ್ಲಿ ಕುಳಿತುಕೊಳ್ಳುವುದೆಂತು? ಅಲ್ಲದೆ, ಏನು ಕೇಳ ಬೇಕಾದರೂ ಅಲ್ಲಲ್ಲ: ಆಗಲ್ಲ.

ಈ ಸಿದ್ಧಾಂತಕ್ಕೆ ಬರುವುದರೊಳಗಾಗಿ ಹಿಂದಿನ ರಾತ್ರಿ ತನಗಾದ ಒಂದು ಕನಸು ನೆನಪಾಯಿತು. ಅದನ್ನೂ ಬಾಯಿ ನುಡಿದುಬಿಟ್ಟಿತು. "ನಿನ್ನೆಯ ರಾತ್ರಿ ಏನೋ ಸ್ವಪ್ನ. ಅಷ್ಟು ಸುಖವಾಗಿರಲಿಲ್ಲ. ಅದು ನೆನೆಪಾ ದಾಗಲೆಲ್ಲ ಏನೋ ಕಹಿಕಹಿ" ಎಂದಳು ಆಕೆ.

ವಸಿಷ್ಠರು ನಕ್ಕರು: "ಹೌದು ಹೌದು. ನಾಲಗೆಯ ಅಧಿಕಾರಕ್ಕೆ ಒಳಪಟ್ಟಾಗ ಕಹಿಯು ಕಹಿ. ಸಿಹಿಯು ಸಿಹಿ. ಅದು ನಮ್ಮ ಅಧಿಕಾರಕ್ಕೆ ಸಿಕ್ಕಿದರೆ ಆಗ ಕಹಿಯೂ ಕಹಿ, ಸಿಹಿಯೂ ಸಿಹಿ" ಎಂದರು.

ಅರುಂಧತಿಗೆ ಅಲ್ಲಿಂದ ಮುಂದೆ ಮಾತಾಡಲು ಆಗಲಿಲ್ಲ. "ನಿಜ, ನಿಜ. ಅವರು ಹೇಳಿದ ಹಾಗೆ ಎಲ್ಲವೂ ಮಂಗಳದ ಮುಂಬೆಳಗು. ಅರ್ಥವಾಗುವವ ರೆಗೂ ಅಮಂಗಳ: ಆದರೆ ಮಂಗಳ" ಎಂದುಕೊಂಡು ಆಕೆಯು ಹೊರಟು ಹೋದಳು.

ಭವಿಷ್ಯವು ಘೋರವೆಂದು ಒಬ್ಬರಿಗೆ ಪ್ರತ್ಯಕ್ಷವಾಗಿ, ಇನ್ನೊಬ್ಬರಿಗೆ ಪರೋಕ್ಷವಾಗಿ ಗೊತ್ತು. ಆದರೂ ಯಾರೂ ಅದನ್ನು ತಪ್ಪಿಸಲು ಯತ್ನ ಮಾಡಲಿಲ್ಲ.

---

## ಎರಡನೆಯ ತರಂಗ

ಮಹಾರಾಜಾ ಕೌಶಿಕನು ಆಶ್ರಮದಲ್ಲಿ ತನ್ನ ಶಿಬಿರದಲ್ಲಿ ಬ್ರಹ್ಮರ್ಷಿ ಯಿಂದ ಸತ್ಕಾರವನ್ನು ಪಡೆದು ಸಂತೋಷ ಪರವಶನಾಗಿ ಆಶ್ಚರ್ಯ ಮಗ್ನನಾಗಿ ಸಂಭ್ರಾಂತನಾಗಿ ಕುಳಿತಿದ್ದಾನೆ. ಸತ್ಕಾರವು ಅವನು ನಿರೀಕ್ಷಿಸುವುದಕ್ಕೂ ಆಗದಷ್ಟು ದೊಡ್ಡದು. ತನ್ನಂತಹ ಅಧಿರಾಜನಿಗೂ ಸಾಧ್ಯವೇ ಎನ್ನುವಷ್ಟು

ಹಿರಿದು. ಅರಸನಿಂದ ಹಿಡಿದು ಆಳಿನವರೆಗೆ, ಆನೆಯಿಂದ ಹಿಡಿದು ನಾಯಿಯ ವರೆಗೆ ಎಲ್ಲರಿಗೂ ಎಲ್ಲಕ್ಕೂ ಸತ್ಕಾರವು ನಡೆದಿದೆ ನಿಜವಾಗಿಯೂ ಅದು ಸಮಾರಾಧನ.

ಕೌಶಿಕನು ಚಿಂತಿಸುತ್ತಿದ್ದಾನೆ. "ಈತನು ಕುಲಪತಿಯೇ ನಿಜ. ಆದರೂ ಧರ್ಮಿಷ್ಠನಾದ ಈತನು ಒಂದು ವರ್ಷಕ್ಕಾಗುವಷ್ಟು ಮಾತ್ರ ಸಂಭಾರ ಗಳನ್ನುಳ್ಳವನು. ಈ ದಿನದ ಸತ್ಕಾರಕ್ಕೆ ಆಗಿರುವ ದ್ರವ್ಯಸಂಭಾರಗಳನ್ನು ಕುರಿತು ಯೋಚಿಸಿದರೆ, ಈ ಆಶ್ರಮಕ್ಕೆ ಬಹುಶಃ ಐದು ವರ್ಷಕ್ಕಾದರೂ ಆದೀತು. ನಾನು ಬಂದು ಈತನಿಗೆ ಹೀಗೆ ಅನಾನುಕೂಲವಾಯಿತೋ ? ನನ್ನಿಂದ ತೊಂದರೆಯಾಯಿತೋ ? ಅಥವಾ ಈ ಬ್ರಹ್ಮರ್ಷಿಯು ದೇವಲೋಕ ದಿಂದ ಏನಾದರೂ ಎಲ್ಲವನ್ನು ತರಿಸಿದನೋ ? ಉಂಟು. ಈತನ ಶಿಷ್ಯರಾದ ನರಪತಿಗಳು ಅನೇಕರುಂಟು. ಈತನಿಗಾಗಿ ಸರ್ವಸ್ವವನ್ನೂ ಒಪ್ಪಿಸುವವ ರುಂಟು. ಆದರೆ ಇಷ್ಟುಬೇಗ ಇಷ್ಟು ಸಂಭಾರಗಳನ್ನು ಒದಗಿಸುವುದು ಹೇಗೆ ?" ಎಂದು ಮುಂತಾಗಿ ಬಹು ದೀರ್ಘವಾಗಿ ಯೋಚಿಸುತ್ತಿದ್ದಾನೆ.

ಆಗಾಗ, "ಇದೆಲ್ಲ ಮಾಯಾಸೃಷ್ಟಿಯೋ ? ತಾನು ಕಂಡುದೆಲ್ಲವೂ ಕನಸೋ? " ಎನ್ನಿಸುತ್ತದೆ. ತಾನು ನಿಂತಿರುವ ಪರ್ಣಕುಟಿಯು ನಿಜವಾಗಿಯೂ ರಾಜಯೋಗ್ಯವಾಗಿದೆ. ತಾನು ಸೇವಿಸಿದ ಅನ್ನಪಾನ್ನವು ಹೊಟ್ಟೆಯಲ್ಲಿದ್ದು ಅದರ ಭಾರವು ತನ್ನಲ್ಲಿರುವನೆಂಬುದನ್ನು ತೋರಿಸುತ್ತಿದೆ. ಕನಸೆನ್ನುವುದೆಂತು ?

ರಾಜದೂತನೊಬ್ಬನು ಬಂದು ಕಾಣಿಸಿಕೊಂಡನು. ಕೌಶಿಕನ ಪರಿಚರನು ಅವನ ಆಗಮನವನ್ನು ತಿಳಿಸಿದನು ರಾಜನಪ್ಪಣೆಯಾಯಿತು. ದೂತನು ಬಂದು ಎಲ್ಲವನ್ನೂ ಅರಿಕೆಮಾಡಿದನು. "ಆಶ್ರಮದಲ್ಲಿ ಸುರಭಿಯ ಮಗ ಳಾದ ನಂದಿನಿಯುಂಟು. ಆಕೆಯೂ ತಾಯಿಯಂತೆ ಮಹಿಮಾಸಂಪನ್ನಳು. ಗುರುದೇವರ ಹೋಮಧೇನುವಾಕೆ. ಈ ದಿನದ ಅತಿಥಿಪೂಜೆಯೆಲ್ಲ ಆಕೆಯ ಮಹಿಮೆಯಿಂದ ನಡೆದುದು. ಇಂತಹ ಸಮಾರಂಭವು ಈ ಆಶ್ರಮದಲ್ಲಿ ಆಗಾಗ ನಡೆಯುವುದುಂಟು. ಆದರೆ, ಈ ಸಲದ ವೈಭವ ಸಂಭ್ರಮಗಳು ಇದುವರೆಗೆ ಯಾವಾಗಲೂ ಇರಲಿಲ್ಲ."

ರಾಜನು ಮೈಯೆಲ್ಲ ಕಿವಿಯಾಗಿ ಕೇಳಿದನು. "ಒಂದು ಹಸು, ಹಸುವಿನಿಂದ ಇದಿಷ್ಟು. ಆ ಹಸುವು ಕಾಮಧೇನುವಿನ ಮಗಳು. ಮಹಿಮಾ

ಸಂಪನ್ನಳಾದ ಆಕೆಯಿಂದ ಇಂತಹ ಅತಿಥಿಪೂಜೆಯು ಸಾಧ್ಯ. ವಸಿಷ್ಠರ ಗುಟ್ಟು ಇದು. ಯಾರು ಏನು ಒಪ್ಪಿಸಿದರೂ ಬೇಡವೆನ್ನುವುದರ ರಹಸ್ಯವಿದು."

"ಆಯಿತು. ಸಮ್ರಾಜರಿಗೂ ಸಾಧ್ಯವಲ್ಲದ ಕಾರ್ಯಗಳನ್ನು ಮಾಡ ಬಲ್ಲ ಈ ಧೇನುವನ್ನು ಇಟ್ಟುಕೊಂಡು ಈತನಾದರೂ ಮಾಡುವುದೇನು? ಇಂತಹ ರತ್ನವು ಸಮ್ರಾಟನಲ್ಲಿರಬೇಕಲ್ಲದೆ, ಯೇನಕೇನಾಪಿ ತೃಪ್ತಿಯನ್ನು ಪಡೆಯುವವರು ತುಂಬಿರುವ ಆಶ್ರಮದಲ್ಲಿರುವುದೇ? ಹಾಗೆಂದು ಇದನ್ನು ಕೇಳುವುದೆಂತು? ತೆಗೆದುಕೊಳ್ಳುವುದೆಂತು? ತಪಸ್ವಿಯಾಗಿ ಧರ್ಮಿಷ್ಠನಾಗಿರುವವನ ಆಶ್ರಮ ದಲ್ಲಿರುವುದೆಲ್ಲ ಬ್ರಹ್ಮಸ್ವವು. ರಾಜನಿಗೆ ಬ್ರಹ್ಮಸ್ವದ ಮೇಲೆ ಅಧಿಕಾರವುಂಟೆ? ಲೋಕವೆಲ್ಲ ರಾಜನದು ಎಂದಮೇಲೆ, ಲೋಕದಲ್ಲಿರುವುದೆಲ್ಲಾ ರಾಜಸ್ವ ಎಂದ ಮೇಲೆ, ಅದರಲ್ಲಿಷ್ಟು ತೆಗೆದಿಟ್ಟು ಇದರಮೇಲೆ ರಾಜನಿಗಧಿಕಾರವಿಲ್ಲದೆಂದರೆ ಹೇಗೆ? ಅಥವಾ ರಾಜನು ತಾನಾಗಿ ಅದನ್ನು ಬೇಡವೆಂದಿರುವನು. ಬೇಡ ವೆಂದವನು ಬೇಕಾದಾಗ ಮತ್ತೆ ಬೇಕು ಎಂದರೆ ತಪ್ಪೇನು?"

"ಈ ಧೇನುವು ಸರ್ವಥಾ ರಾಜಯೋಗ್ಯವಾದುದು. ವಿಕ್ರಯದಿಂದ, ವಿನಿಮಯದಿಂದ, ಅಥವಾ ಬಲಪ್ರಯೋಗದಿಂದ, ಅಂತೂ ಸರ್ವಥಾ ಇದು ಅರ ಮನೆಗೆ ಬರಬೇಕು."

"ಹಾಗೆಂದು ಬ್ರಹ್ಮಸ್ವವನ್ನು ಅಪಹಾರ ಮಾಡುವುದೇ? ಅದರಲ್ಲೂ ವಸಿಷ್ಠರಂತಹ ಬ್ರಹ್ಮರ್ಷಿಯ ಸ್ವತ್ತನ್ನೂ ಅಪಹಾರ ಮಾಡುವುದೇ? ಕೂಡದು, ಕೂಡದು. ಬ್ರಹ್ಮಸ್ವವನ್ನು ತೆಗೆದುಕೊಳ್ಳುವುದು ಅಗ್ನಿಯನ್ನು ತೆಗೆದು ಮಡು ಲಲ್ಲಿ ಕಟ್ಟಿಕೊಂಡಂತೆ. ಜೀರ್ಣವಾಗುವುದು ಕಷ್ಟ. ಪಥ್ಯವಲ್ಲ. ಕೂಡದು, ಕೂಡದು."

"ಹಾಗಲ್ಲ. ಅಪಹಾರವೆಲ್ಲಿಂದ ಬಂತು? ಲೋಕವೆಲ್ಲ ದೇವತೆಗಳದು. ದೇವತೆಗಳೆಲ್ಲ ರಾಜನಲ್ಲಿರುವರು. ರಾಜದಂಡದ ಬಲದಿಂದ ಎಲ್ಲವೂ ಸುವ್ಯವ ಸ್ಥಿತವಾಗಿರುವುದು. ಸಮಾಜದಲ್ಲಿ ಮತ್ಸ್ಯನ್ಯಾಯವು ನೆಲಸದಂತೆ ಕಾಪಾ ಡುವ ರಾಜನಿಗೆ ಎಲ್ಲರೂ ಋಣಿಗಳು. ಬ್ರಾಹ್ಮಣನಾದರೂ, ಬ್ರಹ್ಮಜ್ಞ ನಾದರೂ, ತನ್ನ ತಪಸ್ಸಿನಲ್ಲಿಯೂ ಒಂದು ಭಾಗವನ್ನು ರಾಜನಿಗೆ ಕರವಾಗಿ ಕೊಡುವನಲ್ಲವೆ? ಹೀಗಿರಲು ಆ ಕರದ ಬದಲಾಗಿ ಈ ಧೇನುವು ಬರಲಿ. ಇಲ್ಲವಾದರೆ ಬೇಕಾದುದನ್ನು ತೆಗೆದುಕೊಂಡು ಕೊಡಲಿ. ಇಲ್ಲದಿದ್ದರೆ, ದೇವ

ಧೇನುವು ದೇವಾಂಶಸಂಭೂತನಾದ ರಾಜನದಾಗಲಿ. ಹೇಗೆ ಹೇಗೂ ಅಪಹಾರವಿಲ್ಲ."

"ಹೌದು. ರಾಜನಾದವನು ಯಾವದೊಂದು ಸಿದ್ಧಿಯನ್ನೂ ಉಪೇಕ್ಷಿಸಕೂಡದು. ರಾಜನ ಗುರಿ ಸಮೃದ್ಧಿ: ತ್ಯಾಗವಲ್ಲ. ತನಗಿರುವ ಸರ್ವಸಾಮರ್ಥ್ಯವನ್ನೂ ವಿನಿಯೋಗಿಸಿ ಸಮೃದ್ಧಿಯನ್ನು ಸಂಪಾದಿಸಬೇಕು. ಹರಿಯುವ ನೀರನ್ನು ಅಡ್ಡಗಟ್ಟಿ ಉಪಯೋಗಿಸಿಕೊಳ್ಳುವಂತೆ, ಬೆಳೆದು ನಿಂತಿರುವ ಕಾಡನ್ನು ತೃಣಕಾಷ್ಠಾದಿಗಳಾಗಿ ಉಪಯೋಗಿಸಿಕೊಳ್ಳುವಂತೆ, ಲೋಕದಲ್ಲಿರುವ ಸಮಸ್ತ ಸಿದ್ಧವಸ್ತುಗಳನ್ನು ಸಮೃದ್ಧಿಸಾಧನವಾಗುವಂತೆ ಉಪಯೋಗಿಸಬೇಕಾದುದು ರಾಜಧರ್ಮ. ಅದನ್ನು ಬಿಟ್ಟು ಕಾರಣಾಂತರ ಲುಬ್ಧನಾಗಿ ದೊರಕಿದ ಅವಕಾಶವನ್ನು ಬಿಟ್ಟರೆ, ಅದು ಅವನ ದೌರ್ಬಲ್ಯ."

"ನಿಜ. ದಿಟ....ಸಂಗ್ರಹಿಸಬೇಕಾದ ವಸ್ತುವನ್ನು ಸಂಗ್ರಹಿಸದೆ ಬಿಟ್ಟರೆ, ಲೋಕವನ್ನು ಆಳುವುದಾದರೂ ಎಂತು? ಅದರಿಂದ ಇದು ಕರ್ತವ್ಯ."

ರಾಜನಿಗೆ ತನ್ನ ಸಿದ್ಧಾಂತವು ಸರಿಯೇ ಎಂದು ಇನ್ನೂ ಅನುಮಾನ. ಆದರೂ ರಾಜ ಸಹಜವಾದ ತೀವ್ರತೆಯಿಂದ ಸಿದ್ಧಾಂತವನ್ನು ಸರಿ ಎಂದನು. ಮನಸ್ಸು ಕಾರ್ಯೋನ್ಮುಖವಾಗಿರಲು ಬುದ್ಧಿಯು ವಿಚಿಕಿತ್ಸೆಮಾಡುವುದೆಂತು? ಜಿಜ್ಞಾಸೆಗೆ ಅವಕಾಶವೆಲ್ಲಿ? ರಾಜದೂತನಿಗೆ ಅಪ್ಪಣೆಯಾಯಿತು. "ಭಗವಾನರ ಸಮಯವನ್ನು ನೋಡಿಕೊಂಡು ಬಾ."

ರಾಜದೂತನು ಮಿಂಚಿನ ವೇಗದಿಂದ ಓಡಿಹೋಗಿ ಉತ್ತರವನ್ನು ತಂದನು. "ಗುರುದೇವರ ಅಪ್ಪಣೆಯಾಯಿತು. ಸಂಜೆಯು ಸಮೀಪಿಸುತ್ತಿದೆ. ತಮೋಗುಣದ ವೇಳೆ. ಸಂಧ್ಯೆಯು ಮುಗಿದ ಮೇಲಾದರೆ ಚೆನ್ನ. ಈಗಲೇ ಬರಬೇಕು ಎಂಬುದು ರಾಜರಭಿಪ್ರಾಯವಾದರೆ, ಅವರ ಆಜ್ಞೆಯು ನಮಗೆ ಸರ್ವದಾ ಮಾನ್ಯ."

ರಾಜನು ತಲೆದೂಗಿದನು. "ಹೌದು. ಆಳುವ ಅರಸನಿಲ್ಲದಿದ್ದರೆ ಲೋಕವೇ ಆಳುವುದು. ಆದುದರಿಂದಲೇ ಸರ್ವರೂ ಅರಸನಿಗೆ ತಲೆಬಾಗಬೇಕು. ಎಲ್ಲ ತೇಜಸ್ಸು ರಾಜತೇಜದ ಮುಂದೆ ಒಂದು ಗಳಿಗೆಯಾದರೂ ಮಂಕಾಗಬೇಕು. ಆಯಿತು. ತಮೋಗುಣದ ವೇಳೆಯೆಂದರಲ್ಲ. ಸರಿ. ಅದು ನಮ್ಮನ್ನೇನು ಮಾಡಿತು? ಬ್ರಹ್ಮರ್ಷಿಯಾಗಿ ತಪಸ್ವಿ ಶ್ರೇಷ್ಠನಾಗಿ,

ಬ್ರಹ್ಮವಿತ್ತಮನಾಗಿ ಗುಣಾತೀತನಾಗಿರುವ ಬ್ರಾಹ್ಮಣ. ಆತನೂ ರಾಜನನ್ನು ತಿರಸ್ಕರಿಸಿದವನಲ್ಲ. ಇಷ್ಟೆಲ್ಲಾ ಆತಿಥ್ಯಮಾಡಿ ನಮಗೆ ಗೌರವ ತೋರಿಸಿದ್ದಾನೆ. ಸರ್ವಪ್ರಕಾರದಿಂದಲೂ ಆತನಲ್ಲಿ ಆಶ್ರಮೋಚಿತವಾದ ವಿನಯವನ್ನು ಬಿಡದೆ ನಡೆಯಬೇಕೆಂದು ಸರ್ವಥಾ ಸಂಕಲ್ಪವನ್ನು ಮಾಡಿರುವ ನಾವು, ಸರ್ವ ತೇಜೋಮಯನಾದ ರಾಜ, ಸರ್ವದೇವತಾಮಯನಾದ ಬ್ರಾಹ್ಮಣ, ಈ ಈರ್ವರ ನಡುವೆ ಕಾಲದ್ದೇನು ನಡೆದೀತು?" ಎಂದು ಗೊತ್ತುಮಾಡಿಕೊಂಡು "ನಾವು ಈಗಲೇ ಬರುವುದಾಗಿ ಬ್ರಹ್ಮರ್ಷಿಗಳ ಸನ್ನಿಧಿಯಲ್ಲಿ ವಿಜ್ಞಾಪಿಸು" ಎಂದು ದೂತನನ್ನು ಕಳುಹಿಸಿ, ತಾನೂ ಅವನ ಹಿಂದೆಯೇ ಅತಿ ಮಿತ ಪರಿವಾರ ನಾಗಿ, ಪಾದಚಾರಿಯಾಗಿ, ವಸಿಷ್ಠರ ಪರ್ಣಶಾಲೆಯ ಕಡೆಗೆ ನಡೆದು ಹೊರಟನು.

ರಾಜನು ಅಷ್ಟುದೂರ ಹೋಗುತ್ತಿದ್ದ ಹಾಗೆಯೇ ಸಮಾರಾಧನೆಯ ವಿಶೇಷ ಭೋಜನಕ್ಕಾಗಿ ಬಂದಿದ್ದ ಭಾರಿಯ ಗೃಧ್ರವೊಂದು ಮೇಲಕ್ಕೆದ್ದು ಹೋಗಿ ಫಲಭಾರ ನಮ್ರವಾಗಿದ್ದ ಶಾಖೆಯಮೇಲೆ ಕುಳಿತುಕೊಂಡಿತು. ಅದರ ಭಾರವನ್ನು ತಡೆಯಲಾರದೆಯೋ ಅಥವಾ ಇನ್ನೇನೋ, ಆ ಶಾಖೆಯು ಮುರಿದು ಬಿತ್ತು.

---

## ಮೂರನೆಯ ತರಂಗ

ರಾಜಾ ಕೌಶಿಕನು ಬರುತ್ತಿರುವನು ಎಂಬುದನ್ನರಿತು ವಸಿಷ್ಠರು ಕುಳಿತಿದ್ದ ಆಸನವನ್ನು ಬಿಟ್ಟು ಎದ್ದುಬಂದರು. ಅವರು ಬಾಗಿಲಿಗೆ ಬರುತ್ತಿದ್ದ ಹಾಗೆಯೇ ರಾಜನ ಆಗಮನವಾಯಿತು. ಋಷೀಂದ್ರನು "ರಾಜೇಶ್ವರನಿಗೆ ಸ್ವಾಗತ" ಎಂದನು. ರಾಜೇಶ್ವರನು ಬ್ರಹ್ಮತೇಜಃಪುಂಜದಂತಿದ್ದ ಆ ಮೂರ್ತಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ ಆತನ ಹಿಂದೆಯೇ ಪರ್ಣಕುಟಿಯನ್ನು ಹೊಕ್ಕು ತನಗಾಗಿ ಸಿದ್ಧವಾಗಿದ್ದ ಆಸನದಲ್ಲಿ ಅವರು ತಮ್ಮ ಆಸನದಲ್ಲಿ ಕುಳಿತಮೇಲೆ ಕುಳಿತನು. ವಸಿಷ್ಠರು ಸ್ವಾಗತಿಸಿದುದರಲ್ಲಿ ಎಳ್ಳಷ್ಟೂ ಕೃತ್ರಿಮವಿರಲಿಲ್ಲ. ಆದರೂ ಬರಬಹುದಾದ ಘೋರ ವಿಪತ್ತಿನ ಕಾರಣವಾದ ಮೂರ್ತಿಯು ಎದುರಿಗಿರುವುದು ಎಂಬ ನಂಬಿಕೆಯು ಮನಸ್ಸಿಗೆ ಚೆನ್ನಾಗಿ ಬಂದಿರುವಾಗಲೂ

ಧೈರ್ಯವನ್ನೂ ಸ್ಥೈರ್ಯವನ್ನೂ ಬಿಡದ ಧೀರವೃತ್ತಿಯು ಅಲ್ಲಿತ್ತು. ವಿಪತ್ತನ್ನು ನಿವಾರಣೆಮಾಡಿಕೊಳ್ಳಬೇಕೆಂಬ ಆಶೆಯಿಲ್ಲ. ವಿಪತ್ತಿನಿಂದ ಏನೇನಾಗುವುದೋ ಎಂಬ ಆತಂಕವಿಲ್ಲ. ಸಮುದ್ರವು ಬಿರುಗಾಳಿಯ ಹುಯ್ಯಲಿಗೆ ಸಿಕ್ಕಿ, ಅದ ರೊಡನೆ ಹೋರಾಡುತ್ತಾ ಬೆಟ್ಟದಂತಹ ತೆರೆಗಳಿಂದ ಆ ಬಿರುಗಾಳಿಯನ್ನು ಅಪ್ಪಳಿಸುವಂತೆ ತೋರುವ ಸಂದರ್ಭದಲ್ಲಿ ಮಗ್ಗುಲ ಬೆಟ್ಟದ ಕೋಡುಗಲ್ಲಿನ ಮೇಲೆ ನಿಂತವನು ಅದನ್ನು ಸಾವಧಾನವಾಗಿ ನೋಡುತ್ತ ಪಡುವ ಸಂತೋಷ ದಂತಹ ಭಯಂಕರ ಸಂತೋಷವೊಂದು ಅವರ ಮನಸ್ಸಿನಲ್ಲಿ ನರ್ತಿಸುತ್ತಿತ್ತು.

ಕೌಶಿಕನು ಬ್ರಹ್ಮವರ್ಚಸ್ವಿಯನ್ನು ಕಂಡು ಸಂತೋಷಪಟ್ಟಿದ್ದಾನೆ. ಅವನ ಮನೋಬುದ್ಧಿಗಳು ಅವರಿಗೆ ತಮ್ಮ ಕೈಲಾದ ಕಾಣಿಕೆಯನ್ನೊಪ್ಪಿಸಿ ಒಲಿಸಿ ಕೊಳ್ಳಬೇಕೆಂದು ಹೆಣಗುತ್ತಿವೆ. ಆದರೆ ಅಂತರಾಂತರದಲ್ಲಿ ತನ್ನ ಸರ್ವಸ್ವ ವನ್ನೂ ಪಣವಾಗಿಟ್ಟು ಅಲ್ಲ, ಅದರ ಜೊತೆಗೆ ಇನ್ನೂ ಅಷ್ಟು ಇದ್ದರೆ ಅದನ್ನೂ ಕೊಟ್ಟಾದರೂ ಆ ಋಷಿಪುಂಗವನಿಂದ ಆ ಗೋವನ್ನು ಸಂಗ್ರಹಿಸಬೇಕೆಂಬ ಕ್ಷತ್ರಿಯನ ದುರ್ಜಯವಾದ ಆಶೆ ಎಲ್ಲವನ್ನೂ ನುಂಗಲು ಯತ್ನಿಸುತ್ತಿದೆ.

ವೀರಪುಂಗವನು ಜ್ಞಾನಿಪುಂಗವನ ಬಳಿಗೆ ಬಂದಿದ್ದಾನೆ. ಒಂದು ತನ್ನ ಮುಂದಿರುವುದನ್ನು ತನಗೇನೇನು ಅಡ್ಡಿಬಂದರೆ ಅದೆಲ್ಲವನ್ನೂ ಕಿತ್ತೊಸೆದು ನುಗ್ಗುವುದಕ್ಕೆ ಸಿದ್ಧವಾಗಿರುವ ಝಂಝಾವಾತ: ಇನ್ನೊಂದು ಏನು ಬಂದರೂ ಬರಲಿ ಎಂದು ಜಗ್ಗದೆ ತನ್ನ ತೂಕದಲ್ಲಿ ನಂಬುಗೆಯನ್ನಿಟ್ಟುಕೊಂಡು ಅಲ್ಲಾ ಡದೆ ನಿಂತಿರುವ ಪರ್ವತೇಂದ್ರ.

ಕೌಶಿಕನೇ ಮೊದಲು ಮಾತನಾಡಿದನು. "ದೇವರು ಮನ್ನಿಸಬೇಕು. ಸಂಧ್ಯಾಹೋಮವಾದಮೇಲೆ ಬಂದು ನೋಡುವುದೆಂದು ಅಪ್ಪಣೆಯಾಯಿತಂತೆ. ಆದರೆ ಕ್ಷತ್ರಿಯರದು ರಾಜಸಮನೋಭಾವ. ಯಾವುದರಲ್ಲೂ ತಡೆಯನ್ನು ಸಹಿಸುವ ಅಭ್ಯಾಸವಿಲ್ಲ. ಅದರಿಂದ ಮನಸ್ಸಿನ ಆಸೆಯನ್ನು ದೇವರಲ್ಲಿ ಬಿನ್ನ ಯಿಸುವ ತವಕದಿಂದ ಅವಸರಪಟ್ಟು ಬಂದೆ. ಅಪರಾಧವಿಲ್ಲವಷ್ಟೆ?"

"ಅಪರಾಧವೇನು ಬಂತು? ಮನಸ್ಸಿನಲ್ಲಿ ಹುಟ್ಟಿದ ಆಸೆಯನ್ನು ಹೇಳಲು ಬಾಯಿ ಆತುರಪಡುತ್ತಿದೆ. ಅಷ್ಟೇ ತಾನೇ? ಅಪ್ಪಣೆಯಾಗಲಿ."

ಕೌಶಿಕನು ನಗುತ್ತಾ ಹೇಳಿದನು. "ಇಂದಿನ ಸಮಾರಾಧನದ ಸಂಭ್ರಮವು ಸಮ್ರಾಟರನ್ನೂ ನಾಚಿಸುವಂಥದು. ಋಷಿಗಳಾಗಿ ಇಹದ ಚಿಂತೆ ಇಷ್ಟಿಲ್ಲದೆ

ಪರದ ಚಿಂತೆಯನ್ನೇ ಬಹುವಾಗಿ ಹಚ್ಚಿಕೊಂಡಿರುವ ತಪಸ್ವಿಗಳು ಇಷ್ಟು ಅಮೋಘವಾದ ಔತಣವನ್ನು ಹೇಗೆ ಮಾಡಿದರು ಎಂದು ವಿಚಾರಿಸಿದೆ. ಅದೆಲ್ಲವೂ ತಮ್ಮಲ್ಲಿರುವ ನಂದಿನೀ ಧೇನುವಿನ ಪ್ರಭಾವವಂತೆ. ಗುರುದೇವ, ಇಂತಹ ಉತ್ತಮೋತ್ತಮ ವಸ್ತುವೊಂದು ರತ್ನ. ಅದು ಆಶ್ರಮದಲ್ಲಿರುವುದಕ್ಕಿಂತ ಅರಮನೆಯಲ್ಲಿರುವುದು ಚೆನ್ನ ಅಲ್ಲವೇ ? ”

ವಸಿಷ್ಠರು ಬಂದಿದ್ದ ನಗುವನ್ನು ತಡೆದುಕೊಂಡರು. ತನ್ನಲ್ಲಿರುವ ಅಮೂಲ್ಯತಮವಾದ ವಸ್ತುವೊಂದನ್ನು ಕೌಶಿಕನು, ಅದರಲ್ಲೂ ಪ್ರಬಲನಾಗಿ ಇತರರು ಯಾರಿಗೂ ಸಗ್ಗದ ಮಹಾವೀರನು, ಕೇಳುತ್ತಿರುವನಲ್ಲ. ಅದನ್ನು ಕೊಡದಿದ್ದರೆ ಹೇಗೆ? ಮುಂತಾದ ಯಾವುದೊಂದೂ ಆತಂಕವಿಲ್ಲದ ನಿಷ್ಕಲ ಮನಸ್ಸಿನಿಂದ ಗಂಭೀರವಾಗಿ ಹೇಳಿದರು. ಧ್ವನಿಯು ಸಣ್ಣದಾಗಿತ್ತು: ಆವೇಶವು ಯಾವುದೂ ಇಲ್ಲದ್ದರಿಂದ, ಬೇಸಿಗೆಯ ನದಿಯಂತೆ ಕೃಶವಾಗಿದ್ದರೂ ನಿರ್ಮಲವಾಗಿತ್ತು. “ರಾಜೇಂದ್ರ, ಪ್ರಪಂಚದಲ್ಲಿರುವ ಭೋಗ ಸಾಮಗ್ರಿಗಳೆಲ್ಲವೂ ದೇವತೆಗಳು ಕೊಟ್ಟುದು. ಅವರು ಕೊಡದಿರುವುದನ್ನು ನಾವು ತೆಗೆದುಕೊಳ್ಳಲು ಸಾಧ್ಯವಿಲ್ಲ. ಕೊಡುವುದೂ ಬಿಡುವುದೂ ಅವರ ಇಚ್ಛೆ. ಆ ಇಚ್ಛೆ ಅವರಿಗೆ ಬರುವುದು ನಮ್ಮ ಕರ್ಮದ ಫಲವಾಗಿ. ಆದುದರಿಂದ ಭೋಗಸಾಧನವೊಂದು ಬೇಕೆಂದವರು, ಇತರರಲ್ಲಿರುವುದನ್ನು ಕಂಡು ಅದೂ ತನ್ನದೇ ಏಕಾಗಬಾರದು ಎನ್ನುವುದಕ್ಕಿಂತ, ಅಂತಹುದನ್ನು ನನಗೂ ಒಂದು ಕೊಡಿ ಎಂದು ಕೇಳುವುದು ಬಹಳ ಸರಿ. ಅದು ಸನಾತನ ಧರ್ಮದ ಹಾದಿ. ತನಗೆ ಬೇಕಾದುದನ್ನು ಸಂಪಾದಿಸಿಕೊಳಲು ಯಜ್ಞವೆಂಬ ಅವಿಫಲವಾದ ಸಿದ್ಧೋಪಾಯವಿರಲು, ಮತ್ತೊಬ್ಬರನ್ನು ಕೊಡಿರೆಂದು ಕೇಳುವುದು ವಿಹಿತವಲ್ಲವಲ್ಲ !”

ಕೌಶಿಕನ ಮನಸ್ಸು ಕಲುಷಿತವಾಗಿ, ನಿಷ್ಕಲ್ಮಷವಾಗಿ ಶುದ್ಧವಾಗಿರುವ ಹೃದಯದಿಂದ ನುಡಿದ ಋಷಿವಚನದಲ್ಲಿಯೂ ತನ್ನನ್ನು ಅಪಮಾನಮಾಡುತ್ತಿರುವನೆಂಬ ಕಶ್ಮಲವನ್ನು ಕಂಡಿತು. ಆದರೂ ಎದುರಾಗಿರುವವರು ಬ್ರಹ್ಮರ್ಷಿಗಳು ಎಂದು ಬಲ್ಲವನಾದುದರಿಂದ, ಆ ಭಾವವನ್ನೂ ಅದರ ಫಲವಾದ ನಿರಾಶೆಯ ಕೋಪವನ್ನೂ ನುಂಗಿಕೊಂಡು ಮೇಲೆ ನಗುತ್ತಾ ಹೇಳಿದನು : “ಮಹರ್ಷಿಗಳು ಧರ್ಮಸ್ವರೂಪವನ್ನು ಬಲ್ಲವರು. ಇಷ್ಟಾರ್ಥಸಿದ್ಧಿಯ ಸಾಧನವು ಯಜ್ಞವೆಂದು ಅವರಾಡಿದುದನ್ನು ಅಲ್ಲವೆಂದು ನಿರಾಕರಿಸಲು

ಯಾರಿಂದಲೂ ಸಾಧ್ಯವಿಲ್ಲ. ಆದರೂ ಒಂದು ಮಾತು. ರಾಜ್ಯವೆಲ್ಲವೂ ಮೂರ್ಧಾಭಿಷಿಕ್ತನಾದ ರಾಜನದು. ಇಂತಹ ಸುಸಂಪನ್ನವಾದ ಭೂಮಂಡಲ ವನ್ನೇ ದೇವತೆಗಳು ರಾಜನಿಗೆ ಕೊಟ್ಟಿರುವರು ಆದರಿಂದ ಆ ರಾಜ್ಯಕ್ಕೆ ಅಧಿಕಾರಿಯಾದ ರಾಜನಿಗೆ ತನ್ನ ರಾಜ್ಯದಲ್ಲಿ ಎಲ್ಲಿ ಏನಿದ್ದರೂ ಅದನ್ನು ತೆಗೆದು ಕೊಳ್ಳಲು ಅಧಿಕಾರವುಂಟು. ಅಲ್ಲವೆ ? ”

ವಸಿಷ್ಠರು ನಕ್ಕರು. “ರಾಜಾ ಕೌಶಿಕನು ಧರ್ಮಪರಾಯಣನು. ಆದರಿಂದಲೇ ಹೇಳುವೆನು, ರಾಗದ್ವೇಷ ರಂಜಿತವಾದ ಮನಸ್ಸಿಗೆ ಧರ್ಮವು ಗೋಚರವಾಗುವುದು ಕಷ್ಟ. ಆದರಿಂದ ಧರ್ಮವನ್ನು ಆರಾಧಿಸಬೇಕೆಂದಿರು ವವರು ಮೊದಲು ತಮ್ಮ ಮನಸ್ಸನ್ನು ಶುದ್ಧಮಾಡಿಟ್ಟುಕೊಂಡಿರಬೇಕು. ರಾಜ್ಯದಲ್ಲಿರುವ ಸಮಸ್ತಕ್ಕೂ ರಾಜನೇ ಸ್ವಾಮಿ. ನಿಜ. ಆದರೆ, ಮಹಾರಾಜ, ರಾಜನು ಧರ್ಮದ ಸೇವಕ. ಧರ್ಮವನ್ನು ರಕ್ಷಿಸಲು ಬದ್ಧಕಂಕಣನಾಗಿ ದೀಕ್ಷಿತನಾಗಿರುವ ರಾಜನು ಲೋಭ ಮೋಹಗಳಿಂದ ಧರ್ಮವನ್ನು ನಿರ್ಣಯಿಸ ಬಾರದು. ಧರ್ಮಾಭಿವೃದ್ಧಿಗಾಗಿ ರಾಜನು ಯಾವ ಕೆಲಸವನ್ನು ಮಾಡಿದರೂ ಧರ್ಮವೇ ಆದರೂ ತಮ್ಮತಮ್ಮ ಧರ್ಮಸಾಧನವಾಗಿ ಪ್ರಜೆಗಳು ಇಟ್ಟು ಕೊಂಡಿರುವ ವಸ್ತುಗಳಲ್ಲಿ ರಾಜನಿಗೆ ಅಧಿಕಾರವಿಲ್ಲ. ಯಾವ ಕೆಲಸವೇ ಆಗಲಿ, ಯಾರೇ ಮಾಡಲಿ, ಧರ್ಮದ ಅಭಿವೃದ್ಧಿಯು ಆದರಿಂದ ಆದರೆ ಅದು ಧರ್ಮ. ಇಲ್ಲವಾದರೆ ಅಧರ್ಮ. ಯಾರೂ, ಅದರಲ್ಲಿಯೂ ಧರ್ಮರಕ್ಷಕನಾದವನು, ಅಧರ್ಮವನ್ನು ಆಚರಿಸಬಾರದು; ಅಧರ್ಮವನ್ನು ಆರಾಧಿಸುವುದೆಂದರೆ ಆತ್ಮವಿನಾಶಕ್ಕೆ ಸ್ವಾಗತ ಕೊಟ್ಟಂತೆ.”

ರಾಜಾ ಕೌಶಿಕನಿಗೆ ಇಷ್ಟಸಿದ್ಧಿಯು ಇಷ್ಟು ಕಷ್ಟವೆಂದೆನ್ನಿಸಿರಲಿಲ್ಲ. ಅನಿರೀಕ್ಷಿತವಾಗಿ ಅಡ್ಡಬಂದ ಧರ್ಮವಿಚಾರವು ಅವನನ್ನು ತಡೆಯುವ ಬದಲು ರೇಗಿಸಿತು. ಆದರೂ ಅವನು ಪ್ರಕಟವಾಗಿ ರೇಗಲಿಲ್ಲ. ಒಳಗೆ ಮಾತ್ರ ಸಮಾ ಧಾನ ಉಳಿಯಲಿಲ್ಲ. ವಿನಯವನ್ನು ಬಿಡದೆ ನುಡಿದನು. “ದೇವ, ಕ್ಷತ್ರಿಯರು ಬಾಹುಬಲ ಸಂಪನ್ನರು. ತಮಗೆ ಬೇಕೆಂದ ವಸ್ತುವನ್ನು ಸಂಗ್ರಹಿಸಲು ಆ ಬಾಹುಬಲವು ಅವರಿಗೆ ದೈವದತ್ತವಾದ ಸಾಧನ. ಮಂತ್ರದಿಂದ ಸಂಪಾದಿ ಸಲು ಸಾಧ್ಯವಾಗದದನ್ನು ಸಾಹಸದಿಂದ ಸಾಧಿಸುವುದು ಕ್ಷತ್ರಿಯನ ಧರ್ಮ. ಅದಿರಲಿ, ತಾವು ನಂದಿನಿಯನ್ನು ಹೋಮಧೇನುವಾಗಿಟ್ಟುಕೊಂಡಿರುವಿರಂತೆ.

ಇಂದಿನ ದಿನ ಈ ಆಶ್ರಮಕ್ಕೆ ಸುವರ್ಣಶೃಂಗ ಖುರಭೂಷಿತಗಳಾದ ಸಹಸ್ರ ಗೋವುಗಳನ್ನೂ ಕೌಶಿಕನು ಕಾಣಿಕೆಯಾಗಿ ಭಕ್ತಿಯಿಂದ ಒಪ್ಪಿಸುವನು. ಒಂದೊಂದೂ ಹೊತ್ತಿಗೆ ಒಂದೊಂದು ಕೊಡ ಹಾಲನ್ನು ಕರೆಯುವುದು. ದೇವರು ಮನಸ್ಸುಮಾಡಿ, ನಂದಿನಿಯನ್ನು ನನಗೆ ಅನುಗ್ರಹಿಸಬೇಕು "

"ನಾನು ನಂದಿನಿಯ ಮೇಲಿನ ಲೋಭದಿಂದ ಈ ಮಾತನ್ನು ಆಡುತ್ತಿಲ್ಲ. ಅರಸಾ, ನಂದಿನಿಯು ದೇವತೆಗಳ ಧೇನು. ದಿನದಿನವೂ ನಡೆಯಬೇಕಾದ ದೇವಹೋಮಕ್ಕಾಗಿ ಬೇಕಾದ ಕ್ಷೀರವನ್ನು ಒದಗಿಸಲೆಂದು ದೇವತೆಗಳು ಆಕೆಯನ್ನು ಇಲ್ಲಿಗೆ ಕಳುಹಿಸಿರುವರು. ಆಕೆಯ ದಿವ್ಯ ಕ್ಷೀರವನ್ನು ಹೋಮ ಮಾಡುವುದರಿಂದ ದೇವತೆಗಳಿಗೆ ಅಮೋಘವಾದ ತೃಪ್ತಿಯುಂಟಾಗುವುದು. ಹಾಗೆ ತೃಪ್ತರಾದ ಅವರು ಲೋಕದ ಕ್ಷೇಮವನ್ನು ಹೆಚ್ಚಿಸುವರು. ಆಕೆ ಇಲ್ಲಿದ್ದರೂ ಎಲ್ಲಿದ್ದರೂ ದೇವತೆಗಳ ಸ್ವತ್ತು. ಇಲ್ಲಿ ಸದ್ಯದಲ್ಲಿ ಇದ್ದಾಳೆಯಾದರೂ ಆಕೆಯ ಮೇಲೆ ನನಗೆ ಅಧಿಕಾರವಿಲ್ಲ. ನಾನೇನು ಮಾಡಲಿ ?"

ರಾಜನು ಮಂತ್ರಮುಗ್ಧವಾದ ಮಹಾಸರ್ಪದಂತೆ ಒಂದು ಗಳಿಗೆ ಸ್ತಬ್ಧನಾದನು. ಸಮುದ್ರದಿಂದ ಸಮುದ್ರದವರೆಗೆ ಎಲ್ಲಿಯೂ ಯಾರಿಂದಲೂ ಪ್ರತಿಹತನಾಗದವನಿಂದು ಈ ಪರ್ಣಕುಟಿಯಲ್ಲಿ ತನ್ನ ಆಸೆಗೆ ಅಡ್ಡಿಯನ್ನು ಕಂಡಿದ್ದಾನೆ. ದೇವತೆಗಳನ್ನೆಲ್ಲ ಬೇಕಾದರೂ ಹೆಡೆಮುಡಿಗಟ್ಟಿ ತರುವನೆಂಬ ವೀರಶ್ರೇಷ್ಠನಿಗೆ ನಿಶ್ಶಸ್ತ್ರನಾದವನ ತಡೆಯೇ ? ರೋಷವು ತಾನೇ ತಾನಾಯಿತು. ಆ ರೋಷದ ಕಿಚ್ಚು ವಿಜೃಂಭಿಸಿ ಕಾಳ್ಗಿಚ್ಚಿನಂತೆ ಸರ್ವವನ್ನೂ ಸ್ವಾಹಾಮಾಡಿ ಬಿಡಬೇಕು. ಆದರೆ ಆ ಪ್ರಶಾಂತ ಸಾಗರದ ಎದುರು ಕುಳಿತಿರುವಾಗ ಅಗ್ನಿಯೂ ಶೀತವಾಗಬೇಡವೆ ? ಕೌಶಿಕನು ಅದೆಲ್ಲವನ್ನೂ ನುಂಗಿದನು. ನುಂಗಿದರೂ ಜೀರ್ಣವಾಗದ ರೋಷವದು. ಕೌಶಿಕನು ಬಂದಿದ್ದ ನಗುವನ್ನು ನಗುತ್ತಾ ಹೇಳಿದನು. ಮಾತಿನಲ್ಲಿ ಔದ್ಧತ್ಯವಿರಲಿಲ್ಲ : ಒರಟುತನವಿರಲಿಲ್ಲ : ಹೃದಯದ ಕಿಚ್ಚಿನ ಕಿಡಿಯಿರಲಿಲ್ಲ. ಆದರೂ ಧ್ವನಿಯ ಮಾರ್ಪಟು ಮೊದಲಿನ ಕೌಶಿಕನಲ್ಲ ಎಂದು ಪ್ರಕಟವಾಗಿ ತೋರಿಸುತ್ತಿತ್ತು.

"ದೇವಾ, ಹಾಗಾದರೆ ನಂದಿನಿಯು ದೇವತೆಗಳ ಸ್ವತ್ತು ?"

"ಹೌದು ಸಂದೇಹವಿಲ್ಲ." ವಸಿಷ್ಠರು ಸಮಾಧಾನವಾಗಿ ಶಿಲಾಮೂರ್ತಿಯಂತಿದ್ದು ಹೇಳಿದರು. ಆ ಎರಡು ಮಾತು ಎದುರಾಳಿಯ ಹೃದಯದಲ್ಲಿ

ಎಷ್ಟೊಂದು ವಿಪ್ಲವವನ್ನು ಮಾಡುವುದು ; ಅದರಿಂದ ಎಂತೆಂತಹ ಪ್ರತಿಕ್ರಿಯೆ ಗಳಾಗುವುವು ಎಂಬುದೆಲ್ಲವೂ ಗೊತ್ತಿದ್ದಂತೆ, ಅದೆಲ್ಲಕ್ಕೂ ಸಿದ್ಧವಾಗಿದ್ದಂತೆ, ಮೇಲಿನಿಂದ ಇಳಿಯುತ್ತಿರುವ ಸಿಡಿಲಿನ ಆಘಾತವನ್ನು ಸ್ವೀಕರಿಸಲು ಸಿದ್ಧ ರಾಗಿದ್ದಂತೆ ಇತ್ತು ಅವರ ಮನೋಭಾವ.

ಕೌಶಿಕನು ಎದ್ದನು. ನಿಷ್ಠುರವಾಗಿದ್ದರೂ ನಿಜವಾಗಿರುವ ಮಾತಿ ನಿಂದ "ರಾಜನು ಸರ್ವದೇವಮಯನು. ದಿಕ್ಪಾಲಕರ ಅಂಶಗಳೆಲ್ಲವೂ ಅವನಲ್ಲಿ ಪ್ರತಿಷ್ಠಿತವಾಗಿರುವುವು. ಹಾಗೆ ದಿವ್ಯಾಂಶಸಂಪನ್ನನಾಗಿರುವ ರಾಜನು ದೇವತೆಗಳ ಸ್ವತ್ತಾದ ನಂದಿನಿಯನ್ನು ತನ್ನದೆಂದು ಉದ್ಘೋಷಿಸಿರುವನು. ಅದು ಎಲ್ಲಿದ್ದರೂ ಇನ್ನು ಅದು ರಾಜನ ಸ್ವತ್ತು. ರಾಜಸ್ವತ್ತನ್ನು ರಾಜನು ತೆಗೆದುಕೊಂಡು ಹೋಗಬಹುದಷ್ಟೇ ?" ಎಂದು ಕೇಳಿದನು.

ವಸಿಷ್ಠರು ಅದರರ್ಥವನ್ನು ಸಂಪೂರ್ಣವಾಗಿ ಗ್ರಹಿಸಿ, ಸಣ್ಣನಗೆ ನಕ್ಕು, "ಹೌದು, ರಾಜನು ದಿವ್ಯಾಂಶಸಂಪನ್ನನು. ದೇವಾಂಶಸಂಭೂತನು. ದೇವತೆ ಗಳ ಸ್ವತ್ತನ್ನು ತೆಗೆದುಕೊಳ್ಳುವುದರಲ್ಲಿ ರಾಜನಿಗೆ ಅಡ್ಡಿಬರುವವರು ಯಾರೂ ಇಲ್ಲ. ಆದರೆ, ನಂದಿನೀಧೇನುವು ಇತರ ಧೇನುಗಳಂತಲ್ಲ ಕೌಶಿಕ. ನಂದಿ ನಿಯು ತನ್ನನ್ನು ತಾನು ಕಾಪಾಡಿಕೊಳ್ಳಬಲ್ಲಳು. ಕಾಮಧೇನುವಿನ ಮಗ ಳಾದ ನಂದಿನಿಯ ಮೇಲೆ ಬಲಪ್ರಯೋಗಮಾಡಬಲ್ಲವನು ಇನ್ನೂ ಹುಟ್ಟಿಲ್ಲ. ಅಥವಾ ಸಾಹಸದಿಂದ ಬಲಪ್ರಯೋಗಮಾಡುವೆನೆನ್ನುವುದು ತೃಣರಾಶಿಯಿಂದ ಯಜ್ಞೇಶ್ವರನನ್ನು ತಿರಸ್ಕರಿಸಬಲ್ಲೆನು ಎಂಬಂತೆ. ನಿಶ್ಚಿಷ್ಟ" ಎಂದನು.

ಕೌಶಿಕನು "ಆಗಲಿ, ಪರೀಕ್ಷೆಯು ನಡೆದುಹೋಗಲಿ" ಎಂದು ಎದ್ದು ಹೊರಟುಹೋದನು.

---

## ನಾಲ್ಕನೆಯ ತರಂಗ

ಆಶ್ರಮದಲ್ಲಿ ಎಲ್ಲೆಲ್ಲೂ ಕೋಲಾಹಲ. ಅದುವರೆಗೆ ಅತಿಥಿಪೂಜೆಯ ಸಂಭ್ರಮದ ಕೋಲಾಹಲವಾಯಿತು ಈಗ ಅತಿಥಿಗಳ ಸಂಭ್ರಮದ ಕೋಲಾಹಲ. ರಾಜನ ಕಡೆಯವರೆಲ್ಲ ನಂದಿನಿಯನ್ನು ರಾಜಧಾನಿಗೆ ಕರೆ

ದೊಯ್ಯುವೆವೆಂದು ಸಂಭ್ರಮಪಡುತ್ತಿದ್ದಾರೆ. ನಯದಿಂದಾಗಲಿ, ಭಯದಿಂದ ಆಗಲಿ, ಅಂತೂ ನಂದಿನಿಯನ್ನು ರಾಜಧಾನಿಗೆ ಕರೆದುಕೊಂಡು ಹೋಗಬೇಕು ಎಂದು ರಾಜಪರಿವಾರವು ಸಕಲ ಸನ್ನಾಹಗಳನ್ನೂ ಮಾಡುತ್ತಿವೆ. ಈ ಸುದ್ದಿ ಆಶ್ರಮವಾಸಿಗಳಿಗೂ ತಿಳಿದಿದೆ. ಎಲ್ಲರೂ ಕಳವಳಪಡುತ್ತಿದಾರೆ.

ಆಶ್ರಮ ನಿವಾಸಿಗಳು ಎಂದಿನಂತೆ ಸಂಧ್ಯಾಕಾರ್ಯವನ್ನೆಲ್ಲಾ ಮುಗಿಸಿದ್ದಾರೆ. ಯಾರಿಗೂ ರಾತ್ರಿಯ ಭೋಜನದ ಯೋಚನೆಯಿಲ್ಲ. ಎಲ್ಲರಿಗೂ ಒಂದೇ ಯೋಚನೆ. "ರಾಜನಿಗೇಕೆ ಇಂತಹ ದುರ್ಬುದ್ಧಿ?" ಎಂದು ಕೆಲವರು. "ಇದು ಸಾಧ್ಯವೇ?" ಎಂದು ಕೆಲವರು. "ಕ್ಷತ್ರ ಬ್ರಹ್ಮ ಯೋಗದ ಕಾಲ ಕಳೆದು, ಕ್ಷಾತ್ರವು ಬ್ರಹ್ಮವನ್ನು ನಿರಾಕರಿಸುವ ಕಾಲ ಬಂದಿದೆಯೇನೋ?" ಎಂದು ಕೆಲವರು. ಅಂತೂ ಒಬ್ಬರೊಬ್ಬರು ಒಂದೊಂದು ವಿಧವಾಗಿ ಹೇಳುತ್ತಿದ್ದರು.

ಅರುಂಧತೀದೇವಿಯು ಸಂಧ್ಯಾಹೋಮವನ್ನು ಮುಗಿಸಿಕೊಂಡು ಈಚೆ ಬಂದರು. ಆಶ್ರಮದ ಕಳವಳವು ಅವರನ್ನೂ ಹಿಡಿಯಿತು. ಅವರಿಗೆ "ನಮ್ಮ ಸತ್ಕಾರದಿಂದ ತೃಪ್ತನಾಗಿರುವ ಅತಿಥಿಯು ನಮ್ಮ ಆಶ್ರಮದಲ್ಲಿ ಇಂತಹ ಅತ್ಯಾಚಾರವನ್ನು ನಡೆಸುವನೇ? ಆಶ್ರಮದ ಧೇನುವನ್ನು ಆಶಿಸಿದನೇ? ಆಶ್ರಮದ ಬ್ರಹ್ಮಭೂಮಿಯಲ್ಲಿ ರಾಜನಿಗೆ ಅಧಿಕಾರವುಂಟೆ?" ಎಂದು ನಾನಾ ಪ್ರಶ್ನೆಗಳು, ಸಂದೇಹಗಳು, ಶಂಕೆಗಳು ಪರಂಪರೆಯಾಗಿ ಮನಸ್ಸಿಗೆ ಬಂದುವು. "ಅಂದು ಪತಿದೇವರು ಹೇಳಿದ ಮಾತು ನೆನಪಾಯಿತು. "ಆಶ್ರಮದಲ್ಲಿ ರಕ್ತಪಾತವಾಗಬೇಕಾಗಿದೆ. ಆಗುತ್ತದೆ" ಎಂದ ಮಾತು ಕಿವಿಯಲ್ಲಿ ಮತ್ತೊಮ್ಮೆ ಮೊಳಗಿತು.

"ಹಾಗಿದ್ದರೆ ನಡೆಯಬೇಕಾದುದು ನಡೆಯಲೇಬೇಕು. ಆದರೂ, ತಡೆಗಟ್ಟಬಾರದೇಕೆ........ನಾನು ಪ್ರಯತ್ನಪಟ್ಟರೆ ... ...." ಎನ್ನಿಸಿತು. ಮನಸ್ಸು ನಡುಗಿತು.

ಸಣ್ಣ ಗಂಟೆಗಳ ದನಿಯು ಎತ್ತಲೋ ಯೋಚನೆಯಲ್ಲಿ ಮುಳುಗಿದ ಮನಸ್ಸನ್ನು ಹೊರಕ್ಕೆ ಎಳೆಯಿತು. ಅರುಂಧತೀದೇವಿಯು ತಿರುಗಿ ನೋಡಿದಳು. ನಂದಿನಿಯು ಬರುತ್ತಿದ್ದಾಳೆ. ಸಮೃದ್ಧಿಯೂ ಶಾಂತಿಯೂ ಮೂರ್ತಿಗೊಂಡಂತೆ, ಸೌಭಾಗ್ಯಲಕ್ಷ್ಮಿಯ ಪ್ರತಿಬಿಂಬವೆಂಬಂತೆ, ಬರುತ್ತಿದ್ದಾಳೆ. ಕರಿ

ದಿದ್ದರೂ ಪೂರ್ಣವಾಗಿರುವ ಕೆಚ್ಚಲು ಹಾಗೆ ಹೀಗೆ ಹೊಯ್ದಾಡುತ್ತ ಯಾರಿಗೆ ಏನು ಬೇಕು? ಯಾರಿಗೆ ಯಾವ ವರ ಬೇಕು? ಎಂದು ಹುಡುಕುತ್ತಿರುವಂತಿದೆ. ಕೇಸರಿಯಬಣ್ಣದ ಕೆಂಪುಹಸು. ಈ ಜಗತ್ತಿನ ಸೌಭಾಗ್ಯವನ್ನೆಲ್ಲಾ ರಾಶಿಗೂಡಿಸಿ ಅದರ ಮೇಲೆ ಒಂದು ತಿಲಕವನ್ನಿಟ್ಟಂತೆ ಆಕೆಯ ಮುಖದಲ್ಲಿ ಒಂದು ಬೆಳ್ಳನೆ ತಿಲಕ. ಸೌಭಾಗ್ಯದೇವಿಯ ಮಂದಿರದ ಗೋಪುರದ ಮೇಲೆ ಇಟ್ಟಿರುವ ಶಿಖರಗಳಂತಿರುವ ಆ ಕೊಂಬುಗಳು.

ಅರುಂಧತೀದೇವಿಗೆ ಆಕೆಯನ್ನು ನೋಡಿ ಅಪಾರವಾದ ಆನಂದವಾಯಿತು. ಚಿತ್ತದಲ್ಲಿದ್ದ ಯೋಚನೆಯೆಲ್ಲಾ ಒಂದು ಗಳಿಗೆ ಎಲ್ಲೋ ಮಾಯವಾಯಿತು. ಮತ್ತೆ ಆಕೆಯು ಆಶ್ರಮದಲ್ಲಿಯೇ ಇದ್ದು ಈ ಮಂಡಲವನ್ನೆಲ್ಲ ಪಾವನಗೊಳಿಸುವಳೋ ಇಲ್ಲವೋ ಒಂದು ಶಂಕೆಯೂ ಮೂಡಿತು. ಆ ಶಂಕೆಯಿಂದ ಉಂಟಾದ ವಿಷಾದವನ್ನು ಸಹಿಸಲಾರದೆ ಅದನ್ನು ದೂಡುವುದಕ್ಕೋ ಎಂಬಂತೆ ಆಕೆಯು ಓಡಿಹೋಗಿ ನಂದಿನಿಯನ್ನು ತಬ್ಬಿಕೊಂಡಳು. ಆ ಧೇನುವೂ ಆ ಉಪಚಾರವನ್ನು ಬಹು ಸಂತೋಷವಾಗಿ ಸ್ವೀಕರಿಸಿ, ತಾನೂ ಅಷ್ಟೇ ಪ್ರೀತಿಯಿಂದ ಅರುಂಧತಿಯನ್ನು ಉಪಚರಿಸಿತು.

"ಅಮ್ಮಾ, ನೀನು ಹೊರಟುಹೋಗುವೆಯಾ? ನಮ್ಮಲ್ಲಿ ಇರುವುದಿಲ್ಲವೇ?" ಎಂದು ಅರುಂಧತಿಯು ಕೇಳಿದಳು. ನಂದಿನಿಯು ತಲೆ ಅಲ್ಲಾಡಿಸಿ ಗಂಟೆಯು ಸದ್ದು ಸುಖವಾಗಿ ನುಡಿಯುತ್ತಿರಲು, ಅಷ್ಟೇ ಮನೋಹರವಾದ ಮನುಷ್ಯವಾಕ್ಕಿನಿಂದ ನುಡಿದಳು: "ದೇವಿ, ಗುರುಗಳಿಗೂ ಅರಸನಿಗೂ ನಡೆದ ಸಂಭಾಷಣೆಯನ್ನೆಲ್ಲ ನಾನು ಬಲ್ಲೆ. ಕೌಶಿಕನು ರಾಜನೇ ಹೌದು. ಆತನಲ್ಲಿ ದಿವ್ಯಾಂಶಸಂಪನ್ನತೆಯೂ ಉಂಟು. ಆದರೆ ಕಾಮಧೇನುವಿನ ಮಗಳನ್ನು ತನ್ನ ಮನೆಯಲ್ಲಿಟ್ಟುಕೊಳ್ಳಬೇಕಾದರೆ ಎಷ್ಟು ಯೋಗ್ಯತೆಯಿರಬೇಕೋ ಅಷ್ಟು ಯೋಗ್ಯತೆ ಮಾತ್ರ ಇನ್ನೂ ಬಂದಿಲ್ಲ. ಇದನ್ನು ಅವನು ಇಂದು ಮನಗಾಣುವನು. ತಾಯೇ, ಇಂದು ಈ ಪುಣ್ಯಾಶ್ರಮಭೂಮಿಯು ರಕ್ತಪಾನವನ್ನು ಬಯಸಿ, "ನಂದಿನೀ, ನನಗೆ ರಕ್ತಪಾನವು ಬೇಕು, ಮಾಡಿಸು" ಎನ್ನುತ್ತಿರುವಳು. ಆಗಬೇಕಾಗಿದೆ. ಆಗುವುದು. ಆದರೆ, ತಾಯೆ, ನನ್ನ ಮೇಲೆ ಬಲಪ್ರಯೋಗವಾಗುವವರೆಗೆ ನಾನು ಏನೂ ಮಾಡುವಂತಿಲ್ಲ. ಈ ಆಶ್ರಮದ ಪುಣ್ಯಭೂಮಿಯಲ್ಲಿ, ನನ್ನ ಮೇಲೆ, ಬಲಪ್ರಯೋಗಮಾಡುವುದು ಕೌಶಿಕನಿಗೆ

ಸರ್ವಥಾ ತಕ್ಕುದಲ್ಲ. ಆದರೂ ಆಗಲೇಬೇಕು. ಅದು ಅನಿವಾರ್ಯ. ತಾಯೀ, ಅಂತಹ ದುಷ್ಕಾಲದಲ್ಲಿ ನಾನು ಆತ್ಮರಕ್ಷಣೆಯನ್ನು ಮಾಡಿಕೊಳ್ಳಬಹುದು. ಅಲ್ಲವೆ ?" ಎಂದಳು.

ಅರುಂಧತೀದೇವಿಗೆ ಎಲ್ಲವೂ ಅರ್ಥವಾಯಿತು. ಆಶ್ರಮದ ಪುಣ್ಯ ಭೂಮಿಯು ಜ್ಞಾನಾರ್ಜನೆಗೆ ಸಾಧಕಳಾಗಿ ಕಾಪಾಡುತ್ತಿದ್ದ ಪ್ರಶಾಂತ ಸರಸ್ವತಿಯಾಗಿದ್ದ ಭೂದೇವಿಯಿಂದು ದುರ್ಗಿಯಾಗಿ ಚಂಡಿಯಾಗಿ ಕಾಳಿಯಾಗಿ ರಕ್ತಪಾನವನ್ನು ಬಯಸಿರುವಳಲ್ಲ ಎಂದು ಒಂದುಗಳಿಗೆ ಮನಸ್ಸಿನಲ್ಲಿ ಕೊಂಚ ವಿಷಾದವಾದರೂ ಮರುಗಳಿಗೆಯೊಳಗಾಗಿ, ರೆಪ್ಪೆ ಹೊಡೆಯುವುದರೊಳಗಾಗಿ ಆಗಬೇಕಾದುದು ಆಗಲೇಬೇಕು ಎಂಬ ನಿಶ್ಚಯದಿಂದ ಹೇಳಿದಳು : "ಅಮ್ಮಾ, ನೀನು ಜನಿಸಿರುವುದೇ ಅನುಗ್ರಹಕ್ಕೆ. ನೀನು ಹಾಗೆಯೇ ಅನುಗ್ರಾಹಿಣಿಯಾಗಿಯೇ ಬಾಳಿದರೆ ಬಹಳ ಸಂತೋಷ. ನಿನಗೆ ಆಗ್ರಹ ಬರುವಂತಹ ಸನ್ನಿವೇಶವೇ ಬರದಿದ್ದರೆ ಬಹಳ ಸಂತೋಷ. ಅಲ್ಲದೆ ನೀವು ದೇವತೆಗಳು. ಲೋಕದ ಶಿಕ್ಷಾರಕ್ಷೆಗಳು ನಿಮ್ಮ ಕೈಯಲ್ಲಿವೆ. ನೀವು ಏನು ಮಾಡಿದರೂ ಸರಿ" ಎಂದಳು.

ನಂದಿನಿಯು ನೊಂದು ನುಡಿದಳು. "ತಾಯಿ, ನಿನ್ನ ಮಾತು ನಿಜ. ಅನುಗ್ರಹಕ್ಕಾಗಿ ಹುಟ್ಟಿದವರು ಆಗ್ರಹ ಮಾಡುವುದು ಕಷ್ಟ. ಅಲ್ಲದೆ ನಾವೂ ಆದಷ್ಟು ಅನುಗ್ರಹ ಮಾಡಬೇಕೆಂದೇ ಪ್ರಯತ್ನಿಸುವೆವು. ನೀರನ್ನು ತಡೆದು ನಿಲ್ಲಿಸುವುದಕ್ಕಾಗಿ ಹುಟ್ಟಿದ ಕಟ್ಟೆಯೂ ಯತ್ನವಿಲ್ಲದೆ ಒಡೆಯುವ ಹಾಗೆ ನಾವೂ ಆಗಾಗ ಆಗ್ರಹ ಮಾಡಬೇಕಾಗುವುದು. ತಾಯೀ, ನೀನು ಶೋಕಿಸದಿರು. ಅಂತಹ ದುಷ್ಕಾಲ ಬಂದರೆ ಆಗ ನನ್ನನ್ನು ನಾನು ರಕ್ಷಿಸಿಕೊಳ್ಳುವೆನು. ಏನಾದರೂ ನೀವು ಮಾತ್ರ ನನ್ನನ್ನು ಬಿಡಬೇಡಿ. ನೀವು ತಾಯಿತಂದೆಗಳು. ನಾನು ಮಗಳು" ಎಂದಳು.

ಅರುಂಧತೀದೇವಿಗೆ ಕಣ್ಣೀರು ಬಂತು; "ನಿನ್ನಿಂದ ನಮ್ಮ ಆಶ್ರಮ ಅಮ್ಮಾ" ಎಂದಳು. ಗಂಟಲುಕಟ್ಟಿ ಮುಂದಿನ ಮಾತು ಹೊರಡಲಿಲ್ಲ. ನಂದಿನಿಯು ತಾಯಿಯನ್ನು ನೆಕ್ಕುವ ಕರುವಿನಂತೆ ಆಕೆಯನ್ನು ನೆಕ್ಕಿದಳು. ಅರುಂಧತಿಯು ನಮಸ್ಕಾರವನ್ನು ಗ್ರಹಿಸಿ ಮುಂದೆ ಹೋದಳು.

ಆಕೆಯು ಹೊರಟುಹೋದ ಕೊಂಚಹೊತ್ತು ಈಕೆಯು ಮಂಕಾಗಿ ಕುಳಿತಿದ್ದು, ವೃದ್ಧ ಶಿಷ್ಯನನ್ನು ಕರೆದು, “ಅಯ್ಯಾ, ಆಶ್ರಮವಾಸಿಗಳೆಲ್ಲರಿಗೂ ಹೇಳು. ಹೊರಗಿನಿಂದ ಬಂದವರು ಏನಾದರೂ ದುಷ್ಕರ್ಮವನ್ನು ಆಚರಿಸಿದರೂ ನಮ್ಮಲ್ಲಿ ಯಾರೂ ವಿಹ್ವಲರಾಗಬಾರದು. ಅತಿಥಿದೇವೋಭವ ಎಂಬುದನ್ನು ಮರೆಯಬಾರದು. ಅತಿಥಿಯಾಗಿ ದೇವರಂತೆ ಪೂಜೆಯನ್ನು ಗ್ರಹಿಸಿದವನ ದೌಷ್ಟ್ಯವನ್ನು ಎಣಿಸಬಾರದು. ಅದು ಸಾಧ್ಯವಿಲ್ಲವಾದರೆ ಈಗಲೇ ದೂರದಲ್ಲಿರಲಿ. ಎಷ್ಟುದೂರ ಹೋದರೆ ಸಾಧುಭಾವವನ್ನು ಕಾಪಾಡಿಕೊಳ್ಳಬಹುದೋ ಅಷ್ಟು ದೂರ ಹೋಗಿರಲಿ. ಇದು ಎಲ್ಲರಿಗೂ ತಿಳಿದಿರಲಿ” ಎಂದಳು.

ಶಿಷ್ಯನು ಕಣ್ಣಿನಲ್ಲಿ ನೀರಿಡುತ್ತ “ತಾಯೇ, ಅತಿಥಿಯು ದುಷ್ಟನಾಗಿದ್ದಾನೆ. ತಪಸ್ವಿಗಳೆಲ್ಲರೂ ಕ್ಷುಬ್ಧರಾಗಿದ್ದಾರೆ.” ಎಂದನು.

ಅರುಂಧತೀದೇವಿಯು “ಆದುದು ಹೋದುದಕ್ಕೆಲ್ಲ ಕ್ಷುಬ್ಧರಾಗುವ ಹಾಗಿದ್ದರೆ ಆಶ್ರಮಕ್ಕೇಕೆ ಬರಬೇಕು? ಆಶ್ರಮದಲ್ಲಿ ಇರುವವರೆಗಾದರೂ ಆಶ್ರಮ ಧರ್ಮವನ್ನು ಪಾಲಿಸಬೇಕು. ಅಲ್ಲವೆ?” ಎಂದು ನಕ್ಕಳು.

ವೃದ್ಧ ಶಿಷ್ಯನು ಮರುಮಾತಾಡಲಿಲ್ಲ. ನಮಸ್ಕಾರಮಾಡಿ ಅಪ್ಪಣೆಯನ್ನು ನೆರವೇರಿಸಲು ಹೊರಟುಹೋದನು.

---

## ಐದನೆಯ ತರಂಗ

ಅರಮನೆಯ ಸುಮಂಗಲೆಯರು ಬ್ರಾಹ್ಮಣರೂ ವೇದ ಘೋಷಗಳೊಡನೆಯೂ ಮಂಗಳವಾದ್ಯ ಪೂಜಾ ದ್ರವ್ಯಗಳೊಡನೆಯೂ ನಂದಿನಿಯ ಬಳಿ ಸಾರಿದರು. ರಾಜ ಪುರೋಹಿತನು ಸುರಭಿಗೆ ಸಲ್ಲುವ ಪೂಜೆಯನ್ನು ಸಲ್ಲಿಸಿ ಭಯ ಭಕ್ತಿ ನಮ್ರನಾಗಿ “ದೇವಿ, ಮಹಾರಾಜನು ಅರಮನೆಯಲ್ಲಿ ತಮಗೆ ನಿತ್ಯ ಪೂಜೆಯನ್ನು ಸಲ್ಲಿಸಿ ಕೃತಾರ್ಥನಾಗಬೇಕೆಂದು ಕೋರಿದ್ದಾನೆ. ತಾವು ಆತನ ಕೋರಿಕೆಯನ್ನು ನೆರವೇರಿಸಿ ಕೊಡಬೇಕು” ಎಂದು ಸಾಷ್ಟಾಂಗ ಪ್ರಣಾಮ ಮಾಡಿದನು.

ನಂದಿನಿಯು ಪೂಜೆಯನ್ನು ಸಾಂಗವಾಗಿ ಸ್ವೀಕರಿಸಿ "ಬ್ರಾಹ್ಮಣ, ನಿಮ್ಮ ಅರಸನಿಂದ ನಿತ್ಯ ಪೂಜೆಯನ್ನು ಸ್ವೀಕರಿಸುವ ಗೋವು ಅವತರಿಸಬೇಕು. ಈ ನಂದಿನಿಯು ದೇವತೆಗಳಿಂದ ವಸಿಷ್ಠರಿಗೆ ದತ್ತವಾಗಿ ಬಂದಿರುವವಳು. ಆದುದರಿಂದ ಬ್ರಹ್ಮದತ್ತವಾದುದನ್ನು ಹಿಂತಿರುಗಿ ತೆಗೆದುಕೊಳ್ಳಲು ಅಥವಾ ಅನ್ಯಥಾ ವಿನಿಯೋಗಿಸಲು ದೇವೇಂದ್ರನಿಗೂ ಅಧಿಕಾರವಿಲ್ಲ. ಹೀಗಿರಲು ನಾನೆಂತು ಬರಲಿ?" ಎಂದಳು.

ಬ್ರಾಹ್ಮಣನು ಏನೂ ಹೇಳಲಾರದೆ, "ತಾಯೀ, ರಾಜಾಜ್ಞೆಯನ್ನು ನಾನು ತಿಳಿಸಿದ್ದೇನೆ. ಅದನ್ನು ಮನ್ನಿಸುವುದು ಬಿಡುವುದು ನಿನಗೆ ಸೇರಿದುದು. ನನ್ನ ಅಪರಾಧವೇನಿದ್ದರೂ ಕ್ಷಮಿಸು" ಎಂದು ನಮಸ್ಕರಿಸಿದನು. ನಂದಿನಿಯೂ ಗಂಭೀರವಾಗಿ "ಬ್ರಾಹ್ಮಣಾ, ರಾಜಾಜ್ಞೆಯು ಸರ್ವಥಾ ಮಾನ್ಯವೇ ಆದರೂ ಮಾಡಬಾರದ ಆಜ್ಞೆಯನ್ನು ಮಾಡಿದರೆ ಅದಕ್ಕೆ ಕಟ್ಟುಬೀಳುವುದೆಂತು? ನನ್ನನ್ನು ಅಪೇಕ್ಷಿಸುವುದಕ್ಕಿಂತ ಮುಂಚೆ, ಈ ದಾಸಕ್ಕೆ ಬಂಧ ವಿಮೋಚನೆಯಾಗಿದೆಯೇ ಎನ್ನುವುದನ್ನು ಗಮನಿಸಬೇಕಾಗಿತ್ತು" ಎಂದಳು.

ಪುರೋಹಿತನು ನಿರುತ್ತರನಾದನು. ಅವನೂ ಅವನ ಪರಿವಾರದವರೂ ಹಿಂತಿರುಗುತ್ತಿದ್ದ ಹಾಗೆಯೇ, ಕೌಶಿಕನ ದಳವಾಯಿಯು ಮುಂದೆ ಬಂದು ನಮಸ್ಕರಿಸಿದನು: "ತಾಯಿ, ರಾಜಾಜ್ಞೆಯನ್ನು ಗೌರವಿಸಲೇಬೇಕೆಂದು ತಮ್ಮನ್ನು ಸರ್ವವಿಧದಲ್ಲೂ ಕೇಳಿಕೊಳ್ಳಬೇಕೆಂದು ನನಗೆ ಆಜ್ಞೆಯಾಗಿದೆ" ಎಂದು ಬಿನ್ನವಿಸಿದನು.

ನಂದಿನಿಯು ನಕ್ಕು "ಅಯ್ಯಾ ವೀರನೆ, ಮಾಡಬಾರದ ಅಪ್ಪಣೆಯನ್ನು ಮಾಡಿರುವ ಅರಸನ ಅಪ್ಪಣೆಯು ಜೀವನ್ಮೃತವಾದಂತೆ. ಅದನ್ನು ಗೌರವಿಸುವುದೆಂತು?" ಎಂದಳು.

ಅವನು ಮತ್ತೆ ಕೈಮುಗಿದು ವಿನಯವಾಗಿದ್ದರೂ ಕಪಿಮುಷ್ಟಿಯಂತಿರುವ ಹಟದಿಂದ "ತಾಯೀ, ರಾಜಾಜ್ಞೆಯನ್ನು ವಿಮರ್ಶಿಸುವುದು ನನ್ನ ಕಾರ್ಯವಲ್ಲ. ಆ ಆಜ್ಞೆಯು ಸರ್ವರಿಂದಲೂ ಮಾನ್ಯವಾಗುವಂತೆ ನೋಡಿಕೊಳ್ಳಬೇಕಾದುದು ನನ್ನ ಧರ್ಮ. ಎಲ್ಲರೂ ರಾಜಾಜ್ಞೆಯನ್ನು ಪಾಲಿಸಬೇಕು – ಅದು ಅವರ ಧರ್ಮ. ಆ ಧರ್ಮವನ್ನು ಅತಿಕ್ರಮಿಸಿದವರನ್ನು, ಮತ್ತು

ಆ ಧರ್ಮದ ಹಾದಿಯಲ್ಲಿ ಹೋಗದಿರುವವರನ್ನು, ಆ ಹಾದಿಗೆ ತರುವುದಕ್ಕಾಗಿಯೇ ನಾನು ಇರುವುದು" ಎಂದನು.

ನಂದಿನಿಯು ಸಮಾಧಾನವಾಗಿಯೇ ಉತ್ತರಕೊಟ್ಟಳು: "ತಮ್ಮ ಕೈಲಾದರೆ ಆಗಬಹುದು."

ದಳವಾಯಿಯ ಅಪ್ಪಣೆಯಾಯಿತು. ನಾಲ್ವರು ಮುಂದೆ ಬಂದರು. ತಮ್ಮ ಕೈಯಲ್ಲಿದ್ದ ಚಿನ್ನದ ಸರಪಳಿಗಳಿಂದ, ನಂದಿನಿಯನ್ನು ಬಿಗಿಯಲು ಯತ್ನಿಸಿದರು. ನಂದಿನಿಯು ತಲೆಯನ್ನು ಕೊಡಹಿದಳು. ಸರಪಳಿಗಳು ತುಂಡುತುಂಡಾದುವು. ಮದ್ದಾನೆಯನ್ನಾದರೂ ಕಟ್ಟಬಲ್ಲ ಸರಪಳಿಗಳು ತುಂಡಾದುದನ್ನು ಕಂಡು ಪರಿಜನರು ಗಾಬರಿಗೊಂಡರು. ದಳವಾಯಿಯು ರೇಗಿದನು. "ಮುಂದುವರಿದು ಕೊಂಬು ಹಿಡಿದು ಕಟ್ಟಿರೋ" ಎಂದನು. ಸೇನೆಯವರು ಬಂದು ಸುತ್ತಿಕೊಂಡರು. ಹಲವರು ಹಸುವಿನ ಮೇಲೆ ಬಿದ್ದರು. ಆ ನೂಕುನುಗ್ಗಲಲ್ಲಿ ನಂದಿನಿಯ ಮೇಲೆ ಒಂದು ಒಳ್ಳೆಯ ಏಟು ಬಿತ್ತು. ಕೂಡಲೆ ಆಕೆಯು ಆರ್ಭಟಿಸಿ ಮೇಲಕ್ಕೆ ಹಾರಿದಳು. ಮೈ ಒದರಿದಳು. ಆಕೆಯ ಮೈಯಿಂದ ಉದುರಿದ ರೋಮಗಳಿಂದ ಅನೇಕಾನೇಕ ಕಾಡುಜನರು ಹುಟ್ಟಿದರು. ನಾನಾಪ್ರಹರಣ ಕುಶಲಿಗಳಾಗಿ ನಾನಾಯುದ್ಧ ವಿಜಯಿಗಳಾಗಿ ಉನ್ಮತ್ತರಾಗಿದ್ದ ರಾಜಾ ಕೌಶಿಕನ ಸೈನಿಕರೆಲ್ಲರನ್ನೂ ಮುಹೂರ್ತಮಾತ್ರದಲ್ಲಿ ಕಾಡುಜನರ ತಂಡವು ಮುತ್ತಿ, ಬೆಳೆದು ನಿಂತಿದ್ದ ಪೈರನ್ನು ಕೊಯ್ದು ಹಾಕುವಂತೆ ತರಿದಿಟ್ಟರು.

ರಾಜನ ಇತರ ಸೈನ್ಯವು ಸನ್ನದ್ಧವಾಗಿದ್ದರೂ ಯುದ್ಧಕ್ಕೆ ಸಿದ್ಧವಾಗಿರಲಿಲ್ಲ. ಎಷ್ಟೇ ಆಗಲಿ ಯುದ್ಧಕರ್ಮದಲ್ಲಿ ನುರಿತಿದ್ದವರಲ್ಲವೆ? ಒಂದು ಗಳಿಗೆಯೊಳಗಾಗಿ, ಚೂಣಿಯವರು ತಮ್ಮ ಹೋರಾಟ ಮುಗಿಸುವುದರೊಳಗಾಗಿ, ಹಿಂದಿನವರು ವ್ಯೂಹ ಕಟ್ಟಿದರು. ಪದಾತಿ ದಳವು ಎರಡು ಪಕ್ಕಗಳಲ್ಲಿಯೂ ಕುದುರೆಗಳು ಕಾಯುತ್ತಿರಲು ಮುನ್ನುಗ್ಗಿತು. ಮತ್ತೊಂದು ಗಳಿಗೆಯೊಳಗಾಗಿ, ಒಂದು ಕಡೆಯಿಂದ ಆನೆಗಳೂ ಇನ್ನೊಂದು ಕಡೆಯಿಂದ ರಥಗಳೂ ಬಂದುವು.

ರಾಜಾ ಕೌಶಿಕನೇ ಸ್ವಯಂ ರಣಭೂಮಿಗೆ ಬಂದು ಸೈನ್ಯಚಲನೆ ಮಾಡುತ್ತಿದ್ದಾನೆ. ಆದರೂ ಆ ಮ್ಲೇಚ್ಛಾದಿಗಳ ಮಾಯಾ ಸೈನ್ಯವು ಕೌಶಿಕನ ಸೈನ್ಯವನ್ನು ತುಳಿದುಕೊಂಡು ನುಗ್ಗುತ್ತಿದ್ದಾರೆ. ಮದ್ದಾನೆಗಳ ಕಾಲ ಕುಳಿತಕ್ಕೆ

ಸಿಕ್ಕಿ ಪಟಪಟನೆ ಮುರಿದುಬೀಳುವ ಕಬ್ಬಿನ ಗದ್ದೆಯಂತೆ ಕೌಶಿಕನ ಸೇನಾ ಮಂಡಲವು ಅವನೆದುರಿಗೇ ನಿರ್ನಾಮವಾಗುತ್ತಿದೆ.

ಒಂದು ಮುಹೂರ್ತದೊಳಗಾಗಿ ಯುದ್ಧವೇ ಮುಗಿದುಹೋಯಿತು. ಭೂಲೋಕದ ಹೆಸರಾದ ವೀರರ ರಕ್ತವನ್ನೆಲ್ಲ ಪಾನಮಾಡಿ ಪ್ರಸಿದ್ಧವಾಗಿದ್ದ ರಾಜಾ ಕೌಶಿಕನ ಬಾಣಗಳು ವ್ಯರ್ಥವಾದವು. ಏನೋ ಒಂದು ಭಯವು ಅವನನ್ನೂ ಅವನ ಸೇನೆಯನ್ನೂ ಆವರಿಸಿದೆ. ಇತರರು ಹೊಡೆಯುವುದಕ್ಕಿಂತ ಮುಂಚೆಯೇ ಸೇನೆಯವರು ಕಿರಿಚಿಕೊಂಡು ಬಿದ್ದು ಸಾಯುತ್ತಿದ್ದಾರೆ. ಉಳಿದವರು ಎಲ್ಲೋ ಒಂದು ಹಿಡಿ. ನೋಡುನೋಡುತ್ತಿದ್ದ ಹಾಗೆಯೇ ಬತ್ತಿಹೋದ ಸಾಗರದಂತೆ ಸೈನ್ಯವೆಲ್ಲ ಕರಗಿಹೋಯಿತು. ಅಲ್ಲೊಂದು ಇಲ್ಲೊಂದು ಆಗಿ ಉಳಿದವರನ್ನು ಮಾಯಾ ಸೇನೆಯು ಹೊಡಿದು ಓಡಿಸಿಕೊಂಡು ಹೋಯಿತು.

ಧರ್ಮದ್ರೋಹದಿಂದ ಹತನಾದ ರಾಜನ ಸೈನಿಕರು ಪಾಮರರಿಂದ ಆಹತರಾಗಿ ನಿಶ್ಶೇಷರಾದರು. ಪ್ರಕ್ಷುಬ್ಧವಾದ ಮಹಾಸಾಗರದಂತೆ ಮೆರೆಯುತ್ತ ಬಂದ ಸೈನ್ಯವು ನಿರ್ಮೂಲವಾಗಿ, ಕೌಶಿಕನ ಜೀವವುಳಿಯುವುದು ಕಷ್ಟವಾಯಿತು. ಯಾವ ಯುದ್ಧದಲ್ಲೂ ಹಿಂತೆಗೆಯದ ಕ್ಷತ್ರಿಯ ವೀರನು ಹೆದರಿ ಜೀವಗಳ್ಳನಾಗಿ ಓಡಿಹೋದನು.

ದೂರದಲ್ಲಿ ಅರುಂಧತೀ ದೇವಿಯು ಇದೆಲ್ಲವನ್ನೂ ಕಣ್ಣೀರಿಟ್ಟುಕೊಂಡು ನೋಡುತ್ತ ನಿಂತಿದ್ದಳು. "ಸೌಮ್ಯಳಾಗಿ, ಶಾಂತಿಪದವಾದ ಆಶ್ರಮದ ಕೀರ್ತಿಯಂತೆ ಸಾಧುವಾಗಿದ್ದ ನಂದಿನಿಯು, ಹೀಗೆ ಕಾಳಿಯಾಗಿ ಕೊಲ್ಲಬಲ್ಲಳು" ಎಂದು ಆಕೆಯ ಮನಸ್ಸಿನಲ್ಲಿ ಎಂದೂ ಹೊಳೆದೂ ಇರಲಿಲ್ಲ. "ಅಯ್ಯೋ ನಂದಿನಿಯನ್ನು ಹೊಡೆದರೆ? ಚತುರ್ದಶ ಭುವನ ಸಹಿತವಾದ ಬ್ರಹ್ಮಾಂಡವನ್ನೇ ಹೊಡೆದಂತಾಯಿತಲ್ಲ" ಎಂದು ವ್ಯಥೆಯಿಂದ ಕಣ್ಣೀರಿನ ಕೋಡಿ ಹರಿಯಿಸುತ್ತಿದ್ದವಳು ಆಕೆಯ ಆತ್ಮರಕ್ಷಾಸಾಮರ್ಥ್ಯವನ್ನು ಕಂಡು ಆನಂದದಿಂದ ಕಂಬನಿಯ ಮಳೆಗರೆದಳು.

ಸಂಹಾರ ಕ್ರಿಯೆಯು ಸಾಂಗವಾದ ಮೇಲೆ ನಂದಿನಿಯು ಮತ್ತೆ ಸೌಮ್ಯಳಾದಳು. ತಿರುಗಿ ನೋಡಿದಳು. ಅರುಂಧತಿಯನ್ನು ಕಂಡು ತಾಯನ್ನು ಕಂಡು ಓಡಿಬರುವ ಎಳೆಗರುವಿನಂತೆ ಅಂಬಾ ಎಂದು ಕೂಗುತ್ತ, ಪುಟಚೆಂಡಿನಂತೆ ನೆಗೆಯುತ್ತಾ ಓಡಿಬಂದಳು. ಆ ಪುಣ್ಯವಂತೆಯೂ ತಾನು ಬೀಳುವುದೂ

ಕಾಣದೆ ಸೀರೆಯ ನೆರಿಯು ಅಸ್ತವ್ಯಯಿಸುತ್ತಿದ್ದರೂ ಸೆರಗು ಹಾರಿಹೋಗುತ್ತಿದ್ದರೂ ಗಮನಿಸದೆ ಓಡಿಬಂದು ಪ್ರಿಯತಮ ಬಂಧುವನ್ನು ಆದರಿಸುವಂತೆ ಆದರಿಸಿದಳು.

"ನೀನೇ ಏನಮ್ಮ? ಅಗ್ನಿಪರ್ವತದ ಹಾಗೆ ಉರಿಯುತ್ತಾ ನಿಂತು ಆ ಸೈನ್ಯಗಳನ್ನು ಸೃಷ್ಟಿಸಿದವಳು! ನೀನೇ ಏನಮ್ಮ, ರಾಜಸೇನೆಯನ್ನೆಲ್ಲ ಧೂಳೀಪಟಲ ಮಾಡಿದವಳು! ನೀನೇ ಏನಮ್ಮ, ಈಗ ಇಲ್ಲಿ ಮಾತೃಭಾವದಿಂದ ಪರಮ ಸೌಮ್ಯಳಾಗಿ ನಿಂತಿರುವ ನೀನೇ ಏನಮ್ಮ, ಕೌಶಿಕನ ಪಾಲಿನ ಮಾರಿಯಾದವಳು! ಅಯ್ಯೋ, ನನ್ನಮ್ಮ ಎಷ್ಟು ನೊಂದೆಯೋ? ಎಷ್ಟು ಕಷ್ಟಪಟ್ಟೆಯೋ? ನಿನಗೆಷ್ಟು ದೃಷ್ಟಿಯಾಗಿದೆಯೋ ಬಾರೆ, ತಾಯೆ, ಬಾ, ಒಂದು ಹಿಡಿ ಕಡ್ಡಿಯನ್ನಾದರೂ ಇಳಿ ತೆಗೆಯುವನು" ಎಂದು ಹೊರಟಳು. ನಂದಿನಿಯೂ ಏನೂ ತಿಳಿಯದ ಎಳೆಗರುವಿನಂತೆ ಆಕೆಯ ಹಿಂದೆ ಹೋದಳು.

---

## ಆರನೆಯ ತರಂಗ

ಮಧ್ಯಾಹ್ನದ ಮೂರು ಝಾವವಿರಬಹುದು. ಭಗವಾನ್ ಸೂರ್ಯನು ಪಶ್ಚಿಮದ ದಿಗಂತದ ಕಡೆಗೆ ಓಡುವುದಕ್ಕೆ ಆರಂಭಿಸಿದ್ದಾನೆ. ಶ್ರಮಜೀವಿಗಳೆಲ್ಲರೂ ಶ್ರಾಂತರಾಗಿ ದಿನದ ಕೆಲಸವು ಮುಗಿಯಿತೇ ಎಂದು ಮಾಡಿರುವ ಕೆಲಸದ ಕಡೆಗೆ ಹಿಂತಿರುಗಿ ನೋಡುವ ಕಾಲ. ವಸಿಷ್ಠರು ತಮ್ಮ ಪರ್ಣಕುಟಿಯಲ್ಲಿ ಒಂದು ಕೃಷ್ಣಾಜಿನದ ಮೇಲೆ, ಒಂದು ಮಣೆಯನ್ನು ಒರಗಿಕೊಂಡು ಕುಳಿತಿದ್ದಾರೆ. ಯಾವುದೋ ಒಂದು ಯೋಚನೆಯು ತೀವ್ರವಾಗಿ ಬಂದು ಮುಸುಕಲು ಹವಣಿಸುತ್ತಿದ್ದರೆ, ಅದನ್ನು ಸುಲಭವಾಗಿ ಅತ್ತಿಡುವ ಪ್ರಯತ್ನದಲ್ಲಿ ತೊಡಗಿದ್ದಂತೆ ಇದೆ. ದೇಹದ ಭಾರವನ್ನು ಒರಗಿ ಕೊಂಡಿರುವ ಮಣೆಯು ಹೊತ್ತಿರಲು, ಮನಸ್ಸನ್ನು ಮುಂದಿನ ಕೆಲಸದಲ್ಲಿ ತೊಡಗಿಸಲು ಪ್ರತ್ಯೇಕಿಸಿಡುತ್ತಿರುವರೋ ಎಂಬಂತಿದೆ. ಅರುಂಧತೀದೇವಿಯು ಎದುರಿಗೇ ಕುಳಿತಿದ್ದಾರೆ. ಆಕೆಗೂ ಏನೋ ಶೀತ ಹಿಡಿದಾಗ ಇರುವಂತೆ ಇರಿಸು ಮುರಿಸು ಆಗಿದೆ. ಆಶ್ರಮದಲ್ಲಿ ರಕ್ತಪಾತವಾದಾಗಿನಿಂದ ಆಕೆಗೆ ಮನಸ್ಸು ಮೈ ಎರಡೂ ಸಮಾಧಾನವಾಗಿಲ್ಲ. ಏನೋ ಪ್ರಕೋಪಕ್ಕೆ ಒಳಗಾದಂತೆ, ಮೂಗುದಾರವನ್ನು

ಕಿತ್ತುಕೊಂಡು, ನೊಗವನ್ನು .ಬಿಡಿಸಿಕೊಳ್ಳಲು ಹೆಣಗುವ ತುಂಟೆತ್ತಿನಂತೆ, ಆಕೆಯ ಮನಸ್ಸೂ ವ್ಯೆಯೂ ಆಶ್ರಮದ ಶಾಂತ ಜೀವನಕ್ಕೆ ಒಗ್ಗೆನೆಂಬಂತೆ ಹಟಮಾಡುತ್ತಿವೆ. ಆದರೂ ಗಂಡನ ಮೇಲೆ ಕೋಪ ಬಂದರೂ ಅದಕ್ಕೆ ಅವಕಾಶ ಕೊಡಲಾರದ ವಶ್ಯಳಾದ ಹೆಂಡತಿಯಂತೆ, ಅವು ಆಕೆಯ ದಮನಕ್ಕೆ ಒಳಪಟ್ಟು ಹಿಡಿತದಲ್ಲಿವೆ.

ವಸಿಷ್ಠರು ಆಕೆಯ ಕಡೆ ನೋಡಿದರು. ಓಡಿಬಂದು ಎರಡು ಹನಿಯನ್ನು ಉದುರಿಸಿ ಮತ್ತೆ ಓಡಿಹೋಗುವ ಮೋಡದ ತುಂಡಿನಂತೆ ಅವರ ಮನಸ್ಸೂ ಹಿಡಿತಕ್ಕೆ ಸಿಕ್ಕಿಬಂದು ಸಣ್ಣ ನಗೆಯನ್ನು ಅವರ ಮೊಕದ ಮೇಲೆ ಚುಮುಕಿಸಿ ಎಲ್ಲಿಗೋ ಓಡಿಹೋದಂತ್ತಿತ್ತು. ಪ್ರಸನ್ನವಾದರೂ ಹೀಗೆ ಅವ್ಯಗ್ರವಾಗಿರುವ ಮನಸ್ಸಿನಿಂದ ಆಕೆಯನ್ನು ನೋಡಿ ಹೇಳಿದರು: "ದೇವಿ, ನಿನಗೆ ಆಶ್ರಮದ ಮೇಲಿನ ಮಮತೆಯಿಂದ ಇಲ್ಲಿನ ಯೋಚನೆಯೇ ಪ್ರಬಲವಾಗಿದೆ. ಆ ಕೌಶಿಕನ ವಿಚಾರವಾಗಿ ಅಷ್ಟು ಯೋಚಿಸು. ಲೋಕದ ರಾಜಾಧಿರಾಜರನ್ನೆಲ್ಲ ಗೆದ್ದು ಬಂದವನು ಇಲ್ಲಿ-ಆಶ್ರಮದಲ್ಲಿ ತನ್ನ ವೀರ್ಯ ಸಂಪತ್ತನ್ನೆಲ್ಲಾ ಪಣ ಮಾಡಿ ಸೋತು ಓಡಿಹೋಗಬೇಕಾಯಿತು. ಹಾಗೆ ಆಗಿರುವಾಗ ನಮ್ಮ ಮೇಲೆ ಅವನಿಗೆ ವಿದ್ವೇಷವು ಬರುವುದು ಏನಾಶ್ಚರ್ಯ? ಬ್ರಹ್ಮದ್ವೇಷ ಮಾಡಬಹುದೇ? ಎನ್ನುವ ಲೋಕವು ಇನ್ನೊಂದು ಹೆಜ್ಜೆ ಮುಂದೆ ಹೋಗಿ 'ರಾಗದ್ವೇಷಗಳೆರಡೂ ಮನೋವಿಕಾರಗಳು. ಬೇಕೆಂದಾಗ ರಾಗ-ಬೇಡವೆಂದಾಗ ದ್ವೇಷ. ಅಭಿಮುಖವಾದಾಗ ರಾಗ-ವಿಮುಖವಾದಾಗ ದ್ವೇಷ' ಎಂಬುದನ್ನೇಕೆ ನೋಡುವುದಿಲ್ಲ? ಕೌಶಿಕನಿಗೆ ಕಾಮಧೇನುವು ಬೇಕೆಂಬ ಕಾಮವು ಹುಟ್ಟಿತು. ಅದನ್ನು ಪಡೆಯಲು ನಾವು ಅಡ್ಡಿಯೆಂದು ಅವನಿಗೆ ಎನ್ನಿಸಿದೆ. ಆತನ ಅರ್ಥ ಕಾಮ ಪ್ರವೃತ್ತಿಗೆ ನಾವು ಅನುಕೂಲರಾಗಿದ್ದರೆ ಆಗ ಆತನೂ ನಮ್ಮ ಭಕ್ತನಾಗುತ್ತಿದ್ದನು. ಈಗ, ಆತನು ನಮ್ಮನ್ನು 'ಇವರು ನನ್ನ ಸಿದ್ಧಿಯ ಹಾದಿಯಲ್ಲಿ ಅಡ್ಡಿಗಳು ಎಂದುಕೊಂಡಾಗ, ಆತನು ನಮ್ಮನ್ನು ದ್ವೇಷಿಸುವುದು ಸಹಜವೇ ಅಲ್ಲವೇ? ಅದರಿಂದ ರಾಗದ್ವೇಷಗಳೆರಡೂ ವಿಕಾರಗಳು ಎಂದುಕೊಂಡವರು ಅವೆರಡಕ್ಕೂ ವಶವಾಗಬಾರದು. ದೇವಿ, ಅದಿರಲಿ, ಈಗ ಕೌಶಿಕನಿಗೆ ಹುಟ್ಟಿರುವ ಈ ಆಕ್ರೋಶವು ಅಕಾರಣವೆಂದುಕೊಂಡಿರುವೆಯಾ? ಇಲ್ಲ. ಅದರ ಕಾರಣವು ಈಗ ನಮಗೆ ತಿಳಿಯದಿದ್ದರೂ ಇದ್ದೇ ಇದೆ.

ಆ ಆಕ್ರೋಶವು ಮುಂದಿನ ಶುಭ ಸೂಚನೆ. ಆತನ ಹೃದಯದಲ್ಲಿ ಇಷ್ಟು ತೀವ್ರವಾದ ಭಾವನೆ ಬರದಿದ್ದರೆ ಆತನ ಸಮೃದ್ಧವಾದ ಈ ರಾಜ್ಯವನ್ನು ಬಿಟ್ಟು ತಪಸ್ಸಿಗೆ ತೆರಳುವುದೆಂತು? ನಿನಗೆ ಬೇಕಾದುದನ್ನು ತಪಸ್ಸಿನಿಂದ ಸಾಧಿಸು ಎಂದು ನಾನು ಹೇಳಿದಾಗ ಆ ರಾಜನ ಮನಸ್ಸು ಒಪ್ಪಲಿಲ್ಲ. ಅದನ್ನು ಸುಟ್ಟು ಹದಮಾಡುವುದಕ್ಕೆ ಈ ನಾಶ, ಈ ಆಕ್ರೋಶ, ಈ ಕ್ರೋಧ ಇಷ್ಟು ಬೇಕಾಯಿತು. ನೊಂದು ಬೆಂದ ಬಗೆ ಈಗ ತಪಸ್ಸಿಗೆ ಸಿದ್ಧವಾಗಿದೆ. ಕೌಶಿಕನು ರಾಜ್ಯವನ್ನು ಮಗನಿಗೆ ಕೊಟ್ಟು ತಪಸ್ಸಿಗೆ ಹೊರಟು ಹೋಗುವನು. ಆ ತಪಸ್ಸಿನಲ್ಲಿ ನಿಷ್ಠನಾಗಿ ನಿಂತು ಸಾತ್ವಿಕನಾಗುವುದಕ್ಕಿಂತ ಮುಂಚೆ ತನ್ನೊಳಗಿರುವ ರಜಸ್ಸನ್ನು ತೊಳೆಯುವುದಕ್ಕೆಂದು ಲೋಕದಲ್ಲಿ ಒಂದು ವಿಪ್ಲವವನ್ನು ಮಾಡುವನು. ಬೆಳೆದು ನಿಂತಿರುವ ಕಾಡನ್ನು ಕಡಿಯಬೇಕು ಅಥವಾ ಸುಡಬೇಕು: ಇಲ್ಲದಿದ್ದರೆ ಮತ್ತೆ ಕಾಡನ್ನು ಬೆಳೆಸುವುದಕ್ಕಾಗುವುದಿಲ್ಲ. ಪ್ರಕೃತಿಯು ಕಡಿಯುವುದಕ್ಕಿಂತಲೂ ಸುಡುವುದು ಸುಲಭವೆಂದು ಸುಡುವಳು. ಅದನ್ನು ಸಹಿಸಲಾರದ ಸಣ್ಣ ಮಾನವನು ಏನೋ ಗಂಟು ಕಳಕೊಂಡವನಂತೆ ಒದ್ದಾಡುವನು. ಬಿಡು. ಮುಂದಿನ ಕೆಲಸವನ್ನು ನೋಡು. ವಾಮದೇವನು ಬಂದನೆ? ಈ ನಾಟಕದಲ್ಲಿ ಆತನದು ಒಂದು ದೊಡ್ಡ ಕೆಲಸವಿದೆ" ಎಂದರು.

ವಾಮದೇವನು ಬಂದನು. ಗುರುಗಳಿಗೆ ನಮಸ್ಕಾರಮಾಡಿ ಅಪ್ಪಣೆ ಪಡೆದು ಕುಳಿತುಕೊಂಡನು. ವಸಿಷ್ಠರು ಮುಗುಳುನಗೆ ನಕ್ಕು "ವಾಮದೇವರು ರಾಜಗುರುಗಳಾಗುವ ಯೋಗವು ಬಂದಿರುವಂತಿದೆ" ಎಂದರು. ವಾಮದೇವನು ಒಂದುಗಳಿಗೆ ಪರ್ಯಾಲೋಚಿಸಿ "ಅರ್ಥವಾಗಲಿಲ್ಲ" ಎಂದು ಬಹು ವಿನಯದಿಂದ ನುಡಿದನು. ವಸಿಷ್ಠರು ನಗುತ್ತಾ "ಬೆಟ್ಟದ ಮೇಲಿನ ಸರೋವರದ ನೀರು ಬಯಲನಾಡಿನಲ್ಲಿ ನದಿಯಾಗಿ ಹರಿಯಬೇಕಾಗಿದೆ. ಆಯಕಟ್ಟಿನ ಸ್ಥಳ ನೋಡಿ ಒಂದು ಕಲ್ಲನ್ನು ಸಡಲಿಸಿದರೆ ನೀರು ಹೊರಟು ಬಿಡುವುದು. ಅಂತಹ ಕಾಲ ಬಂದಿದೆ. ರಾಜಾ ಕೌಶಿಕನು ತಪಸ್ವೀ ಕೌಶಿಕನಾಗುವನು. ತನ್ನ ಬಾಹುಬಲದಿಂದ ಅಸಾಧ್ಯವಾದುದನ್ನು ತಪೋಬಲದಿಂದ ಸಾಧಿಸಬೇಕು ಎಂದು ರಾಜ್ಯವನ್ನು ಬಿಟ್ಟು ಹಿಮಾಲಯವನ್ನು ಆಶ್ರಯಿಸುವನು. ಅಲ್ಲಿ ಆತನಿಗೆ ಈಶ್ವರಾನುಗ್ರಹವನ್ನು ಸಂಪಾದಿಸುವ ದಾರಿಯನ್ನು ತೋರಿಸುವವರು ಒಬ್ಬರು ಬೇಕು. ಏಟು ತಿಂದು ರೇಗಿದ ಮನಸ್ಸು ತೀವ್ರವಾಗಿ

ಶ್ರದ್ಧೆಯ ಕಡೆಗೆ ತಿರುಗಿದೆ. ಆ ಶ್ರದ್ಧೆಯನ್ನು ಸರಿಯಾದ ಹಾದಿಗೆ ತಿರುಗಿಸಲು ಕೈಮರಬೇಕು. ಆ ಕೈಮರ ನೀನು" ಎಂದರು.

ವಾಮದೇವನಿಗೆ ಇನ್ನೂ ಏನೋ ಸಂದೇಹ: "ಹಾಗೆಂದರೆ ಈಶ್ವರಾನುಗ್ರಹ ಪಡೆದು ಕೌಶಿಕನು ಮತ್ತೆ ಆಶ್ರಮಕ್ಕೆ ಬಂದು ಯುದ್ಧ ಹೂಡುವನೇ?" ಎಂದನು.

ವಸಿಷ್ಠರು ಶಾಂತರಾಗಿ ನಿಶ್ಚಲರಾಗಿ ಸಮಾಧಾನದಿಂದ ಹೇಳಿದರು: "ಹೌದು. ಅದು ಹಾಗೆಯೇ ಆಗಬೇಕು. ಕಲ್ಲು ಕರಗಿ ಕನ್ನಡಿಯಾಗಲೆಂದು ಕಾಡಿನ ಒಂದು ಮೂಲೆಯೆಲ್ಲ ಸುಟ್ಟು ಬೂದಿಯಾಗದೇಕು. ಇದೇ ಪ್ರಕೃತಿಯ ನಿಯಮ. ನಮ್ಮ ಆಶ್ರಮದಲ್ಲಿ ಇನ್ನೂ ಒಮ್ಮೆ ಶಸ್ತ್ರಾಸ್ತ್ರಗಳ ವಿಜೃಂಭಣ ವಾದಮೇಲೆ ನೂತನ ಸೃಷ್ಟಿಯ ಆರಂಭ. ಅದು ನಾವು ಬೇಕೆಂದ ರೀತಿಯಲ್ಲಿ ನಡೆಯಲಿಲ್ಲವೆಂದು ನಾವು ರೇಗಿದರೆ, ನಾವೇ ಹುಚ್ಚರು. ವಾಮದೇವ, ಪ್ರಕೃತಿಯ ಹಾದಿಯಲ್ಲಿರುವ ಅಡ್ಡಿಗಳನ್ನು ತೆಗೆದು ಆಕೆಯ ಕಾರ್ಯವು ಮುಂದುವರಿಯಲು ಸಹಾಯಮಾಡಬೇಕಾದುದು ಬ್ರಾಹ್ಮಣನ ಧರ್ಮ. ಅದರಿಂದ ಪ್ರಕೃತಿಯು ರುದ್ರಿಯಾಗಿ ಬಂದರೂ ಸ್ವಾಗತಿಸೋಣ. ಜಗತಿಯ ಹಿತಕ್ಕಾಗಿ ತಪಸ್ಸುಮಾಡುವ ಬ್ರಾಹ್ಮಣನು ತನ್ನ ಪ್ರಿಯಾಪ್ರಿಯಗಳನ್ನು ಗಮನಿಸಬಾರದು. ಅವ್ಯಕ್ತದಿಂದ ವ್ಯಕ್ತಕ್ಕೆ ಬರುವ ಶಕ್ತಿಯನ್ನು ಕೇಂದ್ರೀಕರಿಸಿಕೊಂಡು ಒಂದು ಮುಖದಿಂದ ಸ್ವೀಕರಿಸಿ, ಇನ್ನೊಂದು ಮುಖದಿಂದ ವಿಕೇಂದ್ರೀಕರಿಸಿ ಲೋಕಕ್ಕೆ ಕೊಡುವ ಯಂತ್ರವು ತಾನು ಎಂದು ಅರಿತಿರುವ ಬ್ರಾಹ್ಮಣನೂ ಯಂತ್ರದಂತೆಯೇ ಪ್ರಿಯ ಅಪ್ರಿಯ ಎರಡಕ್ಕೂ ಆಚೆ ಇರುವನು. ಕೌಶಿಕನೂ ಅಂತಹ ಯಂತ್ರವಾಗುವನು. ಯಂತ್ರವನ್ನು ಜೋಡಿಸುವ ಭಾರ ನಮ್ಮದು. ಈಗ ಬೇರೆಬೇರೆಯಾಗಿರುವುದರಿಂದ ಅದು ವಿಮುಖವಾಗಿ ನಮ್ಮನ್ನು ಆರಾಧಿಸುತ್ತಿದೆ. ಅದು ವಿಮುಖವಾಗಿಯೇ ಬೆಳೆಯ ಬೇಕಾಗಿದೆ. ಹಾಗೆ ವಿಮುಖವಾಗಿಯೇ ಬೆಳೆದು ಬೆಳೆದು ಕೊನೆಗೆ ತಾನು ವಿಮುಖವಾಗಿ ದ್ವೇಷದಿಂದ ಆರಾಧಿಸಿದುದನ್ನು, ಇದೂ ತಾನೇ, ತನ್ನದೇ, ಬೇರೆಯಲ್ಲ ಎಂದು ತಿಳಿದು ಅದರೊಡನೆ ತಾದಾತ್ಮ್ಯವನ್ನು ಪಡೆಯುವುದು. ಅದರಿಂದ, ಈ ನಂಬಿಕೆ ನಮಗಿರುವುದರಿಂದ, ನಮ್ಮ ಕರ್ತವ್ಯವನ್ನು ನಾವು ಮಾಡಬೇಕಲ್ಲವೇ?" ಎಂದರು.

ವಾಮದೇವನು "ಗುರುದೇವರ ಅಪ್ಪಣೆಯನ್ನು ಸಾಕಲ್ಯವಾಗಿ ನೆರವೇರಿಸುವ ಶಕ್ತಿಯು ನನಗೆ ಬರಲಿ. ಈ ಅಪ್ಪಣೆಯನ್ನು ಹೀಗೇಕೆ ಮಾಡಿದರೆಂದು ನಾನೇಕೆ ಕೇಳಲಿ? ನಾನೊಂದು ದರ್ವಿ.* ದರ್ವಿಯು ಇರುವುದು ಯಜಮಾನನ ಉಪಯೋಗಕ್ಕೆ. ಯಜಮಾನನು ಆ ದರ್ವಿಯಿಂದ ತೆಗೆದುಕೊಂಡ ಆಹುತಿಯನ್ನು ಎಲ್ಲಾದರೂ ವಿನಿಯೋಗಿಸಲಿ. ಅಗ್ನಿಯಲ್ಲೋ, ಜಲದಲ್ಲೋ, ಸ್ಥಲದಲ್ಲೊ, ಎಲ್ಲಿ ವಿನಿಯೋಗಿಸಿದರೂ ದರ್ವಿಗೆ ಅದರಿಂದ ಏನೂ ಹಾನಿಯಿಲ್ಲ. ಅದರಂತೆ ಭಗವಾನರ ಆಜ್ಞೆಯನ್ನು ನೆರವೇರಿಸುವುದಷ್ಟೇ ನನ್ನ ಕೆಲಸ. ಆದುದರಿಂದ ಇದೋ ಹೊರಟೆ" ಎಂದನು.

ವಸಿಷ್ಠರು ಆಶ್ರಮದ ಪರ್ಣಕುಟಿಯ ಗೋಡೆಗಳ ನಡುವೆ ಕುಳಿತಿದ್ದರೂ ವಿಶಾಲ ಜಗತ್ತಿನಲ್ಲಿ ಮುಂದೆ ನಡೆಯಬೇಕಾಗಿರುವ ವಿಚಿತ್ರ ಕಥಾನಕದ ಬೀಜವನ್ನು ಹುಡುಕಿ ತೆಗೆದು ನೆಡುವವರಂತೆ ಅನ್ಯಮನಸ್ಕರಾಗಿ ಅನನ್ಯದೃಷ್ಟಿಗಳಾಗಿ ಹೇಳಿದರು: "ನೀನು ಹಿಮಾಲಯದಲ್ಲಿ ಇರು. ಕೌಶಿಕನು ಬರುವನು. ಆತನಿಗೆ ಏನು ಮಾಡಬೇಕು ಎಂಬುದು ತಿಳಿಯದು. ಆತನು ಬಂದಾಗ, ಪ್ರಸಂಗವಶದಿಂದ ಅಸ್ತ್ರಗಳೆಲ್ಲವೂ ಇರುವುದು ರುದ್ರನಲ್ಲಿ ಎಂದು ಹೇಳಿ ರುದ್ರಾರಾಧನ ಕ್ರಮವನ್ನು ಬೋಧಿಸು" ಎಂದರು.

ವಾಮದೇವನು ಎಷ್ಟು ತಡೆಯಬೇಕೆಂದರೂ ಸಾಧ್ಯವಾಗಲಿಲ್ಲ. ಕಣ್ಣಲ್ಲಿ ನೀರೂರಿತು. "ಆ ಅಸ್ತ್ರಗಳನ್ನೆಲ್ಲಾ ಸಂಗ್ರಹಿಸಿಕೊಂಡು ಬಂದು ನಮ್ಮ ಆಶ್ರಮವನ್ನು ನಿರ್ಮೂಲ ಮಾಡುವನೋ ಏನೋ?" ಎಂದನು. ಮನಸ್ಸಿನಲ್ಲಿ ತುಂಬಿದ್ದ ಭಾರಿಯ ದುಃಖವು ಹುತ್ತದಂತೆ ಬೆಳೆದಿದೆಯೆಂಬುದನ್ನು ಧ್ವನಿಯು ಸೂಚಿಸುತ್ತಲಿತ್ತು. "ವಾಮದೇವರು ಈಗ ಚಿಂತಿಸಬೇಕಾದುದು ಈ ಆಶ್ರಮದ ಕ್ಷೋಭೆಯನ್ನೆಲ್ಲ: ಮುಂದೆ ಮಹಾಕಾಲದಲ್ಲಿ ನಡೆಯಬೇಕಾಗಿರುವ ದೇವಕಾರ್ಯವನ್ನು. ಇಂದಿನ ಭಯದ ಯೋಚನೆಯು ಮುಂದಿನ ಮಂಗಳದ ಹಾದಿಗೆ ಅಡ್ಡಬರಬಾರದು. ಅಷ್ಟೇಕೆ? ಭವಿತವ್ಯದ ತೆರೆಯನ್ನು ಓಸರಿಸಿ ನೋಡುವೆಯೇನು? ನೋಡು." ಎಂದರು.

ವಾಮದೇವನು ನೋಡಿದನು. ಆತನ ಮನಸ್ಸು, ಇಂದ್ರಿಯಗಳು, ಕಾಲವು ಹೊರೆಸಿರುವ ಭೂತ, ಭವಿಷ್ಯ, ವರ್ತಮಾನಗಳೆಂಬ ಅವಚ್ಛೇದ

---

* ಯಜ್ಞದಲ್ಲಿ ಉಪಯೋಗಿಸುವ ಮರದ ಸೌಟು.

ಗಳನ್ನು ಅತ್ತ ನೂಕಿ ಭವಿಷ್ಯವನ್ನು ಕರಾತಲಾಮಲಕದಂತೆ ಕಂಡಿತು. ಆತನ ಮನಸ್ಸಿನ ದುಃಖವು ಸಂಪೂರ್ಣವಾಗಿ ನಾಶವಾಗಿ ಅದರೆಡೆಯಲ್ಲಿ ಆನಂದವು ಅಷ್ಟೇ ದೊಡ್ಡದಾಗಿ ನೆಲೆಸಿತು. ಎದ್ದು ಗುರುವಿಗೆ ವಂದನೆಮಾಡಿ ಹೊರಡಲು ಅಪ್ಪಣೆಯನ್ನು ಕೇಳಿದನು. ಆತನ ದುಃಖವು ನಿವಾರಣವಾಗುವಾಗ ಅರುಂಧತೀದೇವಿಯ ದುಃಖವೂ ನಿವಾರಣವಾಯಿತು. ಆಕೆಯ ಮನಸ್ಸೂ ಪ್ರಸನ್ನವಾಯಿತು.

ಗುರುದೇವರು ಕೃತಕೃತ್ಯನಾಗೆಂದು ಆಶೀರ್ವದಿಸಿದರು: ಶಿಷ್ಯನು ಗುರುಗಳಿಗೂ ಗುರುಪತ್ನಿಗೂ ಸಾಷ್ಟಾಂಗ ನಮಸ್ಕಾರಮಾಡಿ ಹಿಮಾಲಯಕ್ಕೆ ಹೊರಟುಬಿಟ್ಟನು.

---

## ಏಳನೆಯ ತರಂಗ

ಹಿಮಾಲಯದ ಪ್ರಾಂತಭೂಮಿ. ದೇವದಾರು ಮರಗಳು ಸಭೆಗೂಡಿ ನಿಂತಿರುವಂತೆ ಬೆಳೆದಿವೆ. ಅಲ್ಲಲ್ಲಿ ಬಂಡೆಗಳು. ಬಂಡೆಗಳ ಮೇಲೆ ಅರಳಿರುವ ಕಲ್ಲುಹೂವು ಚಳಿಯಿಂದು ಬಂಡೆಗಳು ಹೊದೆದುಕೊಂಡಿರುವ ಚಿತ್ರಕಂಬಳಿಗಳಂತೆ ಇವೆ. ಮಗ್ಗುಲಲ್ಲಿ ಒಂದು ಸಣ್ಣನದಿ ಜಳಜಳನೆ ಬಂಡೆಗಳ ನಡುವೆ ಹರಿಯುತ್ತಿದೆ. ಅಲ್ಲಿಯೇ ಬಂಡೆಗಳ ನಡುವೆ ದೈವಕೃತವಾದ ಒಂದು ಜಲಾಶಯ. ಮೇಲಿನಿಂದ ನೀರು ಬರುತ್ತಿದೆ. ಇನ್ನೊಂದು ಮೂಲೆಯಲ್ಲಿ ನೀರು ಹೊರಕ್ಕೆ ಓಡುತ್ತಿದೆ. ನದಿಯ ಈ ಕೊನೆಯಿಂದ ಆ ಕೊನೆಯವರೆಗೂ ದೇವದಾರುಗಳು ಇದ್ದು, ನದಿಯು ಅವುಗಳ ಕಾಲು ತೊಳೆದುಕೊಂಡು ಹೋಗುತ್ತಿರುವಂತೆ ಇದೆ. ನದಿಯ ನೀರಿನ ತಂಪಿನ ಜೊತೆಗೆ ದೇವದಾರುವಿನ ಸಣ್ಣ ಪರಿಮಳವೂ ತುಂಬಿ ಗಾಳಿಯು ಸರ್ವವಿಧವಾದ ಶ್ರಮವನ್ನೂ ಪರಿಹರಿಸುವ ಸಖನಂತೆ ಬೀಸುತ್ತಿದೆ.

ನದಿಯಿಂದ ಕೊಂಚ ದೂರದಲ್ಲಿ ಕೊಂಚ ಎತ್ತರವಾದೆಡೆ ಒಂದು ವಿಶಾಲವಾದ ಭೂಮಿ. ಅದರಲ್ಲಿ ಎರಡು ತುಳಸಿಯ ಗಿಡಗಳು. ಎರಡು ಹೂವಿನ ಗಿಡಗಳು. ಅವುಗಳ ಹಿಂದೆ ಒಂದು ಪರ್ಣಕುಟಿ. ಆ ಗಿಡಗಳ

ಮಗ್ಗುಲಲ್ಲಿ ವಿಸ್ತಾರವಾದ ಒಂದು ಬಂಡೆ : . ಒರಟಾಗಿ ಎಬ್ಬಿಸಿದ ಚಪ್ಪಡಿಯ ಹಾಗೆ ಉಬ್ಬು ತಗ್ಗಾಗಿರುವ ಆ ಬಂಡೆಯ ಮೇಲೆ ವಾಮದೇವನು ಒಂದೆಡೆ ಕುಳಿತಿದ್ದಾನೆ. ಇನ್ನೊಂದೆಡೆ ಆತನಿಗೆ ಎದುರಾಗಿ ಕೌಶಿಕನು ಕುಳಿತಿದ್ದಾನೆ.

ವಾಮದೇವನು ಬಂಡೆಯ ಮಗ್ಗುಲಲ್ಲಿ ಬೆಳೆದಿರುವ ಗಿಡವನ್ನು ಒರಗಿಕೊಂಡು ನಿರ್ವಿಷಣ್ಣನಾಗಿ ನಿರಾತಂಕನಾಗಿ ಅಮನಸ್ಕನಾಗಿರುವಂತೆ ಕುಳಿತಿದ್ದಾನೆ. ಕೌಶಿಕನು ಸಿದ್ಧಾಸನದಲ್ಲಿ ಕುಳಿತು ಅನನ್ಯಮನಸ್ಕನಾಗಿ ಹೇಳುತ್ತಿದ್ದಾನೆ.

" ಒಂದು ಹಸುವನ್ನು ಸಂಪಾದಿಸಲು ಯೋಗ್ಯತೆಯಿಲ್ಲದವನಿಗೆ ರಾಜ್ಯವೇಕೆ ? ಎಂದು ಹೊರಟುಬಂದೆ. ಈಗ ಇನ್ನು ಉಳಿದಿರುವುದು ಒಂದೇ ಒಂದು ಆಸೆ. ಅದು ಆ ವಸಿಷ್ಠರ ಮೇಲಿನ ದ್ವೇಷ. ವಸಿಷ್ಠರು ಮನಸ್ಸು ಮಾಡಿದ್ದರೆ ಆ ಹಸುವನ್ನು ನನಗೆ ಕೊಡಬಹುದಾಗಿತ್ತು. ಇಷ್ಟವಿಲ್ಲದೆ, ಆ ಹಸುವಿನ ನೆಪದಲ್ಲಿ ನನ್ನನ್ನು ನಿರಾಕರಿಸಿ, ತಮ್ಮ ತಪೋಬಲದಿಂದ ನನ್ನ ಸೇನೆಯನ್ನೆಲ್ಲ ಧ್ವಂಸಮಾಡಿ, ನನ್ನನ್ನು ಅಪಮಾನಮಾಡಿದರು. ಕ್ಷತ್ರಿಯನಾಗಿ ಈ ಅಪಮಾನವನ್ನು ತೀರಿಸಿಕೊಳ್ಳದಿರುವುದೆಂತು ? "

" ಅದರಿಂದ ಏನು ಮಾಡಬೇಕೆಂದಿರುವೆ ? "

" ತಪಸ್ಸು ಮಾಡುವೆನು. ದಿವ್ಯಾಸ್ತ್ರಗಳನ್ನೆಲ್ಲ ಸಂಪಾದಿಸುವೆನು. ವಸಿಷ್ಠರನ್ನು ಬಲಿ ತೆಗೆದುಕೊಳ್ಳುವೆನು. "

" ಅಥವಾ ಬಲಿಯಾಗುವೆನು ಎನ್ನು. "

" ದಿವ್ಯಾಸ್ತ್ರಗಳಿರುವಾಗ ಬಲಿಯಾಗುವುದೆಂದರೇನು ? "

" ಇಲ್ಲೇ ನೀನು ಎಡವಿರುವುದು. ಕೌಶಿಕ, ನೀನೆ ಹೇಳುತ್ತಿರುವೆ, ಆ ವಸಿಷ್ಠರು ತಮ್ಮ ತಪೋಬಲದಿಂದ ನಿನ್ನ ಸೇನೆಯನ್ನೆಲ್ಲ ಧ್ವಂಸಮಾಡಿದರು ಎಂದು. ಈಗ ನಿನ್ನ ತಪಸ್ಸಿನಿಂದ ನೀನು ಆರ್ಜಿಸುವ ದಿವ್ಯಾಸ್ತ್ರಗಳು ಆ ಮಹಾ ತಪಸ್ವಿಗೆ ಗೊತ್ತಿಲ್ಲವೆಂದು ನಿನಗೆ ಹೇಗೆ ಗೊತ್ತು ? ಬಹುಶಃ ನೀನು ಸಂಪಾದಿಸುವ ಅಸ್ತ್ರಗಳಜೊತೆಗೆ ನಿನ್ನಿಂದ ಸಂಪಾದಿಸಲಾಗದ ಅಸ್ತ್ರಗಳೂ ಕೂಡ ಆತನಿಗೆ ತಿಳಿದಿರಬಹುದು. "

" ಅದೂ ಸಾಧ್ಯ. ಹಾಗಾದರೆ ಏನು ಮಾಡಬೇಕು ? "

"ಅದು ನಿನ್ನ ಪ್ರಾರಬ್ಧ.. ನೀನು ನನ್ನ ಶಿಷ್ಯನಲ್ಲ. ಅನ್ಯಶಿಷ್ಯಂ ನಬೋಧಯೇತ್ ಎಂದು ಶಾಸ್ತ್ರ. ನನಗೆ ಅಪ್ಪಣೆಯಾಗಿದೆ, ನೀನು ಕೇಳಿದು ದನ್ನು ಹೇಳಬಹುದು ಎಂದು. ಆದ್ದರಿಂದ ಅದಷ್ಟು ಮಾಡುತ್ತೇನೆ ನಾನು ನಿನ್ನ ಶ್ರೇಯಸ್ಸಿಗೂ ಭಾಗಿಯಲ್ಲ. ಹಾನಿಗೂ ಭಾಗಿಯಲ್ಲ."

ಕೌಶಿಕನು ಅಷ್ಟು ಹೊತ್ತು ಯೋಚಿಸಿದನು. "ಏನಾದರೂ ಆಗಲಿ, ವಾಮದೇವ, ನನಗೆ ಅಸ್ತ್ರಗಳನ್ನು ಸಂಪಾದಿಸುವ ಮಾರ್ಗವನ್ನು ಹೇಳಿಕೊಡು. ಮೊದಲು ಅಸ್ತ್ರಗಳು ದೊರೆಯಲಿ. ಆಮೇಲೆ ಉಪಯೋಗಿಸುವ ಯೋಚನೆ."

"ಆಗಬಹುದು. ಧನುರ್ವಿದ್ಯೆಗೆ ಆಚಾರ್ಯನು ರುದ್ರನು. ಆತನನ್ನು ಒಲಿಸಿಕೊಂಡರೆ ಸರ್ವ ಶಸ್ತ್ರಗಳೂ ಅಸ್ತ್ರಗಳೂ ವಶವಾಗುವುವು."

"ಆತನನ್ನು ಒಲಿಸಿಕೊಳ್ಳುವುದು ಹೇಗೆ?"

"ವೇದದಲ್ಲಿರುವ ರುದ್ರಸೂಕ್ತಗಳಿಂದ ಜಪ ಹೋಮ ತರ್ಪಣಗಳನ್ನು ಮಾಡು. ನೀನು ಮಾಡುವ ಆ ಕರ್ಮಗಳಲ್ಲಿ ನಿನಗೆ ಶ್ರದ್ಧೆಯು ಹೆಚ್ಚಿ ದಂತೆಲ್ಲ ಜಗತ್ತೇ ರುದ್ರಮಯವಾಗುವುದು. ಬೆಂಕಿಯಲ್ಲಿ ಬಿದ್ದ ಕಾಷ್ಠವು ತಾನೂ ಬೆಂಕಿಯಾಗುವಂತೆ ನೀನೂ ಒಂದು ದಿನ ರುದ್ರನಾಗುವೆ. ಆಗ ಆತನ ಅಸ್ತ್ರಗಳು ನಿನ್ನವು ಆಗುವುವು. ಆದರೂ ಕೌಶಿಕ, ನಿನ್ನ ದ್ವೇಷವನ್ನು ನುಂಗಿಕೊಂಡು ಶಾಂತನಾಗಿ, ದೊಡ್ಡ ಗುರಿಯೊಂದನ್ನು ಇಟ್ಟುಕೊಂಡು ತಪಸ್ಸುಮಾಡುವುದು ಒಳ್ಳೆಯದು."

"ವಾಮದೇವ, ನಾನೂ ಯೋಚಿಸಿರುವೆನು. ಆದರೂ ನನಗೆ ಹಾಗೆ ಮಾಡುವುದು ಸದ್ಯದಲ್ಲಿ ಸಾಧ್ಯವಿಲ್ಲ. ಈಗ ನನ್ನ ಮನಸ್ಸಿಗೆ ಧರ್ಮಾಧರ್ಮ ಗಳು ತೋರುತ್ತಲೇ ಇಲ್ಲ. ನಾನರಿಯೆನೇ? ಬ್ರಹ್ಮ ಕ್ಷತ್ರಗಳೆರಡೂ ಸೇರಿದರೆ ಲೋಕದ ವೃದ್ಧಿ. ಇಲ್ಲದೆ ಬೇರೆಯಾಗಿ ನಿಂತರೆ ಲೋಕಕ್ಕೆ ಹಾನಿ. ಆದರೂ ನಾನು ಸೋಲಲಾರೆ."

"ನಿಜ. ಈಗ ಲೋಕವು ಹೊಸದಾಗುತ್ತಿರುವುದು. ಅದರಿಂದ ಕಾಲ ಪ್ರೇರಿತರಾಗಿ ಜನರು ಬ್ರಹ್ಮದ್ವೇಷವನ್ನು ಅವಲಂಬಿಸಿ ತಾವೂ ಕೆಟ್ಟು ಇತರ ರನ್ನೂ ಕೆಡಿಸುತ್ತಿರುವರು. ನೋಡು ಆಗಲೇ ನನಗೆ ದೃಷ್ಟಿಗೋಚರವಾಗು ತ್ತಿದೆ. ಹೇಹಯರು ಭೃಗುಗಳ ಮೇಲೆ ಕೈಯೆತ್ತಿದ್ದಾರೆ. ರಾಜನ್ಯರ ಧನ ವನ್ನೆಲ್ಲ ಈ ಭಾರ್ಗವರು ಅಪಹರಿಸಿದರೆಂದು ಅವರ ಮೇಲೆ ಆರೋಪಣೆ

ಯನ್ನು ಹೊರಿಸಿ ಅವರನ್ನು ಚಿತ್ರಹಿಂಸೆಗೆ ಗುರಿಮಾಡಿ ಅವರ ವಂಶವನ್ನೇ ನಿರ್ಮೂಲಮಾಡಬೇಕೆಂದಿದ್ದಾರೆ. ಆದರೆ ಪಾವನವಾದ ಭೃಗುವಂಶವನ್ನು ನಿರ್ಮೂಲಮಾಡಲು ಸಾಧ್ಯವೇ? ಅಷ್ಟರೊಳಗೆ ಅತಿ ಕ್ಷತ್ರಿಯನಾದ ವೀರನೊಬ್ಬನು ಭಾರ್ಗವರಲ್ಲಿ ಹುಟ್ಟಿದ್ದಾನೆ. ಹೇಹಯರ ಅಪರಾಧದಿಂದ ಕ್ರುದ್ಧನಾಗಿ, ಭಾರ್ಗವರ ಶಾಪದಿಂದ ಮೊದಲೇ ಹತನಾಗಿರುವ ಕ್ಷತ್ರಿಯ ಕುಲವನ್ನೇ ನಿರ್ಮೂಲ ಮಾಡುತ್ತಾನೆ. ಇತ್ತ ನೋಡು ಭೃಗುಪತ್ನಿಯರು ಈ ದುಷ್ಟ ಕ್ಷತ್ರಿಯರಿಗೆ ಹೆದರಿ ಆಶ್ರಮಗಳಲ್ಲಿ ಇರಲಾರದೆ ಓಡಿಹೋಗಿ ಹಿಮಾಲಯದ ಅರಣ್ಯಗಳಲ್ಲಿ ಸೇರಿಕೊಂಡಿದ್ದಾರೆ. ಅವರಲ್ಲಿ ಅನೇಕರಿಗೆ ಗರ್ಭಪಾತವಾಗಿದೆ. ಗರ್ಭಸ್ಥ ಶಿಶುವನ್ನೂ ಬಿಡೆವೆಂಬ ಆ ಹೇಹಯರ ಮೃತ್ಯುವನ್ನು ಪುಣ್ಯವತಿಯು ತನ್ನ ತೊಡೆಯಲ್ಲಿ ಇಟ್ಟುಕೊಂಡಿದ್ದಾಳೆ. ಅಬ್ಬಾ! ಅದೇನು ತೇಜಸ್ಸು ಆ ಗರ್ಭದ್ದು! ಸಾಕ್ಷಾತ್ ಅಗ್ನಿಯಂತೆ ಇದ್ದಾನೆ. ಆಗೋ ಹುಟ್ಟಿದ್ದಾನೆ. ಇದೋ ಸರ್ವ ಕ್ಷತ್ರಿಯ ವಿನಾಶಕ್ಕಾಗಿ ಯಜ್ಞವನ್ನು ಮಾಡುವೆನೆನ್ನುತ್ತಾನೆ. ಆದರೆ. ಅದಾರು, ಆಃ, ಅವನ ಪಿತೃಗಳು ಬಂದು ಕೂಡದು ಅದು ಇನ್ನೊಬ್ಬನ ಕೆಲಸ ಎನ್ನುತ್ತಾರೆ. ಅಷ್ಟರಲ್ಲಿ ಅಲ್ಲಿಗೆ ಬಂದ ಕ್ಷತ್ರಿಯರು ಆತನ ತೇಜಸ್ಸನ್ನು ನೋಡಿ ಕಣ್ಣನ್ನು ಕಳೆದುಕೊಂಡು ಅಂಧರಾಗಿದ್ದಾರೆ. ಆ ಭೃಗುಪಿತೃಗಳು ಆ ಬಾಲಕನನ್ನು ಸಮಾಧಾನಪಡಿಸಿ, ಆತನ ಕೋಪವನ್ನು ಸಮುದ್ರಕ್ಕೆ ಎಸೆದಿದ್ದಾರೆ. ಅಲ್ಲೂ ಅದು ಪ್ರಜ್ವಲಿಸುತ್ತ ಸಮುದ್ರವನ್ನೇ ಸ್ವಾಹಾ ಮಾಡುತ್ತಿದೆ. ಕೌಶಿಕ, ನೀನೂ ಹೀಗೆಯೇ ಕಾಲಪ್ರಚೋದಿತನಾಗಿ ವಿದ್ವೇಷವನ್ನು ಸಾಧಿಸುತ್ತಿರುವೆ. ಆದರೆ, ನನ್ನದೊಂದು ಮಾತು ನೆನಪಿರಲಿ. ನಿನ್ನ ವಿದ್ವೇಷವು ನಿನ್ನನ್ನೇ ತಿಂದು ನೀನು ಬಲಿಯಾದರೂ ಬದುಕುವ ಯೋಚನೆಯಿರಲಿ."

"ಅದು ಹೇಗೆ ವಾಮದೇವ?"

"ನೀನು ವಸಿಷ್ಠರನ್ನು ದ್ವೇಷಿಸು. ಆದರೆ ತಿರಸ್ಕರಿಸಬೇಡ. ದ್ವೇಷದೊಡನೆ ಬರುವ ತಿರಸ್ಕಾರವನ್ನು ದೂರಿ ದ್ವೇಷವನ್ನು ಮಾತ್ರ ಇಟ್ಟುಕೊ. ಬದುಕುವೆ."

ಇನ್ನೂ ಅಷ್ಟು ಹೊತ್ತು ಇಬ್ಬರೂ ಆ ಬಂಡೆಯ ಮೇಲೆಯೇ ಕುಳಿತಿದ್ದರು. ಯಾರೂ ಮಾತನಾಡಲಿಲ್ಲ. ವಾಮದೇವನು ಅರೆಗಣ್ಣುಮುಚ್ಚಿ

ಮುಂದಿನ ಭವಿಷ್ಯವನ್ನು ಕಂಡುದನ್ನು ಕೌಶಿಕನು ಚಿಂತಿಸುತ್ತಾ "ಆತನು ಭವಿಷ್ಯವನ್ನೆಂತು ನೋಡಿದನು ? ತನ್ನ ಭವಿಷ್ಯವನ್ನೂ ಕಂಡನೇ ?" ಎಂದು ಮುಂತಾಗಿ ಯೋಚಿಸುತ್ತಿದ್ದನು. ವಾಮದೇವನೂ ತಾನು ಕಂಡ ಭವಿಷ್ಯ ದರ್ಶನವನ್ನು ಚಿಂತಿಸಿ ಪ್ರಕೃತಿಗೆ ಈ ಭಯಂಕರ ರುದ್ರಲೀಲೆಯಲ್ಲಿ ಅದೇನು ಸಂತೋಷವೋ ಎಂದೊಮ್ಮೆ, ಸಂಹಾರವಿಲ್ಲದೆ ಸೃಷ್ಟಿಯೆಲ್ಲಿ ಎಂದು ಇನ್ನೊಮ್ಮೆ ಹೀಗೆ ಭಾವತರಂಗಗಳಲ್ಲಿ ಆಡುತ್ತಿದ್ದನು.

ಕೌಶಿಕನು ಅಷ್ಟು ಹೊತ್ತಾದ ಮೇಲೆ "ಆರ್ಯ, ನನ್ನ ಭವಿಷ್ಯ ವೇನು ?" ಎಂದನು.

ವಾಮದೇವನು ನಕ್ಕು "ತಿಳಿದೇ ಇದೆ. ನೀನು ಅಸ್ತ್ರಗಳನ್ನು ಪಡೆದು ವಸಿಷ್ಠರ ಮೇಲೆ ಬೀಳುವೆ. ನಿನ್ನ ಕೈ ಬಲವಾದರೆ ಅವರು ಕೆಟ್ಟರು. ಅವರ ಕೈ ಬಲವಾದರೆ ನೀನು ಮತ್ತೆ ಏಟು ತಿಂದು ಬಂದು ಯಾವುದೋ ಮೂಲೆ ಯಲ್ಲಿ ಮೂಗು ಹಿಡಿದುಕೊಂಡು ಕುಳಿತುಕೊಳ್ಳುವೆ."

"ಇನ್ನು ಬೇರೆ ಏನೂ ಸಾಧ್ಯವಿಲ್ಲವೆ ?"

"ಇಲ್ಲ, ತಪಸ್ಸುವೊಂದಿದೆ. ಅದರಿಂದ ಏನು ಬೇಕಾದರೂ ಸಾಧಿಸ ಬಹುದು ಎಂಬುದು ಮನಸ್ಸಿಗೆ ಒಮ್ಮೆ ಹಿಡಿದರೆ, ಮನುಷ್ಯನ ಮನಸ್ಸು ಮಿಕ್ಕವನ್ನೆಲ್ಲ ಬೀಳುಗಳೆಯುವುದು. ಅವನಿಗೆ ತೃಪ್ತಿಯಾಗುವುದು ಅದೊಂದ ರಿಂದಲೇ. ಆ ತಪಸ್ಸು ನಿನ್ನ ತಪಸ್ಸಿನ ಹಾಗೆ ರಾಜಸವಾಗಿರುವುದೋ, ಸಾತ್ವಿಕವಾಗುವುದೋ ಅದು ಮಾತ್ರ ಪ್ರಾರಬ್ಧವಶ."

ಕೌಶಿಕನು ಇನ್ನೂ ಕೇಳಬೇಕೆಂದು ಹವಣಿಸುತ್ತಿರುವಾಗಲೇ, ವಾಮ ದೇವನು "ಮುಂದಿನ ಮಾತು ಆಮೇಲೆ, ಇದು ತಾಮಸ ವೇಳೆ. ಈಗ ತಪಸ್ವಿಗಳು ಬಹಿರ್ಮುಖಿಗಳಾಗಿರಬಾರದು" ಎಂದು ಎದ್ದು ಹೊರಟು ಹೋದನು.

ಕೌಶಿಕನು "ಆ ದಿನ ವಸಿಷ್ಠರೂ ಇದೇ ಮಾತು ಹೇಳಿದರು. ನಾನು ಅದನ್ನು ಗಮನಿಸಲಿಲ್ಲ. ಈಗ ಈತನೂ ಕಾಲವಶನಾಗಿಯೇ ನಾನು ದ್ವೇಷ ವನ್ನು ಆರಾಧಿಸುತ್ತಿರುವುದು ಎಂದನು. ಹಾಗಾದರೆ ಮಾನವನು ಕಾಲವು ಕುಣಿಸಿದಂತೆ ಕುಣಿಯುವ ಬೊಂಬೆಯೇ ? ಇವನಿಗೆ ಸ್ವಾತಂತ್ರ್ಯವಿಲ್ಲವೇ ?

ನಾನು ಸ್ವತಂತ್ರನೆಂದುಕೊಳ್ಳುವುದು ಕೇವಲ ಔಪಚಾರಿಕವೇ ?" ಎಂದು ಕೊಳ್ಳುತ್ತ ತನ್ನ ಆಶ್ರಮದ ಕಡೆ ಹೋದನು.

---

## ಎಂಟನೆಯ ತರಂಗ

ಕೌಶಿಕನಿಂದು ತಪಸ್ವಿಯಾಗಿ ರುದ್ರಾರಾಧನ ಮಾಡುತ್ತಿದ್ದಾನೆ. ವ್ರತ ಧಾರಿಯಾಗಿ ಮಾಡುವ ಕರ್ಮಗಳನ್ನು ತಪ್ಪದೆ ನಿಯತ ಕಾಲದಲ್ಲಿ ಮಾಡುತ್ತ ಮಿಕ್ಕ ವೇಳೆಯನ್ನೆಲ್ಲ ನಾಮ ಜಪದಲ್ಲಿ ಕಳೆಯುತ್ತಿದ್ದಾನೆ. ಆತನಿಗೆ ಆಹಾ ರದ್ದೂ ಅಷ್ಟು ಚಿಂತೆಯಿಲ್ಲ. ಆಶ್ರಮಕ್ಕೆ ಅನತಿದೂರದಲ್ಲಿ ಸಿಕ್ಕುವ ಕಂದಮೂಲ ಗಳು ಆಹಾರದ ಚಿಂತೆಯನ್ನು ಕಳೆದಿವೆ. ದಿನವೂ ಹೋಮಕ್ಕೆ ಅಷ್ಟು ಸಮಿತ್ತುಗಳು. ಅದನ್ನು ಆ ಸುತ್ತಮುತ್ತಲಿನಲ್ಲೇ ಸಂಗ್ರಹಿಸುತ್ತಾನೆ. ಆತ ನಿಗೆ ಆಗಾಗ ವಾಮದೇವನ ದರ್ಶನಕ್ಕೆ ಹೋಗಬೇಕೆಂದು ಮನಸ್ಸು. ಆದರೆ ಹಿಡಿದಿರುವ ಕಾರ್ಯವು ಫಲವಾಗುವವರೆಗೂ ಬೇರೆ ಕೆಲಸ ಬೇಡ, ಚಿತ್ತಕ್ಕೆ ವೃತ್ತಿ ವ್ಯಭಿಚಾರವೇಕೆ ? ಎಂದು ಹೋಗದೆ ಇದ್ದಾನೆ. ವಾಮದೇವನಂತೂ ತೃಪ್ತ. ಆತನು ಬಹಿರ್ಮುಖವಾಗುವುದು ನಿತ್ಯಸ್ನಾನ ಹೋಮಗಳಿಗೆ. ಆತ ನಿಗೆ ಜಪದಲ್ಲಿ ಸಮಾಧಿಯಲ್ಲಿ ಅದು ಯಾವ ಅಮೃತ ಝರಿಯ ಸೆಲೆಯು ಸಿಕ್ಕಿದೆಯೋ, ಆಹಾರದ್ದೂ ಅಷ್ಟು ಯೋಚನೆಯಿಲ್ಲ. ಚಳಿಗಾಳಿಗಂತೂ ಆತನು ಬಗ್ಗಿಲ್ಲ.

ಹೀಗೆಯೇ ಒಂದು ವರ್ಷವು ಕಳೆಯಿತು. ಇನ್ನೂ ಒಂದು ತಿಂಗಳು ಆಯಿತು. ನಾಳೆ ಆರ್ದ್ರಾನಕ್ಷತ್ರ. ರುದ್ರ ಭಕ್ತರು ಸೂರ್ಯೋದಯದ ವೇಳೆಗೆ ಸರಿಯಾಗಿ ನಿತ್ಯ ಕರ್ಮಗಳನ್ನೆಲ್ಲಾ ಮುಗಿಸಿಕೊಂಡು ಸೂರ್ಯೋ ದಯಕ್ಕೆ ಕೊಂಚ ಹೊತ್ತು ಮುಂಚಿತವಾಗಿ ಮಾಡುವ ಆರ್ದ್ರಾಮಂಡಲ ದರ್ಶನವನ್ನು ಮಾಡಿ, ಅಲ್ಲಿ ಸರ್ವಲೋಕ ಮಹೇಶ್ವರನಾದ ಚಂದ್ರಮೌಳಿ ಯನ್ನು ಕಾಣುವರು. ಕೌಶಿಕನೂ ಅಂತಹ ಮಹಾಯೋಗಕ್ಕೆ ಕಾದಿದ್ದಾನೆ.

ಸಂಜೆಗೆ ಮುಂಚೆಯೇ ಕೌಶಿಕನ ವೃತ್ತಿ ಬದಲಾಗಿದೆ. ಹೋಮವು ನಡೆಯುವಾಗಲೇ ಚಿತ್ತವೃತ್ತಿಯು ಬದಲಾಯಿಸಿ ತಾನು ಕೌಶಿಕನೆನ್ನುವುದು

ಮರೆಯುತ್ತಿದೆ. ಯಾವುದೋ ಒಂದು ತೇಜೋವಾಹಿನಿಯು ನರಮಂಡಲ ವನ್ನೆಲ್ಲಾ ಆಕ್ರಮಿಸಿ ಕೌಶಿಕನೆನ್ನುವ ತನ್ನನ್ನು ಕಬಳಿಸಿರುವಂತೆ ತೋರುತ್ತಿದೆ. ಸರಿಯಾಗಿ ಶ್ರುತಿಮಾಡಿಟ್ಟಿರುವ ರುದ್ರ ವೀಣೆಯಲ್ಲಿ ಯಾವುದೊಂದು ತಂತಿಯು ನುಡಿದರೂ ಎಲ್ಲ ತಂತಿಗಳೂ ನುಡಿಯುವಂತೆ ಬಾಯಲ್ಲಿ ನುಡಿದ ಮಂತ್ರದ ಅಕ್ಷರವೊಂದೊಂದೂ ದೇಹಾದ್ಯಂತವು ನಖ ಶಿಖಾಂತವಾಗಿ ನುಡಿಯುತ್ತಿದೆ. ನುಡಿದ ಶಬ್ದವು ಗಾಳಿಯಲ್ಲಿ ಲಯವಾಗದೆ ಜೇಡನ ಗೂಡಿಗಿಂತ ಸೂಕ್ಷ್ಮ ವಾದರೂ ಮನಸ್ಸಿಗೆ ಗೋಚರವಾಗುವ ಒಂದು ವ್ಯೂಹವನ್ನು ಕಟ್ಟುತ್ತಿರು ವಂತಿದೆ. ಆ ವ್ಯೂಹವು ಬರುಬರುತ್ತ ಬಲವಾಗಿ ಸುತ್ತುತ್ತಿರುವ ಸುಳಿಯ ವೇಗವು ದೂರದಲ್ಲಿರುವುದನ್ನು ಆಕರ್ಷಿಸುವ ಹಾಗೆ. ದೇಹದ ಸುತ್ತುಮುತ್ತು ತುಂಬಿರುವ ಅತೀಂದ್ರಿಯ ಶಕ್ತಿಯನ್ನು ಆಕರ್ಷಿಸುತ್ತಿದೆ. ವ್ಯೂಹವು ಶಕ್ತಿ ಕೇಂದ್ರವಾಗಿ, ಕೇಂದ್ರೀಕೃತವಾದ ಶಕ್ತಿಯು ಘನವಾದಂತೆಲ್ಲ, ಇಂದ್ರಿಯಗಳು ಬಹಿರ್ಮುಖತೆಯು ತಪ್ಪಿ ಅಂತರ್ಮುಖವಾದಂತಿವೆ. ಜಪವು ಉಪಾಂಶು ವಾಗಿದ್ದರೂ ಒಳತಿರುಗಿರುವ ಕಿವಿಯು ಆ ಮಂತ್ರಾಕ್ಷರಗಳು ಭೇರಿಯನಾದದಂತೆ ಭಾರಿಯಾಗಿ ನುಡಿಯುತ್ತಿರುವುದನ್ನು ಕೇಳುತ್ತಿದೆ. ಆ ಅಕ್ಷರಗಳು ಶಬ್ದ ಸ್ವರೂಪವಾಗಿ ಸೂಕ್ಷ್ಮವಾಗಿರುವುದನ್ನು ಬಿಟ್ಟು ಘನವಾಗಿ ವಾಯುಭೂತ ಕ್ಕಿಳಿದು ಸ್ಪರ್ಶತರಂಗವಾಗಿ, ಅದೂ ಘನವಾಗಿ ತೇಜೋಭೂತಕ್ಕಿಳಿದು ರೂಪ ವಾಗಿ ಮಾರ್ಪಡುತ್ತಿರುವ ಗಂಭೀರ ದೃಶ್ಯವನ್ನು ಕಣ್ಣು ಒಳಮುಖವಾಗಿ ತಿರುಗಿ ನೋಡುತ್ತಿದೆ. ರೂಪವು ಅಸ್ಪಷ್ಟವಾಗಿದ್ದುದು ಸ್ಪಷ್ಟವಾಗಿ ತನ್ನ ಇಂದ್ರಿಯ ಪ್ರಾಣಗಳು ಆ ರೂಪಕ್ಕೆ ಅಳಪಟ್ಟು, ಆ ರೂಪವು ಘನವಾಗಿ ಮೂರ್ತಿಯಾಗಿ ಎದುರಿಗೆ ಕುಳಿತಿದೆ. ಆ ಎದುರು ಕುಳಿತಿರುವ ಮೂರ್ತಿ ಯಲ್ಲಿ ದೊಡ್ಡ ದೀಪದ ತೇಜಸ್ಸಿನಲ್ಲಿ ಸಣ್ಣದೀಪದ ತೇಜಸ್ಸು ಅಡಕವಾಗಿ ಹೋಗುವಂತೆ ಕೌಶಿಕನು ಬೆರೆದು ಹೋಗುವುದರಲ್ಲಿದ್ದಾನೆ.

ಹಾಗೆಯೇ ಅಷ್ಟು ಹೊತ್ತು ನೀರಿನಲ್ಲಿ ಬಿದ್ದ ಉಪ್ಪು ಕರಗುವಂತೆ ಕರಗುತ್ತಿದ್ದ ಕೌಶಿಕನು ತನ್ನ ಕರಗುವಿಕೆಯು ನಿಂತುದನ್ನು ಕಾಣುತ್ತಾನೆ. ತನ್ನಿಂದ ಆ ಮೂರ್ತಿಯ ಕಡೆಗೆ ನುಗ್ಗುತ್ತಿದ್ದ ಪ್ರಾಣಪ್ರವಾಹವು ಕ್ರಮ ಕ್ರಮವಾಗಿ ನಿಂತು, ಆ ಮೂರ್ತಿಯ ಕಡೆಯಿಂದ ತನ್ನ ಕಡೆಗೆ ಪ್ರಾ

ಪ್ರವಾಹವು ಬರುವುದನ್ನು ನೋಡುತ್ತಿದ್ದಾನೆ. ಹಾಗೆ ಅಷ್ಟು ಹೊತ್ತು ನಡೆದು ಮತ್ತೆ ತನ್ನ ವ್ಯಕ್ತಿತ್ವವು ಏರ್ಪಟ್ಟು ಆ ಮೂರ್ತಿಯ ಮುಂದೆ ತಾನೂ ಒಂದು ಸ್ವತಂತ್ರ ವ್ಯಕ್ತಿಯಾಗಿ ಕುಳಿತುಕೊಳ್ಳಲು ಸಮರ್ಥನಾಗಿದ್ದಾನೆ. ನೋಡಿದರೆ ಒಂದೇ ಬಿಲ್ಲು ನಾರಿಗೆ ಸಿಕ್ಕಿ ಬಗ್ಗಿ ಒಂದು ಕೊನೆಗೆ ಇನ್ನೊಂದು ಕೊನೆ ಅಭಿಮುಖವಾಗಿರುವಂತೆ ಒಂದೇ ಸತ್ತ್ವಾಶಕ್ತಿಯು ಯಾವುದೋ ಅನಿರ್ವಚನೀಯ ಅತೀಂದ್ರಿಯ ನಿಯಮಬದ್ಧವಾಗಿ ಆ ಕೊನೆಯೊಂದು ಈ ಕೊನೆಯೊಂದು ಚಿನ್ಮೂರ್ತಿಗಳಾಗಿ ಕುಳಿತಿರುವಂತೆ, ಒಂದೇ ಚುಂಬಕವು ಆ ಕೊನೆಯಲ್ಲಿ ಕ್ರಿಯಾಶಕ್ತಿ ಕೇಂದ್ರವಾಗಿ, ಈ ಕೊನೆಯಲ್ಲಿ ಕ್ರೀಡಾಶಕ್ತಿ ಕೇಂದ್ರವಾಗಿರುವಂತೆ ಕಾಣುತ್ತಿದೆ. ಆ ಕೊನೆಯಲ್ಲಿರುವ ದೇವತಾಮೂರ್ತಿ ತನ್ನ ಉಪಾಸನಾಬಿಂಬ. ಅನುಗ್ರಾಹಕನಾಗಿ ಪ್ರಸನ್ನವಾಗಿ ಕುಳಿತಿದೆ. ಅದರೆದುರು ಅನುಗ್ರಾಹ್ಯನಾಗಿ ಪ್ರಸಾದವನ್ನು ಪಡೆಯಲು ತಾನು ಕುಳಿತಿದ್ದಾನೆ.

ಕೌಶಿಕನಿಗೆ ತನ್ನ ವ್ಯಕ್ತಿತ್ವವು ಪ್ರತ್ಯೇಕವಾಗಿರುವುದು ತೋರುತ್ತಿದ್ದರೂ ಆ ವ್ಯಕ್ತಿತ್ವವನ್ನು ಉಪಯೋಗಿಸುವ ಸಾಮರ್ಥ್ಯವಿನ್ನೂ ಬಂದಿಲ್ಲ. ಅದೇನು ಅಭ್ಯಾಸದ ಬಲವೋ, ಅಥವಾ ಜಗತ್ತಿನಲ್ಲಿ ತುಂಬಿರುವ, ಅಗೋಚರವಾದ ಇನ್ನಾವುದಾದರೂ ಶಕ್ತಿಯ ಪ್ರೇರಣೆಯೋ ಅಂತೂ ಆ ಮೂರ್ತಿಗೆ ಕೌಶಿಕನು ಪೂಜಾದಿಗಳನ್ನು ಸಲ್ಲಿಸಿದ್ದಾನೆ: ಮಂತ್ರಗಳಿಂದ ಸ್ತೋತ್ರಮಾಡುತ್ತಿದ್ದಾನೆ. ಈತನ ಪೂಜಾಸ್ತುತಿಗಳಿಂದ ಮೂರ್ತಿಯು ಸ್ಪಷ್ಟವಾಗಿ, ಶಿಲ್ಪಿಯ ಕರ್ಮದಿಂದ ಶಿಲೆಯಲ್ಲಿ ಅಭಿವ್ಯಕ್ತವಾಗುವ ಮೂರ್ತಿಯಂತೆ, ವ್ಯಕ್ತವಾಗಿ, ಪ್ರತ್ಯೇಕವಾಗಿ ತೋರುತ್ತಿದೆ. ಕೊನೆಗೆ ನೋಡಿದರೆ ರುದ್ರ. ವೇದಗಳಲ್ಲಿ ಹೇಳಿರುವಂತೆ ಕೆಂಪಗೆ, ಭೀಮಾಕಾರನಾಗಿ, ಸರ್ವಶಸ್ತ್ರಾಸ್ತ್ರಗಳನ್ನು ಹಿಡಿದು ನಿಂತಿರುವ ಜಟಾಮಂಡಲ ಸುಂದರಮೂರ್ತಿ. ಭಸ್ಮೋದ್ಧೂಳಿತ ಗಾತ್ರನಾಗಿ, ಭಸ್ಮತ್ರಿಪುಂಡ್ರರಂಜಿತ ಫಾಲಪ್ರದೇಶದಲ್ಲಿ ನಿಮೀಲನ ಸುಂದರವಾದ ವಿರೂಪಾಕ್ಷಯಿಂದ ಲೋಕವಿಲಕ್ಷಣನಾಗಿ, ಜ್ವಾಲಾಮಾಲಾರಹಿತನಾಗಿ ದೇದೀಪ್ಯಮಾನನಾದ ಹವ್ಯವಾಹನನಂತೆ ತೇಜೋವಿರಾಜಮಾನನಾಗಿ ಘೋರವಾಗಿರುವಂತೆ ಕಂಡರೂ ಶಾಂತವಾಗಿರುವ ತನುವಿನಿಂದ ನಯನಮನೋಹರವಾಗಿರುವ ರುದ್ರಮೂರ್ತಿ.

ಕೌಶಿಕನಿಗೆ ಅಹಮಾಸ್ಮಿ ಎಂಬ ಅಸ್ಮಿತಾವೃತ್ತಿಯಿದೆ. ಅದು ಪೂಜಾದಿಗಳನ್ನು ಮಾಡುವುದಕ್ಕೆ ಪರ್ಯಾಪ್ತವಾದರೂ, ಸ್ತೋತ್ರಶಸ್ತ್ರಗಳಿಂದ ತೇಜೋಮಂಡಲವನ್ನು ಉಪಬೃಂಹಣಮಾಡಿ ಮೂರ್ತಿಯಾಗಿ ಪರಿಕಲ್ಪಿಸುವಷ್ಟು ಬಲವಾಗಿದ್ದರೂ, ಮುಂದೆ ಹೋಗಿ ಇಷ್ಟಾರ್ಥವನ್ನು ಸಂಪಾದಿಸಲು ಸಮರ್ಥವಾಗಲಿಲ್ಲ. ಹೀಗೆ ತೇಜೋರಾಶಿಯಿಂದ ಅಭಿಭೂತನಾಗಿರುವ ಕೌಶಿಕನನ್ನು ಆ ರುದ್ರಮೂರ್ತಿಯೇ ಮಾತನಾಡಿಸಿದನು.

ಕೌಶಿಕನು ಭಾರಿಯ ಆಳು. ರಾಜ್ಯಭಾರವನ್ನು ಹೊರುವುದಕ್ಕೆಂದೇ ಹುಟ್ಟಿದವನೆಂಬಂತೆ ಒಂದಾಳು ಕೈಯೆತ್ತರದ ಭೀಮಕಾಯನಾದರೂ ಕೌಶಿಕನು ಆ ರುದ್ರಮೂರ್ತಿಯ ಮುಂದೆ ಮಗುವಿನಂತಿದ್ದಾನೆ. ಆ ರುದ್ರಮೂರ್ತಿಯ ಭೀಮಗಂಭೀರ ಘನಗರ್ಜನದಂತಹ ವಾಣಿಯನ್ನು ಕೇಳಿ ಆತನಿಗೂ ಹೆದರಿಕೆಯಾಗುತ್ತದೆ. ರುದ್ರಮೂರ್ತಿಯು ಅನುಗ್ರಹಕ್ಕಾಗಿ ತನ್ನ ಶೂಲದಿಂದ ಕೌಶಿಕನನ್ನು ಮುಟ್ಟಿದಾಗ, ಆತನಿಗೆ ತನ್ನ ಕೊನೆಯ ಕಾಲವೇ ಬಂದಂತೆ ಭಾಸವಾಗಿ ಗುಂಡಿಗೆಯು ಅದುರುತ್ತದೆ.

ಶೂಲದಿಂದ ಸ್ವಾಮಿಯು ಮುಟ್ಟಿದ ಮೇಲೆ ಕೌಶಿಕನಿಗೆ ಧೈರ್ಯ ಬಂದಿದೆ: ಸ್ಥೈರ್ಯವು ಹುಟ್ಟಿದೆ: ಸಾಮರ್ಥ್ಯ ತಲೆದೋರಿದೆ. ಆತನ ಮಾತಿನ ಶಕ್ತಿಯು ನದೀನೀರಿನ ವೇಗದಂತೆ ತನ್ನನ್ನು ತಳ್ಳುತ್ತಿದ್ದರೂ, ಸುಂಟರಗಾಳಿಯ ವೇಗದಂತೆ ತನ್ನನ್ನು ನೂಕುತ್ತಿದ್ದರೂ ತಡೆದುಕೊಳ್ಳುವ ಶಕ್ತಿಯು ಬಂದಿದೆ. ಅಂಗಾಂಗಗಳಲ್ಲಿ ಚೇತನವು ತಲೆದೋರಿ, ಮನೋಬುದ್ಧಿಗಳಲ್ಲಿ ವೃತ್ತಿಯು ಪ್ರಕಟವಾಗಿದೆ.

ರುದ್ರಮೂರ್ತಿಯು ಕೇಳಿತು: "ವತ್ಸ, ನನಗಾಗಿ ನೀನು ಬಹಳ ಶ್ರಮಪಟ್ಟೆ – ಏನಾಗಬೇಕು."

ಕೌಶಿಕನಿಗೆ ಅರಿವಿಲ್ಲ: "ಪ್ರಭು, ಸರ್ವಲೋಕ ಮಹೇಶ್ವರ, ನಾನು ನಿನ್ನಲ್ಲಿ ಐಕ್ಯವಾಗಬೇಕು."

ರುದ್ರನು ನಕ್ಕನು: "ನೀನು ತಪಸ್ಸು ಮಾಡಿರುವುದು ಅದಕ್ಕಲ್ಲ. ಇನ್ನೇನಾದರೂ ಕೇಳು."

ಕೌಶಿಕನು ಮತ್ತೆ ದೃಢನಾಗಿ "ನನಗೆ ವಿದ್ಯೆಗಳೆಲ್ಲವೂ ಕರಾತಲಾಮಲಕವಾಗುವಂತೆ ಅನುಗ್ರಹಿಸು."

ರುದ್ರನು ಮುಗುಳ್ನಗುತ್ತ "ಅದಕ್ಕಿನ್ನೂ ಕಾಲವಿದೆ. ಅದಕ್ಕಾಗಿ ಪ್ರತ್ಯೇಕವಾಗಿ ತಪಸ್ಸುಮಾಡುವಿಯಂತೆ. ಈಗ ಏನಾಗಬೇಕು ಹೇಳು."

ಕೌಶಿಕನಿಗೆ ಏನು ಹೇಳಬೇಕೋ ತೋರಲಿಲ್ಲ. ಸುಮ್ಮನಿಲ್ಲ: ಸ್ತೋತ್ರ ಮಾಡುತ್ತಿದ್ದಾನೆ: ಏನು ಕೇಳಬೇಕೋ ತಿಳಿಯದು.

ರುದ್ರನು ನಕ್ಕನು. ಆ ನಗುವನ್ನು ನೋಡಿ ಅದರಂತರಂಗವನ್ನು, ಅದರ ರಹಸ್ಯವನ್ನು, ಒಡೆಯಬಲ್ಲವರಿದ್ದರೆ, ಆತನು ನಕ್ಕುದು "ಮಾನವನ ಮುಗ್ಧತನವನ್ನು ನೋಡಿ" ಎಂದು ಎನ್ನುತ್ತಿದ್ದರೋ ಏನೋ! ರುದ್ರ ಮೂರ್ತಿಯು ಬಂದು ಅಷ್ಟು ಹೊತ್ತು ಕರುಣಾಕಟಾಕ್ಷದಿಂದ ಆತನನ್ನು ನೋಡುತ್ತಿದ್ದು, ಕೊನೆಗೆ "ಇಷ್ಟಾರ್ಥ ಸಿದ್ಧಿಯಾಗಲಿ" ಎಂದು ಕೈನೀಡಿತು. ಇಷ್ಟು ಹೊತ್ತೂ ಆ ಮೂರ್ತಿಯು ಮೃದುಕಟಾಕ್ಷದಿಂದ ಊರಿಬರುತ್ತಿದ್ದ ಕರುಣಾರಸವು ಈಗ ಥಟ್ಟನೆ ನದಿಯಾದಂತೆ ಆಗಿ ಯಾವುದೋ ಒಂದು ಅಜ್ಞಾತಪ್ರವಾಹವು ಬಂದು ಕೌಶಿಕನನ್ನು ಕೊಚ್ಚಿಕೊಂಡು ಬಂದಂತಾಯಿತು.

ತೀವ್ರವಾದ ಪ್ರಚಂಡ ಭಾಸ್ಕರನ ಪ್ರಖರವಾದ ಕಿರಣರಾಶಿಯು ತೀಕ್ಷ್ಣತೆಯೆಲ್ಲ ಮಾಯವಾಗಿ ಕೇವಲ ತೇಜೋಮಯವಾದಂತೆ ತೋರುತ್ತಿದ್ದು ಆವರಣದಿಂದ ಆ ಪ್ರವಾಹವು ಗಳಿಗೆಗೆ ನೂರಾರು ಮೈಲಿಯ ವೇಗದಲ್ಲಿ ಕೌಶಿಕನನ್ನು ಸೆಳೆದುಕೊಂಡು ಬರುತ್ತಿದೆ. ಅತಿ ತೇಜೋಮಂಡಲದಿಂದ, ಜ್ಯೋತ್ಸ್ನೆಯಂತೆ ಶುಭ್ರವಾದರೂ ಮಂದವಾದ ತೇಜೋಮಂಡಲಕ್ಕಿಳಿದು, ಅಲ್ಲಿಂದ ಪ್ರಸನ್ನವಾದರೂ ಅಂಧಕಾರಮಯವಾದ ಯಾವುದೋ ಮಂಡಲ, ಅಥವಾ ಗುಹೆಯಲ್ಲಿ ಪ್ರವೇಶಿಸಿ, ಅದನ್ನು ಹಾಯ್ದು ತಂದಿದೆ ಆ ಪ್ರವಾಹ. ಕೌಶಿಕನಿಗೆ ತಾನು ಕುಳಿತಿರುವ ಆಸನವು ಬದಲಾದಂತೆ ತೋರಲಿಲ್ಲ. ಆದರೂ ಚಲನವು, ತನ್ನನ್ನು ಹೊತ್ತುಕೊಂಡು ಓಡುತ್ತಿರುವ ಸ್ರೋತೋವಾಹಿನಿಯ ಪರಿಚಯವು ಮಾತ್ರ ಆಗುತ್ತಿದೆ. ಕೊನೆಗೆ ತನ್ನ ಆಶ್ರಮಕ್ಕೆ ಬಂದಿದ್ದಾನೆ. ತನ್ನ ದೇಹದೊಳಕ್ಕೆ ತಾನೇ ಬಂದು ಪ್ರವೇಶಿಸಿದಂತಾಗಿದೆ.

ಕಣ್ಣು ತೆರೆಯಿತು. ದೇಹಭಾನವು ಬಂತು. ತನ್ನ ಕಣ್ಣೆದುರು ಮಹಾಪುರುಷರ ಸಭೆಯೊಂದು ಕುಳಿತಿದೆ. ಪ್ರತಿಯೊಬ್ಬರೂ ವೀರಪುಂಗವರಂತೆ, ಅಸಹಾಯಶೂರರಂತೆ ಕಾಣುತ್ತಿದ್ದಾರೆ. ಮಧ್ಯಾಹ್ನ ಭಾಸ್ಕರನಂತೆ ಪ್ರಚಂಡವಾದ ತೀಕ್ಷ್ಣತೇಜಸ್ಸಿನಿಂದ ಪ್ರಜ್ವಲಿಸುತ್ತಿರುವ ಆ ದಿವ್ಯಪುರುಷರು ಬೇಕೆಂದು

ಶಾಂತರಾಗಿ ಕುಳಿತಿರುವಂತೆ ಸಿಂಹಗಳೆಲ್ಲವೂ ಬೆಕ್ಕಿನಮರಿಗಳಾಗಿ ಬಂದು ಕುಳಿತಂತೆ ಕಾಣುತ್ತಿದ್ದಾರೆ.

ಕೌಶಿಕನಿಗೆ ನಿಜವಾಗಿಯೂ ಏನೋ ಬಹು ದೂರದಿಂದ ಬಂದರೆ ಆಗುವಷ್ಟು ಆಯಾಸವಾಗಿದೆ. ಆದರೂ ದಿವ್ಯಪುರುಷ ಸನ್ನಿಧಾನದಲ್ಲಿ ಲಭಿಸುವ ಉತ್ಸಾಹದಿಂದ ಉತ್ತೇಜಿತನಾಗಿ, ಎದ್ದು ಅವರಿಗೆ ಅಭಿವಾದನಮಾಡಿ ವಿನೀತನಾಗಿ ಅವರ ಪರಿಚಯವನ್ನು ಬಯಸುತ್ತಾನೆ. ಅವರೂ ವಿನೀತರಾಗಿ ಜ್ಯೇಷ್ಠನನ್ನು ಕಂಡ ಕನಿಷ್ಠ ಭ್ರಾತೃವರ್ಗದಂತೆ ಮೇಲಕ್ಕೆದ್ದು ಆತನಿಗೆ ಪ್ರತ್ಯಭಿವಾದನವನ್ನು ಸಲ್ಲಿಸಿ ವಿನಯದಿಂದ "ಆರ್ಯ, ರುದ್ರದೇವರ ಅಪ್ಪಣೆಯಾಗಿದೆಯೆಂದು ತಮ್ಮನ್ನು ಓಲೈಸಲು ಬಂದಿರುವ ಅಸ್ತ್ರಾಭಿಮಾನಿ ದೇವತೆಗಳು ನಾವು. ಇಂದಿನಿಂದ ನಾವು ತಮ್ಮವರು. ಪ್ರಯೋಗ, ಉಪಸಂಹಾರಾದಿ ಸಮಸ್ತ ರಹಸ್ಯಗಳೂ ತಮಗೆ ಬೇಕೆಂದಾಗ ತಮ್ಮ ಮನಸ್ಸಿಗೆ ಗೋಚರವಾಗುವುವು. ದೇವರು ಇಂದು ಮನಸ್ಸುಮಾಡಿ, ತಮಗೆ ಎಷ್ಟೇ ಆಯಾಸವಾದರೂ ಒಬ್ಬೊಬ್ಬರ ಪರಿಚಯವನ್ನೂ ಇಂದೇ ಮಾಡಿಕೊಳ್ಳುವುದು ಒಳ್ಳೆಯದು. ಅಥವಾ ತಮ್ಮ ಅಪ್ಪಣೆಯಾದರೆ, ಮತ್ತೊಮ್ಮೆ ಬಂದು ಕಾಣಿಸಿಕೊಳ್ಳುವೆವು" ಎಂದು ಬಿನ್ನವಿಸಿದರು.

ಕೌಶಿಕನು "ಅಸ್ತ್ರಾಭಿಮಾನಿ ದೇವತೆಗಳಾದ ತಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು. ಇಂದೇ ತಮ್ಮ ಪರಿಚಯ ಮಾಡಿಕೊಳ್ಳುವುದರಿಂದ ಹೆಚ್ಚು ಲಾಭವುಂಟೇನು?" ಎಂದು ಕೇಳಿದನು.

ಅದಕ್ಕವರು "ಸ್ವಾಮಿ, ಇಂದು ಸೂರ್ಯೋದಯದ ಸಮಯದಲ್ಲಿ ಆರ್ದ್ರಾ ನಕ್ಷತ್ರವಿರುವುದು. ಶೈವಶಕ್ತಿ ಸಂಚಯಕ್ಕೆ ಬಹು ಪ್ರಶಸ್ತವಾದ ದಿನವಿದು" ಎಂದರು.

"ಹಾಗಾದರೆ ಸೂರ್ಯೋದಯವಾಯಿತೆ?"

"ಇನ್ನೇನು ಅರುಣೋದಯವಾಗುವುದರಲ್ಲಿದೆ. ಬ್ರಾಹ್ಮೀ ಮುಹೂರ್ತವಿದು."

"ತಾವು ದೇವತೆಗಳು. ನಮಗಿಂತ ಉತ್ತಮ ಜನ್ಮದವರು. ವ್ರತಗಳಲ್ಲಿ ಸಂಪೂರ್ಣವಾದ ವಿಶ್ವಾಸವುಳ್ಳವರು. ತಮ್ಮ ಅಪ್ಪಣೆಯಾದರೆ, ಸಕಾಲವಿದು.

ಆದಷ್ಟು ಬೇಗ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬಂದು ತಮ್ಮ ಅನು ಗ್ರಹವನ್ನು ಸಂಪಾದಿಸುವೆನು."

ಅಸ್ತ್ರಾಭಿಮಾನಿ ದೇವತೆಗಳು ಆಗಬಹುದೆಂದರು. ಕೌಶಿಕನು ನಿತ್ಯ ಕರ್ಮಗಳನ್ನು ಮುಗಿಯಿಸಿಕೊಂಡು ಬಂದು ಸಮಾಹಿತನಾಗಿ ಆಸನದಲ್ಲಿ ಕುಳಿತು ಅಸ್ತ್ರಾಭಿಮಾನಿ ದೇವತೆಗಳನ್ನು ಸಮಷ್ಟಿಯಾಗಿ ವ್ಯಷ್ಟಿಯಾಗಿ ಸಾಂಗ ವಾಗಿ ಸರಹಸ್ಯವಾಗಿ ಸ್ವೀಕರಿಸಿದನು.

---

## ಒಂಭತ್ತನೆಯ ತರಂಗ

ಗುರುದೇವರಿಂದು ವರುಣ ಲೋಕಕ್ಕೆ ದಯಮಾಡಿಸಿದ್ದಾರೆ. ಅರುಂಧತೀ ದೇವಿಯವರು ದತ್ತಾಧಿಕಾರವುಳ್ಳವರಾಗಿ ಅಗ್ನಿ ಪರಿಚರ್ಯೆಯನ್ನು ಮಾಡು ತ್ತಿದ್ದಾರೆ. ಆಶ್ರಮದಲ್ಲಿ ಅಧ್ಯಯನ, ಅಧ್ಯಾಪನಾದಿಗಳು ಎಂದಿನಂತೆ ಕ್ರಮ ವಾಗಿ ದೇವಿಯವರ ಯಾಜಮಾನ್ಯದಲ್ಲಿಯೇ ನಡೆಯುತ್ತಿವೆ.

ಹೀಗೆ ಮೂರು ದಿನಗಳು ಕಳೆಯಿತು. ಏಕೋ ನಂದಿನಿಯು ಅರುಂಧತೀ ಯವರನ್ನು ಬೆನ್ನು ಬಿಡದೆ ತಿರುಗುತ್ತಿದ್ದಾಳೆ. ಅಲ್ಲಿ ಯಜ್ಞೇಶ್ವರನು ದಿನ ದಿನವೂ ಇನ್ನೆರಡು ಆಹುತಿಗಳು ಹೆಚ್ಚಾಗಿ ಬೇಕು ಎನ್ನುವವನಂತೆ ನಾಲಿಗೆ ಯನ್ನು ಚಾಚುತ್ತಾನೆ. ಆಶ್ರಮವಾಸಿಗಳೆಲ್ಲರಿಗೂ ಒಂದೊಂದು ಸಲ ಎಲ್ಲೂ ಇಲ್ಲದ ಉತ್ಸಾಹ. ಹಾಲು ಉಕ್ಕಿದಂತೆ ಉಕ್ಕುತ್ತಿರುವ ಅಕಾರಣ ಸಂತೋಷ. ವೃದ್ಧ ಶಿಷ್ಯರಲ್ಲಿ ಎಷ್ಟೋ ಜನ ವೇದ ಮಂತ್ರಗಳನ್ನು ಉಚ್ಚಸ್ವರದಲ್ಲಿ ಸಾಮ ವಾಗಿ ಹಾಡುತ್ತಾರೆ. ಹಾಗೆಯೇ ಇದ್ದಕ್ಕಿದ್ದ ಹಾಗೆಯೇ ಆ ಉತ್ಸಾಹವೆಲ್ಲವೂ ಬತ್ತಿ ಹೋಗಿ, ಹಾಡುತ್ತಿದ್ದ ಸಾಮವು ನಿಂತು, ಅಥರ್ವಣದ ಶಾಂತಿ ಮಂತ್ರ ಗಳನ್ನು ಪಠಣ ಮಾಡಬೇಕೆನ್ನಿಸುತ್ತಿದೆ. ಹೀಗೆ ಬೆಳಕು ಕತ್ತಲೆಗಳ ಅಲೆಗಳು ಆಶ್ರಮವನ್ನು ಹೊಕ್ಕು ಒಂದರ ಹಿಂದೊಂದು ಬಂದು ಬಂದು ಹೋದಂತಾಗು ತ್ತಿದೆ. ಈ ಆಂದೋಳನದಲ್ಲಿ ಏನೊಂದೂ ವ್ಯತ್ಯಾಸವಿಲ್ಲದೆ ತುಂಬಿದ ಕೊಡ ದಂತಿರುವವರು ಆ ಗುರುಪತ್ನಿಯೊಬ್ಬರೇ! ನಂದಿನಿಯು ಆಕೆಯ ಬೆನ್ನು ಹಿಡಿದು ತಿರುಗುತ್ತ ಆಕೆ ಎಲ್ಲಾದರೂ ನಿಂತಾಗ, ಒಮ್ಮೊಮ್ಮೆ ನೆಕ್ಕುತ್ತಾಳೆ.

ಕಣ್ಣಿಟ್ಟು ನೋಡಿದರೆ, ಆಕೆಗೆ ಏನೋ ವಿಪತ್ತು ಬರುವುದಾಗಿರುವಂತೆಯೂ ಅದನ್ನು ನಿವಾರಿಸಲು ತಾನು ತನ್ನ ಅನುಗ್ರಹವೆಂಬ ವಜ್ರ ಕವಚವನ್ನು ಆಕೆಗೆ ತೊಡಿಸುತ್ತಿರುವಂತೆಯೂ ಕಾಣುತ್ತದೆ. ಅಷ್ಟೇನು ? ಆಶ್ರಮವು, ಆಕಾಶದಲ್ಲಿ ಮೋಡಗಳೊಡನೆ ಚಂದ್ರನಾಡುತ್ತಿದ್ದರೆ ಒಮ್ಮೆ ಮೋಡಗಳನ್ನೆಳೆದುಕೊಂಡು ಮರೆಯಾಗಿ, ಉತ್ತರಕ್ಷಣವೆನ್ನುವುದರೊಳಗಾಗಿ ಅದನ್ನು ಅತ್ತ ನೂಕಿ ಆಟ ವಾಡುವಾಗ ಲೋಕವು ಬೆಳಕಿನ ಏರಿಳಿತಗಳಿಂದ ಬೆಳಬೆಳಗಿ ಮೊಂಕು ಮೊಂಕಾಗುವಂತೆ, ಆನಂದ ಚಿಂತೆಗಳ ಲಹರಿಗಳಲ್ಲಿ ಹತ್ತಿ ಇಳಿಯುತ್ತಿದೆ.

ಶುಕ್ರವಾರ ಸಂಜೆಯ ಹೊತ್ತು. ಅರುಂಧತಿಯು ಅಗ್ನಿಪೂಜೆಯನ್ನು ಮುಗಿಸಿಕೊಂಡು ಬಂದು ಗೋಪೂಜೆಗೆ ಬಂದಿದ್ದಾಳೆ. ಆಶ್ರಮವಾಸಿಗಳೆಲ್ಲರೂ ಬಂದಿದ್ದಾರೆ. ಎಲ್ಲರೂ ಸುತ್ತಲೂ ಕುಳಿತಿರಲು ಅರುಂಧತೀದೇವಿಯು ನಂದಿನೀ ದೇವಿಗೆ ಪುಷ್ಪಾಲಂಕಾರ ಮಾಡಿ ಅರಶಿನ ಕುಂಕುಮಗಳನ್ನು ಇಟ್ಟು ಸಿಂಗರಿಸಿ ದ್ದಾರೆ. ಗೋಗ್ರಾಸವಾಗಿ ರುಚಿರುಚಿಯಾದ ಭಕ್ಷ್ಯ ಭೋಜ್ಯಗಳನ್ನು ಒಪ್ಪಿಸಿ, ಸುಂದರವಾದ ಹರಿವಾಣದಲ್ಲಿ ಮಂಗಳ ದೀಪಿಕೆಗಳನ್ನಿಟ್ಟು ಆರತಿಯೆತ್ತಿದ್ದಾರೆ. ಮನೋಹರವಾಗುವಂತೆ ಅಲಂಕರಿಸಿರುವ ಆ ಮಂಟಪವು ವನಸ್ಥಲಿಯ ಶೋಭಾತಿಶಯವನ್ನೆಲ್ಲ ಹಿಡಿದುತಂದು ಒಂದುಕಡೆ ಅಂದವಾಗಿ ಜೋಡಿಸಿಟ್ಟಿರು ವಂತೆ ಇದೆ. ಅದರಲ್ಲಿ ಸರ್ವ ಸಂಪತ್ಸಮೃದ್ಧಿಯ ಮೂರ್ತಿಯಂತೆ ನಂದಿನಿಯು ಕುಳಿತು ಶ್ರುತೀ ಭಗವತಿಯ ಮೂರ್ತಿಯಂತಿರುವ ಅರುಂಧತಿಯ ಪೂಜೆ ಯನ್ನು ಕೈಕೊಂಡಿದ್ದಾಳೆ. ಅರುಂಧತಿಯು ಹಾಲುಕೆನೆಯ ಬಣ್ಣದ ಸೀರೆ ಯುಟ್ಟು ಮಿತವಾಗಿ ಚೊಕ್ಕ ಅಪರಂಜಿಯ ಬಳೆಗಳನ್ನು ತೊಟ್ಟು ಬ್ರಹ್ಮ ಜಾತಿಯ ವಜ್ರದ ಓಲೆಗಳನ್ನಿಟ್ಟು ಯಾವುದೋ ಒಂದು ಅಲೌಕಿಕ ಸೌಂದರ್ಯ ದಿಂದ ಮೆರೆಯುತ್ತಿದ್ದಾಳೆ. ನಂದಿನಿಯು ಅರುಣೋದಯದ ಶುಭ ವೇಳೆಯಲ್ಲಿ ಲೋಕ ಮಂಗಳಕ್ಕೋಸ್ಕರ ದೇದೀಪ್ಯಮಾನವಾಗಿ ಬೆಳಗುವ ಉಷಾದೇವಿಯ ತೇಜಸ್ಸನ್ನು ಹಿಡಿದು ಎರಕ ಹೊಯ್ದು ಇಟ್ಟಂತೆ ಅರುಣವರ್ಣವಾಗಿ ಮಂಡಿ ಸಿದ್ದಾಳೆ. ಸತ್ವಗುಣವು ರಜೋಗುಣವನ್ನು ಗೆಲ್ಲುವುದೆಂಬ ನುಡಿ ನಿಜವೇ ಎಂದು ಸಂದೇಹಿಸುವಂತೆ, ಮುದ್ದಾದ ಬಲಿತ ದಂತದ ಛಾಯೆಯಂತೆ ಮನೋ ಹರವಾದ ಗೌರವರ್ಣವುಳ್ಳ ದೇವಿಯು ದೀಪಮಾಲೆಗಳ ಬೆಳಕಿನಲ್ಲಿ ಎಳೆ

ಚಿಗುರಿನಂತೆ ಚಂದನಗಂಧದ ಮುದ್ದೆಯಂತೆ ಇರುವ ನಂದಿನಿಯನ್ನು ಆರಾಧಿಸುತ್ತಿದ್ದಾಳೆ.

ಪೂಜೆಯಾಯಿತು. ಎಲ್ಲರಿಗೂ ಪ್ರಸಾದ ವಿನಿಯೋಗವಾಯಿತು. ಎಲ್ಲರೂ ಆನಂದದಿಂದ ಯಥಾಸಂಭವವಾದ ಮಾತುಗಳನ್ನು ಆಡಿಕೊಂಡು ಹೊರಟರು. ಅರುಂಧತೀದೇವಿಯು ನಂದಿನಿಯಪ್ಪಣೆ ಕೇಳಿ ಹೊರಡಲು ಸಿದ್ಧವಾದಳು. ಆಗ ನಂದಿನಿಯು "ಅಮ್ಮಾ, ಒಂದು ಮಾತು. ನಾಳೆಯ ಬೆಳಿಗ್ಗೆ ಅಗ್ನಿಪೂಜೆಯಲ್ಲಿ ಇನ್ನೊಂದು ಆಹುತಿಯನ್ನು ಹೆಚ್ಚಾಗಿ ಕೊಡು. ಆಶ್ರಮದ ರಕ್ಷಣೆಯ ಭಾರವು ನಿನಗೆ ಸೇರಿದುದು ಎಂದು ಯಜ್ಞೇಶ್ವರನಿಗೆ ವಹಿಸು" ಎಂದಳು.

ಅರುಂಧತಿಗೆ "ಅದೇಕೆ?" ಎಂದು ಕೇಳಬೇಕು ಎನ್ನಿಸಿತು. ಆದರೆ ನಂದಿನಿಯ ನಂಬಿಸುವ ಮುದ್ದು ದನಿ, ಆಕೆಗೆ ಆ ದಿವ್ಯ ಧೇನುವಿನಲ್ಲಿರುವ ವ್ಯಾಮೋಹ ವಾತ್ಸಲ್ಯಗಳು ಪ್ರಶ್ನೆಗೆ ಅವಕಾಶಕೊಡದೆ ಆಗಲಮ್ಮಾ ಎನ್ನಿಸಿದುವು. ನಂದಿನಿಯ ಸಾನ್ನಿಧ್ಯದಲ್ಲಿ ಆನಂದಿಸುತ್ತಿರುವ ಮನಸ್ಸು ಇನ್ನು ಯಾವ ಸಂದೇಹಕ್ಕೂ ಎಡೆಗೊಡಲಿಲ್ಲ. ಆಕೆಗೆ ರಾತ್ರಿಯೆಲ್ಲ ನಂದಿನಿಯು ತನ್ನ ಹಿಂದೆ ಹಿಂದೆಯೇ ಬಂದಂತೆ, ತನ್ನೊಡನೆಯೇ ಇದ್ದಂತೆ ಭಾಸವಾಗುತ್ತಿದ್ದು, ಏನೋ ಅರಿಯದ ಕಳವಳದಿಂದ ಗಾಢವಿಲ್ಲದ ನಿದ್ದೆಯಿಂದ ಮನಸ್ಸಿಗೆ ಆಗುವ ಆತಂಕವನ್ನು ಕಳೆದು ಆಕೆಯ ಮನೋದೇಹಗಳೆರಡೂ ಹಗುರವಾಗಿರುವಂತೆ ಮಾಡಿತ್ತು.

ಅರುಂಧತೀದೇವಿಯು ಬ್ರಾಹ್ಮೀ ಮುಹೂರ್ತದಲ್ಲಿ ಎದ್ದಳು. ಕಣ್ಣು ಬಿಡುವುದಕ್ಕಿಂತ ಮುಂಚೆಯೇ ಕಾಣಬೇಕಾದ ಚಿಜ್ಜ್ಯೋತಿಯು ಇಂದು ಕೆಂಪಾಗಿದೆ: ಸ್ವರವು ಸೂರ್ಯನಾಗಿದ್ದರೂ ಸಂಕರವಾಗಿ ಆಸನ್ನವಾಗಿರುವ ಆಪತ್ತನ್ನೂ, ದೀರ್ಘವಾಗಿ ಪ್ರಸನ್ನವಾಗಿ ಕ್ಷೇಮವನ್ನೂ ತೋರಿಸುತ್ತಿದೆ. ಆಕೆಗೆ ಆಶ್ಚರ್ಯವಾಯಿತು: ಪತಿದೇವನು ಆಶ್ರಮದಲ್ಲಿಲ್ಲ: ಸ್ವರವೂ ಜ್ಯೋತಿಯೂ ಆಪತ್ತು ಬಂದು ಪರಿಹಾರವಾಗುವುದೆಂದು ಸೂಚಿಸುತ್ತಿವೆ. ಅಂದಿನ ಹಾಗೆ ಇಂದೂ ಇನ್ನೊಬ್ಬ ಕೌಶಿಕನು ಬರುವನೋ? ಇದಕ್ಕಾಗಿಯೇ. ಏನೋ ಹಿಂದಿನ ರಾತ್ರಿ ನಂದಿನಿಯು ಒಂದು ಆಜ್ಯಾಹುತಿಯನ್ನು ಅಧಿಕವಾಗಿ ಕೊಡು ಎಂದುದು!" ಎಂದಿತು ಮನಸ್ಸು. ಅಲ್ಲಿಯೇ ಹಾಗೇ ಅಲುಗದೆ

ಇದ್ದು ಮುಂದಿನ ವಿಚಾರವಮಾಡುವುದರಲ್ಲಿ ದೇಹವು ತನ್ನ ಅಭ್ಯಾಸದಂತೆ ಕಣ್ಣು ಬಿಟ್ಟು ಹೊರಳಿ ಮೇಲಕ್ಕೆ ಎದ್ದಿತು. ವಿಶದವಾಗಿ ನೋಡಿದ್ದರೆ ಚೆನ್ನಾಗಿತ್ತು ಎನ್ನುವುದರೊಳಗಾಗಿ ಯಾವುದೋ ಹಕ್ಕಿಯು ಕೂಗು ಕಿವಿಗೆ ಬಿದ್ದು ಸ್ನಾನಕ್ಕೆ ಹೊತ್ತಾಯಿತು ಎನ್ನಿಸಿ ಆಕೆಯು ಎದ್ದು ಬಿಟ್ಟಳು.

ಸೂರ್ಯನ ಮೊದಲ ಕಿರಣಗಳು ಮೂಡಲಬಾಸಿನಲ್ಲಿ ಬಂದು ತಮ್ಮ ಅರಸನ ಬರುವಿಗೆ ಎಲ್ಲವನ್ನೂ ಅಣಿಮಾಡುತ್ತಿವೆ ತಾರೆಗಳು ಇದ್ದಿದ್ದಲ್ಲಿಯೇ ಮಾಯವಾಗುತ್ತಿವೆ. ಉಷಾದೇವಿಯು ಮೋಡಗಳಿಗೆ ನಾನಾಬಣ್ಣಗಳನ್ನು ಬೊಳಿದು ದೂರದಿಂದ ಬರುತ್ತಿರುವ ತಂದೆಯನ್ನು ಸಂಭ್ರಮದಿಂದ ಎದುರುಗೊಳ್ಳಲು ಸಿದ್ಧವಾಗಿದ್ದಾಳೆ. ಮಂದಮಾರುತವು ಸುಳಿದು "ಲೋಕದ ಕಣ್ಣು ಬರುತ್ತಿದೆ. ಬೇಕೆಂದವರು ಇದನ್ನು ನೋಡಿ ಕಣ್ಣು ಪಡೆದುಕೊಳ್ಳಿ" ಎಂದು ಗುಟ್ಟಾಗಿ ಎಚ್ಚರಿಸುವಂತೆ ಸುಳಿಯಲೋ ಬೇಡವೋ ಎಂದು ಸುಳಿಯುತ್ತಿದೆ. "ಸ್ಥಾವರ ಜಂಗಮಗಳ ಆತ್ಮನು ಬರುತ್ತಿದ್ದಾನೆ. ಆತ್ಮಪೂಜೆಗೆ ಏಳಿ ಏಳಿ" ಎಂದು ಹಕ್ಕಿಗಳ ಗುಜುಗುಂಪಲು ತಾನೇತಾನಾಗಿದೆ.

ಇತ್ತ ಆ ವೇಳೆಗಾಗಲೇ ಅರುಂಧತೀ ದೇವಿಯು ಮಿಂದು ಮಡಿಯುಟ್ಟು, ತನ್ನ ನಿತ್ಯಕರ್ಮಗಳನ್ನು ಪೂರಯಿಸಿ ಯಜ್ಞದೇವನನ್ನು ಅರ್ಚಿಸುತ್ತಿದ್ದಾಳೆ. ನೋಡಿದರೆ, ವೈಶ್ವಾನರನೇಕೋ ಭಯಂಕರನಾದಂತೆ ಇದ್ದಾನೆ. ಜ್ವಾಲೆಗಳ ಕೆಂಪಿನ ಜೊತೆಗೆ ಹೊಗೆಯ ಕಪ್ಪು ಸೇರಿ, ಏನೋ ಒಂದು ಅನಿರ್ವಚನೀಯ ರೌದ್ರತೆ ಬಂದಂತಿದೆ. ಇಂದು ಎಂದಿನಂತೆ ಧನಂಜಯನು ಪ್ರಜ್ವಲಿಸುತ್ತಿಲ್ಲ. ಎಷ್ಟು ಬೀಸಿದರೂ ಹೊಗೆ ಸುತ್ತಿಕೊಂಡೇ ಇದೆ. ಕೊನೆಗೆ ಆ ಸ್ಥಿತಿಯಲ್ಲೇ ಒಂದುಕಡೆ ಜ್ವಾಲೆ, ಇನ್ನೊಂದುಕಡೆ ಧೂಮ, ಇರುವಾಗಲೇ ಆಕೆಯು ತನ್ನ ನಿತ್ಯಾಹುತಿಗಳನ್ನು ಮುಗಿಸಿದ್ದಾಳೆ ಅಧಿಕಾಹುತಿಯನ್ನು ಕೊಟ್ಟುದಾಯಿತು. ಥಟ್ಟನೆ ಯಜ್ಞೇಶ್ವರನು ಎಂದಿನಂತೆ ಸುವರ್ಣಮಯನಾಗಿ ನಯನ ಸುಖಕರವಾದ ಜ್ವಾಲೆಗಳನ್ನು ವಿಸ್ತರಿಸುತ್ತ ಹವಿಯನ್ನು ಸ್ವೀಕರಿಸಿದನು. ಗುರುಪತ್ನಿಯು ಕೊಟ್ಟ ಹವಿಸ್ಸನ್ನು ಅಂಗೀಕರಿಸಿ, ಆಕೆಯು ಹೊತ್ತ ಹರಿಕೆಯನ್ನು ಒಪ್ಪಿಕೊಂಡು ಆಗಲೆಂದು ಸಂತೋಷದಿಂದ ನುಡಿಯುವವನಂತೆ ಜಾತವೇದನು ಮಂಗಳವಾಗಿ ಬೆಳಗಿದನು. ಅರುಂಧತೀ ದೇವಿಯ ಮನಸ್ಸು ಹಗುರವಾಗಿ, ಅಗ್ನಿಪೂಜೆಯನ್ನು ಮುಗಿಸಿಕೊಂಡು ಆಕೆಯು ಹೊರಕ್ಕೆ ಬಂದಳು.

ಆಕೆಯು ಹೊರಕ್ಕೆ ಬರುತ್ತಿದ್ದ ಹಾಗೆಯೇ ಒಂದು ಬಾಣವು ಎಲ್ಲಿಂದಲೋ ಬಂದು ಅವರ ಪಾದಮೂಲದಲ್ಲಿ ಬಿತ್ತು. ಅದರಲ್ಲಿ ಒಂದು ಭೂರ್ಜಪತ್ರ. ಅದರಲ್ಲಿ ಅಕ್ಷರಗಳು. ದೇವಿಯು ಅದನ್ನು ತೆಗೆದುಕೊಂಡು ಓದಿದಳು: ಹೀಗೆ ಬರೆದಿತ್ತು : "ರುದ್ರಾನುಗ್ರಹದಿಂದ ಸರ್ವಾಸ್ತ್ರಗಳನ್ನು ಸ್ವಾಧೀನಪಡಿಸಿಕೊಂಡಿರುವ ಕೌಶಿಕನು ಈ ದಿನ ಹತ್ತು ಗಳಿಗೆಯ ಮೇಲೆ ಆಶ್ರಮಕ್ಕೆ ಬರುವನು. ಆಶ್ರಮವು ಸಮಗ್ರವಾಗಿ ನಿರ್ಮೂಲವಾಗುವುದು. ಆತ್ಮ ರಕ್ಷಣಾಭೀಷ್ಟವುಳ್ಳವರು ಕೂಡಲೇ ಆಶ್ರಮವನ್ನು ಬಿಟ್ಟು ಹೋಗತಕ್ಕದು. ಕೌಶಿಕ."

ದೇವಿಯವರಿಗೆ ಅದನ್ನು ಓದಿ ಭಯವಾಗಲಿಲ್ಲ ನಗೆಯು ಬಂತು. ನಂದಿನಿಯು ಹಿಂದಿನ ದಿನ ಹೇಳಿದ್ದ ಮಾತು ನೆನೆಪಾಯಿತು : "ಅಯ್ಯೋ, ಕೌಶಿಕ, ನಿನಗೇಕೆ ಈ ದುರ್ಬುದ್ಧಿ ಬಂತು? ಹುಂ." ಎಂದು ಹಿಂತಿರುಗಿ ಅಗ್ನಿಗೃಹಕ್ಕೆ ಹೋದರು. ಮತ್ತೊಮ್ಮೆ ಯಜ್ಞೇಶ್ವರನನ್ನು ಪ್ರಜ್ವಲಿಸಿ "ದೇವಾ, ನಮ್ಮನ್ನು ರಕ್ಷಿಸುವ ಭಾರವು ನಿನ್ನದು. ಬ್ರಹ್ಮರ್ಷಿಗಳು ಇಂದು ಇಲ್ಲಿಲ್ಲ. ಅದರಿಂದ, ನಿನ್ನನ್ನು ಕೇಳಿಕೊಳ್ಳುತ್ತಿದ್ದೇನೆ. ಇಲ್ಲಿ ನಡೆದಿರುವ ಸುದ್ದಿಯನ್ನು ವರುಣಲೋಕದಲ್ಲಿರುವ ಅವರಿಗೂ ತಿಳಿಸು." ಎಂದು ಕೈ ಮುಗಿದು ನಮಸ್ಕಾರ ಮಾಡಿ ಪದ್ಮಾಸನದಲ್ಲಿ ಕುಳಿತರು.

ಆಕೆಗೆ ಒಂದು ಗಳಿಗೆ ಮೈಯರಿವು ತಪ್ಪಿತು. ಮನಸ್ಸು ಇಂದ್ರಿಯ ವ್ಯಾಪಾರಗಳನ್ನು ತ್ಯಜಿಸಿ, ಬುದ್ಧಿಯೊಡನೆ ಸೇರಿ ಪ್ರಜ್ಞಾನಘನವನ್ನು ಹೊಕ್ಕಿತು. ಅಲ್ಲಿ ಆ ಸಂವಿತ್ಸಾಗರದಲ್ಲಿ ಆನಂದದಿಂದ ವಿಹರಿಸಿ, ತನ್ನ ಕರ್ತವ್ಯವೇನು? ಏನು ಮಾಡಬೇಕು? ಎಂಬುದನ್ನು ತಿಳಿದುಕೊಂಡು ಹಿಂತಿರುಗಿತು. ಆಕೆಯು ಮತ್ತೆ ಎದ್ದು, ಯಜ್ಞೇಶ್ವರನಿಗೆ ನಮಸ್ಕಾರಮಾಡಿ "ದೇವ! ಜಗತ್ತಿನ ಸ್ಥಿತಿಗತಿಗಳು ದೇವತೆಗಳಿಗೆ ಸೇರಿದುದು. ಆ ದೇವತೆಗಳನ್ನು ಕರೆದು ತರುವವನು ನೀನು. ಅದರಿಂದ ನೀನು ಈ ರಕ್ಷಣೆಯನ್ನು ವಹಿಸಿಕೊ. ನಿನ್ನ ಅಪ್ಪಣೆಯಂತೆ, ಬ್ರಹ್ಮದಂಡವನ್ನು ಪ್ರಾರ್ಥಿಸುವೆನು" ಎಂದು ಹೇಳಿ ಆಕೆಯು ಅಗ್ನಿಗೃಹದ ಆಗ್ನೇಯ ಮೂಲೆಯಲ್ಲಿ ಇದ್ದ ಬ್ರಹ್ಮದಂಡದ ಬಳಿಗೆ ಹೋಗಿ ಅದನ್ನು ಪೂಜಿಸಿದಳು. "ಬ್ರಹ್ಮತೇಜಸ್ಸಿನ ಸಾಕಾರ ಮೂರ್ತಿಯಾಗಿರುವ ಎಲೆ ಬ್ರಹ್ಮದಂಡವೆ, ಬ್ರಹ್ಮತೇಜಸ್ಸು ಎಲ್ಲ ತೇಜಸ್ಸುಗಳಿಗಿಂತ ಹಿರಿಯದು. ಸರ್ವ ತೇಜಸ್ಸುಗಳನ್ನೂ ಅಭಿಭವ ಮಾಡಬಲ್ಲುದು

ಎಂದು ಕೇಳಿರುವ ಮಾತು ಪರೀಕ್ಷೆಯಾಗುವ ಸಂಭವವು ಒದಗಿರುವುದು. ಪತಿದೇವನು ಇದ್ದಿದ್ದರೆ ಹೇಗೆ ಆಶ್ರಮದ ಮೇಲಿನ ಅಭಿಘಾತವನ್ನು ನಿವಾರಿಸಿ ಕಾಪಾಡುತ್ತಿದ್ದರೋ ಹಾಗೆಯೇ ನೀನು ಇತರರ ಉಪದ್ರವದಿಂದ ಆಶ್ರಮವನ್ನು ಕಾಪಾಡು. ಸಾತ್ವಿಕ ಭೂಮಿಯಾದ ಈ ಆಶ್ರಮದಲ್ಲಿ ಯಾರಿಗೂ ಯಾವ ರೀತಿಯಿಂದಲೂ ಉಪದ್ರವವಾಗದಿರಲಿ. ಸಾಧ್ಯವಾದರೆ ಕೌಶಿಕನಿಗೂ ಉಪದ್ರವವಾಗದಿರಲಿ. ಆತನಿಗೆ ಮತ್ತೆ ಆಶ್ರಮದ ಕಡೆ ಬರಬಾರದೆಂಬ ಸದ್ಬುದ್ಧಿಯು ಬರಲಿ" ಎಂದು ಕೈಮುಗಿದಳು. ಅಥರ್ವಣದಲ್ಲಿರುವ ಕೆಲವು ರುಕ್ಕುಗಳನ್ನು ಆರಿಸಿಕೊಂಡು ಸಾಮವಾಗಿ ಹಾಡಿ ಬ್ರಹ್ಮದಂಡವನ್ನು ಉಪಬೃಂಹಣ * ಮಾಡಿದಳು. ಆಕೆಯು ಉಪಬೃಂಹಣಮಾಡುತ್ತ ಬಂದ ಹಾಗೆಲ್ಲ, ಮುಂದೆ ಮುಂದೆ ಸಾಗಿದ ಸಾಮಗಳೊಡನೆ ಆ ದಂಡವು ಸಚೇತನದಂತೆ ನರ್ತಿಸಲಾರಂಭಿಸಿತು. ಆದರಲ್ಲಿ ಸೌಮ್ಯವಾದರೂ ಭಯಂಕರವಾದವಾದ ತೇಜಸ್ಸು ಮೂಡಿ ಪ್ರಜ್ವಲಿಸಿತು. ನಿರ್ಧೂಮವಾಗಿ ತೇಜೋರಾಶಿಯನ್ನು ಮಾತ್ರ ಕಕ್ಕುವ ರತ್ನದೀಪದಂತೆ ಆ ದಂಡವು ಬೆಳಗಿತು. ಆ ತೇಜಸ್ಸು ನೋಡುವವರ ಕಣ್ಣನ್ನು ಕುಕ್ಕುವಷ್ಟು ಬೆಳೆಯಿತು. ಆ ಗುರುತಿನಿಂದ ಆಶ್ರಮವಿನ್ನು ರಕ್ಷಿತವಾಯಿತು ಎಂಬ ನಂಬಿಕೆಯು ಬರಲು, ದೇವಿಯು ಮತ್ತೆ ಆ ದಂಡವನ್ನು ಪ್ರದಕ್ಷಿಣ ನಮಸ್ಕಾರಗಳಿಂದ ಸಮರ್ಚನೆಮಾಡಿ ಅದನ್ನು ಆಗ್ನೇಯದ ಮೂಲೆಯಿಂದ ಎತ್ತಿ ಈಶಾನ್ಯದ ಮೂಲೆಯಲ್ಲಿಟ್ಟಳು. ಹಾಗೆಯೇ ತಾಮಸಂವಿತ್ತಿನಲ್ಲಿ ಕಂಡ ಯಾವುದೋ ರಹಸ್ಯವನ್ನು ಹಿಡಿದು ಅಗ್ನಿಮಂಡಲಗಳಿಂದ ಅಗ್ನಿಯನ್ನೆತ್ತಿ ಒಂದು ಕಡೆಯಲ್ಲಿಟ್ಟು ಮೌನವಾಗಿ ಯಾವುದೋ ಒಂದು ಮಂತ್ರವನ್ನು ಮನಸ್ಸಿನಲ್ಲಿಯೇ ಉಚ್ಚರಿಸಿ ಆಹುತಿಯನ್ನು ಕೊಟ್ಟರು. ಅಗ್ನಿಯು ಸಪ್ತವರ್ಣಗಳ ಸಪ್ತಜ್ವಾಲೆಗಳನ್ನು ಪ್ರಸರಿಸಿ, ಒಂದೊಂದು ಬಣ್ಣವನ್ನೂ ಒಂದೊಂದು ಜ್ವಾಲೆಯಲ್ಲಿ ಮೆರೆಯಿಸಿತು. ದೇವಿಯರು ತೃಪ್ತರಾಗಿ ಮಾಡಿದ ಕೆಲಸವೆಲ್ಲ ಸರಿಹೋಯಿತು ಎಂದು ಹಿಂತಿರುಗಿ ಬಂದಳು.

ಬಾಗಿಲಿಗೆ ಬರುವ ವೇಳೆಗೆ ನಂದಿನಿಯು ಬಂದು ನಿಂತಿದ್ದಳು. ಆಕೆಗೆ ಸಲ್ಲಬೇಕಾದ ನಿತ್ಯ ಪೂಜೆಯನ್ನು ದೇವಿಯು ಸಲ್ಲಿಸಿದಳು. ಆಕೆಯು ಸುಪ್ರಸನ್ನ

---

* ಉಪಬೃಂಹಣವೆಂದರೆ ಚಿಕ್ಕದನ್ನು ದೊಡ್ಡದು ಮಾಡುವುದು.

ಳಾಗಿ ಆ ಪೂಜೆಯನ್ನು ಪರಿಗ್ರಹಿಸಿ, "ಅಮ್ಮಾ, ಈ ದಿನ ಮಧ್ಯಾಹ್ನದವರೆಗೂ ನಾನು ನಿಮ್ಮೊಡನೆ ಇರಬಹುದಲ್ಲವೆ?" ಎಂದಳು. ಅರುಂಧತಿಗೆ ಅರ್ಥ ವಾಯಿತು. ಆಕೆಯು ವಾತ್ಸಲ್ಯದಿಂದ ಸ್ನಿಗ್ಧವಾಗಿರುವ ಮೃದು ಮನೋಹರ ಧ್ವನಿಯಿಂದ, ಯಥೋಚಿತವಾದ ವ್ಯಾಪಾರದಿಂದ, ಆಕೆಯನ್ನು ಆರಾಧಿಸುತ್ತ "ದೇವತೆಗಳು ಕೊಟ್ಟಿರುವ ರಕ್ಷೆಯನ್ನು ಬೇಡವೆನ್ನುವವರಲ್ಲ ನಾವು" ಎಂದು ಅಂಗೀಕರಿಸಿದಳು.

ವೃದ್ಧ ಶಿಷ್ಯನು ದೇವಿಯವರ ಅಪ್ಪಣೆಯಂತೆ ಆಶ್ರಮವಾಸಿಗಳೆಲ್ಲರಿಗೂ ಕೌಶಿಕನ ಪುನರಾಗಮನವನ್ನು ಆ ಆಗಮನದ ದುರುದ್ದೇಶವನ್ನು ಭೀತರಾದ ವರು ಆಶ್ರಮವನ್ನು ಬಿಟ್ಟು ಹೋಗಬಹುದೆಂಬ ಅನುಜ್ಞೆಯನ್ನೂ ತಿಳಿಸಿದನು. ಆದರೂ ಯಾರೂ ಆಶ್ರಮವನ್ನು ಬಿಟ್ಟು ಹೋಗಲಿಲ್ಲ. ಪ್ರತಿಯೊಬ್ಬರೂ ಯಥಾಯಥಾ ರಘೋಘ್ನ ಮಂತ್ರಗಳನ್ನು ಜಪಿಸುತ್ತಾ ಸ್ವಸ್ಥ ಮಾನಸರಾಗಿ ಕುಳಿತರು.

---

## ಹತ್ತನೆಯ ತರಂಗ

ರಾಜಾ ಕೌಶಿಕನು ಆಶ್ರಮದ ಸೀಮೆಗೆ ಬಂದನು. ದೀರ್ಘಕಾಲದಿಂದ ದೀಕ್ಷೆಯಲ್ಲಿದ್ದು ಗಡ್ಡ ಮೀಸೆಗಳೂ, ತಲೆಯೂ ಬೇಕಾದ ಹಾಗೆ, ದರ್ಭೆಯ ಪೊದೆಯ ಹಾಗೆ, ಬೆಳೆದಿದೆ. ತೀವ್ರವಾದ ತಪಸ್ಸಿನಿಂದ ಅಭಿವೃದ್ಧವಾಗಿರುವ ರಾಜ ತೇಜಸ್ಸು ತಾನೇ ತಾನಾಗಿ ಮುಖವನ್ನು ಮಾತ್ರವಲ್ಲ ಮೂರ್ತಿಯನ್ನೆಲ್ಲ ಬೆಳಗುವಂತಿದೆ. ಕಣ್ಣುಗಳೆರಡೂ ದೀರ್ಘಕಾಲದ ತೀವ್ರ ವೈರದಿಂದ ಪ್ರಜ್ವಾ ಲಿತವಾಗಿ ದಾವಾಗ್ನಿಯ ಮಂಡಲಗಳಂತೆ ಬೆಳಗುತ್ತಿವೆ. ಆಶ್ರಮವನ್ನು ಕಾಣುತ್ತಿದ್ದ ಹಾಗೆಯೇ ಅವನ ವೈರಾಗ್ನಿಯೂ ಧಗ್ಗನೆ ಹೊತ್ತಿತು: ಅವನಿಗೆ ಅದು ಬ್ರಹ್ಮನಿಷ್ಠರ ಸಾತ್ವಿಕ ತಪೋಭೂಮಿಯಂತೆ ಕಾಣಲಿಲ್ಲ. ತನ್ನ ಸಾಮ್ರಾಜ್ಯ ಲಕ್ಷ್ಮಿಯನ್ನು ಏಕಾಪೋಶನ ತೆಗೆದುಕೊಂಡು ತನ್ನನ್ನು ಭಿಕಾರಿ ಯನ್ನಾಗಿ ಮಾಡಿದ ಮೃತ್ಯುವಿನ ಲೀಲಾಕ್ಷೇತ್ರದಂತೆ ಕಂಡಿತು. ಅವನಿಗೆ ಆ ಆಶ್ರಮವನ್ನು ಕಾಣುತ್ತಿದ್ದ ಹಾಗೆಯೇ ಮೈಯೆಲ್ಲ ಉರಿದುಹೋಯಿತು:

ಮನಸವೆಲ್ಲಾ ಕಲುಷಿತವಾಗಿ ದ್ವೇಷಮಯವಾಗಿ ಒಣಗಿ ನಿಂತಿದ್ದ ಹುಲ್ಲಿನ ಬಣವೆಗೆ ಕಿಚ್ಚಿಟ್ಟಂತಾಯಿತು. ತನ್ನಲ್ಲಿದ್ದ ಅಸ್ತ್ರಗಳನ್ನೆಲ್ಲ ಒಂದೇ ಸಲ ಉಪಯೋಗಿಸಿ ಪ್ರಯೋಗಿಸಿ, ಆ ಆಶ್ರಮದ ಭೂಮಿಯನ್ನು ಇದ್ದ ಗುರುತೂ ಇಲ್ಲದಂತೆ ಅಳಿಸಿಬಿಡಬೇಕು ಎನ್ನಿಸಿತು. ಆಗ್ನೇಯಾಸ್ತ್ರವನ್ನು ಬಿಟ್ಟು ಸುಟ್ಟು, ವಾರುಣಾಸ್ತ್ರವನ್ನು ಬಿಟ್ಟು ಆ ಬೂದಿಯನ್ನೆಲ್ಲ ಕೊಚ್ಚಿ, ವಾಯವ್ಯಾಸ್ತ್ರವನ್ನು ಬಿಟ್ಟು ಒಣಗಿಸಿ, ವ್ಯೋಮಾಸ್ತ್ರವನ್ನು ಬಿಟ್ಟು ಎಲ್ಲವನ್ನೂ ಶೂನ್ಯವಾಗಿ ಮಾಡಿಬಿಡಬೇಕು ಎಂದೂ ಹೀಗೆಯೇ ಇನ್ನೂ ಏನೇನೋ ತೋರುತ್ತಿರುವುದು. ಆದರೂ ವೀರ ಕ್ಷತ್ರಿಯನು ಎದುರಾಳಿಗೆ ತಿಳಿಯಿಸದೆ ಯುದ್ಧವನ್ನು ಆರಂಭಿಸುವ ಅಧರ್ಮವನ್ನು ಮನಸ್ಸು ಸಹಿಸದು. ಧರ್ಮವನ್ನು ಆರಾಧಿಸಿ ಧರ್ಮಿಷ್ಠವಾದ ಮನಸ್ಸು ರೋಷಾಗ್ನಿಯಿಂದ ಖತಿಗೊಂಡು ಬ್ರಹ್ಮಹತ್ಯೆಕ್ಕೆ ಸಿದ್ಧವಾಗಿದ್ದರೂ ಕಪಟ ಯುದ್ಧವನ್ನು ಮಾತ್ರ ಒಪ್ಪದು. ಆದರಿಂದ ಒಂದು ಭೂರ್ಜಪತ್ರದ ತುಂಡು ತೆಗೆದುಕೊಂಡು ಅದರಲ್ಲಿ ಸೊಪ್ಪಿನ ರಸದಿಂದ ತನಗೆ ತೋರಿದುದನ್ನು ಬರೆದು, ಒಂದು ಬಾಣವನ್ನು ಮಾಡಿ ಅದಕ್ಕೆ ಕಟ್ಟಿ, ಅದು ವಸಿಷ್ಠರ ಪರ್ಣಕುಟಿಯ ಬಾಗಿಲಲ್ಲಿ ಬೀಳುವಂತೆ ಪ್ರಯೋಗಿಸಿದನು.

"ಆಯಿತು ಸಂಗ್ರಾಮದ ಸುದ್ದಿಯನ್ನು ಆಶ್ರಮವಾಸಿಗಳಿಗೆ ತಿಳಿಯಿಸಿ ಅವರಿಗೆ ಅವಧಿಯನ್ನು ಕೊಟ್ಟುದಾಯಿತು. ಅಷ್ಟರಲ್ಲಿ ಅವಧಿ ಮುಗಿಯುವುದರೊಳಗಾಗಿ ವೈರಿಯು ತನ್ನ ಧನವನ್ನೆಲ್ಲ ತೆಗೆದುಕೊಂಡು ಓಡಿ ಹೋದರೋ? ಹೋದರೆ ಬ್ರಹ್ಮಹತ್ಯವು ತಪ್ಪುವುದು. ಸ್ತ್ರೀಹತ್ಯವೂ ತಪ್ಪುವುದು, ಗೋಹತ್ಯವೂ ತಪ್ಪುವುದು. ತನ್ನನ್ನು ಸಾಮ್ರಾಜ್ಯದಿಂದ ಓಡಿಸಿ ಅನಾಥನನ್ನು ಮಾಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿದಂತಾಗಿ ವೈರವು ಶಾಂತವಾಗುವುದು. ಇಲ್ಲದೆ, ಆ ಋಷಿಯೂ ಹಟತೊಟ್ಟು ಆದುದು ಆಗಲೆಂದು ನಿಂತುಬಿಟ್ಟರೆ! ಅಯ್ಯೋ! ಏನನರ್ಥ! ತಪೋಧನನಾಗಿ, ಇಕ್ಷ್ವಾಕು ಕುಲ ಸೌಭಾಗ್ಯವರ್ಧನನಾಗಿ, ಬ್ರಹ್ಮಜ್ಞಾನ ಸಂಪನ್ನನಾಗಿ, ಮಂತ್ರ ವಿದ್ವರಿಷ್ಠನಾಗಿ, ಗೋತ್ರ ಪ್ರವರ್ತಕನಾದ ಒಬ್ಬ ಮಹಾ ಬ್ರಾಹ್ಮಣನ ವಧೆಯಾಗುವುದು. ನನ್ನ ವೈರವು ನನ್ನನ್ನು ಎಂಥಹ ಘೋರ ಕರ್ಮದಲ್ಲಿ ಪ್ರವರ್ತಿಸುವಂತೆ ಮಾಡಿತು? ಅಥವಾ ಈಗಲೂ ಇನ್ನೂ ಅವಕಾಶವಿದೆ: ನಾನೇಕೆ ಈ ದುಷ್ಕರ್ಮ ಮಾಡದೆ ಹಿಂತಿರುಗಬಾರದು?"

"ಇಲ್ಲ ಇಲ್ಲ. ಈ ವರ್ಷಾಂತರಗಳಷ್ಟು ದೀರ್ಘಕಾಲ ಮರಿಯಿಟ್ಟು ಬೆಳೆದು ನೆಲ ಹಿಡಿದು ಕುಳಿತಿರುವ ದರ್ಭ ಪುಂಜದಂತೆ ನೆಲಸಿರುವ ವೈರಾಗ್ನಿಯು ಎದುರಿಗೆ ಹೊತ್ತಿ ಉರಿದ ಮತ್ತೊಂದಗ್ನಿಯನ್ನು ಕಾಣದೆ ಶಮನವಾಗುವುದೆಂತು? ಅಥವಾ ವಾಮದೇವನ ಉಪಶ್ರುತಿಯನ್ನು ಹಿಡಿದು ಈ ವೈರಕ್ಕೆ ವಶನಾಗದೆ, ನನ್ನ ದ್ವೇಷಕ್ಕೆ ನಾನೇ ತುತ್ತಾಗದೆ, ಇನ್ನಷ್ಟು ತಪಸ್ಸು ಮಾಡಿ ಈ ದ್ವೇಷದಾಹವನ್ನು ಶಮನಮಾಡಲೆ? ಇಲ್ಲ. ಇಲ್ಲ. ಆಗುವುದಿಲ್ಲ. ಮುರಿದ ಮುಳ್ಳನ್ನು ಮುಳ್ಳಿನಿಂದ ಕಿತ್ತೆಸೆಯುವಂತೆ ಈ ವೈರಾಗ್ನಿಯನ್ನು ಈ ಆಶ್ರಮವನ್ನು ಸುಡುವಗ್ನಿಯಿಂದ ಶಮನ ಮಾಡುವೆನು. ಘೋರವಾದ ಈ ಕರ್ಮದಿಂದ ಪಾಪ ಬರುವುದು ನಿಜ. ಈ ವೈರವನ್ನು ಕರೆದು ನಿರ್ಮಲವಾದ ಮನಸ್ಸಿನಿಂದ ಮತ್ತೆ ಅಪಾರವಾಗಿ ತಪಸ್ಸುಮಾಡಿ ಆ ಪಾಪವೆಲ್ಲವನ್ನೂ ತೊಳೆಯುವೆನು. ಅಂತೂ ಈಗಂತೂ ಕ್ರೂರವಾದರೂ ಈ ಕರ್ಮವು ನಡೆದು ಹೋಗಲಿ."

ಇಷ್ಟು ಇತ್ಯರ್ಥಕ್ಕೆ ಬರುವವೇಳೆಗೆ ಸೂರ್ಯನು ಚೆನ್ನಾಗಿ ಮೇಲಕ್ಕೆ ಬಂದು ತಲೆಯೆತ್ತಿ ನೋಡುವಷ್ಟು ಹೊತ್ತಾಗಿದೆ. ತಾನು ಕೊಟ್ಟಿದ್ದ ಅವಧಿಯು ಕಳೆದಿದೆಯೆಂಬದು ಮನವರಿಕೆಯಾಯಿತು. ಮಗ್ಗುಲಲ್ಲಿ ಹರಿಯುತ್ತಿದ್ದ ಹಳ್ಳದ ಬಳಿಗೆ ಹೋಗಿ ಕುಳಿತು ಮಂತ್ರಗಳನ್ನು ಜಪಿಸಿ ಅಭಿಮಂತ್ರಿಸಿ ಅಸ್ತ್ರಗಳನ್ನು ಪ್ರಯೋಗಿಸಬೇಕೆಂದು ನೀರು ತೆಗೆದುಕೊಳ್ಳಲು ಕೈನೀಡಿದರೆ ಥಟ್ಟನೆ ನೀರು ಹಿಂದಕ್ಕೆ ಹೋಯಿತು. "ಕೌಶಿಕ, ಈ ಕ್ರೂರ ಕರ್ಮವನ್ನು ಮಾಡಿ ಪಾಪಭಾಗಿಯಾಗಬೇಡ." ಎಂದು ಹೇಳಿ ಹಳ್ಳವೂ ತಾನು ಈ ಘೋರ ಪಾಪದಲ್ಲಿ ಭಾಗಿಯಾಗುವುದಿಲ್ಲವೆಂದು ಅದೃಶ್ಯವಾಗಿ ಹೊರಟು ಹೋಯಿತೋ ಎನ್ನುವಂತೆ ನೀರು ಬತ್ತಿಹೋಯಿತು.

ಕೌಶಿಕನಿಗೆ ಕೋಪ ಬಂತು: ತನ್ನ ಶಕ್ತಿಯನ್ನರಿಯದೆ ದೇವತೆಗಳು ಹೀಗೆ ಆಟವಾಡುತ್ತಿರುವರೋ? ಎಂದು ಸ್ವಾಭಿಮಾನವು ಉದ್ರಿಕ್ತವಾಯಿತು. ಪಕ್ಕದಲ್ಲಿದ್ದ ದರ್ಭೆಯನ್ನು ಕೀಳುವುದಕ್ಕೆ ಹೋದರೆ ಅದು ಉಹು ನನ್ನನ್ನು ಕೀಳಬೇಡ ಎಂಬಂತೆ, ಭದ್ರವಾಗಿ ನೆಲಕ್ಕೆ ಹತ್ತಿಕೊಂಡಂತೆ ಕಿತ್ತರೂ ಕೀಳಲಾಗದೆ ಗಟ್ಟಿಯಾಗಿ ನೆಲ ಹಿಡಿದು ನಿಂತಿತು. "ಆಹಾ! ದೇವತೆಗಳೆಲ್ಲರೂ ಚರಾಚರ ದೃಷ್ಟಿಯೂ ವಸಿಷ್ಠನ ಕಡೆಯೇ? ಇರಲಿ ಎಂದು ಮತ್ತೆ ಕ್ರುದ್ಧ

ನಾಗಿ ಆಪ್ರೋಮಂತ್ರಗಳಿಂದ ನೀರನ್ನು ಆಕರ್ಷಿಸಿ, ಆಚಮನಮಾಡಿ, ನೀರು ಕೈಗೆ ತೆಗೆದುಕೊಂಡು ಅಭಿಮಂತ್ರಿಸಿ ಅಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಸುತ್ತಮುತ್ತಿನ ವನಸ್ಥಲಿಯನ್ನೆಲ್ಲ ಏಕಾಂಡವಾಗಿ ಸುಟ್ಟು ಬೂದಿ ಮಾಡುತ್ತಾ ಆಗ್ನೇಯಾಸ್ತ್ರವು ಆಶ್ರಮದ ಕಡೆ ನುಗ್ಗಿತು.

ಆಶ್ರಮವು ಈ ಕೊನೆಯಿಂದ ಆ ಕೊನೆಯವರೆಗೂ ಪತ್ತಿಕೊಂಡು ಉರಿಯುವುದು. ಆಗ ವಸಿಷ್ಠನಿಗೆ ಬುದ್ಧಿಬಂದು, ತನ್ನ ಪ್ರಭಾವಕ್ಕೆ ಹೆದರಿ, "ಕೌಶಿಕ, ತಪ್ಪಾಯಿತು. ಈ ಸಂಹಾರವನ್ನು ನೋಡಲಾರೆ. ನನ್ನನ್ನು ಕ್ಷಮಿಸು, ದೊಡ್ಡಮನಸ್ಸುಮಾಡಿ ಈ ಅಸ್ತ್ರವನ್ನು ಉಪಸಂಹರಿಸು. ಇದೋ ಈ ಧೇನುವನ್ನು ತೆಗೆದುಕೋ" ಎಂದು ಮುಂತಾಗಿ ಆರ್ತಾಲಾಪವನ್ನು ಮಾಡುತ್ತ ಶರಣಾಗತನಾಗುವನು ಎಂದು ಏನೇನೋ ಕಲ್ಪನೆಯ ಹಂಬಲ ದಲ್ಲಿ ಒಂದು ರೆಪ್ಪೆ ಹೊಯ್ಯುವಷ್ಟು ಹೊತ್ತು ಕೌಶಿಕನ ಮನಸ್ಸು ಕಣ್ಣಿನ ದೃಷ್ಟಿಯನ್ನು ಒಳಕ್ಕೆ ಎಳೆದಿತ್ತು. ಉತ್ತರಕ್ಷಣದಲ್ಲಿಯೇ ಏನೋ ಅದ್ಭುತ ಶಬ್ದವಾಗಿ ಕಣ್ಣುಬಿಟ್ಟು ನೋಡಿದರೆ ಒಂದು ಅಪೂರ್ವ ದೃಶ್ಯ! ಒಂದು ಒಣ ಗಿದ ಗಳುವಿನ ತುಂಡು–ಮೂರು ನಾಲ್ಕು ಗಿಣ್ಣು ಇರಬಹುದು. ಹೊಸದಂತೂ ಅಲ್ಲ. ಅದು ಆಳೆತ್ತರದಲ್ಲಿ ಆಕಾಶದಲ್ಲಿ ನಿಂತು ಸಿಯ್ಯನೆ ಆಗ್ನೇಯಾಸ್ತ್ರವನ್ನು ನುಂಗುತ್ತಿದೆ. ಇಂತಹ ಚಮತ್ಕಾರವನ್ನು ಕಾಣುವುದಕ್ಕೆ ಸಿದ್ಧವಾಗಿರಲಿಲ್ಲ ಆ ಕೌಶಿಕನ ಮನಸ್ಸು. ಅನಿರೀಕ್ಷಿತವಾದ ಅಜ್ಞಾತವಾದ ಯಾವುದೋ ಅಡ್ಡಿಯನ್ನು ಕಂಡು ಮನಸ್ಸು ಹೆದರಿತು. ಅದು ಆ ಆಗ್ನೇಯವನ್ನು ಹಿಡಿದು ನುಂಗಿ ತನ್ನಕಡೆಗೆ ನುಗ್ಗಿ ತನ್ನನ್ನೇ ತಿನ್ನುವುದೋ ಎಂದು ಗಾಬರಿಯಾಯಿತು. ಆದರೂ ಕ್ಷತ್ರಿಯನ ಕ್ಷಾತ್ರಗುಣವು ಅಡ್ಡಿಯ ಆತಂಕವನ್ನು ಕಂಡು ವಿಜೃಂಭಿ ಸಿತು. ತೇಜಸ್ಸು ಮಸಗಿ ಕಿಡಿಯುಗುಳಿತು. ಕೌಶಿಕನು ರೌದ್ರರಸಪುಂಜ ವಾಗಿ ಪ್ರಜ್ವಲಿಸಿದನು. ತಾನೇ ರುದ್ರನೋ ಎಂಬಂತೆ ರೋಷಭೀಷಣನಾಗಿ ಅಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತ ಬಂದನು.

ಕೌಶಿಕನು ಯಾವ ಅಸ್ತ್ರವನ್ನು ಪ್ರಯೋಗಿಸಿದರೂ ಆ ಎದುರಿನ ದಂಡವು ತಾನೇ ಆದಾಗಿ, ಅದಕ್ಕಿಂತಲೂ ಮಹತ್ತಾಗಿ ಅದನ್ನು ನುಂಗು ವುದು. ಸೂಕ್ಷ್ಮವಾಗಿ ಪ್ರಯೋಗಿಸಿದರೆ ಅದಕ್ಕಿಂತ ಸೂಕ್ಷ್ಮವಾಗಿ ಅದನ್ನು ಭೇದಿಸುವುದು. ಹೀಗೆ ಅಣೋರಣೀಯಾ‌ನ್ ಮಹತೋಮಹೀಯಾನ್ ಆಗಿ

ತಾನು ಪ್ರಯೋಗಿಸಿದ ಅಸ್ತ್ರಗಳನ್ನೆಲ್ಲ ನಿರ್ನಾಮಮಾಡುತ್ತಿರುವ ಆ ದಂಡದ ಸ್ವರೂಪವನ್ನೇ ತಿಳಿಯದೆ, ತಿಳಿಯಲಾರದೆ ಕೌಶಿಕನು ಮಹತ್ತಾದ ವ್ಯಥೆಗೆ ಗುರಿಯಾದನು.

ಆದರೇನು? ಸಂಗ್ರಾಮವು ಆರಂಭವಾಗಿದೆ. ತಪೋವೀರ್ಯ ಬಲಿಷ್ಠನಾದ ಕ್ಷತ್ರಿಯನು ವರಲಬ್ಧವಾದ ಅಸ್ತ್ರಗಳನ್ನು ಪ್ರಯೋಗಿಸುತ್ತಾನೆ. ಅದನ್ನು ಆ ದಂಡವು ಒಂದು ಹೆಜ್ಜೆ ಮುಂದಕ್ಕೆ ಬಿಡದೆ ನುಂಗುತ್ತದೆ. ಒಮ್ಮೆ ಪ್ರಯೋಗಿಸಿದ ಅಸ್ತ್ರವನ್ನು ಮತ್ತೆ ಪ್ರಯೋಗಿಸೋಣವೆಂದರೆ ಅದು ಏನೇನು ಮಾಡಿದರೂ ಎಷ್ಟೆಷ್ಟು ಮಂತ್ರಿಸಿದರೂ ಮತ್ತೆ ಬರಲೊಲ್ಲದು. ಪ್ರಜ್ವಲಿಸುತ್ತಿರುವ ಹುತಾಶನನಲ್ಲಿ ಸಮರ್ಪಿಸಿದ ಹವಿಸ್ಸನ್ನು ಕೈಯಿಟ್ಟು ಮತ್ತೆ ತೆಗೆಯುವುದು ಎಷ್ಟು ಅಸಾಧ್ಯವೋ ಅಷ್ಟು ಅಸಾಧ್ಯವಾಗಿದೆ ಈ ದಂಡವು ಕಬಳಿಸಿದ ಅಸ್ತ್ರವನ್ನು ಮತ್ತೆ ಕರೆಯುವುದು.

ಕೌಶಿಕನು ಎರಡೆರಡು ಅಸ್ತ್ರಗಳನ್ನು ಒಟ್ಟೊಟ್ಟಿಗೆ ಬಿಟ್ಟನು. ಒಂದಸ್ತ್ರಕ್ಕೆ ಇನ್ನೊಂದು ಅಸ್ತ್ರವನ್ನು ರಕ್ಷೆಗಿಟ್ಟು ಪ್ರಯೋಗಿಸಿದನು. ಸುತ್ತಲೂ ಮುತ್ತಿ ಆ ದಂಡವನ್ನು ತುಳಿಯಲೆಂದು ಹಲವು ಅಸ್ತ್ರಗಳನ್ನು ಒಮ್ಮೆಯೇ ಪ್ರಯೋಗಿಸಿದನು. ಆದರೂ ಆ ದಂಡದ ಆಟೋಪವಡಗಿಲ್ಲ. ಒಂದಸ್ತ್ರವು ಬಂದರೆ ಒಂದೇ ಅಸ್ತ್ರದೊಡನೆ ಎರಡು ಬಂದರೆ ಎರಡಾಗಿ ಆ ಎರಡರೊಡನೆ, ಹಲವು ಬಂದರೆ ಹಲವಾಗಿ ಹೋರಾಡುತ್ತಿದೆ.

ಕೌಶಿಕನ ಅಸ್ತ್ರ ಸಂಪತ್ತು ಮುಗಿಯುತ್ತಾ ಬಂತು. ದಿಗಿಲಾಯಿತು. ತನ್ನ ಅಸ್ತ್ರಗಳೆಲ್ಲವೂ ಮುಗಿದು ಹೋಗಿ ಈ ದಂಡವು ಬಂದರೆ ತಾನೇ ಅದಕ್ಕೆ ಆಹುತಿಯಾಗಬೇಕಾಗಿ ಬರುವುದೋ? ಮತ್ತೆ ವಸಿಷ್ಠನ ತೇಜಸ್ಸಿನಲ್ಲಿ ಸಿಕ್ಕಿದ ಶಾಲಭನಾಗುವೆನೋ ಎಂದು ಏನೇನೋ ಕಳವಳವು ತಲೆದೋರಿತು. ಅಷ್ಟಕ್ಕೆ ಎಡೆಗೊಡಬಾರದು ಎಂದು ರೌದ್ರಾಸ್ತ್ರವನ್ನು ಪ್ರಯೋಗಿಸಿ, ಆ ದಂಡವು ಅದರೊಡನೆ ಹೋರಾಡುತ್ತಿರುವುದರೊಳಗೆ ಒಂದು ಹೊಸ ಅಸ್ತ್ರವನ್ನು ತನ್ನ ಮಂತ್ರ ಬಲದಿಂದ ಸೃಷ್ಟಿಸಿದನು. ಅದು ಮುಟ್ಟಿದರೆ ಸಾಕು ಚೇತನಾ ಚೇತನದೊಳಗೆ ಯಾವುದೂ ಚೇತನವಾಗಿ ನಿಲ್ಲಬಾರದು: ಮೋಹಮಯವಾಗಿ, ಮುಗ್ಧವಾಗಿ, ಮೂಢವಾಗಿ, ನೆಲದಮೇಲೆ ಉರುಳಬೇಕು. ಅಂತಹ ಶಕ್ತಿ ಅದರದು. ಅದಕ್ಕೆ

ಅದುವರೆಗೆ ಲೋಕವು ಕಂಡು ಕೇಳಿ ಅರಿಯದ ಸಂಕರ ದೇವತೆಗಳನ್ನು ಸೃಷ್ಟಿಸಿ ಅಭಿಮಾನಿಗಳನ್ನಾಗಿ ಮಾಡಿ ಪ್ರಯೋಗಿಸಿದನು.

ಆ ವೇಳೆಗೆ ರೌದ್ರಾಸ್ತ್ರವು ಶಾಂತವಾಗಿತ್ತು. ರೌದ್ರಾಸ್ತ್ರದೊಡನೆ ಹೋರಾಡಿ ದಂಡವೂ ರುದ್ರವಾಗಿ ರುದ್ರನಾಗಿ ಮುಂದುವರಿಯಿತು. ಎದುರು ಬಂದ ಹೊಸ ವಿಚಿತ್ರಾಸ್ತ್ರವನ್ನು ಹಿಡಿಯಿತು. ಅದನ್ನು ಕಬಳಿಸಲು ನುಗ್ಗಿತು. ಆದರೆ ಅದನ್ನು ಸ್ವಾಹಾಮಾಡಿ ನುಂಗುವುದರೊಳಗಾಗಿ ಆ ಅಸ್ತ್ರವು ತಪ್ಪಿಸಿ ಕೊಂಡು, ಹಿಂತಿರುಗಿದ ಕೃತ್ಯವು ತನ್ನನ್ನು ಪ್ರಯೋಗಿಸಿದವನನ್ನೇ ಪ್ರತಿ ಘಾತಿಸುವಂತೆ ಕೌಶಿಕನ ಕಡೆಗೇ ನುಗ್ಗಿ ಅವನನ್ನು ಘಾತಿಸಿ ಓಡಿಹೋಯಿತು. ಅದರ ಹಿಂದೆಯೇ ನುಗ್ಗಿಬಂದ ದಂಡವು ವಿಚಿತ್ರಾಸ್ತ್ರಘಾತಿಯಿಂದ ಮೈಮರೆದು ಬಿದ್ದಿರುವ ಕೌಶಿಕನನ್ನು ಆಹುತಿಗೊಳ್ಳಬೇಕು. ಅಷ್ಟರಲ್ಲಿ, ಅಲ್ಲಿಯೇ ವಾಮ ದೇವನು ಬಂದು ಅಡ್ಡವಾದನು. ದಂಡವು ನಿಂತಿತು.

ವಾಮದೇವನು ಆ ದಂಡಕ್ಕೆ ಅಭಿವಾದನಗಳನ್ನು ಸಲ್ಲಿಸಿ, "ಬ್ರಹ್ಮ ದಂಡವೇ ! ಇನ್ನು ಶಾಂತನಾಗು. ಈತನಿಗೆ ಇನ್ನೂ ಕಾಲವು ಬಂದಿಲ್ಲ. ಈತ ನಿಂದ ಮಹತ್ತರವಾದ ಕಾರ್ಯಗಳಾಗಬೇಕೆಂದು ಬ್ರಹ್ಮಸಂಕಲ್ಪವಿದೆ. ಅದರಿಂದ ಈತನನ್ನು ಬಲಿಗೊಳ್ಳದೆ ಉಳಿಸಿಕೊಡು. ವಸಿಷ್ಠ ಶಿಷ್ಯನಾದ ವಾಮದೇವನು ನಿನ್ನನ್ನು ಪ್ರಾರ್ಥಿಸುವನು" ಎಂದು ಕೈಮುಗಿದು ದಂಡವತ್ಪ್ರಣಾಮ ಮಾಡಿದನು.

ಗುರುವಿನ ಹಸ್ತವು ಪ್ರಣಾಮಮಾಡಿದ ಶಿಷ್ಯನ ಬೆನ್ನು ಸವರುವಂತೆ ಆ ದಂಡವು ಶಾಂತ ತೇಜಸ್ಸುಂದರವಾಗಿ ಆ ಪ್ರಣತ ದೇಹವನ್ನು ಶಿರೋಭಾಗ ದಿಂದ ಸವರಿದಂತೆ ಸವರಿಕೊಂಡು ಪಾದದವರೆಗೂ ಹೋಗಿ ಬಂದು ಮಗ್ಗುಲಲ್ಲಿ ನಿಂತಿತು.

ವಾಮದೇವನು ಎದ್ದನು. ಇನ್ನು ಕೈಮುಗಿದುಕೊಂಡು ಎದುರಿಗಿರುವ ದಂಡವನ್ನು ನೋಡುತ್ತಿರುವ ಹಾಗೆಯೇ ಅದು ಮತ್ತೆ ಮುಂದರಿದು ಮೈಮೇಲೆ ಪ್ರಜ್ಞೆಯಿಲ್ಲದೆ ವಿವಶನಾಗಿ ಪ್ರಮತ್ತನಂತೆ ಬಿದ್ದಿರುವ ಕೌಶಿಕನಿಗೆ ಒಂದು ಸುತ್ತು ಸುತ್ತಿತು. ಅಪಸವ್ಯವಾಗಿ ಸುತ್ತುತ್ತಿರುವ ದಂಡದೊಡನೆ, ಆ ನೆಲದ ಮೇಲೆ ಬಿದ್ದಿರುವ ದೇಹದಿಂದ ಕಪ್ಪನೆಯ, ಕರ್ರಗಿರುವ ಕಾರಿರುಳ ಕತ್ತಲೆಗಿಂತ

ಕಪ್ಪಾದ, ಮನುಷ್ಯಾಕಾರವು ತೋರುತ್ತಿದ್ದರೂ ಕಣ್ಣು ಮೂಗುಗಳೊಂದೂ ಕಾಣದೆ ಹಿಂದೋ ಮುಂದೋ ತಿಳಿಯಲಾಗದ, ಅರೆಗೆಲಸದ ಶಿಲಾಮೂರ್ತಿಯಂತಿರುವ ಅಂಜಿಸುವಂತಹ ನೆರಳೊಂದು ಮೇಲಕ್ಕೆದ್ದು ಆ ದಂಡವನ್ನು ಮುಟ್ಟಲು ಹೋಗಿ ಅದರ ತೇಜಸ್ಸಿಗೆ ಸಿಕ್ಕಿ, ತೀವ್ರವಾದ ಅಗ್ನಿಜ್ವಾಲೆ ಸೋಕಿದ ತರಗೆಲೆಯು ಸುಟ್ಟು ಬೂದಿಯಾಗಿ ಹಾರಿಹೋಗುವಂತೆ, ಸುಟ್ಟು ಭಸ್ಮವಾಗಿ ನಿರ್ನಾಮವಾಯಿತು.

---

## ಹನ್ನೊಂದನೆಯ ತರಂಗ

ವಸಿಷ್ಠರು ವರುಣಲೋಕದಲ್ಲಿ ನಡೆದ ಒಂದು ಯಾಗಕ್ಕೆ ಹೋಗಿದ್ದರು. ಹಿಂದೆ ಇಂದ್ರನ ರಹಸ್ಯವು ದುರ್ಭೇದ್ಯವಾಯಿತು. ಒಂದು ಯಾಗದಲ್ಲಿ ಯಾರು ಕರೆದರೂ ಇಂದ್ರನು ಬರಲಿಲ್ಲ. ಎಲ್ಲರೂ ಇಂದ್ರನು ಬರಲಿಲ್ಲವೆಂದು ವ್ಯಥಿಸುತ್ತಿರಲು, ವಸಿಷ್ಠರು ಪ್ರಜ್ಞಾನಘನವನ್ನು ಪ್ರವೇಶಿಸಿ ಇಂದ್ರತತ್ವವನ್ನು ಹುಡುಕಿ ನೋಡಿದರು. ಅಲ್ಲಿ ಆ ರಹಸ್ಯವನ್ನು ಭೇದಿಸಿ ಇಂದ್ರನಿಗೆ ಬಂದಿದ್ದ ಆಪತ್ತನ್ನು ಪರಿಹರಿಸಿ, ಕರೆದರು : ಇಂದ್ರನು ಯಾಗಕ್ಕೆ ಬಂದನು. ಆಗ ಇಂದ್ರನಿಗೆ ಪರಮಸಂತೋಷವಾಗಿ ಇನ್ನು ಮುಂದೆ ನನಗೋಸ್ಕರ ಮಾಡುವ ಯಾಗದಲ್ಲಿ ವಸಿಷ್ಠರೇ ಪುರೋಹಿತರಾಗಿರಲಿ ಎಂದು ವರವನ್ನು ಕೊಟ್ಟನು. ಅಂದಿನಿಂದ ಎಲ್ಲಿ ಇಂದ್ರಯಾಗವು ನಡೆದರೂ ವಸಿಷ್ಠರಾಗಲಿ ವಸಿಷ್ಠಪುತ್ರರಾಗಲಿ ಹೋಗುವರು.

ವರುಣದೇವನು ವಸಿಷ್ಠರನ್ನು ಕುಲಪತಿಗಳ ಪದವಿಗೆ ತಕ್ಕ ಮರ್ಯಾದೆಗಳನ್ನು ಕೊಟ್ಟು ಪಲ್ಲಕ್ಕಿಯಲ್ಲಿ ಕಳುಹಿಸಿದನು. ಹಿಂದೆ ನೂರಾರುಜನ ಮಹರ್ಷಿಗಳು ವೇದೋಪನಿಷತ್ತುಗಳನ್ನು ಪಾರಾಯಣ ಮಾಡುತ್ತ ಬಂದರು. ಅವರಿಗೆ ದಾರಿಯಲ್ಲಿ ಬರುತ್ತಿರುವಾಗಲೇ ಆಶ್ರಮದಲ್ಲಿ ಏನೇನಾಯಿತು ಎಂಬುದು ತಿಳಿಯಿತು. ಮನಸ್ಸು "ಆಗಬೇಕಾದುದೆಲ್ಲ ಆಗಿದೆ. ಇನ್ನೇಕೆ ವೃಥಾ ಅವಸರ, ಆಯಾಸ" ಎಂದಿತು. ಯಥಾ ಸಾವಕಾಶವಾಗಿ ಪ್ರಯಾಣವು ನಡೆಯಿತು.

ಬ್ರಹ್ಮರ್ಷಿಗಳು ಸಪರಿವಾರರಾಗಿ ಭೂಲೋಕಕ್ಕೆ ಬಂದರು. ಆಶ್ರಮವು ಇನ್ನೊಂದು ದಿನದ ಹಾದಿಯೆನ್ನುವಾಗ ಒಂದು ವಿಶೇಷವು ನಡೆಯಿತು. ಒಬ್ಬನು ಬ್ರಹ್ಮರ್ಷಿಗಳ ದರ್ಶನವನ್ನು ಏಕಾಂತದಲ್ಲಿ ಅಪೇಕ್ಷಿಸಿದನು: ಅದೂ ಸಂಜೆಯ ಕತ್ತಲು ಕವಿಯುತ್ತಿರುವ ಮುಚ್ಚಂಜೆಯ ಹೊತ್ತಿನಲ್ಲಿ. ವಸಿಷ್ಠರೂ ಆ ವೇಳೆಗಾಗಲೇ ತಮ್ಮ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಆಗಂತುಕನು ಅಪೇಕ್ಷಿಸಿದ್ದ ಸ್ಥಳಕ್ಕೆ ಏಕಾಂಕಿಗಳಾಗಿ ಬಂದರು.

ಆಗಂತುಕನು ನೋಡುವುದಕ್ಕೆ ಅಂತ್ಯಜನಂತಿದ್ದಾನೆ. ವಸಿಷ್ಠರನ್ನು ಅಷ್ಟು ದೂರದಲ್ಲಿ ಕಾಣುತ್ತಲೇ ಅಡ್ಡಬಿದ್ದಿದ್ದಾನೆ. ಮೊದಲು ಅಭಯವಾಗಬೇಕು. ದೇವರೆ, ತಮ್ಮ ಮಾತು ಕೇಳಿದರೆ ನನಗೆ ಕಿವಿಯೊಡೆಯುತ್ತದೆ. ತಮ್ಮನ್ನು ನೋಡಿದರೆ ಕಣ್ಣು ಕೊಕ್ಕರಿಸುತ್ತದೆ. ಹೀಗೇನೂ ಆಗದಂತೆ ತಮ್ಮೊಡನೆ ಮಾತನಾಡಿದರೂ ನನಗೆ ಹಾನಿಯಾಗದಂತೆ ಮೊದಲು ವರ ಕೊಡಬೇಕು, ದೇವರೇ!" ಎಂದು ಕೇಳಿಕೊಳ್ಳುತ್ತಿದ್ದಾನೆ. ವಸಿಷ್ಠರು ಹಾಗೆ ಆಗಲೆಂದರು. ಬಂದವನು ಎದ್ದು ನಿಂತನು.

ವಸಿಷ್ಠರು ಕೇಳಿದರು: "ನೀನು ಯಾರು?"

ಆಗಂತುಕನು ಹೇಳಿದನು: "ತಾವು ನನ್ನೊಡನೆ ಮಾತನಾಡುವಾಗ ಒಂದು ಕಡ್ಡಿಯನ್ನು ಅಡ್ಡವಾಗಿಟ್ಟುಕೊಂಡು ಮಾತನಾಡಬೇಕು ದೇವರೆ."

ವಸಿಷ್ಠರು ನಕ್ಕು ಆಗಲಿ ಎಂದು ಒಂದು ಕಡ್ಡಿಯನ್ನು ತೆಗೆದುಕೊಂಡು ಅದನ್ನು ಕುರಿತು ಮಾತನಾಡುವವರಂತೆ ಮಾತನಾಡಿದರು.

"ನೀನು ಯಾರು?"

"ನಾನು ಕಲಿ."

"ನನ್ನೊಡನೆ ಏನು ಮಾತನಾಡಬೇಕು? ನನ್ನಲ್ಲಿ ನಿನಗೆ ಏನು ಕೆಲಸ?"

"ಕೆಲಸ ಬೇಕಾದಷ್ಟು ಇದೆ. ಅದರಿಂದಲೇ ಮಾತನಾಡಲು ಬಂದಿದ್ದೇನೆ. ಸಾವಧಾನವಾಗಿ ತಾವು ನನ್ನ ಮಾತು ಕೇಳೋಣವಾಗಲಿ. ಈಗ ಕೃತಯುಗದ ಒಂದು ಪಾದವು ಕಳೆಯಿತು ಧರ್ಮವು ಪೂರ್ಣವಾಗಿ ಷೋಡಶಕಲಾ ಪರಿಪೂರ್ಣವಾಗಿ ಮೆರೆಯುವ ಕಾಲವು ಕಳೆಯಿತು. ಇನ್ನು ಧರ್ಮದ ಕಳೆಗಳು ಒಂದೊಂದಾಗಿ ಲೋಪವಾಗಬೇಕು. ಹಾಗೆ ಧರ್ಮಕಳಾ ಲೋಪವಾಗಿರುವ

ದನ್ನು ತೋರಿಸುವ ಕೆಲಸ ನನ್ನದು. ನನ್ನ ಕೆಲಸವನ್ನು ನಾನು ಮಾಡುವುದಕ್ಕೆ ಬಂದಿದ್ದೇನೆ. ಅದನ್ನು ಆರಂಭಿಸುವುದಕ್ಕೆ ತಮ್ಮ ಅಪ್ಪಣೆಯಾಗಬೇಕು"

"ನೀನು ನಿನ್ನ ಕೆಲಸವನ್ನು ಮಾಡುವುದಕ್ಕೆ ನನ್ನ ಅಪ್ಪಣೆಯೇನು?"

"ದೇವಾ, ನಾನು ಧರ್ಮಲೋಪಕ್ಕಾಗಿಯೇ ಹುಟ್ಟಿರುವೆನಾದರೂ ನಾನು ನನ್ನ ಧರ್ಮವನ್ನು ಬಿಡಲಾಗುವುದಿಲ್ಲ. ತಾವು ಬಲ್ಲಿರಿ, ದೀಪದಿಂದ ಹೊರಟಾಗ ಕಿರಣವು ತೀವ್ರವಾಗಿದ್ದರೂ ಮುಂದೆ ಹೋಗುಹೋಗುತ್ತ ಅದು ಹರಡಿ ಹರಡಿ ಅದರ ತೇಜಸ್ಸು ಮಂಕಾಗುವುದು. ಬಾಣವು ಬಿಲ್ಲಿನಿಂದ ಹೊರಟಾಗ ಎಷ್ಟು ವೇಗವಾಗಿರುವುದೋ, ಆ ವೇಗವು ಕೊನೆಯಲ್ಲಿಯೂ ಇರುವುದೇ? ಇದೇ ಧರ್ಮವು ಮೂರ್ತಪ್ರಪಂಚದಲ್ಲಿಯೂ ಉಂಟಲ್ಲವೆ? ನೀರಿನಲ್ಲಿ ಯಾರ ಪ್ರಯತ್ನವೂ ಇಲ್ಲದೆ ಪಾಚಿಯು ಹುಟ್ಟುವಂತೆ, ಬೆಂಕಿಯಲ್ಲಿ ಹೊಗೆಯು ಹುಟ್ಟುವಂತೆ, ಬೆಳಕಿನ ಜೊತೆಯಲ್ಲಿ ಕತ್ತಲೆಯಿರುವಂತೆ, ಧರ್ಮಕ್ಕೂ ಕಾಲ ದೇಶಗಳ ಪರಿಮಿತಿಯುಂಟು. ಆ ಪರಿಮಿತಿಯು ಹೆಚ್ಚಾದಾಗ ಧರ್ಮಕ್ಕೆ ಹಾನಿಯುಂಟಾಯಿತು; ಅಧರ್ಮದ ಕೈ ಮೇಲಾಯಿತು ಎನ್ನುವುದು ಲೋಕದ ವಾಡಿಕೆ. ಆದರೆ, ಹುಣ್ಣಿಮೆಯೇ ಇದ್ದರೆ ಅಮಾವಾಸ್ಯೆಯ ಗತಿಯೇನು? ಅದರಿಂದ ಚಂದ್ರನನ್ನು ಕೃಷ್ಣಪಕ್ಷದಲ್ಲಿ ಕುಗ್ಗಿಸುವ ಶಕ್ತಿಯು ನನ್ನದು: ಅದೇ ಚಂದ್ರನನ್ನು ಶುಕ್ಲಪಕ್ಷಕ್ಕೆ ಎಳೆದು ಬೆಳೆಸುವ ಶಕ್ತಿಯು ನಿಮ್ಮದು. ಅದಕ್ಕಾಗಿ ಕೃಷ್ಣಪಕ್ಷವು ಆರಂಭವಾಗಬೇಕು ಎಂದು ಸೂಚಿಸಲು ನಾನು ಬಂದಿದ್ದೇನೆ, ದೇವರು."

"ಅದಕ್ಕೆ ನಾನೇನು ಮಾಡಬೇಕು?"

"ಆಗಲಿ. ತಾವು ಸರ್ವಜ್ಞರಾದರೂ ನನ್ನಿಂದ ನುಡಿಸುತ್ತಿರುವಿರಿ. ಸಂತೋಷವಾಗಿ ನುಡಿಯುವೆನು. ಪರಬ್ರಹ್ಮದ ಸತ್ತ್ವಶಕ್ತಿಯ ಮೂರ್ತಿಗಳಾಗಿ ಧರ್ಮರಕ್ಷಕರಾದ ವಿದ್ಯಾಮೂರ್ತಿಯು ತಾವು. ಆ ಪರಬ್ರಹ್ಮದ ಮಾಯಾಶಕ್ತಿಯ ಮೂರ್ತಿಯಾಗಿ ದೇಶ ಕಾಲ ರೂಪ ಪರಿಚ್ಛೇದವನ್ನು ಸೃಷ್ಟಿಸಿ ಬ್ರಹ್ಮವನ್ನು ಮುಚ್ಚುವ ಅಧರ್ಮ ರಕ್ಷಕನಾದ ಅವಿದ್ಯಾಮೂರ್ತಿಯು ನಾನು. ಕೃತಿಯುಗದ ಈ ಎರಡನೆಯ ಪಾದವು ಆರಂಭವಾಗಲು, ನಾನು ಈ ಅವಿದ್ಯಾಜಾಲವನ್ನಷ್ಟು ಬಿಚ್ಚಬೇಕು. ಲೋಕದಲ್ಲಿ ಶೋಕ ಮೋಹ ದೈನ್ಯಗಳು ಇನ್ನೂ ಹೆಚ್ಚಬೇಕು. ಧರ್ಮವನ್ನೇ ಹಿಡಿದು ಕುಳಿತಿರುವ ಶಕ್ತಿಯು ಮನು

ಷ್ಯನ ಅಂತಃಕರಣಕ್ಕೆ ಈಗ ಇರುವಷ್ಟು ಇನ್ನು ಮುಂದಿರುವುದಿಲ್ಲ; ಈ ಯುಗದ ಕಾರಣಪುರುಷರು ನೀವು. ನಿಮಗೆ ಈ ಅಂಶವನ್ನು ತಿಳಿಸದೆ ನಾನು ಪ್ರವರ್ತಿಸುವುದು ಸರಿಯಲ್ಲ. ಅದರಿಂದ ತಮ್ಮಲ್ಲಿಗೆ ಬಂದಿದ್ದೇನೆ. ಈ ವ್ಯತ್ಯಾಸವು ಮೊದಲು ತಮ್ಮ ಅಂತಃಕರಣದಲ್ಲಿ ಆಗಬೇಕು."

" ಹಾಗೆಂದರೆ ? "

" ಹೌದು, ನನಗೆ ಗೊತ್ತು, ತಾವು ಸದಾ ಬ್ರಾಹ್ಮೀ ಸ್ಥಿತಿಯಲ್ಲಿದ್ದು ಕೇವಲ ಲೋಕ ರಕ್ಷಣಕ್ಕಾಗಿ ಬಹಿರ್ಮುಖರಾಗುವ ಮಹಾನುಭಾವರು. ಜಾತ ಮುಕ್ತರು. ಆದರೆ ಈಗ ತಾವು ನನ್ನ ಅಧಿಕಾರವು ಆರಂಭಿಸಿದುದರ ಗುರು ತಾಗಿ ಶೋಕ, ಮೋಹ, ದೈನ್ಯಗಳನ್ನು ಅವಲಂಬಿಸಬೇಕು. ಲೋಕದ ಜನರು ಕಾಣುವಂತೆ, ತಾವು ಅವಕ್ಕೆ ವಶರಾಗಬೇಕು. ಆ ಶೋಕ ಮೋಹ ದೈನ್ಯ ಗಳು, ಹುಳುವು ವೃಕ್ಷರಸವನ್ನೇ ಕುಡಿದು ಬಲಿತು ವೃಕ್ಷವನ್ನೇ ಕೊರೆಯು ವಂತೆ, ತಮ್ಮ ಆಶ್ರಯದಲ್ಲಿದ್ದು ತಮ್ಮ ಚೇತನವನ್ನೇ ತೆಗೆದುಕೊಂಡು ಬಲ ವಾಗಿ ಲೋಕವನ್ನು ಪೀಡಿಸಲು ಹೋಗಬೇಕು. ಅದರಿಂದ ತಮ್ಮ ಬಳಿಗೆ ಬಂದಿ ದ್ದೇನೆ. "

" ಹುಂ. "

" ತಮ್ಮನ್ನು ಕೇಳದೆಯೇ ನಾನೇಕೆ ಆರಂಭಿಸಬಾರದು ಎನ್ನುವಿರಿ. ಅದಾಗುವುದಿಲ್ಲ. ದೇವರು, ಸ್ಪರ್ಶಮಣಿಯನ್ನು ಮುಟ್ಟಿದ ಕಬ್ಬಿಣವೆಲ್ಲ ಚಿನ್ನ ವಾಗುವಂತೆ, ತಮ್ಮ ಪ್ರಭಾವದಿಂದ ತಮ್ಮನ್ನು ತಗುಲಿದ ಶೋಕ ಮೋಹ ದೈನ್ಯಗಳೂ ಜೀರ್ಣವಾಗಿ ಆನಂದವಾಗುವುವು. ಅಗ್ನಿಯ ಸಂಪರ್ಕದಿಂದ ತಣ್ಣೀರೂ ಬಿಸಿಯಾಗುವಂತೆ, ಯಾವ ಭಾವವೇ ಆಗಲಿ ತಮ್ಮನ್ನು ಮುಟ್ಟಿದರೆ ತಮ್ಮ ತುಂಬಿದ ಅಂತಃಕರಣದ ಸಂತೋಷಧರ್ಮವೇ ಅದಕ್ಕೂ ಬರುವಾಗ ಮಾಡುವುದೇನು ? ಅದರಿಂದ ತಮ್ಮಲ್ಲಿಗೆ ಬಂದಿದೇನೆ. ಮಿಕ್ಕ ಮಹನೀಯರು ಸಮಾಧಿಯಲ್ಲಿ ಮಾತ್ರ ಪಡೆಯುವ ಸ್ಥಿತಿಯಲ್ಲಿ ತಾವು ಸಹಜವಾಗಿ ಇರುವಿರಿ. ಅದರಿಂದ, ಬೆಂಕಿಯನ್ನು ನಿನ್ನ ಬಿಸಿಯನ್ನು ಕಡಿಮೆಮಾಡಿಕೋ ಎಂದಂತೆ, ಹೂವನ್ನು ನಿನ್ನ ಪರಿಮಳವನ್ನು ಬಿಡು ಎಂದಂತೆ, ತಮ್ಮ ಸಹಜಧರ್ಮವನ್ನು ಅಷ್ಟುಕಾಲ ಒತ್ತಟ್ಟಿಗಿಡಬೇಕು ಎಂದು ಕೇಳಲು ಬಂದಿದ್ದೇನೆ. ತಾವು ನನ್ನ

ಪ್ರಾರ್ಥನೆಯನ್ನು ಮನ್ನಿಸಿ ಅನುಗ್ರಹಿಸಬೇಕು." ವಸಿಷ್ಠರು ನಕ್ಕು "ಆಯಿತು, ಹಾಗಾದರೆ ಎಷ್ಟು ಕಾಲ ನಿನ್ನ ಅಧೀನದಲ್ಲಿರಬೇಕು ?" ಎಂದು ಕೇಳಿದರು.

"ತಮ್ಮ ಬಳಿಗೆ ಬಂದಾಗ ಲೆಕ್ಕ ಹಾಕಿಕೊಂಡು ಬಂದಿದ್ದೆ, ಒಂದು ನೂರು ವರ್ಷಕಾಲ, ಒಂದು ಶತಮಾನ, ಎಂದು ಕೇಳಬೇಕೆಂದಿದ್ದೆ. ಈಗ ತಮ್ಮೆದುರು ನಿಂತು ಮಾತನಾಡುತ್ತ, ನನ್ನ ಸ್ವರೂಪವು ಬದಲಾಗುತ್ತಿದೆ. ಈಗ ನನ್ನ ಬಾಯಿ ನನ್ನ ಮಾತು ಕೇಳುವುದಿಲ್ಲ. ನನ್ನ ಇಂದ್ರಿಯಗಳು, ಮನಸ್ಸು, ಬುದ್ಧಿಯೆಲ್ಲವೂ ವಿವಶವಾಗುತ್ತಿವೆ. ಈಗ ಮನಸ್ಸು ಒಂದು ನೂರು ವರ್ಷ ವಲ್ಲ: ಒಂದು ನೂರು ದಿನ ಎನ್ನುತ್ತಿದೆ. ಇನ್ನೂ ಅಷ್ಟು ವಿವಶವಾಗಿ ನೂರು ಕ್ಷಣ ಎನ್ನುವುದರೊಳಗಾಗಿ ತಾವು ವರವನ್ನು ಕೊಡಿ."

"ಆಗಬಹುದು. ಆದರಿದು ಯಾವ ರೂಪವಾಗಿ ಬರುವುದು. ಸ್ವೇಚ್ಛಾ ಪ್ರಾರಬ್ಧವಾಗಿಯೋ ? ಪರೇಚ್ಛಾ ಪ್ರಾರಬ್ಧವಾಗಿಯೊ ?"

"ಎರಡೂ ಅಲ್ಲ, ದೇವರು. ಇದು ಕಾಲ ಪ್ರಾರಬ್ಧ. ಹಾದಿಯಲ್ಲಿ ಹೋಗುತ್ತಿರುವಾಗ ಮಳೆಯು ಬಂದರೆ ನೆನೆಯುವಂತೆ ತಾವು ಈ ಯುಗದಲ್ಲಿ ಇರುವುದೇ ಈ ಪ್ರಾರಬ್ಧವು ಬರುವುದಕ್ಕೆ ಕಾರಣ. ಈಗ ಈ ಶೋಕ ಮೋಹ ಗಳನ್ನು ಅನುಭವಿಸಲು ತಾವು ಒಪ್ಪಿಕೊಂಡಿರಾಗಿ ಇದಕ್ಕೊಂದು ಕಾರಣವು ಏರ್ಪಡುವುದು. ಕಾಕತಾಳೀಯವಾಗಿ ಇನ್ನೆಲ್ಲವೂ ಸಂಭವಿಸುವುದು. ಸಂಧಿ ಕಾಲದ ಲಕ್ಷಣವೇ ಹೀಗಲ್ಲವೆ ? ದೇವರು, ತಮ್ಮ ಸನ್ನಿಧಾನದಲ್ಲಿ ನಾನು ಬಹುಕಾಲ ಇರಲಾರೆ. ಇದ್ದರೆ ನನ್ನ ಪ್ರಕೃತಿಯು ಕೆಡುವುದು. ವಾದನ ಕ್ಕೆಂದು ತೆಗೆದುಕೊಂಡ ಕೊಳಲು ಚಿಗುರಿದರೆ ಅದು ವೇಣುವಾಗಿರುವುದೆಂತು ? ಅದರಂತೆ, ನಾನು ತಮ್ಮ ಸನ್ನಿಧಾನದಲ್ಲಿದ್ದು ಬೆಂಕಿಗೆ ಬಿದ್ದ ಕಡ್ಡಿಯಂತಾ ಗುವ ಮುನ್ನವೇ ಹೊರಟುಹೋಗಲು ಅಪ್ಪಣೆಯಾಗಬೇಕು. ತಮ್ಮ ಪ್ರಭಾವ ದಿಂದ ನನ್ನ ವ್ಯಕ್ತಿತ್ವವು ಅಳಿಸಿಹೋದರೆ, ನನ್ನನ್ನು ಸೃಷ್ಟಿಸಿರುವ ನಿಯತಿಯ ಉದ್ದೇಶವು ವಿಫಲವಾಗುವುದು. ಇಕೋ ತಮ್ಮ ಅಪ್ಪಣೆಯಾಗಲಿ, ನನ್ನ ಮೇಲೆ ಬಿದ್ದಿರುವ ತಮ್ಮ ಪ್ರಭಾವದ ಮಹಿಮೆಯನ್ನು ಇಲ್ಲಿಯೇ ಕೊಡವಿ ಕೊಂಡು ಹೋಗುವೆನು."

ಕಲಿಯು ಎದ್ದು ತಾನು ಹೊದ್ದಿದ್ದ ಕಂಬಳಿಯನ್ನು ಒದರಿದನು. ಧೂಳು ಹಾರಿಹೋಗುವಂತೆ ಪ್ರಕಾಶದ ಕಿಡಿಗಳು ಹಾರಿದುವು. ವಸಿಷ್ಠರಿಗೆ ಮತ್ತೆ

ನಮಸ್ಕಾರಮಾಡಿ, "ನನಗೆ ಪರಮೋಪಕಾರವಾಯಿತು" ಎಂದು ಹೇಳಿ ಹೊರಟುಹೋದನು.

ವಸಿಷ್ಠರು ಆ ತೃಣವನ್ನು ಅತ್ತ ಎಸೆದರು. ಅದು ಧಗ್ಗನೆ ಹೊತ್ತಿಕೊಂಡು ಉರಿದುಹೋಯಿತು.

---

## ಹನ್ನೆರಡನೆಯ ತರಂಗ

ವಸಿಷ್ಠರ ಆಶ್ರಮದ ಮಗ್ಗುಲಲ್ಲಿ ಬಿದ್ದಿದ್ದ ಕೌಶಿಕನನ್ನು ವಾಮದೇವನು ತನ್ನ ಆಶ್ರಮಕ್ಕೆ ಸಾಗಿಸಿಕೊಂಡು ಬಂದನು. ಅಲ್ಲಿ ಆತನ ಉಪಚಾರದಿಂದ ಕೌಶಿಕನಿಗೆ ದೇಹದ ದಣಿವಾರಲು ಎರಡು ಮೂರು ದಿನ ಹಿಡಿಯಿತು. ಈಗ ಕೌಶಿಕನು ಪೂರ್ವವಂತಾಗಿದ್ದಾನೆ ಎನ್ನಬಹುದು. ಆದರೆ ಒಂದು ಬದಲಾವಣೆಯಾಗಿ ಹೋಗಿದೆ. ಹಿಂದೆ ವಸಿಷ್ಠರ ಹೆಸರು ಹೇಳಿದರೆ, ಅವನಿಗೆ ರೇಗುವುದು, ಮೈಯೆಲ್ಲಾ ಉರಿಯುವುದು, ಮೈಯಲ್ಲಿರುವ ತೊಟ್ಟುತೊಟ್ಟು ರಕ್ತದ ಕಣಕಣವೂ ಕಾದು ಕುದಿಯುವುದು. ಈಗ ಹಾಗಿಲ್ಲ. ವಸಿಷ್ಠನ ಕಥೆಯನ್ನು ಕೇಳಬೇಕು. ಅವರ ಮಾತೇ ಮಾತು. ಅವರ ದೊಡ್ಡತನದ ಗುರುತುಹಿಡಿದು ಆ ಗುಟ್ಟನ್ನು ಸಾಧಿಸಬೇಕು ಎಂಬ ಆಸೆಯು ತಾನೇ ತಾನಾಗಿದೆ. ಈ ಬದಲಾವಣೆ ಏಕೆ ಹೇಗೆ ಆಯಿತೆಂಬುದು ಅವನಿಗೆ ತಿಳಿಯದು.

ಸಂಜೆಯ ಕಡೆಗೆ ಹೊತ್ತು ವಾಲಿದೆ. ಹಿಮಾಲಯದಲ್ಲಿ ಬೀಸುವ ಚಳಿಗಾಳಿಗೂ ಇಳಿಹೊತ್ತಿನ ಬಿಸಿಲಿಗೂ ಏನೊ ತೆಕ್ಕೆಹಾಕಿದಂತಿದೆ. ವಾಮದೇವನೂ ಕೌಶಿಕನೂ ಆ ಹಾಸುಬಂಡೆಯ ಮೇಲೆ ಕುಳಿತು ಮಾತನಾಡುತ್ತಿದ್ದಾರೆ. ಕೌಶಿಕನು "ವಾಮದೇವಾ, ಮೂರು ದಿನದಿಂದಲೂ ನಿನ್ನನ್ನು ಒಂದು ಮಾತು ಕೇಳಬೇಕೆಂದು ಆಸೆ. ನಮ್ಮ ಆಶ್ರಮದಿಂದ ವಸಿಷ್ಠಾಶ್ರಮವು ಎರಡು ದಿನದ ಹಾದಿ. ನೀನು ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಹೇಗೆ ಬಂದೆ? ನೀನು ಬರದಿದ್ದರೆ ನನ್ನ ಗತಿಯೇನಾಗುತ್ತಿತ್ತು? ಈಗ ಹೀಗೆ ವಸಿಷ್ಠರ ಮೇಲಿನ ಕ್ರೋಧವು ಹೋಗಿ ಇನ್ನೇನೋ ಭಾವ ಬಂದಿರುವುದೇಕೆ? ಇದೆಲ್ಲವನ್ನೂ ದಯವಿಟ್ಟು ಹೇಳು" ಎಂದನು.

ವಾಮದೇವನು ನಕ್ಕನು : "ಇದಿಷ್ಟೂ ನೀನೇ ತಿಳಿದುಕೊಳ್ಳಲು ಸಾಧ್ಯ. ಆದರೂ ನೀನು ಇದರ ರಹಸ್ಯವನ್ನು ಏಕೆ ಭೇದಿಸಿಲ್ಲವೋ ಕಾಣೆ. ಆಗಲಿ. ಈ ದಿನ ನನಗೂ ಮಾತನಾಡುವ ಚಪಲ ಬಂದಿದೆ. ಏನಾಗಬೇಕು ಹೇಳು.... ಏನು ಹೇಳು ಎಂದರೆ ಅದನ್ನು ಹೇಳುತ್ತೇನೆ. ಕೇಳುವುದು ನಿನ್ನ ಭಾರ. ಹೇಳುವುದು ನನ್ನ ಭಾರ" ಎಂದನು.

"ಹಾಗಾದರೆ ಹೇಳು. ಆ ಆಪತ್ಕಾಲಕ್ಕೆ ಸರಿಯಾಗಿ ನೀನು ಹೇಗೆ ಬಂದೆ? ನನಗೆ ಆಪತ್ಕಾಲವೆಂದು ನಿನಗೆ ಹೇಗೆ ಗೊತ್ತಾಯಿತು?"

"ಮನಸ್ಸೆನ್ನುವುದು ಒಂದು ಬೆಳಕಿನ ಕಂಭ. ಈಗ ವ್ಯವಹಾರದಲ್ಲಿರುವಾಗ ಅದರ ಒಂದು ಕೊನೆಯನ್ನು ಮಾತ್ರ ನಾವು ಕಾಣುತ್ತೇವೆ. ಅದೂ ಇಂದ್ರಿಯಗಳ ಸಂಬಂಧದಿಂದ ಒಡೆದು ಐದು ಪಾಲಾಗಿ ಹರಡಿಹೋಗಿದೆ. ಹಾಗೆ ಚದುರಿರುವ ಮನಸ್ಸನ್ನು ಒಟ್ಟುಗೂಡಿಸುವ ಉಪಾಯವೊಂದುಂಟು. ಅದರ ಹೆಸರು ಸಂಯಮ. ಅದನ್ನು ಕಲಿತವನು ಸುಲಭವಾಗಿ ದೇಶಕಾಲಗಳನ್ನು ಮೀರಬಲ್ಲನು. ಎಲ್ಲಿರುವುದನ್ನು ಬೇಕಾದರೂ ನೋಡಬಲ್ಲನು: ಭೂತ ಭವಿಷ್ಯತ್ತುಗಳಲ್ಲಿ ಇದ್ದ ಇರುವ ಏನನ್ನಾದರೂ ತಿಳಿಯಬಲ್ಲನು. ಈಗ ಮನಸ್ಸು ಇಂದ್ರಿಯಗಳ ಮೂಲಕ ವ್ಯಾಪಾರ ಮಾಡುವುದರಿಂದ ವೇಷಧಾರಿಯಾದ ರಾಜನಂತೆ ಶಕ್ತಿಹೀನವಾಗಿರುವುದು. ಇಂದ್ರಿಯಗಳನ್ನು ಬಿಟ್ಟು ವ್ಯಾಪಾರಮಾಡುವುದನ್ನು ಕಲಿತುಕೊಂಡರೆ, ಅದು ಸರ್ವಶಕ್ತಿ ಸಂಪನ್ನವಾಗುವುದು. ಹಾಗೆ ಅಭ್ಯಾಸಮಾಡಿ ಈ ವಿದ್ಯೆಯನ್ನು ಕಲಿತವನಿಗೆ ಎಲ್ಲಿ ಯಾವಾಗ ಏನು ನಡೆಯುವುದು ಎಂಬುದನ್ನು ಅರಿಯಲು ಕಷ್ಟವಾಗುವುದಿಲ್ಲ."

"ಆಯಿತು. ಹಾಗಿದ್ದರೆ ನೀನು ಆ ಹೊತ್ತಿಗೆ ಅಲ್ಲಿಗೆ ಬರಲು ಮೊದಲೇ ಹೊರಟಿದ್ದೆಯೇನು?"

"ಇಲ್ಲ, ಅದನ್ನೂ ಹೇಳುವೆನು ಕೇಳು. ಈ ದೇಹವು ನೀರಿನಲ್ಲಿ ಬಿದ್ದರೆ ಮುಳುಗುವುದು. ಆದರೆ ಈಜು ಕಲಿತರೆ ನೀರಿನಲ್ಲಿ ಮುಳುಗದೆ ತೇಲಬಹುದು. ಹಾಗೆಯೇ, ಈ ದೇಹದಲ್ಲಿ ಇನ್ನೊಂದು ತತ್ವವಿದೆ. ಈ ದೇಹವು ಪಂಚಭೂತಗಳಿಂದ ಆದುದು. ಇಲ್ಲಿರುವ ಭೂತಸಂಘಾತವನ್ನು ಈಗ ನಾವು ಪ್ರತ್ಯೇಕ

ವೆಂದುಕೊಂಡಿದ್ದೇವೆ. ಅದರಿಂದ ಈ ಭೂತಗಳು ನಮಗೆ ಮುಂದೆ ಹೋಗು ವುದಕ್ಕೆ ಅಡ್ಡಿಯಾಗುತ್ತವೆ. ಹಾಗಿಲ್ಲದೆ ಸುತ್ತಲೂ ಇರುವ ಭೂತಗಳಿಗೂ ನಮಗೂ ಏಕರಸವಾದರೆ, ಇಲ್ಲಿ ಈಗ ಸಾಲ ಕೊಟ್ಟು ಇನ್ನೊಂದು ಕಡೆ ಸಾಲವನ್ನು ಹಿಂದಕ್ಕೆ ತೆಗೆದುಕೊಳ್ಳುವಂತೆ, ಇಲ್ಲಿ ನಿನ್ನ ದೇಹವಾಗಿರುವಷ್ಟು ಭೂತಗಳ ಅಂಶವನ್ನು ಇಲ್ಲಿ ಅವಕ್ಕೆ ಕೊಟ್ಟು ಇನ್ನೊಂದೆಡೆ, ಬೇಕೆಂದಾಗ, ಬೇಕೆಂದೆಡೆ, ಅವುಗಳಿಂದ ತೆಗೆದುಕೊಂಡರೂ ಆಯಿತು. ಅಥವಾ ಇನ್ನೂ ಸುಲಭವಾಗಿ ಬೇಕೆಂದರೆ, ನೀರಿನಲ್ಲಿ ಈಜಿದಂತೆ, ಗಾಳಿಯಲ್ಲಿಯೂ ತೇಲಿ ಕೊಂಡು ಹೋಗುವುದನ್ನು ಕಲಿತರಾಯಿತು."

" ಹಾಗಾದರೆ ನಾನೂ ಈ ಕಾರ್ಯವನ್ನು ಮಾಡಬಲ್ಲೆನೆ ? "

" ಹುಚ್ಚ. ನೀನು ಮಾಡಲಿಲ್ಲವೆ ? ನಿನ್ನ ರುದ್ರಾಸ್ತ್ರವು ವಿಫಲವಾಗುವು ದೆಂದು ತಿಳಿದ ಮೇಲೆ, ನೀನು ಮತ್ತೊಂದು ಅಸ್ತ್ರವನ್ನು ಸೃಷ್ಟಿ ಮಾಡಲಿಲ್ಲವೆ ? ಹಾಗೆಯೇ ಇನ್ನೋ ಎಷ್ಟೋ ಅಸ್ತ್ರಗಳನ್ನು ಸೃಷ್ಟಿ ಮಾಡಬಹುದಲ್ಲವೆ ? ಆಗ ಹೇಗೆ ಮಾಡಿದೆ ? ನಿನಗೆ ಗೊತ್ತಿರುವ ದೇವತೆಗಳ ಅಂಶಾಂಶಗಳನ್ನು ಅಷ್ಟಷ್ಟು ಕಲೆಹಾಕಿ ಅದಕ್ಕೊಂದು ಪ್ರಾಣವನ್ನು ಇಟ್ಟು ಕಳುಹಿಸಿದೆ. ಹಾಗೆಯೇ ಮಾಡಿ ದರೆ ಆಯಿತು. ಆಲದ ಮರದಿಂದ ಒಂದು ಕೊಂಬೆಯನ್ನು ಕಡಿದು ಪ್ರತ್ಯೇಕ ವಾಗಿ ನೆಟ್ಟರೆ ಅದೊಂದು ಮರವಾಗುವಂತೆ, ನಿನ್ನ ಪ್ರಾಣದಿಂದ ಅಷ್ಟು ಪ್ರಾಣ ವನ್ನು ತೆಗೆದಿಟ್ಟರೆ ಏನು ಬೇಕಾದರೂ ಮಾಡಬಹುದು. ಒಂದುವೇಳೆ ನಿನಗೆ ಇಲ್ಲವಾದರೆ ಇನ್ನೊಬ್ಬರಿಂದ ತಂದರಾಯಿತು."

" ಹಾಗಾದರೆ ನೀನು ನನಗೆ ಕೊಡಬಲ್ಲೆಯಾ ? "

" ಏಕಾಗಬಾರದು ? "

" ಕೊಡು ಮತ್ತೆ."

" ಈಗ ನನಗೆ ಮಾತಾಡುವ ಹುಚ್ಚಿದೆ. ಇದನ್ನು ಕಾರ್ಯದ ಕಡೆಗೆ ತಿರುಗಿಸಿದರೆ ಆಗ ಮಾತನಾಡುವುದಕ್ಕಾಗುವುದಿಲ್ಲ. ಅದರಿಂದ ಈಗ ನೀನೇನು ಕೇಳಬೇಕೆಂದಿರುವೆಯೋ ಅದನ್ನೆಲ್ಲ ಕೇಳು. ಹೇಳಿ ಬಿಡುವೆನು. ಅನಂತರ ಈ ರಾತ್ರಿಯೋ ನಾಳೆಯೋ ನೀನೇನೇನು ನೋಡಬೇಕೆಂದರೆ ಅದನ್ನೆಲ್ಲ ತೋರಿಸುವೆನು. ಅಥವಾ ನೀನೇ ಮಾಡಬೇಕೆಂದರೆ ಮಾಡಿಕೋ ನನ್ನ ಸಿದ್ಧಿ ಯಲ್ಲಿ ಅಷ್ಟು ಕೊಡುವೆನು."

"ಹಾಗಾದರೆ ಹೇಳು, ಈ ಸರ್ವಸಿದ್ಧಿಗಳೂ ನನಗೆ ಬೇಕು. ನಾನೇನು ಮಾಡಬೇಕು?"

"ಸರ್ವಸಿದ್ಧಿಗಳೂ ಬೇಕಾದರೆ ನೀನೊಬ್ಬ ವಸಿಷ್ಠನಾಗಬೇಕು"

"ಎಂದರೆ ವಸಿಷ್ಠರಿಗೆ ಅಸ್ತ್ರಗಳೂ ಗೊತ್ತೇ?"

"ಅಯ್ಯೋ ಹುಚ್ಚ, ನೀನು ಕೇಳುವುದು ದೀಕ್ಷಿತನಾದ ರಾಜನಿಗೆ ದಳವಾಯಿಯ ಮೇಲೂ ಅಧಿಕಾರವುಂಟೆ ಎಂದಂತಾಯಿತು. ನೀನು ರಾಜನಾಗಿದ್ದೆಯಲ್ಲ, ಆಗ ರಾಜ್ಯದಲ್ಲಿ ನಡೆಯುವ ಕಾರ್ಯಗಳೆಲ್ಲ ಯಾರ ಅಧಿಕಾರಕ್ಕೆ ಒಳಪಟ್ಟು ನಡೆಯುತ್ತಿತ್ತು?"

"ಎಲ್ಲವೂ ರಾಜನದೇ ಅಧಿಕಾರ."

"ಹಾಗೆಯೇ ಈ ಲೋಕದಲ್ಲಿರುವ ಸಿದ್ಧಿಗಳೆಲ್ಲ ಒಂದು ಬ್ರಹ್ಮಜ್ಞಾನದಲ್ಲಿ ಅಡಗುವುವು. ಒಂದು ದೊಡ್ಡ ನಾಣ್ಯವನ್ನು ಇಟ್ಟುಕೊಂಡಿರುವವನು ಚಿಕ್ಕಚಿಕ್ಕ ನಾಣ್ಯಗಳಿಂದ ಆಗುವ ಪ್ರಯೋಜನವನ್ನೆಲ್ಲ ಹೇಗೆ ಪಡೆಯುವನೋ ಹಾಗೆ, ಈ ಕ್ಷುದ್ರ ಸಿದ್ಧಿಗಳಿಂದ ಆಗುವುದೆಲ್ಲವೂ ಆಗಿ, ಇನ್ನೂ ಅಷ್ಟು ಹೆಚು ಫಲವು ಅದರಿಂದ ಆಗುವುದು. ಹನ್ನೆರಡು ಕಾಸಿನಿಂದ ಒಂದಾಣೆಯೆಂದರೆ, ನಾಲ್ಕಾಣೆಯಲ್ಲಿ ಈ ಹನ್ನೆರಡು ಕಾಸುಗಳು ನಾಲ್ಕಿಲ್ಲವೆ? ಅದರಂತೆ, ಆ ಬ್ರಹ್ಮಜ್ಞಾನವೆಂಬುದು. ಅದು ಅವರಿಗುಂಟು. ಇನ್ನು ನೀನು ಯಾವ ಯಾವ ಸಿದ್ಧಿಗಳನ್ನು ಹೇಳುವೆಯೋ ಹೇಳು. ಅದೆಲ್ಲವೂ ಅಲ್ಲುಂಟೋ ಇಲ್ಲವೋ ನೋಡೋಣ."

"ಈ ಸಿದ್ಧಿಗಳು ಹೇಗೆ ಲಭಿಸುವುವು?"

"ಈ ಸಿದ್ಧಿಗಳು ಹೊಸದಾಗಿ ಸಂಪಾದಿಸಿದರೆ ಸಿದ್ಧಿಗಳು; ಹುಟ್ಟುವಾಗಲೇ ಬಂದರೆ ಪ್ರಭಾವಗಳು. ಮೀನು ಹುಟ್ಟುವಾಗಲೆ ಈಜು ಕಲಿತಿರುವದು. ಮಣಿಯು ಹುಟ್ಟುವಾಗಲೇ ತೇಜಃಪುಂಜವಾಗಿರುವುದು. ಇವೆಲ್ಲ ಪ್ರಭಾವಗಳು. ಮನುಷ್ಯನು ಈಜು ಕಲಿಯುವನು. ಅದು ಸಿದ್ಧಿ. ನೀನು ಹುಟ್ಟುವಾಗಲೇ ರಾಜನಾಗಿ ಹುಟ್ಟಿದೆ. ಅದು ಪ್ರಭಾವ. ರುದ್ರನನ್ನು ಆರಾಧಿಸಿ ಅಸ್ತ್ರಗಳನ್ನು ಪಡೆದೆ. ಅದು ಸಿದ್ಧಿ. ಈ ಪ್ರವಾವವು ಮಣಿ ಮಂತ್ರ ಔಷಧಗಳ ಬಲದಿಂದಲೂ ದೊರೆಯುವುದು ಆಗ ಅದು ಸಿದ್ಧಿಯಾಗುವುದು. ಅದರಿಂದ ಪ್ರಭಾವಶಾಲಿಗಳೂ ಸಿದ್ಧಪುರುಷರೂ ಲೋಕದಲ್ಲಿ ಏನು ಬೇಕೆಂದರೆ ಅದು

ಮಾಡಬಲ್ಲರು. ವಸಿಷ್ಠರು ಪ್ರಭಾವ ಸಿದ್ಧಿ ಎರಡನ್ನೂ ಸಮಗ್ರವಾಗಿ ಪಡೆದಿರುವರು."

"ಅದರಿಂದಲೇ ಅವರ ಮೇಲೆ ನನ್ನ ಅಸ್ತ್ರವಿದ್ಯೆ ಪ್ರಭಾವವು ನಡೆಯಲಿಲ್ಲ ?"

"ಕೌಶಿಕ, ಬಲ್ಲೆಯಾ ? ನೀನು ಅಲ್ಲಿಗೆ ಹೋದಾಗ ವಸಿಷ್ಠರು ಲೋಕಾಂತರಕ್ಕೆ ಹೋಗಿದ್ದರು. ಆಶ್ರಮದಲ್ಲಿರಲಿಲ್ಲ. ಆಗ ಅರುಂಧತೀ ದೇವಿಯವರು ಆಶ್ರಮದ ಯಜಮಾನಿ. ನಿನ್ನ ಅಸ್ತ್ರಗಳನ್ನೆಲ್ಲ ಪ್ರತಿಭಟಿಸಿದುದು ವಸಿಷ್ಠರ ಬ್ರಹ್ಮದಂಡ. ನಂದಿನಿಗೆ ನೀನು ಹೋಗುವುದು ಗೊತ್ತು. ಆಕೆಯು ಅರುಂಧತಿಯವರಿಗೆ ಆಶ್ರಮದ ರಕ್ಷಣೆಯ ಭಾರವನ್ನು ಯಜ್ಞೇಶ್ವರನ ಮೇಲೆ ಹೊರೆಸುವಂತೆ ಹೇಳಿಕೊಟ್ಟಳು. ಆತನು ಆ ಭಾರವನ್ನು ದಂಡದಮೇಲೆ ಹೊರೆಸಿದನು. ನೀನು ಸಾಕ್ಷಾತ್ತಾಗಿ ವಸಿಷ್ಠರನ್ನೂ ಪ್ರತಿಭಟಿಸಲಿಲ್ಲ : ಅರುಂಧತೀದೇವಿಯನ್ನೂ ಪ್ರತಿಭಟಿಸಲಿಲ್ಲ : ಅವರ ಪ್ರಭಾವದ ಒಂದಂಶವನ್ನು ಮಾತ್ರ ಪ್ರತಿಭಟಿಸಿದೆ. ಅದನ್ನು ಗೆಲ್ಲಲು ನಿನ್ನಿಂದ ಆಗಲಿಲ್ಲ."

"ಅದೇಕೆ ಆಗಲಿಲ್ಲ ?"

"ನಾನು ಆಗಲೆ ಹೇಳಿದೆ ಕೌಶಿಕ, ಅವರ ಮೇಲೆ ಹಗೆಯು ತರವಲ್ಲವೆಂದು. ಹಗೆಗೆ ಹಗೆಮಾಡಿದವರನ್ನು ಗೆಲ್ಲಬಹುದು. ನಿನ್ನನ್ನು ಹಗೆಯೆಂದೇ ಒಪ್ಪಿಕೊಳ್ಳದವರ ಮೇಲೆ ನೀನು ಏನು ಮಾಡಬಲ್ಲೆ. ಕಮಲದ ಎಲೆಯನ್ನು ನೀರಿನಲ್ಲಿಯೇ ಮುಳುಗಿಸಿದ್ದರೆ ತಾನೇ ಅದು ಒದ್ದೆಯಾಗುವುದೇನು ?"

"ಹಾಗಾದರೆ ಅಂಥವರಮೇಲೆ ಹಗೆಮಾಡಿದರೆ ಏನಾಗುವುದು ?"

"ಆ ಹಗೆಯು ಹಿಂತಿರುಗಿ ಬಂದು ನಿನ್ನನ್ನು ಹೊಡೆಯುವುದು. ಪ್ರಬಲನೊಡನೆ ಸೆಣಸಿದ ದುರ್ಬಲನು ಏಟುತಿಂದು ಮೆತ್ತಗಾಗುವನು. ಅದರಂತೆ ಆಗುವುದು."

"ನಿಜ. ಹಾಗೆಯೇ ಆಗಿದೆ. ಆಯಿತು. ಈಗೊಂದು ಪ್ರಬಲವಾದ ಬದಲಾವಣೆಯಾಗಿದೆಯಲ್ಲ. ಅದೇಕೆ ?"

"ಏನು ಬದಲಾವಣೆ ?"

"ಆಗಲೇ ಹೇಳಿದೆನಲ್ಲ. ವಸಿಷ್ಠರ ಮೇಲೆ ವೈರವಿಲ್ಲ. ಆ ಸುಡುತ್ತಿದ್ದ ವೈರವಡಗಿದೆ. ಆಗಲೂ ವಸಿಷ್ಠರ ಮೂರ್ತಿಯು ಎದುರಿಗಿರುತ್ತಿತ್ತು. ಈಗಲೂ

ಇದೆ. ಆಗಿನ ಮೂರ್ತಿಯು ಕ್ರೂರವಾಗಿರುತ್ತಿತ್ತು. ಈಗ ಶಾಂತವಾಗಿದೆ. ಅಂತೂ ಎದುರಿಗಿದೆ."

"ಹುಚ್ಚ. ಎದುರಿಗಿರುವುದು ನಿನ್ನ ಮನಸ್ಸು. ವಸಿಷ್ಠರು ಎದುರಿಗೆ ಬಂದಿಲ್ಲ. ನಿನ್ನ ಮನಸ್ಸು ಅವರನ್ನು ಕುರಿತು ಹಗಲಿರುಳೂ ಚಿಂತಿಸುತ್ತ ಚಿಂತಿಸುತ್ತ ಅವರಂತಾಗಿ ನಿನ್ನ ಎದುರಿಗೆ ಬಂದು ನಿಂತಿದೆ, ಅಷ್ಟೆ. ಆಗ ನಿನ್ನ ಮನಸ್ಸಿನಲ್ಲಿ ವೈರವಿತ್ತು: ಅದರಿಂದ ಆ ಮೂರ್ತಿಯು ರೌದ್ರವಾಗಿತ್ತು: ಈಗ ನಿನ್ನ ಮನಸ್ಸಿನಲ್ಲಿ ವೈರವಡಗಿದೆ. ಆದರಿಂದ ಅದು ಶಾಂತವಾಗಿದೆ. ಅಷ್ಟೆ."

"ಆಯಿತು ಉರಿದುರಿದು ಉರಿಯುತ್ತಿದ್ದ ಆ ವೈರವು ಈಗ ಏನಾಯಿತು? ವಾಮದೇವ."

"ನೀನು ನಂಬುವೆಯೋ ಇಲ್ಲವೋ! ನಾನಂತು ಹೇಳುವೆನು. ಆ ಮಹಾಬ್ರಾಹ್ಮಣಿಯ ಅನುಗ್ರಹದಿಂದ ಅದು ನಿನ್ನನ್ನು ಬಿಟ್ಟುಹೋಯಿತು. ಬಟ್ಟೆಗೆ ಹತ್ತಿದ್ದ ಕೊಳೆಯನ್ನು ಒಗೆದು ತೆಗೆದಂತಾಯಿತು. ಅಷ್ಟೇನು? ಆಕೆಯು ಬ್ರಹ್ಮದಂಡವನ್ನು ರಕ್ಷಣೆಗೆ ವಿನಿಯೋಗಿಸುವಾಗ ಸಾಧ್ಯವಾದರೆ ಕೌಶಿಕನ ವೈರವು ಕಳೆಯಲಿ ಎಂದರು. ಅದರಿಂದ ನೀನು ಮೂರ್ಛೆ ಬಿದ್ದಿದ್ದಾಗ ಆ ಬ್ರಹ್ಮದಂಡವು ಬಂದು ನಿನ್ನಲ್ಲಿದ್ದ ವೈರವನ್ನು ಆಕರ್ಷಿಸಿ ಹೊರಕ್ಕೆ ಎಳೆದುಕೊಂಡು ಸುಟ್ಟುರುಹಿತು. ಹೊದ್ದಿದ್ದ ಬಟ್ಟೆಯನ್ನು ಕಿತ್ತೆಸೆದಂತಾಗಿ ನೀನು ನಿರ್ವೈರನಾದೆ."

ಕೌಶಿಕನಿಗೆ ಕಣ್ಣಲ್ಲಿ ನೀರು ಬಂತು. ತನ್ನಿಂದ ಆಗಬೇಕಾಗಿದ್ದ, ತಾನು ಮಾಡಬೇಕೆಂದಿದ್ದ ಹಾನಿಯ ಪ್ರಮಾಣವನ್ನು ಭಾವಿಸಿಕೊಂಡನು. ಅದಕ್ಕೆ ಪ್ರತಿಯಾಗಿ ಆಶ್ರಮವಾಸಿಗಳಿಂದ ತನಗಾದ ಉಪಕಾರವನ್ನು ನೆನೆದನು. ತನ್ನ ಅಪರಾಧವು ಒಂದು ಪರ್ವತದಷ್ಟಾದರೆ ಅವರಿಂದ ತನಗಾಗಿರುವ ಉಪಕಾರವು ಒಂದು ಲೋಕದಷ್ಟು ಎಂಬುದು ಮನವರಿಕೆಯಾಯಿತು. ಕಣ್ಣಲ್ಲಿ ನೀರು ಹರಿಯಿತು. ನೀರವವಾಗಿ ಕೌಶಿಕನು ಕಣ್ಣೀರು ಬಿಟ್ಟನು. ವಾಮದೇವನೂ ಅದನ್ನು ಕಾಣದವನಂತೆ ಸುಮ್ಮನೆ ಕುಳಿತಿದ್ದನು.

ವೀರಾಗ್ರೇಸರನಾದ ಕೌಶಿಕನು ಹಾಗೆ ನಿಷ್ಪೌರುಷನಂತೆ ಕಣ್ಣೀರು ಕರೆಯುವುದು ಆತನಿಗೆ ಸಮ್ಮತನಾಗಲಿಲ್ಲ. ಅದಕ್ಕಾಗಿ ಅವನ ಮನಸ್ಸನ್ನು ಬೇರೆ ಕಡೆಗೆ ಎಳೆಯಬೇಕೆಂದುಕೊಂಡು ಹೇಳಿದನು: "ಕೌಶಿಕ, ಈಗ ತಾನೇ

ನಿನ್ನ ವೈರವು ಅಳಿದಿರುವುದೆಂದುಕೊಂಡೆಯೇನು? ಇಲ್ಲ. ಇನ್ನೂ ಇದೆ. ಈಗ ಸೂಕ್ಷ್ಮವಾಗಿದೆ. ನೀನು ಕ್ಷತ್ರಿಯ, ಮರೆಯಬೇಡ. ನಿನ್ನ ಕ್ಷತ್ರಿಯತ್ವವು ಇರುವವರೆಗೂ ನಿನ್ನ ಕಾಮ ಕ್ರೋಧಗಳು ಅಡಗುವುದಿಲ್ಲ. ಒಂದು ವೇಳೆ ಈಗ ಬೀಜರೂಪವಾಗಿ ಸೂಕ್ಷ್ಮವಾಗಿ ಅಡಗಿ ಕುಳಿತಿದ್ದರೂ ಇನ್ನೊಮ್ಮೆ ಪ್ರಕಟವಾಗಿ ವಿಜೃಂಭಿಸಿ ನಿಲ್ಲುವುವು."

ಕೌಶಿಕನು "ಇಲ್ಲ. ವಾಮದೇವ, ಇನ್ನು ನಾನು ಈ ಜನ್ಮದಲ್ಲಿ ಆ ಆಶ್ರಮದ ಕಡೆಗೆ ದುರ್ಭಾವನೆಯಿಂದ ತಿರುಗುವುದಿಲ್ಲ. ನನಗೆ ನಂದಿನಿಯೂ ಬೇಡ, ಮತ್ತೇನೂ ಬೇಡ. ವಸಿಷ್ಠರ ಮನವು ನೋಯುವ ಕೆಲಸ ಯಾವುದನ್ನೂ ನಾನು ಮಾಡುವುದಿಲ್ಲ" ಎಂದನು.

"ಹಾಗಾದರೆ ಈಗ ವಸಿಷ್ಠರ ಆಶ್ರಮಕ್ಕೆ ಹೋಗಿ ಅವರ ಪಾದಕ್ಕೆ ಬಿದ್ದು ತಪ್ಪಾಯಿತು ಎನ್ನಲು ಸಿದ್ಧವಾಗಿರುವೆಯಾ?"

ವಾಮದೇವನ ಮಾತು ಕೌಶಿಕನಿಗೆ ತಟ್ಟನೆ ಅರ್ಥವಾಗಲಿಲ್ಲ. ಅಷ್ಟು ಹೊತ್ತು ಯೋಚಿಸಿ ನೋಡಿದನು: "ಇಲ್ಲ, ವಾಮದೇವ, ಇಲ್ಲ. ನಾನು ಅಲ್ಲಿಗೆ ಈಗ ಹೋಗುವುದೂ ಇಲ್ಲ. ಹೋಗುವೆನು. ಆದರೆ ಆಗ ನಾನು ಕೌಶಿಕನಾಗಿ ಹೋಗುವುದಿಲ್ಲ. ಮತ್ತೊಬ್ಬ ವಸಿಷ್ಠನಾಗಿ ಹೋಗುವೆನು" ಎಂದನು.

"ಅದರಿಂದಲೇ ವೈರವು ಹೋಗಲಿಲ್ಲ ಎಂದು ನಾನು ಹೇಳಿದುದು. ಆದರೆ, ಈಗ ಆ ವೈರವು ವಿನಾಶಕರವಾಗುವ ಬದಲು ಸರಿಯಾದ ಮಾರ್ಗವನ್ನು ಹಿಡಿದಿದೆ. ಅದನ್ನು ನೀನು ಸರಿಯಾಗಿ ಉಪಯೋಗಿಸಿಕೋ. ಹಾಗೆ ಸರಿಯಾಗಿ ಉಪಯೋಗಿಸಿದರೆ, ನೀನೂ ಒಬ್ಬ ಮಹಾಪುರುಷನಾಗುವೆ. ಆದರೆ ವಸಿಷ್ಠರಂತೆ ನೀನು ಮಹಾಬ್ರಾಹ್ಮಣನಾಗುವೆಯೋ ಇಲ್ಲವೋ ನಾನು ಅದನ್ನು ಹೇಳಲಾರೆ" ಎಂದನು.

ಕೌಶಿಕನು ಥಟ್ಟನೆ ತಿರುಗಿ "ಏನೆಂದೆ ನಾನು ಮಹಾಬ್ರಾಹ್ಮಣನಾಗುವುದಿಲ್ಲವೆ? ಬ್ರಾಹ್ಮಣರ ಬ್ರಾಹ್ಮಣನಾಗುವೆನು" ಎಂದನು.

ವಾಮದೇವನು ನಕ್ಕು "ಅದು ಅಸಾಧ್ಯವಲ್ಲ. ಆದರೆ ನಿನ್ನ ಕ್ಷತ್ರಿಯ ರಕ್ತದ ಕಣಕಣವೂ ಬ್ರಾಹ್ಮಣನಾದರೆ ಅದು ಸಾಧ್ಯ. ಹಾಗಾಗುವುದೇನು? ನಿನ್ನ ಮೈಯಲ್ಲಿರುವ ರಕ್ತವೆಲ್ಲ ಬ್ರಾಹ್ಮಣವಾಗಿ, ನಿನ್ನ ಬೀಜರಕ್ತವೂ

ಬ್ರಾಹ್ಮಣನಾದರೆ ಅದು ಸಾಧ್ಯ. ಅಷ್ಟು ಮಾಡಲು ನಿನ್ನಿಂದ ಆಗುವುದೇ ?" ಎಂದು ಬಲು ಅಪನಂಬಿಕೆಯಿಂದ, ಸಂಶಯದಿಂದ, ಸಾಧ್ಯವಿಲ್ಲವೆಂಬ ನಂಬಿಕೆಯಿಂದ ನುಡಿದು ನಕ್ಕನು.

---

## ಹದಿಮೂರನೆಯ ತರಂಗ

ವಾಮದೇವನ ಮಾತಿಗಿಂತಲೂ ಆ ಮಾತಿನ ಹಿಂದಿನ ಭಾವವು, ಅದನ್ನು ಆಡಿದ ಧ್ವನಿಯು, ವಿರಸವಾದ ಆತನ ನಗುವು ಕೌಶಿಕನನ್ನು ಬಹುವಾಗಿ ನೋಯಿಸಿದುವು. ಅಭಿಮಾನಿಯಾದ ಕೌಶಿಕನಿಗೆ ಇಂದು ಲೋಕದಲ್ಲಿ ಉಳಿದಿರುವುದೆಲ್ಲ ಒಂದೇ ಒಂದು. ಅದು ಅಭಿಮಾನ. ಆ ಅಭಿಮಾನದಿಂದ ಅವನ ಮನಸ್ಸು ಬೀಗಿ ರೇಗಿದರೆ ವಿಶ್ವವನ್ನೇ ತಿಂದು ತೇಗುವೆನು ಎನ್ನುತ್ತಿದೆ. ಅಂತಹ ಅಭಿಮಾನವನ್ನು ಸಮೂಲವಾಗಿ ಕಿತ್ತೊಗೆಯುವ ಆ ವಿರಸವಾದ ನಗು, ಆ ಅಪನಂಬಿಕೆಯ ಧ್ವನಿ, ಅಸಾಧ್ಯವೆಂದು ಸೂಚಿಸುವ ಭಾವ, ಎಲ್ಲವೂ ಕೌಶಿಕನಿಗೆ ಅಷ್ಟು ಇಷ್ಟು ಎಂದು ಹೇಳುವುದಕ್ಕಾಗದಷ್ಟು ಸಂಕಟವನ್ನು ಕೊಟ್ಟುವು. ಆದರೇನು ಮಾಡಬೇಕು ?

ಕೌಶಿಕನು ಅವಾಕ್ಕಾಗಿ, ತನ್ನನ್ನು ತಿನ್ನುತ್ತಿರುವ ಸಂಕಟದ ವಶನಾಗಿ ವಿಹ್ವಲನಾಗಿದ್ದನು. ಮನಸ್ಸು ಬುದ್ಧಿ ಎಲ್ಲವೂ ಆ ತೀವ್ರ ವೇದನೆಯಿಂದ ಒಂದು ಗಳಿಗೆ ಸಂಪೂರ್ಣವಾಗಿ ವಿವಶವಾಗಿದ್ದುವು. ಮಂತ್ರಮುಗ್ಧವಾದ ಮಹಾಸರ್ಪವು ಹೆಡೆಯನ್ನೂ ಬಿಚ್ಚಲಾರದೆ ಬಿದ್ದಿರುವಂತೆ ಆತನೂ ಸಂಪೂರ್ಣವಾಗಿ ಒಂದು ಗಳಿಗೆ ಮುಗ್ಧನಾಗಿದ್ದನು. ಕೊನೆಗೆ ಒಂದು ನಿಟ್ಟುಸಿರು ಹೊರಬಿತ್ತು. ಮತ್ತೆ ಪ್ರಾಣಶಕ್ತಿಯು ಅಂಗಾಂಗಗಳಲ್ಲೆಲ್ಲಾ ವ್ಯಾಪಿಸಿ ನಿಶ್ಚೇಷ್ಟನಾಗಿ, ಶಿಲಾಮೂರ್ತಿಯಂತೆ ಸ್ತಬ್ಧನಾಗಿದ್ದ ಆತನನ್ನು ವ್ಯಾಪಾರಸಂಪನ್ನನನ್ನು ಮಾಡಿತು.

ಕೌಶಿಕನು ಮುಚ್ಚಿದ್ದ ಕಣ್ಣುತೆರೆದು "ವಾಮದೇವಾ, ನೀನು ನನಗೆ ಈ ಲೋಕದಲ್ಲಿರುವ ಏಕಾಲಂಬನವು, ಏಕಮಾತ್ರಾಶ್ರಯವು. ನೀನೂ ಈ ಮಾತೆಂದರೆ ನನ್ನ ಗತಿಯೇನು ? ನೀನೇ ಹೇಳಿದೆ. ಏನು ಬೇಕಾದರೂ

ಸಾಧಿಸಬಹುದೆಂದು. ಈಗ ನೀನೇ ಅಸಾಧ್ಯವೆನ್ನುತ್ತಿರುವೆಯಲ್ಲ ಸರಿಯೆ ?" ಎಂದನು. ಆ ದನಿಯಲ್ಲಿ ನೋವು ತುಂಬಿತ್ತು, ಭರ್ತ್ಸನೆಯಿರಲಿಲ್ಲ; ದೈನ್ಯವಿತ್ತು: ಅಹಂಕಾರವಿರಲಿಲ್ಲ; ಕರುಣವಿತ್ತು: ನೋಯಿಸಿದೆಯಲ್ಲಾ ಎಂಬ ದುಃಖವೂ ಇಲ್ಲ: ನನಗೆ ಸಹಾಯಮಾಡು ಎಂಬ ಪ್ರಾರ್ಥನೆಯಿತ್ತು.

ವಾಮದೇವನು ಅದನ್ನು ಕೇಳಿ ಅಲ್ಲಿಯೇ ಕರಗಿಹೋದನು. ಆತನಿಗೆ ಒಂದು ಸಲ ಅಯ್ಯೋ ಪಾಪ ನೋಯಿಸಿದೆನೆಂಬ ಸಂಕಟ. ಇನ್ನೊಮ್ಮೆ ಈ ಕಬ್ಬಿಣದ ಗುಂಡೂ ಕರಗಿತಲ್ಲ ಎಂಬ ಸಂತೋಷ. ಕೊನೆಗೆ ನಕ್ಕು "**ಕೌಶಿಕ,** ನಾನಾಗಲೇ ಹೇಳಬೇಕಾದುದನ್ನೆಲ್ಲ ಹೇಳಿರುವೆನು. ಅದನ್ನು ನೀನೂ ಬಲ್ಲೆ. ತಪಸ್ಸು, ತಪಸ್ಸು, ತಪಸ್ಸು. ಇನ್ನು ಸಾವಿರ ಸಲ ನೀನು ಕೇಳಿದರೂ ನಾನು ಹೇಳುವುದು ಒಂದೇ ಒಂದು ಮಾತು. ನನಗೆ ಗೊತ್ತಿರುವುದು ಒಂದೇ ಒಂದು ಸಾಧನ. ಅದು ತಪಸ್ಸು. ನಾನು ಆ ಸಾಧನವನ್ನು ಬ್ರಹ್ಮಪ್ರಾಪ್ತಿಗೆ ಉಪಯೋಗಿಸುತ್ತಿರುವೆನು. ನೀನು ಅದನ್ನು ಯಾವುದು ಯಾವುದೋ ಸಿದ್ಧಿಗೋಸ್ಕರ ಉಪಯೋಗಿಸಬೇಕೆಂದಿರುವೆ. ನನಗೂ ನಿನಗೂ ಅಷ್ಟೇ ವ್ಯತ್ಯಾಸ. ಅಲ್ಲದೆ, ನೀನು ತಾನೇ ಕಾಣೆಯೋ ? ನೀನು ರುದ್ರನನ್ನು ಒಲಿಸಿಕೊಳ್ಳಲಿಲ್ಲವೆ ? ಆಗೇನು ಮಾಡಿದೆ ? ಅದೇ ತಪಸ್ಸು. ತಮ್ಮತಮ್ಮ ಇಷ್ಟ ಸಿದ್ಧಿಗೋಸ್ಕರ ಯಾರುಯಾರು ಯಾವಯಾವ ಕೆಲಸವನ್ನು ಮಾಡುವರೋ ಅದೆಲ್ಲಾ ತಪಸ್ಸೇ ! ಒಂದು ಹಿಡಿ ತುಂಬೆಯ ಸೊಪ್ಪಿಗಾಗಿ ಅಲೆಯುವುದರಿಂದ ಹಿಡಿದು ಇಂದ್ರಪದವಿಯ ಲಾಭದವರೆಗೆ ಹಂಬಲಿಸಿ ಪ್ರಯತ್ನಿಸುವವರೆಗೆ ಎಲ್ಲವೂ ತಪಸ್ಸೇ ! " ಎಂದನು.

ಕೌಶಿಕನು ಹೇಳಿದನು :—" ವಾಮದೇವ ! ನೀನು ರುದ್ರನನ್ನು ಒಲಿಸಿಕೊಂಡೆಯೆಂದಲ್ಲ ಎಂದು ನೀನು ಹೇಳಿದೆ. ನಿಜ. ಆದರೂ ರುದ್ರನು ಒಲಿದುದು ಬಹುಶಃ ವಾಮದೇವನು ಆ ಮಾರ್ಗವನ್ನು ಹೇಳಿಕೊಟ್ಟನೆಂದು ಎಂದಿರಬಹುದು. ಯಾರಾದರೂ ನನ್ನನ್ನು ತಪಸ್ಸು ಎಂದರೇನು ಎಂದು ಕೇಳಿದರೆ ನಾನೇನು ಹೇಳಬೇಕು ? ಹೇಳು. ಅದರಿಂದ ಮೊದಲು ನನಗೆ ಬಾಯಲ್ಲಿ ಹೇಳು ಅನಂತರ ಏನು ಮಾಡಬೇಕೋ ಹೇಳು. ಆಮೇಲೂ ಏನಾದರೂ ಸಂಶಯವಿದ್ದರೆ ಕೇಳುವೆನು "

"ಕೌಶಿಕ. ಒಂದೆ ನಿನಗೆ ಹೇಳಿದೆನಲ್ಲ ಮನಸ್ಸೆಂಬುದು ಒಂದು ಬೆಳಕಿನ ಕಂಬದ ಹಾಗೆ ಎಂದು. ಅದನ್ನು ಹಿಡಿದುಕೊ. ಬೆಳಕು ಹಂಚಿದಾಗ ಅದರ ಪ್ರಕಾಶವು ಅಷ್ಟು ತೀವ್ರವಾಗಿಲ್ಲ. ಹಾಗೆ ಹಂಚದೆ ಏಕಾಗ್ರವಾಯಿತು ಎನ್ನು, ಅದೆಷ್ಟು ತೀವ್ರವಾಗುವುದು. ಹಾಗೆಯೇ ಮನಸ್ಸೆಲ್ಲವೂ ಸ್ವಭಾವವಾಗಿ ಚಂಚಲವಾಗಿ ಹರಡುವ ಸ್ವಭಾವವುಳ್ಳದು. ನೀನು ಏನಾದರು ಹಿಡಿದುಕೊಳ್ಳಬೇಕು ಎಂದರೆ ಕೈ ಬೆರಳುಗಳನ್ನೆಲ್ಲ ಸೇರಿಸಿ ಹಿಡಿದುಕೊಳ್ಳುವಂತೆ, ಮನಸ್ಸನ್ನು ಹಿಡಿಯುವುದು ಎಂದರೆ ಮನಸ್ಸಿನ ಅಂಗಗಳಂತೆ ಇರುವ ಇಂದ್ರಿಯಗಳನ್ನು ಹಿಡಿಯವುದು. ನೀನು ಏನನ್ನು ಕೋರುವೆಯೋ ಅದನ್ನು ಆ ಮನಸ್ಸಿನ ತಲೆಯ ಮೇಲೆ ಹಾಕಿ, ಈ ಇಂದ್ರಿಯಗಳಿಂದ ಆ ಮನಸ್ಸು ಹರಿದು ಹೋಗದಂತೆ ಹಿಡಿದು ನಿಲ್ಲಿಸು. ಆಗ ಆ ಮನಸ್ಸು ಆ ಪ್ರಶ್ನೆಯನ್ನು ಹೊತ್ತು ತನ್ನ ಅಕ್ಷದ ಮೇಲೆಯೇ ತಿರುಗುತ್ತಿರುವ ಬುಗುರಿಯಂತೆ ತಿರುಗುವುದು, ಹಾಗೆ ತಿರುತಿರುಗುತ್ತ, ಮೊದಲು ತಾನು ಹೊರಟ್ಟಿದ್ದ ಕಡೆಗೇ ಬರುವುದು. ಹಾವು ಹಿಂತಿರುಗಿ ಸುತ್ತಿಕೊಂಡರೆ ತಲೆಯು ಬಾಲವನ್ನು ಮುಟ್ಟುವಂತೆ ಪ್ರಶ್ನೆಯನ್ನು ಹೊತ್ತ ಮನಸು ಒಂದು ಸುತ್ತು ತಿರುಗಿದರೆ ಈ ಮುಖದಲ್ಲಿ ಪ್ರಶ್ನೆಯಾಗಿದ್ದುದು ಆ ಮುಖದಲ್ಲಿ ಉತ್ತರವಾಗಿ ಸಿಕ್ಕುವುದು. ಆಗ ನಿನ್ನ ತಪಸ್ಸಿಗೆ ಮೊದಲನೆಯ ಮೆಟ್ಟಲು."

ಕೌಶಿಕನು ಕೇಳಿದನು: "ಆಯಿತು ವಾಮದೇವ, ತಪಸ್ಸೆಂದರೇನು ?"

ವಾಮದೇವನು ನಕ್ಕನು : ನಿನಗೆಷ್ಟು ಅವಸರ ಕೌಶಿಕ. ಈ ಸಂಜೆಯ ಬಿಸಿಲಿನಲ್ಲಿ ಮೈ ಕಾಯಿಸಿಕೊಳ್ಳುತ್ತಾ ಸುಖವಾಗಿ ಈ ಹಾಸು ಬಂಡೆಯಮೇಲೆ ಕುಳಿತು ನಿನ್ನಂತಹ ಒಳ್ಳೆಯ ಗೆಳೆಯನೊಡನೆ ಎರಡು ಮಾತನಾಡಿ ಸಂತೋಷ ಪಡೋಣ ಎಂದು ವಿಸ್ತಾರವಾಗಿ ಹೇಳ ಹೊರಟೆ. ನಿನಗೆ ಆ ಹರಟೆಯು ಬೇಡವೆನ್ನುವುದಾದರೆ, ಒಂದೇ ಮಾತಿನಲ್ಲಿ ಹೇಳುವೆನು ಕೇಳು. ತಪಸ್ಸೆಂದರೆ ಬಾಹ್ಯಾಭ್ಯಂತರ ಪ್ರಯತ್ನರಾಶಿ. ಸಂಗೀತಗಾರನು ಗಂಟಲು ಸರಿಮಾಡಿಕೊಳ್ಳುವಂತೆ ನಾನು ಮೊದಲು ಆಭ್ಯಂತರ ಪ್ರಯತ್ನವನ್ನು ಕುರಿತು ಹೇಳಿದೆ. ಅಷ್ಟರಲ್ಲಿಯೇ ನಿನಗೆ ಅವಸರ. ನೋಡು ತಪಸ್ಸೆಂದರೆ ಬೀಜವು ವೃಕ್ಷವಾಗುವ ಕೆಲಸ. ಕಾಲ, ದೇಶಗಳು ಸರಿಯಾಗಿದ್ದರಂತೂ ಸರಿ. ಇಲ್ಲದಿದ್ದರೆ ಅದನ್ನೂ ತನಗೆ ಸರಿಮಾಡಿಕೊಳ್ಳಬೇಕು: ತನ್ನ ಸ್ಥಿತಿಯನ್ನು ಕಾಪಾಡಿಕೊಂಡು ಮುಂದಿನ ಗತಿ

ಯನ್ನು ತನಗೆ ಬೇಕಾದ ಹಾಗೆ ರೂಪಿಸಿಕೊಳ್ಳಲು ಹೆಣಗಬೇಕು. ಅದು ತಪಸ್ಸು."

"ಜೀವರಾಶಿಗಳೇನು, ನಾವು ಜಡವೆನ್ನುವ ಗಿಡ ಮರಗಳೂ ಇದನ್ನು ಮಾಡುತ್ತಲೇ ಇವೆ. ಇನ್ನು ನಾವು ಹೊಸದಾಗಿ ಮಾಡುವುದೇನು ? ಗಿಡವು ಬೀಜವನ್ನು ಚೆಲ್ಲುವಾಗ ಅದು ಮುಂದೆ ಅಂಕುರವಾಗಿ ಸ್ವತಂತ್ರವಾಗಿ ನಿಲ್ಲುವ ವರೆಗೆ ಬೇಕಾದ ಆಹಾರವನ್ನು ಬುತ್ತಿ ಕೊಟ್ಟು ಕಳುಹಿಸುತ್ತದೆ, ಅದು ತಾನು ಮುಂದೆ ಭಾರಿಯ ಗಿಡವಾಗಲು ಬೇಕಾದುದನ್ನೆಲ್ಲ ಒಳಗೆ ಬೇರುಗಳಿಂದ ಹೊರಗೆ ಎಲೆಗಳಿಂದ ಸಂಗ್ರಹಿಸುತ್ತಲೇ ಇದೆ. ಈ ಸಂಗ್ರಹದ ಕಾರ್ಯವು ಒಂದು ಗಳಿಗೆಯೂ ನಿಲ್ಲದೆ ನಡೆಯುತ್ತಲೇ ಇರುವುದರಿಂದ ಈ ಪ್ರಪಂಚವು ನಿಂತಿದೆ. ಇಂತಿರಲು ನೀನು ಹೇಳುವ ತಪಸ್ಸು ಇನ್ನು ಯಾವುದು ?"

ವಾಮದೇವನು ವಿಲಕ್ಷಣವಾಗಿ ನಕ್ಕನು: "ಅಯ್ಯೋ ಕೌಶಿಕ, ನಿನಗೆಷ್ಟು ಅವಸರ ! ಅಲೌಕಿಕ ಸಿದ್ಧಿಯನ್ನು ಪಡೆಯಬೇಕೆಂದಿರುವೆ. ಸಿದ್ಧಿಯು ಬೇಕೆಂದವನು ಮನಸ್ಸಿನ ಆತುರವನ್ನು ಬಿಡಲೂಬಾರದು: ಹಾಗೆಂದು ಅದರ ವಶನೂ ಆಗಬಾರದು. ಹಾವಾಡಿಗನು ಹಾವನ್ನು ಹಿಡಿದು ಆಡಿಸುವಂತೆ ಸಿದ್ಧಿಯನ್ನು ಕೋರಿದವನು ಮನಸ್ಸನ್ನು ಹಿಡಿದು ಆಡಿಸುವುದನ್ನು ಕಲಿಯಬೇಕು. ತನ್ನ ಮನಸ್ಸನ್ನು ತನಗೆ ಬೇಕಾದಂತೆ ಹಿಡಿದಿಟ್ಟವನು ಲೋಕವನ್ನು ಕುಣಿಸ ಬಲ್ಲನು. ಅದರಿಂದ ಸಮಾಧಾನವಾಗಿ ಕೇಳು. ನೀನು ಹೇಳಿದುದು ತಪಸ್ಸಲ್ಲ. ಸ್ಥಿತಿಗಾಗಿ ಹೆಣಗುವಿಕೆ. ನೀರಲ್ಲಿ ಬಿದ್ದವನು ತಾನು ಮುಣುಗಿ ಹೋಗದಿರಲು ಏನೇನೋ ಪ್ರಯತ್ನ ಮಾಡುವನು. ಅದು ಈಜಲ್ಲ: ಅದು ದೇಹ ಯಂತ್ರವು ಸ್ವಭಾವ ವಶವಾಗಿ ತನ್ನನ್ನು ಕಾಪಾಡಿಕೊಳ್ಳಲು ಮಾಡುವ ಪ್ರಯತ್ನ. ಹಲ್ಲಿಯ ಬಾಲವನ್ನು ಕತ್ತರಿಸಿ ಎಸೆದರೆ ಅದು ಒದ್ದಾಡುವುದನ್ನು ನೋಡಿರುವೆಯಲ್ಲವೆ ? ಅದರಂತೆ ಅದು. ಯಾಂತ್ರಿಕ ಕ್ರಿಯೆ. ಜೀವನು ಖನಿಜಗಳಾಗಿರುವಾಗ ಗಾಢನಿದ್ದೆಯಲ್ಲಿ ಮುಳುಗಿರುವನು: ಉದ್ಭಿಜ್ಜಗಳಾದಾಗ ನಿದ್ದೆಯ ಮಬ್ಬಿನ ಮುಸುಕು ಒಂದು ಪರೆ ಹರಿಯುವುದು: ಮೃಗವಾದಾಗ ಅದರೊಳಗೆ ಕೊಂಚ ಬೆಳಕು ನುಗ್ಗಿ ಕನಸು ಕಾಣುವನು. ಮುಂದೆ ಮನುಷ್ಯನಾದಾಗ ನಿದ್ದೆ ತಿಳಿದೇಳುವನು. ಅದುವರೆಗೆ ಅಲ್ಲಿ ಪ್ರಯತ್ನವೇನಿದ್ದರೂ ಬಾಹ್ಯ ಪ್ರಕೃ

ತಿಯ ಸಂಪರ್ಕದಿಂದ ಆದುದು. ಹಾಗೆಯೇ ಆಭ್ಯಂತರವಾಗಿ ನಡೆಯುವ ಕಾರ್ಯವು ದೇಹದಲ್ಲಾದರೆ ಪ್ರಾಣಾದಿಗಳಿಂದ ನಡೆಯುವುದು. ಮನಸ್ಸಿನಲ್ಲಾದರೆ ಅದು ಜನ್ಮಾಂತರ ವಾಸನೆಗಳಿಂದ ಆಗುವುದು. ಅಂತೂ ಇವೆಲ್ಲವೂ ನಾವು ಕರ್ತೃತ್ವವನ್ನು ವಹಿಸಿದರೂ ವಹಿಸದಿದ್ದರೂ ಆಗುವ ಕಾರ್ಯಗಳು. ಅದರಿಂದ ಇವು ತಪಸ್ಸಲ್ಲ. ತಪಸ್ಸು ಕರ್ತೃತ್ವವನ್ನು ವಹಿಸಿಕೊಂಡು ಮಾಡುವ ಕಾರ್ಯಗಳ ರಾಶಿ. ನೀನು ಏನಾಗಬೇಕು ಎಂಬುದನ್ನು ಗೊತ್ತುಮಾಡಿಕೊ. ಅದಕ್ಕೆ ನಿನ್ನ ಪ್ರಯತ್ನವೇ ಸಾಧನವೆಂಬುದನ್ನು ನಂಬು. ಪ್ರಯತ್ನವು ಶಾಸ್ತ್ರೀಯವಾದರೆ, ಒಂದು ಕೊಳಗ ಚೆಲ್ಲಿ ಒಂದು ಖಂಡುಗವನ್ನು ತೆಗೆದು ತುಂಬಿಕೊಂಡಂತಾಗುವುದು. ಅದು ಅಶಾಸ್ತ್ರೀಯವಾದರೆ ಒಂದು ಸೇರು ಅಕ್ಕಿಕೊಟ್ಟು ಮೂರು ಸೇರು ರಾಗಿ ತೆಗೆದುಕೊಂಡಂತಾಗುವುದು. ಇನ್ನು ಏನುಬೇಕು ಹೇಳು."

"ಆಯಿತು. ಈಗ ಹೇಳು ನಾನೂ ಒಬ್ಬ ವಸಿಷ್ಠನಾಗಬೇಕು. ಏನು ಮಾಡಬೇಕು ?"

"ವಸಿಷ್ಠನಾಗಬೇಕೇ ? ಈಗೀಗ ಚೆನ್ನಾಯಿತು. ವಸಿಷ್ಠನನ್ನು ತುಳಿಯಬೇಕೆಂದೆ? ನಾನು ಬೇಡವೆಂದರೂ ಕೇಳದೆ ವೈರವನ್ನು ಬೆಳೆಸಿಕೊಂಡೆ. ರುದ್ರನನ್ನು ಆರಾಧಿಸಿ ಸರ್ವಾಸ್ತ್ರಗಳನ್ನೂ ಸಂಪಾದಿಸಿಕೊಂಡು ಹೋಗಿ ಆ ಬಡಪಾಯಿಯನ್ನು ಸಪರಿವಾರನಾಗಿ ನಿರ್ಮೂಲ ಮಾಡಬೇಕೆಂದೆ: ಈಗ ವಸಿಷ್ಠನೇ ಆಗಬೇಕೆನ್ನುವೆ, ಅಲ್ಲವೆ ?

"ವಾಮದೇವ, ನನ್ನ ಹಂಬಲವನ್ನು ಬಲ್ಲೆ. ಈಗ ಆ ಹಿಂದಿನ ದುರ್ಬುದ್ಧಿಯನ್ನು ಕುರಿತು ಏಕೆ ಚಿಂತಿಸುವೆ? ನಿಜವಾಗಿಯೂ ನನಗೆ ಈಗ ಬುದ್ಧಿಯು ಅತ್ತ ಕಡೆಗೆ ತಿರುಗಿದೆ. ವೈರದಿಂದಲ್ಲ. ನಿಜವಾಗಿ ಹೇಳುವೆನು. ಈಗ ನನಗೆ ರಾಜ್ಯದ ಆಕಾಂಕ್ಷೆಯಿಲ್ಲ. ರಾಜನಾಗುವ ಹುಚ್ಚಿಲ್ಲ! ಮನಸ್ಸು ಅಹೋರಾತ್ರಿಗಳಲ್ಲಿ ವಸಿಷ್ಠನನ್ನು ಕುರಿತು ಹಂಬಲಿಸುತ್ತಿದೆ. ರುದ್ರನ ಪೌರುಷವನ್ನು ನುಂಗುವ ಆ ಮಹಾಪುರುಷನ ವರ್ಚಸ್ಸು ಎಂತಹುದು? ಎಂದು ಮನಸ್ಸು ಆಶ್ಚರ್ಯಪಡುತ್ತಿದೆ. ಅತನಂತೆ ತಾನೂ ಆಗಬೇಕೆಂದು ಆಶಿಸುತ್ತಿದೆ. ಮೊದಲೇ ಹೇಳಿದೆನು. ನೀನು ಒಬ್ಬನೇ ಒಬ್ಬ ನನ್ನನ್ನು ಇತ್ತ ಬಾ ಎಂದು ಕರೆಯುವವನು. ನೀನೊಬ್ಬನೇ ನನಗೆ ಆಶ್ರಯ. ಇದೋ ನಮ

ಸ್ಕಾರಮಾಡಿ ಕೇಳಿಕೊಳ್ಳುವೆನು. ನನ್ನ ಮನಸ್ಸು, ವಸಿಷ್ಠನಾಗುವ ಗುಟ್ಟು ವಾಮದೇವನಿಗೆ ಗೊತ್ತಿದೆ ಎನ್ನುತ್ತಿದೆ. ನಿಜವೋ ಸುಳ್ಳೋ ಹೇಳು."

ವಾಮದೇವನು ಎಲ್ಲೋ ಅನ್ಯಮನಸ್ಕನಾಗಿ ಅಷ್ಟುಹೊತ್ತಿದ್ದು, ಕೌಶಿಕನ ಕಡೆ ತಿರುಗಿ ಹೇಳಿದನು: "ನಿಜ ಕೌಶಿಕ. ವಸಿಷ್ಠರ ಗುಟ್ಟು ಏನೂ ಇಲ್ಲ. ಬಹಳ ಸುಲಭ. ನಿರ್ಮಲವಾದ ನೀರಿಗೆ ಬಣ್ಣ ವಾಸನೆ ಏನೂ ಇಲ್ಲದಂತೆ, ಅವರ ಮನಸ್ಸಿನಲ್ಲಿ ಯಾವ ಸಂಕಲ್ಪವೂ ಇಲ್ಲ. ಕನ್ನಡಿಯು ತನ್ನದಾಗಿ ಯಾವ ಬಿಂಬವನ್ನೂ ಧರಿಸದೆ, ಎದುರಿಗೆ ಬಂದ ಬಿಂಬಗಳನ್ನೆಲ್ಲ ಪ್ರತಿಬಿಂಬಿಸುವಂತೆ, ಅವರ ಮನಸ್ಸು ಲೋಕಕಲ್ಯಾಣಕ್ಕೆ ಬೇಕಾಗುವುದನ್ನು ಮಾತ್ರ ಸಂಕಲ್ಪಿಸುತ್ತ ತಾನು ಸಂಕಲ್ಪರಹಿತನಾಗಿ ನಿಶ್ಚಲವಾಗಿ ಇರುವುದು. ನಮ್ಮ ಮನಸ್ಸುಗಳಲ್ಲಿ ಒಂದಲ್ಲ ಒಂದು ಸಂಕಲ್ಪವು ಇದ್ದೇ ಇರುವುದು. ಈಗ ನಾನೂ ವಸಿಷ್ಠರಂತೆ ಆಗಬೇಕೆಂದೇ ತಪಸ್ಸು ಮಾಡುತ್ತಿರುವೆನು. ನೀನೂ ಅದನ್ನೇ ಕೇಳಿದೆ."

"ಹಾಗಾದರೆ ನಿಸ್ಸಂಕಲ್ಪನಾಗುವುದು ಅಷ್ಟು ಕಷ್ಟವೇ?"

"ಅಬ್ಬಾ! ಕಲ್ಲು ಯುಗಯುಗಗಳ ಕಥೆಯನ್ನು ಹೇಳುವಂತೆ, ಮನಸ್ಸನ್ನು ತೋಡಿ ನೋಡಬಲ್ಲವನಿದ್ದರೆ ಅದರಲ್ಲಿ ಆಬ್ರಹ್ಮಪಿಪೀಲಿಕಾಂತವಾಗಿ ಎಲ್ಲ ಜಗತ್ತೂ ಪ್ರತಿಬಿಂಬಿಸಿರುವುದು. ಅದರಲ್ಲಿ ಜ್ಞಾತವಷ್ಟು, ಅಜ್ಞಾತವು ಅದರ ಮೂರರಷ್ಟು. ಜ್ಞಾತದಲ್ಲೂ ನಿನಗೆ ಕಾಣುವುದು ಒಂದು ಆಣೆಯಾದರೆ ಕಾಣದುದು ಹದಿನೈದಾಣೆಯಷ್ಟು. ಈ ಒಂದಾಣೆಯಷ್ಟು ಕಾಣುವ ಮನಸ್ಸಿನ ಕ್ರಿಯಾಶಕ್ತಿಯಲ್ಲಿ ನಿಂತ ನೀರಿನಲ್ಲಿ ಏಳುವ ಗುಳ್ಳೆಗಳಂತೆ ಸದಾ "ಮಾಡಬೇಕು – ಮಾಡಬೇಕು" ಎನ್ನುವ ಆಶೆಯು ಹುಟ್ಟಿ ದೇಹೇಂದ್ರಿಯಗಳಲ್ಲಿ ವ್ಯಾಪಾರ ಮಾಡಿಸುತ್ತಲೇ ಇರುವುದು. ಇದೇ ವೃತ್ತಿ. ಇದು ನಿನ್ನ ಇಚ್ಛೆಯಿಂದ ನಡೆಯುವ ವ್ಯಾಪಾರವಲ್ಲ. ಅನಿಚ್ಛವಾಗಿ ನಡೆಯುವ ವ್ಯಾಪಾರ. ಇದನ್ನೇ ವಾಸನಾ ಎನ್ನುವರು. ಈ ವಾಸನೆಯನ್ನು ಮೊದಲು ನಿನ್ನ ಸಂಕಲ್ಪದಿಂದ ತುಳಿದು, ಆ ವೃತ್ತಿಯೆಲ್ಲವೂ ನಿನ್ನ ಸಂಕಲ್ಪಾನುಸಾರವಾಗಿ ತಿರುಗುವಂತೆ ಮಾಡಿ, ಪರವಶವಾಗಿ ಹುಟ್ಟುವ ವೃತ್ತಿಗಧೀನವಾಗಿ ನಡೆದು ಮನುಷ್ಯ ಮೃಗವಾಗುವುದನ್ನು ತಪ್ಪಿಸಿ, ಆತ್ಮವಶವಾಗಿ ಹುಟ್ಟುವ ವೃತ್ತಿಯನ್ನು ಹಿಡಿದು ವ್ಯಾಪಾರ ಮಾಡುವವನು ಮನುಷ್ಯನು. ಅದರಲ್ಲಿ ಸಂಕಲ್ಪ

ವನ್ನು ಲೋಕಕ್ಷೇಮಕ್ಕಾಗಿ ಮಾಡುವ ಆತ್ಮವಂತನು ಮನುಷ್ಯೋತ್ತಮನು. ಸ್ವಸಂಕಲ್ಪ ತಿರೋಧಾನಮಾಡಿ ಈಶ್ವರ ಸಂಕಲ್ಪಾನುಗುಣವಾಗಿ ವೃತ್ತಿಯನ್ನು ವಹಿಸಿ ವ್ಯಾಪಾರ ಮಾಡುವವನು ಬ್ರಾಹ್ಮಣನು. ನೀನು ಇದಾದ ದಿನ ವಸಿಷ್ಠರ ಗುಟ್ಟು ನಿನಗೆ ತಿಳಿಯುವುದು. ಅದುವರೆಗೆ ನೀನು ಬಿಗಿಹಿಡಿದು ಕುಳಿತು ತಪಸ್ಸು ಮಾಡುವೆಯಾ ?"

"ಕೌಶಿಕ, ನಿನ್ನಿಂದ ಪರಮೋಪಕಾರವಾಯಿತು. ಮಾಡುವೆನು, ತಪಸ್ಸು ಮಾಡುವೆನು. ನೀನು ಹೇಳಿದ ಭಾರಿಯ ಗುರಿಯನ್ನು ಸಾಧಿಸುವೆನು. ಆದರೆ ಕಪಿಗಿಂತ ಕಪಿಯಾಗಿ ಚಂಚಲವಾಗಿರುವ ಈ ಮನಸ್ಸು ನೆಲೆಗೆ ನಿಲ್ಲು ವವರೆಗೂ ಏನು ಮಾಡಲಿ, ಅದನ್ನು ಹೇಳು."

"ಅದುವರೆಗೆ, ಈಗ ರುದ್ರನನ್ನು ಮಾತ್ರ ಸಾಧಿಸಿರುವೆ ! ಆದರಂತೆಯೇ, ವೇದದಲ್ಲಿ ಹೇಳಿರುವ ಇತರ ದೇವತೆಗಳನ್ನೂ ಸಾಧಿಸು. ರುದ್ರನನ್ನು ಸಕಾಮ ನಾಗಿ ಆರಾಧಿಸಿದಂತೆ, ಇನ್ನು ಮುಂದೆ ಎಲ್ಲಾ ದೇವತೆಗಳನ್ನೂ ನಿಷ್ಕಾಮವಾಗಿ ಆರಾಧಿಸು. ಪುರುಷನು ಎಲ್ಲಾ ದೇವತೆಗಳ ತೇಜಸ್ಸಿನಿಂದ ಸಂಭೃತನಾದ ವನು. ಕೌಶಿಕ, ಯಾವ ಯಾವ ದೇವತೆಯನ್ನು ನೀನು ನಿಷ್ಕಾಮನಾಗಿ ಒಲಿಸಿಕೊಳ್ಳುವೆಯೋ ಆಯಾ ದೇವತೆಯ ತೇಜೋಭಾಗವು ಪ್ರಸನ್ನವಾಗಿ ಪೂರ್ಣವಾಗಿ ಮನಸ್ಸಿನ ಆಯಾ ಭಾಗದ ಚಾಂಚಲ್ಯವು ತಪ್ಪುವುದು. ನಿಶ್ಚಂಚಲವಾದ ಮನೋಭಾಗವು ಆನಂದದಾಯಿಯಾಗುವುದು. ಇದನ್ನು ಮೊದಲು ಸಾಧಿಸು."

"ನಿನ್ನ ಅಪ್ಪಣೆಯಂತೆಯೇ ಆಗಲಿ. ಇದಿಷ್ಟನ್ನೂ ಸಾಧಿಸುವೆನು. ನಾನು ಇನ್ನು ಇಲ್ಲಿರುವುದಿಲ್ಲ. ನಾನು ಸಿದ್ಧನಾಗುವವರೆಗೆ ಇತ್ತಕಡೆಯೂ ಬರುವುದಿಲ್ಲ. ಈ ಆಶ್ರಮದಲ್ಲಿದ್ದರೆ ಹಿಂದೆ ನಾನು ಮಾಡಿದ್ದ ವೈರಮೂಲ ವಾದ ಸಂಕಲ್ಪವೇನಾದರೂ ಮತ್ತೆ ನನ್ನನ್ನು ಹಿಡಿದೀತು. ನನಗೆ ಅನುಜ್ಞೆ ಕೊಡು. ನಾನು ದಕ್ಷಿಣಕ್ಕೆ ಹೋಗುವೆನು. ವಿಂಧ್ಯದಿಂದ ಆಚೆಗೆ ಹೋಗಿ ಅಲ್ಲಿರುವ ತಪೋಭೂಮಿಗಳಲ್ಲಿ ನಿಂತು ಸಿದ್ಧಸಂಕಲ್ಪನಾಗಿ ಬರುವೆನು."

ಕೌಶಿಕನು ಎದ್ದು ವಾಮದೇವನಿಗೆ ನಮಸ್ಕಾರಮಾಡಿದನು. ಆತನ ಪಾದಗಳನ್ನು ಹಿಡಿದು ಭೂಮಿಯಮೇಲೆ ದೀರ್ಘವಾಗಿ ಮಲಗಿದ್ದ ಆತನನ್ನು ವಾಮದೇವನು ಮುಟ್ಟಿದಾಗ ಆತನಿಂದ ಏನೋ ಒಂದು ಕೌಶಿಕನ ದೇಹವನ್ನು

ಪ್ರವೇಶಿಸಿದಂತಾಯಿತು. ಮತ್ತೆ ಕೌಶಿಕನು ವಾಮದೇವನ ಆಶೀರ್ವಾದ ವನ್ನು ಬಯಸಿದನು. ಆತನು ನಕ್ಕು "ಆಗಲೇ ಬರಲಿಲ್ಲವೇ ?" ಎಂದನು. ಕೌಶಿಕನು "ಹೌದು ಬಂತು, ಇದೆ" ಎಂದು ಮತ್ತೆ ನಮಸ್ಕಾರ ಮಾಡಿದನು.

---

## ಹದಿನಾಲ್ಕನೆಯ ತರಂಗ

ಇಕ್ಷ್ವಾಕು ವಂಶದ ಮಹಾರಾಜನಾದ ತ್ರಿಶಂಕುವು ಇಂದು ಸ್ವವಂಶ ವರ್ಧನನಾದ ಗುರುವನ್ನು ದರ್ಶನಮಾಡಲು ಬಂದಿದ್ದಾನೆ. ರಾಜಪಾರಿ ವಾರವೆಲ್ಲವೂ ಆಶ್ರಮಕ್ಕೆ ನಾತಿ ದೂರದಲ್ಲಿದೆ. ವಿನೀತ ವೇಷದಿಂದ ಮಿತ ಪರಿವಾರನಾಗಿ ಬಂದು ಮಹಾರಾಜಾ ತ್ರಿಶಂಕುವು ಬ್ರಹ್ಮರ್ಷಿಯಾದ ಗುರು ವಿನ ದರ್ಶನಮಾಡಿ ಅತಿಥಿಶಾಲೆಯಲ್ಲಿದ್ದಾನೆ. ಈ ದಿನ ಮಧ್ಯಾಹ್ನದ ಇಳಿ ಹೊತ್ತಿನಲ್ಲಿ ಗುರುದೇವನನ್ನು ಆತನು ಮತ್ತೆ ಕಾಣುವನು : ತನ್ನ ಪ್ರಾರ್ಥನೆ ಯನ್ನು ಸಲ್ಲಿಸುವನು. ಈ ದಿನ, ಆ ದಿನ ಕೌಶಿಕನು ಬಂದ ಸಂಭ್ರಮವು ಏನೂಯಿಲ್ಲ. ಅಲ್ಲದೆ ತ್ರಿಶಂಕುವು ವಸಿಷ್ಠರನ್ನು ಬಾಲ್ಯಾತ್ಪ್ರಭೃತಿ ಗುರುವೆಂದು ಒಪ್ಪಿಕೊಂಡಿರುವ ವಿನೀತ. ಆತನಲ್ಲಿ ಅಪನಯವೆಂಬುದು ಎಳ್ಳಷ್ಟೂ ಇಲ್ಲ. ಅಲ್ಲದೆ ವೇಷದಿಂದಲೇ ತಿಳಿಯುತ್ತಿದೆ. ಆತನು ಬಂದಿರುವುದು ಗುರುಗಳನ್ನು ಯಜ್ಞಾರ್ಥವಾಗಿ ಕರೆಯುವುದಕ್ಕೆಂದು. ಹಾಗಿರಲು ಆತನಿಂದ ಆಶ್ರಮಕ್ಕೆ ಬಾಧೆಯಿಲ್ಲ. ಆದರೂ ಆಶ್ರಮವಾಸಿಗಳಿಗೆ ಈ ರಾಜ ಮಹಾರಾಜರು ಬಂದರೆ ಶಂಕೆ ಮಾತ್ರ ತಪ್ಪಿಲ್ಲ.

ಇಳಿ ಹೊತ್ತು ಆಯಿತು. ವಸಿಷ್ಠರು ರಾಜ ತ್ರಿಶಂಕುವನ್ನು ಬರಮಾಡಿ ಕೊಂಡರು. ಮೂರ್ಧಾಭಿಷಿಕ್ತನಾದ ಮಹಾರಾಜನು ಗುರುವಿಗೆ ಹೇಗೆ ಅಭಿ ವಾದನ ಮಾಡಬೇಕೋ ಹಾಗೆ ಅಭಿವಾದನ ಮಾಡಿ ಈತನೂ, ರಾಜಶಿಷ್ಯನಿಗೆ ಯಾವ ಯಾವ ಗೌರವ ಆಶೀರ್ವಾದಗಳನ್ನು ಸಲ್ಲಿಸಬೇಕೋ ಅವನ್ನೆಲ್ಲ ಸಲ್ಲಿಸಿ ವಸಿಷ್ಠರೂ ಕುಳಿತಿದ್ದಾರೆ. ಗುರುದೇವರೇ ಸಂಭಾಷಣೆಯನ್ನು ಆರಂಭಿಸಿದರು.

"ಅಪ್ಪಣೆಯಾಗಬೇಕು. ಮಹಾರಾಜರನ್ನು ಇಲ್ಲಿಯವರೆಗೂ ಕರೆದು ತಂದ ಕಾರ್ಯಗೌರವವೇನು ?"

"ಗುರುದೇವ, ಇದುವರೆಗೂ ನಾನಾ ಯಜ್ಞಗಳನ್ನು ಮಾಡಿರುವುದು ತಮಗೆ ವೇದ್ಯವಿದೆ. ಈಗ ಇನ್ನೊಂದು ಯಜ್ಞವನ್ನು ಮಾಡಬೇಕು ಎನ್ನಿಸುತ್ತಿದೆ."

"ಅಪ್ಪಣೆಯಾಗಲಿ. ಸಾವಧಾನವಾಗಿ ಕೇಳುತ್ತಿದ್ದೇನೆ."

"ಯಜ್ಞಮಾಡಿದವರು ದೇಹಾಂತದಲ್ಲಿ ಸ್ವರ್ಗವನ್ನು ಪಡೆಯುವರು ಎನ್ನುವುದು ಲೋಕವಿದಿತವು. ಆದರೆ ಸಶರೀರನಾಗಿಯೇ ಸ್ವರ್ಗಕ್ಕೆ ಹೋಗಬೇಕು ಎಂದು ನನ್ನ ಆಶೆ."

"ಮಹಾರಾಜ. ಹಾಗೆ ಹೋದವರು ಹಿಂದೆ ಅನೇಕರು ಉಂಟು. ಆದರೆ ದೇವ ಕಾರ್ಯಾರ್ಥವಾಗಿ ಆದರೆ ಮಾತ್ರ ದೇವತೆಗಳು ಮನುಷ್ಯರನ್ನು ಬರಮಾಡಿಕೊಳ್ಳುವರು. ಹಾಗಿಲ್ಲದೆ ಮನುಷ್ಯರು ತಾವಾಗಿ ನುಗ್ಗಿ ಹೋಗುವಂತಿಲ್ಲ."

"ಅಸಾಧ್ಯವಾದುದನ್ನು ಸಾಧ್ಯಮಾಡುವುದಕ್ಕಾಗಿಯೇ ತಾನೇ ಯಜ್ಞವಿರುವುದು."

"ಹೌದು, ಆದರೆ, ದೇವ ಇದನ್ನು ನೀನು ಸಕಾಮನಾಗಿ ಕೋರುತ್ತಿರುವೆ. ಇದರಿಂದ ಆಗಬೇಕಾದ ಲೋಕಕ್ಷೇಮವು ಯಾವುದೂ ಕಾಣುವುದಿಲ್ಲ. ವೃಥಾ, ಅಲ್ಲಿನ ಭೋಗಕ್ಕೆ ಹಂಬಲಿಸಿ ಈ ಮನುಷ್ಯ ದೇಹವನ್ನು ಅಲ್ಲಿಗೇಕೆ ಹೊತ್ತುಕೊಂಡು ಹೋಗುವೆ ? ಈ ಮಾನುಷದೇಹವು ಸುರಲೋಕದ ಭೋಗಗಳನ್ನು ಅನುಭವಿಸಲು ಸಮರ್ಥವಾಗುವುದು ಎಂದುಕೊಂಡಿದ್ದೀಯ ? ನಾನು ಅನೇಕ ಯಜ್ಞಗಳನ್ನು ಮಾಡಿ ದೇವತೆಗಳನ್ನು ಆರಾಧಿಸಿದವನು. ಇಲ್ಲಿ ಇರುವವರೆಗೂ ಅಲ್ಲಿನ ಭೋಗಗಳಿಗೆ ಸಮವಾದ ಭೋಗಗಳನ್ನು ಅನುಭವಿಸು. ಇಲ್ಲಿರುವ ನಮ್ಮ ನಂದಿನಿಯನ್ನು ಆರಾಧಿಸಿ ಆಕೆಯ ಅನುಜ್ಞೆಯನ್ನು ಪಡೆದು ಆಕೆಯ ಹಾಲನ್ನು ಸೇವಿಸಿದರೆ ನೀನು ಅಜರನಾಗಿ ವಜ್ರಕಾಯನಾಗುವೆ. ಈ ದೇಹಾನಂತರ ಮುಂದೆ ಸ್ವರ್ಗಸುಖವು ತಾನಾಗಿ ಕೈಸೇರುವುದು. ತಾನಾಗಿ ಸಿದ್ಧವಾಗಿ ಬರುವುದನ್ನು ಬರಮಾಡಿಕೊಳ್ಳುವುದಕ್ಕೆ ವಿಶೇಷ ಪ್ರಯತ್ನವೇಕೆ ?"

"ತಾವು ಹೇಳಿದುದು ನಿಜ. ಆದರೂ ನಾನು ಈಗ ಆ ಆಶೆಗೆ ವಶನಾಗಿರುವೆನು. ಸರ್ವಪ್ರಯತ್ನದಿಂದಲೂ ನಾನು ಅದನ್ನು ಸಾಧಿಸಲೇಬೇಕು. ಇಲ್ಲದಿದ್ದರೆ ನನಗೆ ಸಮಾಧಾನವೇ ಆಗುವುದಿಲ್ಲ."

“ಮಹಾರಾಜನು ಈ ಕಾರ್ಯದಲ್ಲಿ ಸಹಕರಿಸಲು ನಾವು ಅಕ್ಷಮರು ಎಂಬುದನ್ನು ತಿಳಿದು ನಮ್ಮನ್ನು ಬಿಡುವುದು ಒಳ್ಳೆಯದು.”

“ದೇವಾ, ಇಕ್ಷ್ವಾಕು ವಂಶದವರ ಸಿದ್ಧಿಯ ಮೂರ್ತಿಸ್ವರೂಪವಾದ ತಮ್ಮನ್ನು ಬಿಡುವುದೆಂದರೇನು ? ಸ್ವರ್ಗ ಮರ್ತ್ಯ ಪಾತಾಳದವರೆಲ್ಲ ಕರ್ಮ ಕಾಂಡ ಜ್ಞಾನಕಾಂಡಗಳ ಎರಡಕ್ಕೂ ತಮ್ಮನ್ನು ಗುರುವೆಂದು ಅಂಗೀಕರಿಸು ವರು. ಇಂತಹ ತಮ್ಮನ್ನು ಬಿಟ್ಟು ನಾನು ಮತ್ತೆ ಯಾರನ್ನು ಅಪೇಕ್ಷಿಸಲಿ ?”

“ಮಹಾರಾಜ, ಆಗಲೇ ನಾನು ಹೇಳಿದೆನಲ್ಲ. ಬಹುಶಃ ನಮ್ಮನ್ನು ಪರೀಕ್ಷಿಸುವುದಕ್ಕೆ ಇಂತಹ ಆಸೆಯು ನಿನಗೆ ಬಂದಿದೆಯೇನೋ ? ಹೇಗಾ ದರೂ ಆಗಲಿ. ಈ ಕಾರ್ಯಕ್ಕೆ ನಮ್ಮನ್ನು ಬಿಡು. ಇಂತಹ ಅಲ್ಪವಾದ ಆಶೆ ಗಳೆಲ್ಲ ವಿಹಿತಗಳಲ್ಲ. ಸ್ವಧರ್ಮವಾದ ಪ್ರಜಾಪಾಲನವನ್ನು ಮಾಡಿ ಕೃತಾರ್ಥ ನಾಗದೆ, ಇಲ್ಲಿ ನಿನ್ನ ಧರ್ಮವನ್ನು ಬಿಟ್ಟು ಕಾಲಾಂತರದಲ್ಲಿ ಲಭ್ಯವಾಗುವ ಸ್ವರ್ಗವು ಇಂದೇ ಬರಲಿ ಎನ್ನುವುದು ಸರಿಯಲ್ಲ. ಹಾಗೂ ಆಗಲಿ. ಒಮ್ಮೆ ಹೋಗಿ ಬಂದುಬಿಡುವೆಯಾ ಕಳುಹಿಸಿಕೊಡುವೆನು. ಅಥವಾ ಸ್ವರ್ಗದ ಯಾವ ಭೋಗವಸ್ತುವನ್ನು ಬಯಸಿರುವೆ ಹೇಳು. ತರಿಸಿಕೊಡುವೆನು.

“ಇಲ್ಲ. ಗುರುದೇವ, ಇಲ್ಲಿ ನನ್ನ ಮಗನಾದ ಹರಿಶ್ಚಂದ್ರನಿಗೆ ಪಟ್ಟವನ್ನು ಕಟ್ಟುವೆನು. ನಾನು ಸ್ವರ್ಗಕ್ಕೆ ಹೋಗಿ ಅಲ್ಲಿಯೇ ಇದ್ದುಬಿಡಬೇಕು.”

“ಅದು ಸಾಧ್ಯವಿಲ್ಲ. ಅದಕ್ಕಾಗಿ ಒಂದು ಕರ್ಮವನ್ನು ನಿರ್ಮಿಸಿ ಮಾಡಿಸಬಹುದು. ಆದರೆ, ಮನ್ನಿಸು, ಮಹಾರಾಜ, ಈ ವ್ಯುತ್ಕ್ರಮವು ಬೇಡ. ನಿನಗೆ ಬೇಕಾದರೆ ಆ ಕಾರ್ಯಕ್ಕೆ ಬೇಕಾದ ಬೇರೆ ಋತ್ವಿಕ್ಪುರೋಹಿತ ರನ್ನು ನೋಡಿಕೊ. ನಮ್ಮನ್ನು ಬಿಡು.”

ತ್ರಿಶಂಕುವು ಇನ್ನು ಮುಂದೆಯೂ ಏನೋ ಹೇಳಹೋದನು. ಆದರೆ ವಸಿಷ್ಠರು ಎದ್ದು ನಕ್ಕರು. ಭೇಟಿಯು ಮುಗಿಯಿತು. ಮಹಾರಾಜನು ಅವಾಕ್ಕಾಗಿ ಹೊರಟುಬಂದನು. “ಆಗಲಿ. ಸಾಧ್ಯವೆಂದಂತೂ ಗೊತ್ತಾಯಿ ತಲ್ಲ. ಅಲ್ಲದೆ ಅವರೇ ಹೇಳಿದ್ದಾರೆ. ಬೇಕಾದರೆ ಇತರರನ್ನು ನೋಡಿಕೋ ಎಂದು. ಇನ್ನೂ ಒಂದುಸಲ ನೋಡುವುದೇ ಈ ವಿಚಾರವಾಗಿ ? ಇಲ್ಲ. ಇಲ್ಲ. ವಸಿಷ್ಠರು ಇಲ್ಲವೆಂದರೆ ಇಲ್ಲ. ಉಂಟು ಎಂದರೆ ಉಂಟು. ಯಾವ ದಾಕ್ಷಿ ಣ್ಯಕ್ಕೂ ಒಳಗಾಗುವರಲ್ಲ. ಅವರನ್ನು ಮಾತನಾಡಿಸಿದರೆ ಯತ್ನವಿಲ್ಲ. ದೇವಿ

ಯವರನ್ನು ಕಾಣಬೇಕು. ನೋಡೋಣ. ಆಕೆಯು ಸಿದ್ಧಿಲಕ್ಷ್ಮಿಯಂಥ ವರು. ಅವರನ್ನು ದರ್ಶನಮಾಡಿ ಮೊದಲು ಇಷ್ಟಸಿದ್ಧಿಯನ್ನು ಅಭ್ಯರ್ಥಿ ಸೋಣ. ಅವರು ಸಹಜವಾಗಿ ಅಸ್ತು ಎನ್ನುವರು. ಆಮೇಲೆ ಗುರುದೇವರು ಯತ್ನವಿಲ್ಲದೆ ಒಪ್ಪುವರು. ಇತರರಿಂದ ಆಗುವ ಹಾಗಿದ್ದರೂ ಕುಲ ಪುರೋ ಹಿತರನ್ನು ಬಿಟ್ಟು ಹೋಗುವುದುಂಟೆ? ಕೂಡದು. ಈಗ ತೋರಿರುವ ಈ ಹಾದಿಯೇ ಸರಿ" ಎಂದು ಅತಿಥಿಶಾಲೆಗೆ ಹೋಗುತ್ತಾ ದಾರಿಯಲ್ಲಿಯೇ ಗೋ ಶಾಲೆಯಲ್ಲಿ ನಂದಿನೀ ಧೇನುವನ್ನು ಉಪಚರಿಸುತ್ತಾ ನಿಂತಿದ್ದ ದೇವಿಯವರ ದರ್ಶನಕ್ಕೆ ಹೋದನು.

ಅರುಂಧತಿಯು ರಾಜಶಿಷ್ಯನ ನಮಸ್ಕಾರಾದಿಗಳನ್ನು ಯಥೋಚಿತವಾಗಿ ಗ್ರಹಿಸಿದರು: ಆಶೀರ್ವಾದಗಳು ಆಯಿತು. ತ್ರಿಶಂಕುವು ಕುಶಲ ಪ್ರಶ್ನೆಯಾದ ಮೇಲೆ– "ದೇವಿಯವರು ದೊಡ್ಡ ಮನಸ್ಸುಮಾಡಿ ಇಷ್ಟಾರ್ಥ ಸಿದ್ಧಿಯಾಗುವಂತೆ ಅನುಗ್ರಹಿಸಬೇಕು" ಎಂದು ಮತ್ತೆ ನಮಸ್ಕಾರ ಮಾಡಿದನು. ದೇವಿಯರು "ಇಷ್ಟಾರ್ಥವೇನೋ ಸಿದ್ಧಿಸುವುದು: ಆದರೆ ಅದರುದ್ದಕ್ಕೂ ಕಷ್ಟಪಡ ಬೇಕಲ್ಲ" ಎಂದರು.

ತ್ರಿಶಂಕುವು ತನ್ನ ಇಷ್ಟದಂತೆಯೇ ಆಯಿತೆಂದು ಸಂತೋಷದಿಂದ ಬೀಗಿ ಹೋದನು. "ಹೌದು. ಹೌದು, ಗುರುದೇವರು ಅದಕ್ಕಾಗಿ ಹೊಸದಾಗಿ ಕರ್ಮವೊಂದನ್ನು ಏರ್ಪಡಿಸಬೇಕು ಎಂದರು. ನಿಜ. ದಾರಿಯುದ್ದಕ್ಕೂ ಕಷ್ಟ ವಿದೆ. ಆದರೇನು? ತಮ್ಮ ಆಶೀರ್ವಾದವೇ ನಮ್ಮನ್ನು ಕಾಯುವುದು" ಎಂದು ವಿನಯದಿಂದ ಬೀಳ್ಕೊಂಡು ಬಂದನು.

ಆಯಿತು. ದೇವಿಯರ ಅನುಗ್ರಹವಾಯಿತು ಎಂದು ಗುರುಗಳಿಗೆ ಹೇಗೆ ತಿಳಿಸುವುದು?, ಅಥವಾ ಯಾರ ಮುಖಾಂತರವಾಗಿ ತಿಳಿಸಬೇಕು? ತ್ರಿಶಂಕುವಿಗೆ ದೊಡ್ಡ ಕಷ್ಟಕ್ಕೆ ಬಂತು. ವಾಮದೇವರು ಆಶ್ರಮದಲ್ಲಿ ಇದ್ದರೆ ಚೆನ್ನಾಗಿತ್ತು. ಅವರು ವಸಿಷ್ಠರ ಜೊತೆಜೊತೆಯಲ್ಲಿಯೇ ಆರ್ತ್ವಿಜ್ಯ ಮಾಡು ವವರು. ಅವರು ಕಾರಣಾಂತರದಿಂದ ಹಿಮಾಲಯಕ್ಕೆ ಹೋದವರು ಇನ್ನೂ ಬಂದಿಲ್ಲ. ಅದರಿಂದ ಯತ್ನವಿಲ್ಲದೆ ತ್ರಿಶಂಕುವು ವಸಿಷ್ಠಪುತ್ರರನ್ನು ಆಶ್ರಯಿಸಿದನು.

ಅವರೂ ಯೋಚಿಸಿದರು. ತಂದೆಯು ಆಗುವುದಿಲ್ಲ ಎಂದಿದ್ದಾರೆ. ತಾಯಿಯು ಆಗುತ್ತದೆ ಎಂದಿದ್ದಾರೆ. ಏನು ಮಾಡಬೇಕು ? ಎರಡು ಮೂರು ದಿನ ಪದೇ ಪದೇ ಬಂದು ಪೀಡಿಸಿದ ಮಹಾರಾಜನ ದಾಕ್ಷಿಣ್ಯಕ್ಕೆ ಒಳಪಟ್ಟು ತಂದೆಯ ಬಳಿ ಪ್ರಸ್ತಾಪಮಾಡಿದರು. ಅಲ್ಲಿಂದ ಸರಿಯಾದ ಉತ್ತರವು ಬರ ಲಿಲ್ಲ. ಅಲ್ಲಿಗೇ ಬಿಟ್ಟರು.

ತ್ರಿಶಂಕುವು ಬಿಡಲಿಲ್ಲ. ಬೆಳಗಿನ ಹೊತ್ತು ನಿತ್ಯಕರ್ಮಗಳನ್ನು ನೆರ ವೇರಿಸಿಕೊಂಡು ಬಂದು ವಸಿಷ್ಠಪುತ್ರರ ಬಳಿ ಕೂರುವನು. ಅವರು ಮಧ್ಯಾಹ್ನ ಕರ್ಮಕ್ಕೆ ಏಳುವಾಗ ಏಳುವನು. ಮತ್ತೆ ಮೂರು ಝಾವದ ಹೊತ್ತಿಗೆ ಬಂದು ಕೂರುವನು. ಸಂಜೆಗೆ ಎದ್ದು ಹೋಗುವನು. ಹೀಗೆಯೇ ಹಲವು ದಿನ ನಡೆಯಿತು.

ಒಂದು ದಿನ ಏನೋ ದುಷ್ಟವೇಳೆಯಲ್ಲಿ ತ್ರಿಶಂಕುವು "ನಾನು ಇಷ್ಟು ದಿನದಿಂದ ತಮ್ಮನ್ನು ಆಶ್ರಯಿಸಿದರೂ ತಮಗೆ ದಯೆ ಬರಲಿಲ್ಲ" ಎಂದು ವಿನಯವಾಗಿಯೇ ಹೇಳಿಕೊಂಡನು. ವಸಿಷ್ಠರ ನೂರು ಮಕ್ಕಳಲ್ಲಿ ಒಬ್ಬನು "ಗುರುದೇವರು ಆಗುವುದಿಲ್ಲ ಎಂದರಲ್ಲ, ನಾವೇನು ಮಾಡುವುದು ? ಬೇಕಾ ದರೆ ದಕ್ಷರಾದ ಇನ್ನೊಬ್ಬರನ್ನು ಹುಡುಕಿಕೊಂಡು ಹೋಗುವುದು. ನಮ್ಮಿಂ ದಂತೂ ಸಾಧ್ಯವಿಲ್ಲ" ಎಂದನು.

ತ್ರಿಶಂಕುವು "ಕುಲಪುರೋಹಿತರನ್ನು ಬಿಡುವಂತಿಲ್ಲವಲ್ಲ ಎಂದು ಸಂಕಟಪಡುತ್ತಿದ್ದೇನೆ" ಎಂದನು.

ಇನ್ನೊಬ್ಬರಿಂದ ಉತ್ತರ ಬಂತು : "ಯತ್ನವಿಲ್ಲದಿದ್ದರೆ ಏನು ಮಾಡು ವುದು ?"

ಮತ್ತೆ ಅರಸನು ಕೇಳಿದನು "ಹಾಗೆ ಕುಲಪುರೋಹಿತರನ್ನು ಬಿಡ ಬಹುದೇ ?"

ಮತ್ತೊಬ್ಬರು "ಅವರೇ ಬಿಟ್ಟಿರುವರಲ್ಲಾ ?"

"ಹಾಗಾದರೆ ಈಗ ನಾನೇನು ?"

ಯಾರೋ ದುಡುಕಿದರು : "ಚಂಡಾಲ."

ಎಲ್ಲರೂ ಹಾಹಾ ಎಂದರು. ಆ ಮನುವಂಶದರಸು, ಮೂರ್ಧಾಭಿಷಿಕ್ತ,

ಕುಲಪತಿ ವಸಿಷ್ಠರ ಶಿಷ್ಯ ಇಂತಹವನನ್ನು ಚಂಡಾಲನೆನ್ನುವುದೇ? ಛೀ ಛೀ, ಎಂದು ಎಲ್ಲರೂ ಛೀಮಾರಿ ಹಾಕಿದರು.

ತ್ರಿಶಂಕುವು ಅಲ್ಲಿಯೇ ತಲೆಯ ಮೇಲೆ ಕೈಹೊತ್ತು ಕುಳಿತನು. ಕೋಪ ಬಂತು. ಗುರುಶಿಷ್ಯನ ಮೇಲೆ ಕೋಪವು ತರವಲ್ಲ ಎಂದು ನುಂಗಿದನು. ಆತನು ಅಲ್ಲಿಯೇ ಕುಳಿತಿರುವ ಹಾಗೆಯೇ ಸಾಕ್ಷಾತ್ ವಸಿಷ್ಠರೇ ಬಂದರು. "ಮಹಾರಾಜ, ಹೀಗೆ ಆಗಬಾರದಾಗಿತ್ತು. ಆಗಿಹೋಯಿತು. ಶೋಕಿಸದಿರು. ಈಗಲೂ ನೀನು ಆ ಆಸೆಯನ್ನು ಬಿಟ್ಟರೆ ಈ ಚಂಡಾಲತ್ವವು ನಿನ್ನನ್ನು ಏನೂ ಮಾಡುವುದಿಲ್ಲ. ಇಲ್ಲ, ನಿನ್ನ ಆಸೆಯು ಪೂರಯಿಸಲೇಬೇಕೆಂದರೆ, ದಕ್ಷಿಣ ದಲ್ಲಿ ಒಬ್ಬ ರಾಜರ್ಷಿಯಿರುವನು. ಆತನು ಈ ಕಾರ್ಯವನ್ನು ಮಾಡಬಲ್ಲನು. ಬೇಕಾದರೆ ಹೋಗಿ ಅವನನ್ನು ಆಶ್ರಯಿಸು. ನೀನು ಇನ್ನೊಬ್ಬನನ್ನು ಪುರೋ ಹಿತನಾಗಿ ವರಿಸುವ ತನಕ ಈ ಚಾಂಡಾಲ್ಯವು ನಿನ್ನನ್ನು ಮುಟ್ಟದೆ ದೂರ ದಲ್ಲಿರುವುದು" ಎಂದು ಅನುಗ್ರಹಿಸಿದರು.

ದುಡುಕಿ ನುಡಿದ ಮಗನ ಮುಖವನ್ನು ತಿರುಗಿ ನೋಡಿದರು: ಅಲ್ಲೇನು ಕಂಡುಬಂತೋ? "ಹು ನಡೆದುಹೋಗಲಿ" ಎಂಬರ್ಥದಲ್ಲಿ ಕೈ ಆಡಿಸುತ್ತಾ ಹೊರಟುಹೋದರು.

ತ್ರಿಶಂಕುವು ಆಸೆಯು ನೆರವೇರುವುದೆಂಬ ಸಂತೋಷದಲ್ಲಿ ತನಗೆ ಚಂಡಾ ಲತ್ವವು ಕಾಯ್ದಿರುವುದನ್ನು ಮರೆತು ಎಲ್ಲರಿಗೂ ಯಥಾವಿಹಿತವಾಗಿ ಸತ್ಕಾರ ಗಳನ್ನು ಸಲ್ಲಿಸಿ ಆಶ್ರಮದಿಂದ ಹೋದನು.

---

## ಹದಿನೈದನೆಯ ತರಂಗ

ಕೌಶಿಕನು ವಿಂಧ್ಯವನ್ನು ದಾಟಿ ದಕ್ಷಿಣಕ್ಕೆ ಬಂದನು. ವಿಂಧ್ಯಪಾದ ದಲ್ಲಿ ಹರಿಯುವ ರೇವಾನದಿಯ ತೀರವು ಆತನ ಮನಸ್ಸಿಗೆ ಸೊಗಸಿತು. ಅಲ್ಲಿಯೇ ಆ ಜಂಬೂವೃಕ್ಷಗಳ ತಂಡದಲ್ಲಿ ಒಂದು ಪರ್ಣಶಾಲೆಯನ್ನು ಮಾಡಿ ಕೊಂಡು ತಪಸ್ಸಿಗೆ ನಿಂತನು. "ನಾನು ಇನ್ನು ಮುಂದೆ ಎಲ್ಲರಿಗೂ ಮಿತ್ರ ನಾಗಿರಬೇಕು. ಬೇಕಾದುದಾಗಲಿ. ಯಾರಿಗೂ ಯಾವ ರೀತಿಯಲ್ಲೂ ಕೇಡು

ಮಾಡಬಾರದು" ಎಂದು ಸಂಕಲ್ಪಿಸಿಕೊಂಡು ತನಗೆ **ವಿಶ್ವಾಮಿತ್ರ**ನೆಂದು ಹೆಸರಿಟ್ಟುಕೊಂಡನು.

ಆತನ ತಪಸ್ಸಂಪತ್ತಿಯು ಆತನಿಗೆ ಖ್ಯಾತಿಯನ್ನು ತಂದಿತು. ಯಾವ ಆಶ್ರಮದಲ್ಲಿ ನೋಡಿದರೂ ವಿಶ್ವಾಮಿತ್ರನ ಮಾತೇ. ವಸಿಷ್ಠರಂತಹ ಬ್ರಹ್ಮರ್ಷಿಗಳ ಮೇಲೆ ಕೈಮಾಡಿದವನೆಂದು ಎಲ್ಲರಿಗೂ ಗೌರವ. ಯಾರಾದರೂ ಬಂದಾಗ ಆಕಸ್ಮಾತ್ತಾಗಿ ಆ ವೃತ್ತಾಂತವು ಬರುವುದು. ಕೌಶಿಕನಿಗೆ ಆಗ ನಾಚಿಕೆಯಾಗುವುದು. "ಅದೊಂದು ಸಾಹಸ. ಆದರೆ ಆ ವೃತ್ತಿಯು ಆಗ ಊರ್ಜಿತವಾಗಿದ್ದರೆ ನಾನು ತಪಸ್ವಿಯಾಗುತ್ತಿದ್ದೆನೆ? ಆಗ ಸೋತುದೂ ಒಳ್ಳೆಯದೇ ಆಯಿತು" ಎಂದು ನಗುವನು. ಆದರೆ ಈಗ ತಾನು ಮಾಡುತ್ತಿರುವ ತಪಸ್ಸಿನ ಉದ್ದೇಶವೇನು ಎಂಬುದನ್ನು ಮಾತ್ರ ಯಾರಿಗೂ ಹೇಳನು. ಯಾರಾದರೂ ಬಲವಂತವಾಗಿ ಕೇಳಿದರೆ "ಮಾಡುವುದಕ್ಕೆ ಕೆಲಸವಿಲ್ಲ. ಅದಕ್ಕಾಗಿ" ಎನ್ನುವನು. ಹೀಗೆ ನಿಷ್ಕಾಮವಾಗಿ ತಪಸ್ಸುಮಾಡುತ್ತಿರುವನೆನ್ನುವುದರ ಮೇಲೆ ಆತನ ಖ್ಯಾತಿಯು ಇನ್ನೂ ಬೆಳೆಯಿತು. ಆಶ್ರಮಗಳಲ್ಲೆಲ್ಲ ಎಲ್ಲೆಲ್ಲಿಯೂ ರಾಜರ್ಷಿ ವಿಶ್ವಾಮಿತ್ರನ ವೃತ್ತಾಂತ ತಿಳಿಯದವರೇ ಇಲ್ಲ. ಆತನ ಬಳಿ ಅಸ್ತ್ರವಿದ್ಯೆಯನ್ನು ಸಂಗ್ರಹಿಸಲು ಅನೇಕರು ಬರುವರು. ಯಾರಾದರೂ ಒಬ್ಬೊಬ್ಬರಿಗೆ ಆ ವಿದ್ಯೆಯನ್ನು ಉಪದೇಶಿಸುವನು. ಆದರೂ ಆತನಿಗೆ ದಿಗಿಲು. ವೈರಮೂಲವಾದ ವೃತ್ತಿಯಿಂದ ಸಂಪಾದಿಸಿದ ವಿದ್ಯೆ. ಅದನ್ನು ಇತರರಿಗೆ ಕೊಟ್ಟರೆ ಅವರಿಗೂ ವೈರವೃತ್ತಿಯೇ ಹುಟ್ಟಿದರೆ ! ಎಂದು ಅಳುಕು.

ಆತನ ವೇದಾಧ್ಯಯನವು ಬಲಿಯಿತು. ಆತನ ಅಧ್ಯಯನದ ರೀತಿಯೇ ಬೇರೆ. ಆತನು ಒಂದು ಮಂತ್ರವನ್ನು ಆರಂಭಿಸಿದರೆ, ದೇಹತತ್ತ್ವದಲ್ಲಿ ಅದರ ಪರಿಣಾಮವೇನು? ಜಗತ್ತತ್ವದಲ್ಲಿ ಅದರ ಪರಿಣಾಮವೇನು? ಆ ಮಂತ್ರದಿಂದ ದೇವತೆಯ ಯಾವ ರೂಪವು ಪ್ರತೀತವಾಗುವುದು? ಆ ರೂಪಕ್ಕೂ ಪಿಂಡಾಂಡ ಬ್ರಹ್ಮಾಂಡಗಳಿಗೂ ಸಂಬಂಧವೇನು? ಆ ರೂಪವು ಆ ದೇವತೆಗೆ ಯಾಕೆ ಬಂತು? ಅವಾಂತರ ಕಾರಣಗಳಿಂದಲೋ ನೈಮಿತ್ತಿಕ ಕಾರಣದಿಂದಲೋ ಬಂದಿದ್ದರೆ, ಅದರ ನಿತ್ಯಸ್ವರೂಪವೇನು? ಜಗತ್ತಿನಲ್ಲಿ ಅದರ ಸೃಷ್ಟಿಯೇಕೆ? ಸ್ಥಿತಿಯ ಉದ್ದೇಶವೇನು? ಲಯವು ಯಾವಾಗ? ಅದೆಷ್ಟು ಕಾಲಕ್ಕೊಮ್ಮೆ ರೂಪಾಂತರ ನಾಮಾಂತರಗಳನ್ನು ಹೊಂದುವುದು? ಆ

ರೂಪಾಂತರ ನಾಮಾಂತರಗಳನ್ನು ಹೊಂದಿದಾಗ ಅದಕ್ಕೆ ಪೂಜೆಯು ಯಾರಿಂದ ಎಲ್ಲಿ ನಡೆಯುವುದು ? ಎಂಬ ಅಗಾಧ ವಿಚಾರಗಳನ್ನು ಹಿಡಿಯುವನು. ಋಕ್ಕಾಗಲಿ, ಯಜುಸ್ಸಾಗಲಿ, ಅಥರ್ವಣವಾಗಲಿ, ಸಾಮವನ್ನು ಮಾಡಿ ಉಪಬೃಂಹಣ ಮಾಡುವನು. ಆಗಾಗ ಹೀಗೆ ದೇವತಾರಹಸ್ಯವನ್ನು ಭೇದಿಸುವಾಗ ಒಮ್ಮೊಮ್ಮೆ ಆ ದೇವತೆಯ ಕೋಪಕ್ಕೆ ಪಾತ್ರನಾಗುವನು. ಆಗ ತಪ್ಪದೆ ಒಂದು ತೇಜಸ್ಸು ಬಂದು ತನ್ನನ್ನು ಆವರಿಸಿ ನಿಂತು ಆ ದೇವತೆಯ ಕೋಪದಿಂದ ಕಾಪಾಡುವುದು. ಆದರೂ ಆ ದೇವತಾಕೋಪದಿಂದ ಆದ ಅಭಿಭವವು ಕೊಂಚ ಕಾಲವಾದರೂ ಆತನನ್ನು ಮಂಕುಗೊಳಿಸದೆ ಬಿಡದು. ಅಂತಹ ಕಾಲದಲ್ಲಿ ಆತನು ಆಶ್ರಮವನ್ನು ಬಿಟ್ಟು ಹೊರಕ್ಕೇ ಹೋಗನು. ಗಡ್ಡೆ ಗೆಣಸುಗಳ ಯೋಚನೆಯಿಲ್ಲದೆ, ಎಂಟು ಹತ್ತು ದಿನವಾದರೂ ಸ್ನಾನಪಾನಗಳ ಯೋಚನೆಯಿಲ್ಲದೆ, ಗುಡಿಸಲಿನಲ್ಲಿಯೇ ಇದ್ದು ಬಿಡುವನು.

ಆತನಿಗೆ ಹಾಗೆ ದೇವತಾಕೋಪದಿಂದ ತನ್ನನ್ನು ಕಾಯುವ ತೇಜಸ್ಸು ಯಾವುದು ಎಂದು ತಿಳಿಯಲು ಬಹು ಕುತೂಹಲ. ಆದರೆ ಯಾರನ್ನು ಕೇಳಬೇಕು ? ಹೀಗೇ ಇದೇ ಯೋಚನೆಯಲ್ಲಿರುವಾಗ ವಾಮದೇವನಾಡಿದ ಮಾತು ನೆನೆಪಾಯಿತು. ಮನಸ್ಸಿಗೆ ಪ್ರಶ್ನೆಹಾಕಿದರೆ ಅದೇ ಉತ್ತರ ಕೊಡುವುದು ಎಂಬ ಮಾತು ನೆನಪಾಗಿ, "ಅಯ್ಯೋ ಹುಚ್ಚುತನವೇ, ದೇವತೆಗಳ ರಹಸ್ಯವನ್ನು ಭೇದಿಸಬಲ್ಲವನಿಗೆ ಈ ತೇಜಸ್ಸಿನ ರಹಸ್ಯವನ್ನು ಭೇದಿಸುವುದು ಅರಿದೆ ? ಇರಲಿ" ಎಂದು ಹೊರಟನು. ಆದರೆ ಆ ತೇಜಸ್ಸು ದೇವತೆಯ ಕೋಪವು ಬಂದಾಗ ಬರುವುದಲ್ಲದೆ ಇತರ ಕಾಲಗಳಲ್ಲಿ ಇರುವುದಿಲ್ಲ. ಏನು ಮಾಡಬೇಕು ?

ಕೌಶಿಕನ ಮನಸ್ಸು ಹೆದರಲಿಲ್ಲ. ದೇವತೆಗಳಲ್ಲೆಲ್ಲ ಆಪೋದೇವಿಯರು ಬಹಳ ದಯಾರ್ದ್ರಹೃದಯರು. ಅವರು 'ಉಶತೀರಿವ ಮಾತರಃ' ಮಕ್ಕಳನ್ನು ಎತ್ತಿಕೊಳ್ಳಬೇಕೆಂದು ಬರುವ ತಾಯಿಯರಂತೆ. ಅವರನ್ನು ಕರೆದು, ಅವರ ದಯೆಯಿಂದ ಈ ತೇಜಸ್ಸಿನ ರಹಸ್ಯವನ್ನು ಭೇದಿಸಬೇಕು ಎಂದುಕೊಂಡು ಸಿದ್ಧವಾದನು.

ಆಪೋದೇವಿಯರ ಮಂತ್ರಗಳು ಪಲವಿವೆ. ಯಾವುದನ್ನು ತೆಗೆದುಕೊಳ್ಳುವುದು ? ಒಂದೊಂದಾಗಿ ಯೋಚಿಸಿದನು. ಕೊನೆಗೆ ಒಂದು ಮಂತ್ರ

ವನ್ನು ಹುಡುಕಿದನು. ಅದನ್ನು ಆವೃತ್ತಿ ಹಾಕುತ್ತ, ಒಂದೊಂದುಸಲ ಅದನ್ನೇ ಸಾಮವಾಗಿ ಬೆಳೆಸಿಕೊಂಡು ಉಪಬೃಂಹಣ ಮಾಡುತ್ತ, ಅದರ ಅರ್ಥವನ್ನು ಮನಸ್ಸಿನಲ್ಲಿ ಪರಿಭಾವನೆ ಮಾಡುತ್ತ ಕುಳಿತನು. ಅದು ಗಾಯತ್ರಿ ಛಂದಸ್ಸಿನ ಮಂತ್ರ. ಮೂರು ಪಾದಗಳು. ಪಾದಪಾದಕ್ಕೂ ಎಂಟೆಂಟು ಅಕ್ಷರ. ಅದರ ರ್ಥವು " ನಿಮ್ಮಲ್ಲಿರುವ ಶಿವತಮವಾದ ರಸವು ಯಾವುದೋ ಅದನ್ನು ತಾಯಿ ಯರು ಮಕ್ಕಳಿಗೆ ಮೊಲೆಯೂಡಿಸುವಂತೆ, ನಮಗೆ ಕೊಡಿರಿ " ಎಂದು.

ಇಪ್ಪತ್ತನಾಲ್ಕು ದಿನವಾಯಿತು. ಪ್ರಾಣವಾಯುವಿನ ಊರ್ಧ್ವಗತಿ ಯನ್ನೂ ಅಪಾನವಾಯುವಿನ ಅಧೋಗತಿಯನ್ನೂ ತಡೆದು ಮನಸ್ಸಿನಿಂದ ಹಿಡಿದು ಶ್ವಾಸದವರೆಗೆ ಎಲ್ಲವೂ ಆಪೋಗತಿಗೆ ಬರುವಂತೆ ಮಾಡಿದ್ದಾನೆ. ದೇಹ ದಲ್ಲಿರುವ ಭೂತಗಳೆಲ್ಲ ಆಪೋಗತಿಯನ್ನು ಹಿಡಿದು ತೂಗುತ್ತಿವೆ. ಲೋಕದಲ್ಲಿ ಎಲ್ಲಿಂದ ಎಲ್ಲಿಯವರೆಗೆ ಆಪೋಭೂತವುಂಟೋ ಅಲ್ಲೆಲ್ಲ, ವಿಶ್ವಾಮಿತ್ರನಿಗೆ ಅಪ್ರತಿಹತವಾದ ಗತಿಯು ಬಂದಿದೆ. ಆಪೋದೇವಿಯರು ಸಹಜ ಸರಳೆ ಯರು. ದಯಾಸಂಪನ್ನೆಯರು. ಅವರು ತಮ್ಮ ರಹಸ್ಯಗಳನ್ನೆಲ್ಲ ತೋರಿ ಸುತ್ತಿದ್ದಾರೆ. ವಿಶ್ವಾಮಿತ್ರನು ಎಲ್ಲವನ್ನೂ ನೋಡುತ್ತ ಬಂದಿದ್ದಾನೆ. ಅಲ್ಲಿ ಆಪೋದೇವಿಯರು ಬಂದ ಕಡೆಯಲ್ಲೆಲ್ಲ ಒಂದೊಂದು ಜ್ಯೋತಿ ಅವರ ಹಿಂದೆ ಹಿಂದೆಯೇ ಬರುತ್ತಿದೆ. ಅವರ ಒಂದೊಂದು ರಹಸ್ಯವನ್ನೂ ಅರಿತಂತೆಲ್ಲ ಇವನ ದೇಹದಲ್ಲಿ ಒಂದೊಂದು ಭಾಗವು ಶುದ್ಧವಾಗಿ ವೀಣೆಯ ತಂತಿಯು ನುಡಿದಂತೆ ನುಡಿಯುತ್ತಿದೆ. ಕೊನೆಗೆ ಆತನು ಆ ದೇವಿಯರನ್ನು ಈ ತೇಜಸ್ಸು ಯಾವುದು ಎಂದು ಕೇಳುತ್ತಾನೆ. ಅವರು ನಗುತ್ತಾರೆ. ಮುಂದಿನ ದೃಶ್ಯವು ಹೊರಳಿದೆ.

ಮಂದಪ್ರಭೆಯ ಸುಂದರಲೋಕವೊಂದು. ಅಲ್ಲಿ ಎತ್ತ ತಿರುಗಿದರೂ ನೀರೆ! ಮೇಲೆ, ಕೆಳಗೆ, ನಡುವೆ, ಎಲ್ಲಾ ನೀರೇ! ಅಥವಾ ನೀರಿನಂತೆ ಕಾಣುವ ಇನ್ನೊಂದು ದ್ರವ. ಹಾಗೆಂದು ಅದರಲ್ಲಿ ಏನೂ ಹರಿಯಿಲ್ಲ. ಹಾಗೆಂದು ಕಲ್ಲು ಮಣ್ಣುಗಳಂತಹ ಘನತ್ವವೂ ಇಲ್ಲ. ಸ್ಫಟಿಕದ ಮುದ್ದೆ ಕರಗಿ ನೀರಾಗದೆ ಬೆಳ ಕಾದಂತೆ ಇದೆ. ಹಾಗೆಂದು ಭಾರಿಯ ಪ್ರಕಾಶವಿಲ್ಲ. ಅದೊಂದು ಅಲೌಕಿಕ ವಾದ ಪ್ರಕಾಶ. ಅಲ್ಲಿರುವುದನ್ನು ಕಣ್ಣು ಕಾಣುತ್ತದೆಯೆನ್ನುವುದಕ್ಕಿಂತ ಅದೇ ಕಣ್ಣಿಗೆ ಕಾಣುತ್ತಿದೆಯೆಂದರೆ ಸರಿ ಎನ್ನುವಂತಿದೆ.

ಹೀಗೆ ಇರುವ, ಅಪೂರ್ವವಾದರೂ ಅಜ್ಞಾತವಲ್ಲದಂತೆ ತೋರುತ್ತಿರುವ ಆ ಪದಾರ್ಥವನ್ನು ನೋಡುತ್ತಿದ್ದ ಹಾಗೆಯೇ ಯಾವುದೋ ಒಂದು ತೇಜಃ ಕಣವು ಬಂದು ಅಲ್ಲಿ ನೆಲಸಿದೆ. ಅದು ಅಲ್ಲಿಯೇ ಬೆಳೆಯುತ್ತದೆ. ದೊಡ್ಡ ದಾಗುತ್ತದೆ. ನೋಡುವುದಕ್ಕೆ ರೊಟ್ಟಿಯ ಆಕಾರ. ಅದು ಬೆಳೆಯಿತು. ಹಿಡಿಯಷ್ಟು ಇದ್ದುದ್ದು ಮುಡಿಯಷ್ಟಾಗಿ, ಮುಡಿಯು ಮಲೆಯಷ್ಟಾಗಿ, ಅದು ತಾನೇತಾನಾಗಿ ಹೋಗಿದೆ. ಕೊನೆಗೆ ಒಡೆಯುತ್ತದೆ. ಅದರೊಳಗೆ ದೇವ, ಮಾನವ, ತಿರ್ಯಕ್, ಸೃಷ್ಟಿಯೆಲ್ಲವೂ ಇದೆ. ಕಲ್ಲು, ಮಣ್ಣು, ಗಿಡ, ಬಳ್ಳಿ, ಹಕ್ಕಿ, ಹಾವು, ಮೊದಲಾಗಿ, ಗಾಜಿನ ಬೊಂಬೆಗಳಂತೆಯೂ ನೀರು ಗಾಳಿ ಗಳ ಬೊಂಬೆಗಳಂತೆಯೂ ಕಾಣುವ ದೇವತೆಗಳವರೆಗೆ ಎಲ್ಲವೂ ಇವೆ.

ಕೌಶಿಕನ ಮನಸ್ಸು ಇದು ಏನು ಎನ್ನುತ್ತದೆ. ಅದು ಯಾವುದೋ ಒಂದು ಅಲೌಕಿಕವಾಗಿ ಅಶರೀರವಾಗಿರುವ ವಾಣಿಯು " ಇದು ಅಪೋರಸ. ಅದು ಬ್ರಹ್ಮಾಂಡ. ಇದನ್ನು ಮನುವು ತಪಸ್ಸಿನಿಂದ ಕಂಡಿದ್ದನು. ಇಂದು ನೀನು ಕಂಡೆ " ಎನ್ನುತ್ತದೆ. ಮತ್ತೆ ಜೊತೆಯಲ್ಲಿ ಇನ್ನೊಂದು ಪ್ರಶ್ನೆ "ಇದನ್ನು ಕಂಡು ಏನಾಯಿತು ? " ಅದಕ್ಕಲ್ಲಿಯೇ ಹಾಗೆಯೇ ಉತ್ತರ ! " ಬ್ರಹ್ಮಾಂಡವು ಬೆಳೆದು ಒಡೆದುದನ್ನು ಕಂಡವನು ಬೇಕೆಂದರೆ ಇನ್ನೊಂದು ಬ್ರಹ್ಮಾಂಡ ಮಾಡ ಬಹುದು."

ಮತ್ತೆ ಪ್ರಶ್ನೆ "ಅದಷ್ಟು ಸುಲಭವೆ ?" ಮತ್ತೆ ಉತ್ತರ : " ಏನು ಮಹಾ ! ಮಣ್ಣಿದ್ದರೆ ಮಡಕೆ ಮಾಡುವುದಕ್ಕಾಗುವುದಿಲ್ಲವೆ ?"

" ಮಣ್ಣೆಲ್ಲಿದೆ ? "

" ಪಿಂಡಾಂಡದ ಮೂಲೆ ಮೂಲೆಯಲ್ಲಿಯೂ ಬೀಜರೂಪದಲ್ಲಿ ಇದ್ದೇ ಇದೆ."

" ಹಾಗಾದರೆ ಮಾಡಿ ನೋಡೋಣವೇ ? "

" ಇನ್ನು ಕಾಲವಿಲ್ಲ. "

" ಊಹುಂ ಮಾಡಿ ನೋಡಲೇಬೇಕು."

ಉತ್ತರವಾಗಿ ಒಂದು ಕೇಕೆ. ವಿಶ್ವಾಮಿತ್ರನ ದೇಹದ ಕಣಕಣವೂ ಆ ಕೇಕೆಯನ್ನು ಕೇಳಿ ನಡುಗಿಹೋಗಿದೆ. ಇವನಿಗೆ ಆ ಸಂಕಲ್ಪವೇ ಮರೆತು ಹೋಯಿತು. ಏನೋ ಭೀತಿಯಾಯಿತು. ತನಗಿಂತ ದೊಡ್ಡದು ಯಾವುದೋ

ಒಂದು ಬಂದು ತನ್ನನ್ನು ಹಿಡಿದು ಕಬ್ಬು ಸಿಗಿಯುವಂತೆ ಸಿಗಿದು ಬಿಡುತ್ತಿದೆ. ಎನ್ನಿಸಿತು. ಕೂಡಲೇ ಯಾವುದೋ ಒಂದು ತೇಜಸ್ಸು ಬಂದು ಅಡ್ಡವಾಯಿತು. ಶಾಂತವಾಗಿ, ಹಿತವಾಗಿ ಪ್ರಸನ್ನವಾದ ಆ ತೇಜಸ್ಸು ಬಂದು ನಿಂತಿದೆ. ಕಬಳಿಸುವುದಕ್ಕೆಂದು ಬಂದ ಆ ಅವ್ಯಕ್ತ ಕ್ರೂರಜ್ವಾಲೆಯು ಮಾಯವಾಗಿದೆ.

ವಿಶ್ವಾಮಿತ್ರನ ಚಿತ್ತವು ಪ್ರಬುದ್ಧವಾಯಿತು. ಪದೇಪದೇ ತನ್ನನ್ನು ಬಂದು ಕಾಪಾಡುತ್ತಿರುವ ಆ ತೇಜಸ್ಸು ಯಾವುದು ? ಅದರ ಪರಿಚಯವನ್ನು ಪಡೆಯಬೇಕೆಂದು ಮಾಡಿಕೊಂಡಿದ್ದ ಸಂಕಲ್ಪವೀಗ ಪ್ರಕಟವಾಗಿ, ಅದರ ಪರಿಚಯವನ್ನು ಬಯಸಿದೆ. ಆ ತೇಜಸ್ಸಿಗೆ ಆತನ ಮನಸ್ಸು ಅಭ್ಯಾಸವಶದಿಂದ ಪೂಜೆಯನ್ನು ಸಲ್ಲಿಸಿದೆ. ಮೊದಲೇ ಶಾಂತವಾಗಿ ಪ್ರಸನ್ನವಾದ ತೇಜಸ್ಸು ಪೂಜಾದಿಗಳಿಂದ ಇನ್ನೂ ಪ್ರಸನ್ನವಾಗಿ ವರಪ್ರದಾನಕ್ಕೆ ಸಿದ್ಧವಾಗಿದೆ.

---

## ಹದಿನಾರನೆಯ ತರಂಗ

ಕೌಶಿಕನು ಪರಿಚಯವನ್ನು ಕೋರಿದನು. ತೇಜಸ್ಸು ರೂಪಕರಿಸಿತು. ಅವ್ಯಕ್ತವಾದ ತೇಜೋರಾಶಿಯಾಗಿದ್ದುದು ಮೂರ್ತಿಯಾಗಿ ಸಾಕಾರಬಿಂಬವಾಗಿ ನಿಂತಿತು. ನೋಡಿದರೆ ಒಂದಲ್ಲ ಮೂರು ಬಿಂಬಗಳು.

ಮೊದಲನೆಯದು ತನ್ನ ಗುರುವೆಂದರೂ ಎನ್ನಿಸಿಕೊಳ್ಳಬಹುದಾದ ವಾಮದೇವ. ಎರಡನೆಯದು ಒಬ್ಬ ರಾಜರ್ಷಿ. ಮೂರನೆಯದು ಒಬ್ಬ ಬ್ರಹ್ಮರ್ಷಿ. ಮೂವರೂ ನಿಂತಿದ್ದಾರೆ. ಮೂವರಿಗೂ ಕೌಶಿಕನು ಮತ್ತೆ ಪೂಜಾದಿಗಳನ್ನು ಭಕ್ತಿಯಿಂದ ಒಪ್ಪಿಸಿದನು. ಎಲ್ಲರಿಗೂ ಆಸನಾದಿಗಳನ್ನು ಕಲ್ಪಿಸಿದನು. ಆ ತೇಜೋಮೂರ್ತಿಗಳು ಸಾವಧಾನವಾಗಿ ಆಸನಗಳಲ್ಲಿ ಕುಳಿತುವು. ಪಾರ್ಥಿವಶರೀರವನ್ನು ಧರಿಸಿ ಬಂದವರಂತೆಯೇ ಮಾತನಾಡಿದುವು.

ವಾಮದೇವನು ಮೊದಲು ಮಾತನಾಡಿದನು: "ಆ ದಿನ ನೀನು ನಮ್ಮಾಶ್ರಮದಲ್ಲಿ ನನಗೆ ನಮಸ್ಕಾರ ಮಾಡಿದಾಗ, ನನ್ನ ದೇಹದಿಂದ ನಿನ್ನ ದೇಹದೊಳಕ್ಕೆ ಏನೋ ಬಂದಂತಾಗಲಿಲ್ಲವೆ? ಅದೇ ನಾನು. ಇದೋ ಈತನು ನಿನ್ನ ಪಿತಾಮಹನಾದ ಕುಶಿಕನು. ಈತನು ಋಚೀಕ ಮಹರ್ಷಿಯು. ಮಹಾತ್ಮನಾದ ಈ ಕುಶಿಕನು ಋಚೀಕನ ಪಿತಾಮಹನಾದ ಚ್ಯವನ ಮಹ

ರ್ಷಿಗೆ ಬೇಕಾದ ಹಾಗೆ ಸೇವೆಯನ್ನು ಮಾಡಿದನು. ಆದರಿಂದ ಪ್ರೀತನಾದ ಚ್ಯವನನು ಕುಶಿಕನಿಗೆ ಬೇಕಾದ ವರ ಕೊಡುವುದಾಗಿ ಹೇಳಲು, ಈತನು ತಾನು ಬ್ರಾಹ್ಮಣನೂ ತಪಸ್ವಿಯೂ ಆಗಬೇಕೆಂದು ಕೋರಿದನು. ದೇವೇಂದ್ರ ನಿಗೆ ಸಮನಾದ ನರೇಂದ್ರನಾಗಿದ್ದು ಅದನ್ನೊಲ್ಲದೆ, ತಪಸ್ಸನ್ನೂ ಬ್ರಾಹ್ಮಣ್ಯ ವನ್ನೂ ಕೋರಿದ ಈತನನ್ನು ಕಂಡು ಚ್ಯವನನು ಬಹುವಾಗಿ ಆಶ್ಚರ್ಯಪಟ್ಟು 'ನಿನ್ನ ಕೋರಿಕೆಯು ವಿಫಲವಾಗುವುದಿಲ್ಲ. ನಿನಗೆ ಬ್ರಾಹ್ಮಣನಾಗುವ ಯೋಗವಿಲ್ಲವಾದರೂ ನಿನ್ನ ಮಗನ ಮಗನು ಬ್ರಾಹ್ಮಣನಾಗುವನು. ನಿನ್ನ ಸಂಕಲ್ಪವು ನಿನ್ನಲ್ಲಿ ಅಲ್ಲದಿದ್ದರೂ ನಿನ್ನ ಮೊಮ್ಮಗನಲ್ಲಿ ಫಲವಾಗುವುದು' ಎಂದು ಅನುಗ್ರಹ ಮಾಡಿದನು.

"ಈ ಋಚೀಕನು ನಿನ್ನ ಭಾವನು. ಈತನನ್ನು ನೀನು ಬಲ್ಲೆ. ನಿಮ್ಮ ತಂದೆಯು ಬಹುಕಾಲ ಅಪುತ್ರವಂತನಾಗಿದ್ದು, ಪುತ್ರಾರ್ಥಿಯಾಗಿ ತಪಸ್ಸು ಮಾಡಿದನು. ಆತನಿಗೆ ಆಗ ತಪಃಫಲವಾಗಿ ಸತ್ಯವತಿಯೆಂಬ ಮಗಳಾದಳು. ಈತನು ನಿಮ್ಮ ತಂದೆಯ ಕೋರಿಕೆಯಂತೆ, ಒಂದು ಕಿವಿ ಮಾತ್ರ ಕಪ್ಪಾಗಿ ದೇಹವೆಲ್ಲವೂ ಚಂದ್ರಧವಳವಾಗಿದ್ದ ಎಂಟು ನೂರು ಕುದುರೆಗಳನ್ನು ವರು ಣಾನುಗ್ರಹದಿಂದ ಪಡೆದು, ಶುಲ್ಕವಾಗಿ ಕೊಟ್ಟು ಸತ್ಯವತಿಯನ್ನು ಮದುವೆ ಯಾದನು.

"ನಿಮ್ಮ ತಾಯಿಯೂ ಸೋದರಿಯೂ ಇಬ್ಬರೂ ಪುತ್ರಾರ್ಥಿನಿಯರಾಗಿ ಈತನನ್ನು ಪ್ರಾರ್ಥಿಸಲು, ಈತನು ಎರಡು ಚರುಗಳನ್ನು ಕಲ್ಪಿಸಿ, ಬ್ರಹ್ಮ ತೇಜಸ್ಸನ್ನು ಒಂದರಲ್ಲಿಯೂ, ಕ್ಷಾತ್ರತೇಜಸ್ಸನ್ನು ಇನ್ನೊಂದರಲ್ಲಿಯೂ ಆವಾ ಹಿಸಿ, ಹೆಂಡತಿಗೆ ಕೊಟ್ಟು 'ಕ್ಷಾತ್ರತೇಜದ ಚರುವನ್ನು ನಿಮ್ಮ ತಾಯಿಗೆ ಕೊಡು. ಬ್ರಹ್ಮತೇಜಸ್ಸಿನ ಚರುವನ್ನು ನೀನು ಇಟ್ಟುಕೊ. ನೀವಿಬ್ಬರೂ ಋತುಸ್ನಾತರಾಗಿ ಬಂದ ದಿನ ಆಕೆಯು ಅಶ್ವತ್ಥವನ್ನೂ, ನೀನು ಔದುಂಬರ ವನ್ನೂ ಸೇವಿಸು. ನಿಮ್ಮ ನಿಮ್ಮ ಚರುಗಳನ್ನು ಸ್ವೀಕರಿಸಿ' ಎಂದು ಹೇಳಿ ದನು. ಆದರೆ ತಾಯಿಮಕ್ಕಳು ದೈವಚೋದಿತರಾಗಿ ಸ್ವಸಂಕಲ್ಪದಿಂದಲೇ ಚರುಗಳನ್ನು ಬದಲಾಯಿಸಿಕೊಂಡರು. ಆದರ ಫಲವಾಗಿ ನೀನು ಗಾಧಿಪತ್ನಿ ಯಲ್ಲಿ ಜನ್ಮಿಸಿದೆ. ಸತ್ಯವತಿಯು ತನ್ನ ತಪ್ಪನ್ನು ಒಪ್ಪಿಕೊಂಡು ಕ್ಷತ್ರಿಯನು ತನ್ನ ಗರ್ಭದಲ್ಲಿ ಬೇಡವೆಂದು ಪ್ರಾರ್ಥಿಸಿಕೊಂಡಳಾಗಿ ಆಕೆಯ ಗರ್ಭದಲ್ಲಿ

ಜಮದಗ್ನಿಯು ಹುಟ್ಟಿದನು. ಜಮದಗ್ನಿಯ ಮಗನಾಗಿ ಕ್ಷತ್ರಿಯ ಕುಲಾಂತಕನಾದ ಪರಶುರಾಮನು ಕ್ಷಾತ್ರತೇಜೋವಿಶಿಷ್ಟನಾದ ಬ್ರಾಹ್ಮಣನು. ನೀನು ಬ್ರಹ್ಮತೇಜೋವಿಶಿಷ್ಟನಾದ ಕ್ಷತ್ರಿಯನು. ಇವರಿಬ್ಬರಿಗೂ ಪೂಜೆಮಾಡು. ಈ ದಿನ ಹೀಗೆ ನಿನಗೆ ಈ ಕಥೆಯನ್ನು ಹೇಳಬೇಕೆಂದೇ ಇವರನ್ನು ಕರೆತಂದೆನು."

ವಿಶ್ವಾಮಿತ್ರನು ಆ ಮಾತನ್ನು ಕೇಳಿ ಪರಮಹರ್ಷಿತನಾಗಿ ಅವರಿಗೆ ವಿಶೇಷವಾಗಿ ಪೂಜೆಮಾಡಿದನು. ಆ ಬ್ರಹ್ಮ ಕ್ಷತ್ರ ತೇಜೋರಾಶಿಗಳೆರಡೂ ಆತನಿಗೆ ಇಷ್ಟಾರ್ಥ ಸಿದ್ಧಿಯಾಗಲೆಂದು ಆಶೀರ್ವಾದ ಮಾಡಿ ಮರೆಯಾದರು. ವಾಮದೇವನು ಆತನ ಕೋರಿಕೆಯಂತೆ ಇನ್ನೂ ಒಂದು ಗಳಿಗೆಯಿದ್ದನು.

ವಿಶ್ವಾಮಿತ್ರನು ವಾಮದೇವನ ಉಪಕಾರವೆಷ್ಟು ಎಂಬುದನ್ನು ಬಲ್ಲನು. ಅದನ್ನು ಆತನ ಹೃದಯವು ಬಲ್ಲುದು. ಅದಷ್ಟನ್ನೂ ಹೇಳಬೇಕೆಂದು ವಾಕ್ಕು ಪ್ರಯತ್ನಪಟ್ಟರೂ ಆಗಲಿಲ್ಲ. ಕೊನೆಗೆ ಹರಕುಮುರುಕಾಗಿ ತನ್ನ ಕೃತಜ್ಞತೆಯನ್ನು ಸೂಚಿಸಿ, ಕೌಶಿಕನು "ವಾಮದೇವ, ಯಾವಾಗ ಯಾವಾಗ ದೇವತೆಗಳ ಕೋಪವು ಬಂದು ನಾನು ಹತನಾಗಬೇಕಾಗಿತ್ತೋ ಆಗಾಗೆಲ್ಲ ನೀನು ಬಂದು ಕಾದಿರುವೆ. ತಂದೆಯು ಮಗನನ್ನು ಕಾಯುವುದಕ್ಕಿಂತ ಹೆಚ್ಚಾಗಿ ನೀನು ನನ್ನನ್ನು ಕಾಪಾಡಿರುವೆ. ನೀನು ನನಗೆ ಮಾಡಿರುವ ಉಪಕಾರವು ಅಷ್ಟಿಷ್ಟಲ್ಲ. ಈ ಋಣವನ್ನು ನಾನು ಹೇಗೆ ತೀರಿಸಲಿ ?" ಎಂದು ಕೇಳಿಕೊಂಡನು.

ವಾಮದೇವನು ನಕ್ಕು ಹೇಳಿದನು :— "ಹುಚ್ಚ, ಉಪಕಾರ, ರುಣ, ಏನೇನೋ ಮಾತನಾಡುತ್ತಿರುವೆ. ಆದಿತ್ಯನು ತನ್ನ ಕಿರಣಗಳಿಂದ ಸಂಗ್ರಹಿಸಿದ ಉದಕವನ್ನು ಪರ್ಜನ್ಯನು ಮತ್ತೆ ಮಳೆಯಾಗಿ ವರ್ಷಿಸುವನು. ಭೂಮಿಯು ಯಾರಿಗೆ ರುಣಿ ? ತನ್ನಲ್ಲಿದ್ದ ನೀರನ್ನು ಮೇಲಕ್ಕೆ ಸೆಳೆದುಕೊಂಡ ಆದಿತ್ಯನಿಗೋ? ಅಥವಾ ಮತ್ತೆ ತನಗೆ ಮಳೆಯಾಗಿ ಕೊಟ್ಟ ಪರ್ಜನ್ಯನಿಗೊ ? ಹಾಗೆಯೇ ಅಗ್ನಿದೇವನು ನನಗೆ ಯಾರಿಗೂ ತಿಳಿಯದ ವೈಶ್ವಾನರ ವಿದ್ಯೆಯನ್ನು ಅನುಗ್ರಹಿಸಿದನು. ನಾನು ನಿನಗೆ ಆ ವೈಶ್ವಾನರವನ್ನು ಕೊಡಬೇಕೆಂದು ಇದುವರೆಗೂ ಜೊತೆಜೊತೆಯಲ್ಲಿ ಇದ್ದೆ. ಆದರೆ ನಿನಗೆ ಈ ದಿನ ನಿಮ್ಮ ಪೂರ್ವಜನಾದ ಸಿಂಧುದ್ವೀಪ ಮಹರ್ಷಿಯ ಅನುಗ್ರಹದಿಂದ ಜಲದೇವತೆಗಳ ಪ್ರಸಾದವು ಸಿಕ್ಕಿ

ಅಪಾಂನಪಾತ್ ಸ್ವರೂಪವು ತಿಳಿಯಿತು. ಇನ್ನು ನೀನು ಆ ವಿದ್ಯೆಯನ್ನು ಕೃಷಿಮಾಡಿ ಊರ್ಜಿತಪಡಿಸಿಕೊ. ನೀನು ಸಮಾಧಿಯಲ್ಲಿ ಕಂಡುದು ಆಪೋಜ್ಯೋತಿ. ಸೃಷ್ಟಿಯ ಪೂರ್ವರೂಪವಾದರೆ ಅದು ಆಪೋಜ್ಯೋತಿ. ಸೃಷ್ಟಿಯ ಉತ್ತರರೂಪವಾದರೆ ಅದು ಅಪಾಂನಪಾತ್. ಬ್ರಾಹ್ಮಣನಾಗ ಬೇಕೆಂದವನು ಸರ್ವಪ್ರಯತ್ನದಿಂದಲೂ ಈ ಆಪೋಜ್ಯೋತಿಯನ್ನು ಕಾಣ ಬೇಕು. ಇದನ್ನೇ ನಚಿಕೇತನಿಗೆ ಯಮನು ಹೇಳಿದುದು. ಇದರ ಪೂರ್ವ ಸ್ವರೂಪವು ಪ್ರಣವವು. ಇದರ ಅನುಗ್ರಹವನ್ನು ಪಡೆಯಬೇಕೆಂದೇ ಎಲ್ಲರೂ ತಪಸ್ಸು ಬ್ರಹ್ಮಚರ್ಯೆಗಳನ್ನು ಮಾಡುವುದು. ಅದೃಷ್ಟವಶದಿಂದ ಇದು ನಿನಗೆ ಸಿಕ್ಕಿತು.

"ನೀನು ಜನ್ಮತಃ ಬ್ರಾಹ್ಮಣನೇ ಆಗಿದ್ದರೆ ನಿಜವಾಗಿಯೂ ನಿನಗೆ ಈ ಸಾಹಸದ ಬುದ್ಧಿಯಿರುತ್ತಿರಲಿಲ್ಲ. ನೀನು ಸೌಮ್ಯವಾಗಿ ದೇವತೆಗಳ ಕೈಕಾಯ್ದು ಕೂರುತ್ತಿದ್ದೆ. ಕ್ಷತ್ರಿಯನ ರಕ್ತ, ಬ್ರಾಹ್ಮಣನ ತೇಜಸ್ಸು, ಅದರಿಂದ ಇಂತಹ ಸಾಹಸಮಾಡಿ ನೀನು ಆಪೋಜ್ಯೋತಿಯನ್ನು ಕಂಡೆ. ಇದು ಲೋಕದ ಅದೃಷ್ಟ.

" ನೀನು ಋಣದ ಮಾತನ್ನು ಹೇಳುತ್ತಿರುವೆ. ಇನ್ನಷ್ಟು ದಿನವಾಗಲಿ. ಈ ಭುವನ ಬ್ರಹ್ಮಾಂಡಗಳೆಲ್ಲವೂ ಒಂದೇ ಎಂಬುದು ನಿನ್ನ ಮನಸ್ಸಿಗೂ ಗೋಚರವಾಗಲಿ. ಆ ದಿನದವರೆಗೂ ಈ ಋಣದ ಮಾತನ್ನು ಅತ್ತಿಟ್ಟಿರು. ಎಲೆಗಳು ವಾಯುಭಕ್ಷಗಳಾಗಿ ಗಿಡವನ್ನು ಬೆಳೆಸುವುವು. ಬೇರುಗಳು ಜಲ ಭಕ್ಷಗಳಾಗಿ ಗಿಡವನ್ನು ಬೆಳೆಸುವುವು. ಎಲೆಯು ಕುಡಿದ ವಾಯುವನ್ನು ಬೇರೂ, ಬೇರು ಕುಡಿದ ನೀರನ್ನು ಎಲೆಯೂ ಕಕ್ಕುವುದು. ಗಿಡದ ಈ ಕೊನೆ ಯಲ್ಲಿ ಬೇರು ಆ ಕೊನೆಯಲ್ಲಿ ಎಲೆ. ಹಾಗೆ ನಾವೆಲ್ಲರೂ ಒಂದೇ ಗಿಡದ ಎಲೆ ಬೇರುಗಳ ಹಾಗೆ ಎಂಬುದು ನಿನ್ನ ಮನಸ್ಸಿಗೂ ಅರಿವಾದರೆ, ಆಗ ಸೃಷ್ಟಿಯ ನಾಲ್ಕಯ್ದನೆಯ ಘಟ್ಟದಲ್ಲಿ ಕಾಣುವ ಈ ವೈವಿಧ್ಯವನ್ನೂ ದ್ವೈತವನ್ನೂ ಲಕ್ಷ್ಯದಲ್ಲಿಟ್ಟುಕೊಂಡು ಆಡುವ ಮಾತುಗಳು ನಿಲ್ಲುವುವೆ ? ಹಾಗೆಂದರೆ ಋಣ ವಿಲ್ಲವೆ ಎನ್ನಬೇಡ. ಬ್ರಹ್ಮಾಂಡ ಕಟಾಹವನ್ನು ಭೇದಿಸಿ ಹೋಗುವವರೆಗೆ ಋಣ–ಋಣೀಭಾವವುಂಟು. ಎಲ್ಲಿನವರೆಗೂ ನೋಡುವ ಕಣ್ಣು ಜಡಚೇತನ, ಸ್ತ್ರೀಪುರುಷ, ಆದಿಭೇದವನ್ನು ಕಾಣುತ್ತಿರುವುದೋ ಅಲ್ಲಿನವರೆಗೂ ಉಂಟು.

"ನಾನು ಯಾವ ದೇವತೆಗಳ ಅನುಗ್ರಹದಿಂದ ಋಷಿಯಾಗಿರುವೆನೋ ಆ ದೇವತೆಗಳನ್ನು ಹವಿರ್ಮುಖವಾಗಿ ಅರ್ಚಿಸು. ಸತ್ಯವನ್ನು ತಿಳಿದು ಬೋಧಿಸು. ಲೋಕದ ಸ್ಥಿತಿಯನ್ನು ಉಚ್ಛೃಂಖಲನಾಗದೆ ಪಾಲಿಸು. ಅಲ್ಲಿಗೆ ನೀನು ಅನೃಣಿಯಾಗುವೆ."

ವಿಶ್ವಾಮಿತ್ರನು ಆ ಮಾತನ್ನು ಕೇಳುತ್ತ ಕೇಳುತ್ತಲೇ ಜೋಗುಳವನ್ನು ಕೇಳುತ್ತಿರುವ ಮಗುವು ಸ್ವಪ್ರಯತ್ನವಿಲ್ಲದೆಯೇ ನಿದ್ರಾಪರವಶನಾಗುವಂತೆ ಸಮಾಧಿವೃತ್ತಿಯನ್ನು ಪಡೆದನು. ವಾಮದೇವನ ಮಾತುಗಳೆಲ್ಲ ಆ ಸಮಾಧಿಸ್ಥನಾದ ವಿಶ್ವಾಮಿತ್ರನ ಮನಸ್ಸಿನಲ್ಲಿ ವಜ್ರಖಚಿತವಾದಂತೆ ನಿಂತುವು.

ಸಮಾಧಿಸ್ಥನಾಗಿ ವೃತ್ತಿರಹಿತನಾಗಿ ಶಿಲಾಸ್ತಂಭದಂತೆ ಕುಳಿತಿರುವ ವಿಶ್ವಾಮಿತ್ರನನ್ನು ವಾಮದೇವನು ನೋಡಿ "ಕಲ್ಲಿನಲ್ಲಿ ಆಕಾರ ಮೂಡಿತು. ಇನ್ನೂ ಬೊಂಬೆಯಾಗಬೇಕು. ಅದಕ್ಕೆ ಜೀವ ಬರಬೇಕು. ಇನ್ನೂ ಎಷ್ಟು ದೂರ! ಗುರುದೇವನ ಅಪ್ಪಣೆಯ ಮೊದಲನೆಯ ಮೆಟ್ಟಿಲಾಯಿತು. ನೆಟ್ಟ ಆಲದ ಕೊಂಬೆ ಚಿಗುರಿತು. ಇನ್ನು ಇದು ಮಹಾವೃಕ್ಷವಾಗಬೇಕು. ಆಗುವುದು ಅದಕ್ಕೆ ಸಂದೇಹವೇನು?" ಎಂದು ಸಂತೋಷದಿಂದ ತಲೆದೂಗಿ ಅಲ್ಲಿಯೇ ಅದೃಶ್ಯನಾದನು.

---

## ಹದಿನೇಳನೆಯ ತರಂಗ

ವಿಶ್ವಾಮಿತ್ರನು ಸಮಾಧಿಯಿಂದ ಏಳುವ ವೇಳೆಗಾಗಲೇ ಎರಡು ದಿನವಾಗಿದೆ. ಆತನು ಹಾಗೆ ಪದ್ಮಾಸನದಲ್ಲಿ ಕುಳಿತು ಮನುಷ್ಯ ಮಾನದಲ್ಲಿ ಇಪ್ಪತ್ತಾರು ದಿನಗಳಾಗಿವೆ. ದೇಹವೂ ಯಾವ ರೀತಿಯಲ್ಲೂ ತೊಂದರೆ ಕೊಟ್ಟಿಲ್ಲ.

ಸಮಾಧಿಯಿಂದ ಕಣ್ಣುಬಿಡುತ್ತಿದ್ದ ಹಾಗೆಯೇ ಇಬ್ಬರು ತೇಜೋವತಿಯರ ದರ್ಶನವಾಯಿತು. ಸುಪ್ರಸನ್ನವಾದ ಮಂದಹಾಸಗಳಿಂದ ಮಧುರವಾಗಿ ಮನೋಹರವಾಗಿರುವ ಆ ದೇವಿಯರಿಬ್ಬರು ಕೌಶಿಕನನ್ನು ನೋಡಿ

ನಕ್ಕರು. ಕೌಶಿಕನು ಅವರೀರ್ವರಿಗೂ ಸಲ್ಲಬೇಕಾದ ಸತ್ಕಾರವನ್ನು ಸಲ್ಲಿಸಿ "ತಾವು ಯಾರು ?" ಎಂದು ವಿಚಾರಿಸಿದನು.

ಅವರು ತಮ್ಮ ಕಥೆಯನ್ನು ಹೇಳಿದರು :—"ನಾವು ಬಲಾ, ಅತಿಬಲಾ ಎಂಬ ಎರಡು ವಿದ್ಯೆಯರು. ಆಪೋದೇವಿಯರು ತಮ್ಮ ಮೇಲೆ ಕೃಪೆಮಾಡಿ ನಮ್ಮನ್ನು ತಮಗೆ ಅನುಗ್ರಹಿಸಿರುವರು. ನಮ್ಮ ಅನುಗ್ರಹಕ್ಕೆ ಪಾತ್ರರಾದವರು ದೇವಕಾರ್ಯದಲ್ಲಿರುವವರೆಗೂ ಕ್ಷುತ್ತೃಷೆಗಳಿಂದ ಆಗಲಿ ಇನ್ನು ಯಾವ ವಿಧವಾದ ದೇಹಶ್ರಮ, ರೋಗ ರುಜಿನಗಳಿಗಾಗಲಿ ಪಾತ್ರವಾಗುವುದಿಲ್ಲ" ಎಂದರು.

ವಿಶ್ವಾಮಿತ್ರನು ಆಪೋದೇವಿಯರನ್ನು ಸ್ಮರಿಸಿದನು. ಅವರು ಬಂದು ಆ ದೇವಿಯರ ಸಂಬಂಧವಾದ ಮಂತ್ರ ಪಟಲಗಳನ್ನೆಲ್ಲ ಸರಹಸ್ಯವಾಗಿ ಉಪದೇಶ ಮಾಡಿದರು. ಆ ವಿದ್ಯಾದೇವಿಯರ ಅನುಗ್ರಹದಿಂದ ಆತನಿಗೆ ಅದುವರೆಗೆ ಆಗಿದ್ದ ಆಯಾಸವೆಲ್ಲವೂ ಪರಿಹಾರವಾಯಿತು.

ಆತನಿಗೆ ಹಿಂದಿನದೆಲ್ಲವೂ ನೆನಪಾಗಿ ವಾಮದೇವನು ತನ್ನನ್ನು ಕಾಯುತ್ತಿರುವನೆಂಬುದು ಅತೀವ ಆಶ್ಚರ್ಯವನ್ನುಂಟುಮಾಡಿತು. ಅಂದು ವಸಿಷ್ಠಾಶ್ರಮದಲ್ಲಿ ಆದ ಸಂಘಟನೆ, ತಾನು ಹಿಮಾಲಯವನ್ನು ಬಿಟ್ಟು ಬಂದಾಗ ನಡೆದುದು, ಈಚೆಗೆ ತಾನು ಕಂಡುದು, ಎಲ್ಲವೂ ಆತನಿಗೆ ವಾಮದೇವನಲ್ಲಿ ಅಪಾರವಾದ ಗೌರವವನ್ನೂ ಭಕ್ತಿಯನ್ನೂ ಹುಟ್ಟಿಸಿವೆ. ವಾಮದೇವನಿಗಾಗಿ ಆತನು ತನ್ನ ಪ್ರಾಣವನ್ನು ಕೂಡ ಕೊಡಲು ಸಿದ್ಧ. ಆತನ ಮನಸ್ಸಿಗೆ, ನಾಳೆ ಲೋಕಕರ್ತನಾದ ಮಹೇಶ್ವರನೇ ಬಂದರೆ, ಅವನೂ ವಾಮದೇವನ ರೂಪದಲ್ಲಿಯೇ ಬರಬೇಕು ಎನ್ನುವ ಮಟ್ಟಿಗೆ ಆಗಿದೆ.

ಹೀಗೆ ವಾಮದೇವನ ಪ್ರಭಾವವನ್ನು ಕುರಿತು ಚಿಂತಿಸುತ್ತಿರುವ ಮನಸ್ಸು ತಾನು ಸಂಯಮದಲ್ಲಿ ಕಂಡುದನ್ನು ನೆನೆದು "ಬೇಕಾದರೆ ಇನ್ನೊಂದು ಬ್ರಹ್ಮಾಂಡ ಮಾಡಬಹುದು" ಎಂಬ ಪಲ್ಲವಿಯನ್ನು ನುಡಿಯುತ್ತಿದೆ. ಅದಕ್ಕೆ ಸಂವಾದಿಯಾಗಿ ವಾಮದೇವನು ಹಿಮಾಲಯದಲ್ಲಿ ನುಡಿದ ಮಾತೂ ನೆನಪಾಗುತ್ತದೆ. ಅದರ ಜೊತೆಗೆ "ನೀನು ಸೃಷ್ಟಿಸಿದೆಯಲ್ಲ ಆ ನೂತನವಾದ ಅಸ್ತ್ರ ಅದನ್ನು ಬ್ರಹ್ಮದಂಡವು ನುಂಗಿತು. ಇಲ್ಲದಿದ್ದರೆ ಅದು ಹೋಗಿ ಯಾರ ಮೇಲಾದರೂ ಬಿದ್ದರೆ ಅವರು ತೂಕಡಿಸುತ್ತ ಕುಳಿತುಕೊಳ್ಳುವರೋ ಇಲ್ಲವೋ ನೋಡಬೇಕಾಗಿತ್ತು" ಎಂದು ಅವನ ಮನಸ್ಸೇ ಹೇಳುತ್ತಿದೆ.

ವಿಶ್ವಾಮಿತ್ರನಿಗೆ ಆ ಹೊಸ ಹುಟ್ಟಿನ, ನವೀನ ಸೃಷ್ಟಿಯ, ಯೋಚನೆ ಇನ್ನೂ ಮುಂದುವರಿಯಿತು : " ಹಾಗಾದರೆ ಯಾರು ಏನು ಬೇಕಾದರೂ ಮಾಡ ಬಹುದೆ ? ಈ ಚರಾಚರಗಳ ಸೃಷ್ಟಿಯೆಲ್ಲವೂ ಸಂತೆಯ ವ್ಯಾಪಾರದಂತೇನು ? ಧನ ಕೊಟ್ಟು ಧಾನ್ಯ ತೆಗೆದುಕೊಂಡಂತೆ, ತಪಸ್ಸೊಂದಿದ್ದರೆ ಬೇಕಾದುದು ಮಾಡಬಹುದೇನು ? ಇದು ನಿಜವೇ ? "

ಮನಸ್ಸು ಮತ್ತೆ ಧ್ಯಾನಕ್ಕೆ ತಿರುಗಿತು : " ಈಗ ನಾನು ಕಂಡುದೆಲ್ಲವೂ ನಿಜವಾಗಿರಬೇಕು. ಇಲ್ಲವಾದರೆ ಕನಸಿನಂತೆ ಸುಳ್ಳಾಗಿರಬೇಕು. ಕನಸೆನ್ನು ವುದಕ್ಕೆ ವಾಮದೇವನನ್ನೂ ಋಚೀಕನನ್ನೂ ಪಿತಾಮಹನನ್ನೂ ಕಂಡಿದ್ದೇನೆ. ಅಲ್ಲದೆ ನಾನು ಯಾವ ಕೆಲಸಮಾಡಿದರೂ ಅದರಿಂದ ನನಗೆ ತೊಂದರೆಯಾಗು ವಂತಿಲ್ಲ. ಒಂದಲ್ಲ, ಎರಡಲ್ಲ, ಮೂರು ಜನದ ಪ್ರಭಾವವು ನನ್ನನ್ನು ಕಾಯು ತ್ತಿದೆ. ಅದರಿಂದ ಈಗಲೇ ಕಾರ್ಯೋನ್ಮುಖನಾಗಬೇಕು. ಕುಳಿತಿದ್ದರೆ ಪ್ರಯೋಜನವಿಲ್ಲ. ಬ್ರಹ್ಮಾಂಡವನ್ನು ಮಾಡುವುದಕ್ಕೆ ಕಾಲ ಬೇಕು. ಬ್ರಹ್ಮಾಂಡ ಬೇಡ. ಒಂದು ಪುಟ್ಟ ಹಕ್ಕಿ, ಒಂದು ಸಣ್ಣ ಬಳ್ಳಿ, ಯಾವು ದಾದರೊಂದು ಮಾಡಬೇಕು.

ಮತ್ತೆ ಮನಸ್ಸು ಬಹಿರ್ಮುಖವಾಯಿತು : "ಅದಕ್ಕೆ ಒಂದೇ ಯೋಚನೆ. ಮಾಡಬೇಕು – ಮಾಡಬೇಕು – ಮಾಡಬೇಕು."

ವಿಶ್ವಾಮಿತ್ರನು ಹೊರಗೆ ಬಂದು ನೋಡಿದನು. ಮಧ್ಯಾಹ್ನವಾಗಿದೆ. ಸೂರ್ಯನು ತಲೆಯ ಮೇಲೆ ಬಂದಿದ್ದಾನೆ. ಸ್ನಾನದ ಹೊತ್ತು. ನದಿಗೆ ಸ್ನಾನಕ್ಕೆ ಹೊರಟನು. ಸ್ನಾನ ಮಾಡುತ್ತಿರುವಾಗ ಒಂದು ಮೀನು ಇನ್ನೊಂದು ಮೀನನ್ನು ಅಟ್ಟಿಕೊಂಡು ಬಂತು. ಎರಡೂ ಬಂದು ಈತನ ಮೇಲೆ ಬಿದ್ದುವು. ಎರಡೂ ಒದ್ದಾಡಿ ಪ್ರಾಣಬಿಟ್ಟುವು.

ಕೌಶಿಕನಿಗೆ ಆಶ್ಚರ್ಯವಾಯಿತು. ತನ್ನನ್ನು ಮುಟ್ಟಿದ ಕೂಡಲೇ ಅವೇಕೆ ಪ್ರಾಣಬಿಡಬೇಕು ? ತಾನೇನು ವಿಷಪುರುಷನಾಗಿರುವನೋ ? ಅಲ್ಲಿಯೇ ನಿಂತನು. ಆ ಎರಡು ಸತ್ತ ಮೀನುಗಳನ್ನು ಅಲ್ಲಿಯೇ ಒಂದು ಕಲ್ಲ ಮೇಲಿಟ್ಟನು. ಮತ್ತೊಂದು ಮೀನು ಹಿಡಿದು ಮುಟ್ಟಿದನು. ಅದೂ ಮಿಲ ಮಿಲನೆ ಒದ್ದಾಡಿ ಸತ್ತುಹೋಯಿತು. ಅದನ್ನು ಮುಟ್ಟಿ, ಮಾಡುತ್ತಿರುವ ಹಾಗೆಯೇ ಆತನ ಕೈತಗುಲಿ ಒಂದು ಕಮಲವು ಬೆಂದುಹೋಯಿತು.

ಇನ್ನು ಕೌಶಿಕನಿಗೆ ಅನುಮಾನವುಳಿಯಲಿಲ್ಲ. ದಡದಲ್ಲಿದ್ದ ಒಂದು ಮರದ ಚಿಗುರನ್ನು ಕಿತ್ತುಕೊಂಡನು. ಆತನು ಮುಟ್ಟುತ್ತಿದ್ದ ಹಾಗೆಯೇ ಅದು ಉರಿಗೆ ಸಿಕ್ಕಿದಂತೆ ಆಗಿ ಬಾಡಿ ಒಣಗಿ ಕರಕಾಯಿತು. ಹಾಗಾದರೆ ತನ್ನ ದೇಹದಿಂದ ಯಾವುದೋ ಒಂದು ದಾಹ ಶಕ್ತಿಯು ಹೊರಬೀಳುತ್ತಿರ ಬೇಕು ? ಅದಾವುದು ?

ಆತನಲ್ಲಿಯೇ ಕುಳಿತನು. ಶ್ವಾಸಧಾರಣಮಾಡಿ ಕುಂಭಕದಲ್ಲಿ ನಿಂತು ತನ್ನ ದೇಹವನ್ನು ನೋಡಿಕೊಂಡನು. ಸ್ಥೂಲದೇಹದಲ್ಲಿ ಚರ್ಮದಿಂದ ಹಿಡಿದು ಅಸ್ಥಿಯವರೆಗೆ ಸಪ್ತಧಾತುಗಳೂ ಉಜ್ಜ್ವಲವಾಗಿವೆ. ಕಾದ ಲೋಹಪಿಂಡವು ದೀಪದಂತೆ ಬೆಳಗದಿದ್ದರೂ ಕೆಂಪಗೆ ಅಗ್ನಿ ಗೋಳಕದಂತೆ ಕಾಣುವಂತೆ ಸಪ್ತ ಧಾತುಗಳೂ ಜ್ವಲಿಸುತ್ತಿವೆ. ಸೂಕ್ಷ್ಮ ದೇಹದಲ್ಲಿ ಪಂಚಪ್ರಾಣಗಳೂ ತನ್ಮಾತ್ರೆ ಗಳೂ ಒಂದೊಂದು ದೀಪದಂತೆ ಕಿರಣಗಳನ್ನು ಕಾರುತ್ತಿವೆ. ಆ ಕಿರಣಗಳು ಒಂದಕ್ಕೊಂದು ಮಸೆದು ಎಲ್ಲವೂ ಸೇರಿ ಒಂದು ದೀಪವಾದಂತಿದೆ. ದೀಪ ವಿರದ ಕಿರಣಗಳು ಹೊರಹೊರಟರೆ, ಶರೀರದ ನಾನಾಭಾಗಗಳಿಂದ ಹೊರಟ ಕಿರಣಗಳು ಬಂದು ಸೇರಿ ಈ ದೀಪವನ್ನು ಉರಿಸುತ್ತಿವೆ.

ಕೌಶಿಕನಿಗೆ ಆಶ್ಚರ್ಯವಾಯಿತು : ಆ ತೇಜಸ್ಸನ್ನು ಹಿಡಿದು ಧ್ಯಾನಿಸಿ ದನು. ತನ್ನಂತೆಯೇ ಇರುವ ಮತ್ತೊಂದು ತೇಜೋಮಯ ಮೂರ್ತಿಯು, ಅಂಗಾಂಗಗಳೆಲ್ಲ ಪ್ರತಿಬಿಂಬಿಸಿದಂತೆ ತೋರುತ್ತ, ಕೌಶಿಕನ ಎದುರಿಗೆ ಕನ್ನಡಿ ಯನ್ನಿಟ್ಟು ತೋರಿಸಿದಂತೆ ಕೌಶಿಕನ ಎದುರಿಗೆ ಪ್ರತಿಕೌಶಿಕನಾಗಿ ಕುಳಿತಿದೆ. ಅದು ಮಾತಾಡಿತು.

“ಈ ಜ್ಯೋತಿಯು ಹೊರಗಿನದಲ್ಲ. ನಿನ್ನದೇ ! ದೇಹ ದೇಹದಲ್ಲಿಯೂ ಪ್ರಾಣಾಪಾನ ಗತಿಗಳಿರುವುವು. ಈ ಪ್ರಾಣಾಪಾನಗಳ ಮಥನದಿಂದಲೇ ಅಗ್ನಿಯು ಹುಟ್ಟಿ ದೇಹವನ್ನು ಬೆಚ್ಚಗಿಡುವುದು. ಯಾರು ಪ್ರಯತ್ನಪುರಸ್ಸರ ವಾಗಿ ಈ ಪ್ರಾಣಾಪಾನ ಮಥನವನ್ನು ತಡೆಯುವರೋ, ಅವರ ದೇಹದಲ್ಲಿ ವಿಶೇಷವಾದ ಶಾಖವು ಹುಟ್ಟುವುದು. ಆ ಶಾಖದಲ್ಲಿ ದೇಹವು ಎಷ್ಟನ್ನು ಧರಿಸಬಲ್ಲುದೋ ಅಷ್ಟನ್ನು ತಾನು ವಹಿಸಿಕೊಂಡು ಮಿಕ್ಕುದನ್ನು ಉಗುಳು ವುದು. ಚೆನ್ನಾಗಿ ಕಾದ ಲೋಹಪಿಂಡವು ತನ್ನ ಬಿಸಿಯನ್ನು ತನ್ನನ್ನು ಮುಟ್ಟಿದವರಿಗೆಲ್ಲ ಕೊಡುವಂತೆ, ನಿನ್ನ ದೇಹವೂ ತನ್ನಲ್ಲಿರುವ ಉಷ್ಣವನ್ನು

ತನ್ನ ಸಂಸರ್ಗವನ್ನು ಪಡೆದ ಪದಾರ್ಥಗಳಿಗೆಲ್ಲ ಜಡಚೇತನಗಳೆಂಬ ವ್ಯತ್ಯಾಸವಿಲ್ಲದೆ ಕೊಡುವುದು. ಕೆಲವು ಅದನ್ನು ಸಹಿಸುವುವು. ಕೆಲವು ಅದನ್ನು ಸಹಿಸಲಾರವು."

"ಈ ಜ್ಯೋತಿ ಯಾವುದು ?"

"ಇದು ಈ ಪಂಚಪ್ರಾಣಗಳೂ ತನ್ಮಾತ್ರಗಳೂ ಉಗುಳುವ ಕಿರಣಗಳೆಲ್ಲ ಸೇರಿ ಆದುದು. ಇದನ್ನು ಪ್ರಾಣಜ್ಯೋತಿಯೆನ್ನುವರು !"

"ಆ ಮೀನುಗಳೂ ಕಮಲವೂ ಚಿಗುರೂ ನಾನು ಮುಟ್ಟಿದರೆ ಸುಟ್ಟು ಹೋದುವಲ್ಲ. ಅದೇಕೆ ?"

"ಆಗಲೇ ಹೇಳಿದೆನಲ್ಲ. ಅಲ್ಲಿದ್ದ ಪ್ರಾಣವನ್ನು ಈ ಪ್ರಾಣಜ್ಯೋತಿಯು ಆಕರ್ಷಿಸಿತು. ಇದರ ಉಷ್ಣವನ್ನು ಆ ದೇಹವು ತಡೆಯದಾಯಿತು. ಅದರಿಂದ ಅವು ಸತ್ತವು.

"ಈಗ ಅವು ಬದುಕಬಲ್ಲವೆ?"

"ಅವುಗಳ ಪ್ರಾಣವನ್ನು ಅವಕ್ಕೆ ಕೊಟ್ಟರೆ ಬದುಕಲೇ ಬದುಕುವುವು. ಸಂದೇಹವೇನು. ?"

"ಆ ಪ್ರಾಣವನ್ನು ಹಿಂತಿರುಗಿ ಕೊಡುವುದು ಹೇಗೆ?"

"ಈ ಪ್ರಾಣಜ್ಯೋತಿಯನ್ನು ಕಂಡವನಿಗೆ ಸಂಕಲ್ಪಕ್ಕೂ ಸಿದ್ಧಿಗೂ ಅಷ್ಟು ದೂರವಿರುವುದಿಲ್ಲ. ನಿಸ್ಸಂಕಲ್ಪವಾಗಿ ಹೊರಟ ಪ್ರಾಣಜ್ಯೋತಿಸ್ತೇಜವು ಸುಡುವುದು. ಸಸಂಕಲ್ಪವಾಗಿ ಹೊರಟರೆ ಅದೇ ಸೃಷ್ಟಿಸುವುದು."

"ನೀನು ಯಾರು ?"

"ನಾನು ನಿನ್ನ ಛಾಯಾ ಪುರುಷ"

"ನಾನು ಕರೆದಾಗ ಬರುವೆಯಾ ?"

"ನಾನು ನಿನ್ನ ಛಾಯೆ. ನಿನ್ನ ವಶವರ್ತಿ. ನೀನು 'ಭೂತಗ್ರಾಮವಾದ ದೇಹವು ನಾನಲ್ಲ' ಎಂದು ತಿಳಿದೊಡನೆಯೇ ನಾನು ಬೇರೆಯಾಗಿ ಕಾಣುವೆನು. ಪ್ರಾಣಜ್ಯೋತಿಯನ್ನು ಕಂಡಾಗ ಕಾಣುವೆನು. ಬ್ರಹ್ಮಾಂಡಕ್ಕೂ ಪಿಂಡಾಂಡಕ್ಕೂ ಸಾಮರಸ್ಯವುಂಟೆಂಬುದನ್ನು ಕಾಣುವ ಕ್ಷೇತ್ರವೇ ನಾನು."

"ಹಾಗಾದರೆ ಬ್ರಹ್ಮಾಂಡದಲ್ಲಿ ಎಲ್ಲಿ ಏನಿದೆ ಎಂಬುದನ್ನು ತೋರಿಸಿ ಕೊಡಬಲ್ಲೆಯಾ ?"

" ಭೂತ ಸಂಘಾತವಾದ ದೇಹದಲ್ಲಿರುವ ನೀನು ಕಾಲ ದೇಶಗಳನ್ನು ಮೀರಲಾರೆ. ನಾನು ನಿನ್ನ ವಶವರ್ತಿಯಾದರೂ ನನಗೆ ಕಾಲ ದೇಶಗಳ ಹದ್ದಿಲ್ಲ. ಲೋಕ ಲೋಕಗಳು ಬೇರೆ ಬೇರೆಯಾಗಿರುವುದು ಕಾಲದೇಶ ಭ್ರಾಂತಿಯಿಂದ. ಆ ಭ್ರಾಂತಿಯು ತೊಲಗಲು ಎಲ್ಲವೂ ಕರತಲಾಮಲಕದಂತೆ ತೋರುವುದು."

" ನಿನ್ನನ್ನು ನಾನು ಏನು ಬೇಕಾದರೂ ಕೇಳಬಹುದೆ ? "

" ಆಗಲೇ ಹೇಳಿದೆನಲ್ಲ. ನಿನ್ನ ದೇಹವು ನಿನ್ನ ಮಾನದಂಡ. ನೀನು ಅದರ ಹಿಡಿತದಲ್ಲಿರುವವರೆಗೂ, ನೀನೂ ಅದರಂತೆಯೇ ಸಾಂತ, ಅನಂತವಲ್ಲ."

ಮುಂದಕ್ಕೆ ಕೇಳಲು ಕೌಶಿಕನಿಗೆ ಮನಸ್ಸು ಬರಲಿಲ್ಲ. ಏಕೋ ಏನೋ ಅಲ್ಲಿಗೇ ಮಾತು ನಿಲ್ಲಿಸಿದನು. ಎದುರು ಬಿಂಬವು ಕರುಗುವುದಕ್ಕೆ ಆರಂಭವಾಯಿತು. ಮತ್ತೆ ಕೇಳಿದನು :—" ಇದೇಕೆ ಕರುಗುತ್ತಿರುವೆ ? "

ಎಲ್ಲಿಂದಲೋ ದೂರದಿಂದ ಕೇಳಿದಂತೆ ಕೇಳಿಸಿತು :—" ನಿನ್ನ ಮನಸ್ಸು ಇನ್ನೆತ್ತ ಕಡೆಯೋ ತಿರುಗಿತು."

ಇನ್ನೊಂದು ಗಳಿಗೆಯೊಳಗಾಗಿ ಮತ್ತೆ ತೇಜೋಬಿಂಬ. ಅದೂ ಕರಗಿತು. ಕೌಶಿಕನು ಕಣ್ಣು ತೆರೆದನು. ಸಂಜೆಯು ಸಮೀಪಿಸುತ್ತಿದೆ; ಕುಳಿತಿದ್ದ ಕಲ್ಲು ಕಾದು ಚುರಚುರ ಎನ್ನುವಂತಿದೆ. ಕೌಶಿಕನಿಗೆ ನೆನೆಪಾಯಿತು.

" ಪ್ರಾಣಜ್ಯೋತಿಯನ್ನು ಕಂಡವನಿಗೆ ಸಂಕಲ್ಪಕ್ಕೂ ಸಿದ್ಧಿಗೂ ದೂರವಿಲ್ಲ."

ಆ ಮೀನುಗಳನ್ನು ಮುಟ್ಟಿ ಇವು ಬದುಕಲಿ ಎಂದನು. ಆ ಮೂರೂ ಮೀನುಗಳು ಹಾರಿ ನೀರಿನಲ್ಲಿ ಬಿದ್ದು ಓಡಿಹೋದವು ಕಮಲವನ್ನು ಮುಟ್ಟಿ ಬದುಕಲಿ ಎಂದನು. ಕಮಲವು ಮತ್ತೆ ನಲಿದಾಡಿತು. ಚಿಗುರು ಮತ್ತೆ ಹಸುರಾಗಿ ಹೊಳೆಯಿತು.

ಕೌಶಿಕನು ಸಂಜೆಯವರೆಗೂ ಅಲ್ಲಿಯೇ ಅದೇ ಕಲ್ಲಿನ ಮೇಲೆಯೇ ಕುಳಿತಿದ್ದನು. ಆತನ ಕೈಯು ತನ್ನಮೇಲಿರುವ ತಲೆಯ ಭಾರವನ್ನು ಹೊತ್ತಿದೆ. ತಲೆಯು ಚಿಂತನ ಭಾರದಿಂದ ಬಗ್ಗಿರುವಂತೆ ಮುಂದಕ್ಕೆ ಚಾಚಿಕೊಂಡಿದೆ. ಅವನಿಗೆ ಒಂದೆ ಯೋಚನೆ " ಪ್ರಾಣವೆನ್ನುವುದು ಇಷ್ಟೇನೆ ? ಬೇಕಾದರೆ ಕೊಡಬಹುದು. ಬೇಡವಾದರೆ ತೆಗೆದುಕೊಳ್ಳಬಹುದು. ಇದಕ್ಕಾಗಿ ಲೋಕವೇಕೆ

ಇಷ್ಟು ಒದ್ದಾಡುವುದು ? ಪ್ರಾಣವೆನ್ನುವುದು ಪಾತ್ರೆಗೆ ನೀರು ಹೊಯ್ದಂತೆ, ಅದರಿಂದ ಬಗ್ಗಿಸಿಕೊಂಡಂತೆ ಆಯ್ತಲ್ಲ, ಹಾಗಾದರೆ, ಈ ಲೋಕದಲ್ಲಿರುವ ಎಲ್ಲರ ಪ್ರಾಣಗಳನ್ನೂ ಒಳಗೊಂಡ ಪ್ರಾಣವೊಂದಿರಬೇಕು ; ಅದರಿಂದ ಈ ಪ್ರಾಣ ಪ್ರಾಣಗಳೆಲ್ಲ ಬದುಕಿರಬೇಕು" ಎಂದು ಏನೇನೋ ಯೋಚನೆಗಳು ಬಂದುವು.

---

## ಹದಿನೆಂಟನೆಯ ತರಂಗ

ಕೌಶಿಕನು ಆಶ್ರಮಕ್ಕೆ ಬರುವ ವೇಳೆಗೆ ಸಂಜೆಯು ಕಳೆದು ರಾತ್ರಿಯಾಗಿದೆ. ಆತನಿಗೆ ಇಂದು ಹಸಿವು ನೀರಡಿಕೆಯೂ ಅಷ್ಟಿಲ್ಲ : ಅಥವಾ ಇಲ್ಲವೇ ಇಲ್ಲ. ಆತನಿಗೆ ಆ ಜಗತ್ಪ್ರಾಣದ ವಿಷಯ ಬಿಟ್ಟು ಇನ್ನು ಯಾವುದೂ ಬೇಕೇ ಇಲ್ಲ. ಮತ್ತೆ ಸಂಯಮಮಾಡಿ ಕುಳಿತು ಭಾರ್ಯಾ ಪುರುಷನನ್ನು ಕೇಳುವುದಕ್ಕೆ ಏನೋ ಬೇಡ. "ಹೊಟ್ಟೆ ಹಸಿದಿದೆ: ಒಳಗೆ ಅಟ್ಟ ಅಡುಗೆ ಸಿದ್ಧವಾಗಿದೆ. ಸ್ನಾನಕ್ಕೇಳು ಎನ್ನುತ್ತಿದ್ದಾರೆ. ಆದರೂ ಹೂ ಎಂದು ಒಂದುಗಳಿಗೆ ಏನೋ ಯೋಚನೆಯಲ್ಲಿರುವಂತೆ ಇರುವ ಒಂದು ಭಾವ."

ಆಶ್ರಮಕ್ಕೆ ಬರುವ ವೇಳೆಗೆ ಯಾರೋ ಬಂದಿದ್ದಾರೆ ಬಲು ಹೊತ್ತಿನಿಂದ ಕಾದಿದ್ದಾರೆಯಂತೆ. ವಿಶ್ವಾಮಿತ್ರನಿಗೆ ಅಯ್ಯೋ ಪಾಪ, ಎನ್ನಿಸಿ, ವಿಚಾರಿಸಿದನು. ಬಂದಿರುವವನು ತ್ರಿಶಂಕು ಮಹಾರಾಜ, ರಾಜ್ಯಾದಿಗಳನ್ನೆಲ್ಲ ಬಿಟ್ಟು ಏನೋ ಒಂದು ಆಸೆಯಿಂದ ಆಶ್ರಮ ಆಶ್ರಮಗಳನ್ನೆಲ್ಲ ತಿರುಗುತ್ತಿದ್ದಾನೆ. ಆತನ ಬಯಕೆಯನ್ನು ನೆರವೇರಿಸುವುದಾಗಿ ಮಾತುಕೊಟ್ಟರೆ ಎಲ್ಲವನ್ನೂ ಅರಿಕೆಮಾಡಿಕೊಳ್ಳುತ್ತಾನೆ.

ವಿಶ್ವಾಮಿತ್ರನು ಆತನಿಗೆ ತಕ್ಕಂತೆ ಸೂಕ್ಷ್ಮವಾಗಿ ಉಪಚಾರಮಾಡಿ, "ಮಹಾರಾಜ, ಆಯಾಸದಿಂದ ಬಳಲಿರುವೆ, ಈ ರಾತ್ರಿ ವಿಶ್ರಮಿಸಿಕೊ. ನಾಳೆಯ ದಿನ ಎಲ್ಲವೂ ವಿಚಾರ ಮಾಡೋಣ" ಎಂದನು. ತ್ರಿಶಂಕುವಿಗೆ ಆತುರ. "ಇಲ್ಲ. ತಾವೇ ಗತಿಯೆಂದು ಬಂದಿದ್ದೇನೆ. ತಮ್ಮಿಂದ ನನ್ನ ಆಸೆ ತೀರುವುದೆಂಬ ಆಸೆ ಬೆಟ್ಟದಷ್ಟಿದೆ. ಅದು ಉಂಟು ಇಲ್ಲ ಎನ್ನುವುದು ಗೊತ್ತಾಗುವವರೆಗೂ ನನಗೆ ಊಟ ಕೂಡ ಬೇಕಾಗಿಲ್ಲ."

"ನನ್ನಿಂದ ನಿನ್ನಾಸೆಯು ನೆರವೇರುವುದೆಂದು ಯಾರು ಹೇಳಿದರು."

"ಭಗವಾನ್ರ ಮುಖದಿಂದ ತಿಳಿಯಿತು."

"ಭಗವಾನ್ರು ಎಂದರೆ ?"

"ವಸಿಷ್ಠರು."

"ಏನು ? ವಸಿಷ್ಠರು ನನ್ನಿಂದ ಆಗುವುದು ಎಂದು ಹೇಳಿದರೆ ?"

"ಹೌದು."

ವಿಶ್ವಾಮಿತ್ರನಿಗೆ ಆಶ್ಚರ್ಯವಾಯಿತು. ಕೂಡಲೇ ತ್ರಿಶಂಕುವಿನ ಆತುರಕ್ಕೆ ಇಮ್ಮಡಿಯಾದ ಆತುರದಿಂದ ಏನು ಎಂದು ವಿಚಾರಿಸಬೇಕು. ಆದರೆ ಆ ತಪಸ್ವಿಜನಸಹಜವಾದ ಶಾಂತತೆಯನ್ನು ಬಿಡದೆ ಕೇಳಿದನು: "ಹಾಗಾದರೆ ಸಂದೇಹವೇಕೆ ? ಭಗವಾನ್ರ ಅಪ್ಪಣೆಯಾಗಿದೆಯೆಂದರೆ ಅದು ಆಗಿಯೇ ಆಗುವುದು. ಅಗತ್ಯವಾಗಿಯೂ ಆಗಲಿ. ಏಳು. ಇನ್ನು ಊಟಮಾಡು."

ತ್ರಿಶಂಕುವಿಗೆ ಆಶ್ಚರ್ಯವಾಯಿತು: "ದೇವಾ, ನನ್ನ ಆಸೆ ಬೆಟ್ಟವನ್ನು ಕಡಿದು ಕಡಲನ್ನು ಕುಡಿಯಬೇಕು ಎಂಬಷ್ಟು ದೊಡ್ಡದು."

"ಆಗಲಿ. ಚಿಂತೆಯಿಲ್ಲ. ಬೇಕಾದರೆ ಇನ್ನೊಂದು ಬ್ರಹ್ಮಾಂಡವನ್ನೇ ಸೃಷ್ಟಿಸೋಣ."

"ಹೌದು. ಋಷೀಂದ್ರ, ನನ್ನ ಆಸೆಯೂ ಅಂತಹುದೇ! ನಾನು ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕು."

ವಿಶ್ವಾಮಿತ್ರನು ಬೆಚ್ಚಿಬಿದ್ದನು: ಆಶ್ಚರ್ಯದಿಂದ "ಏನು ?" ಎಂದು ಮತ್ತೆ ಕೇಳಿದನು.

ತ್ರಿಶಂಕುವಿಗೆ ಗಾಬರಿ. ಎಲ್ಲಿ ಆಗುವುದಿಲ್ಲ ಎಂದುಬಿಡುವನೋ ಎಂಬ ಶಂಕೆ. ತಾನೇತಾನಾಗಿ ಕುಗ್ಗಿದ ದನಿಯಿಂದ "ಸಶರೀರನಾಗಿ ಸ್ವರ್ಗಕ್ಕೆ ಹೋಗಬೇಕು" ಎಂದನು.

ವಿಶ್ವಾಮಿತ್ರನಿಗೆ ಆಶ್ಚರ್ಯವಾಯಿತು. ತಾನು ಇದೇ ದೇಹದಲ್ಲಿ ಬ್ರಾಹ್ಮಣನಾಗಬೇಕು ಎಂದು ಆಸೆಪಡುತ್ತಿರುವವನು. ಇವನು ಈ ಶರೀರದಲ್ಲಿಯೇ ಸ್ವರ್ಗಕ್ಕೆ ಹೋಗಬೇಕು ಎನ್ನುತ್ತಿರುವವನು. ಇಬ್ಬರಿಗೂ ಚೆನ್ನಾಗಿ ಗಂಟು ಬಿತ್ತು ಎಂದು ದೀರ್ಘವಾಗಿ ಆಲೋಚಿಸಿದನು.

"ಆಯಿತು ವಸಿಷ್ಠರು ನನ್ನಿಂದ ಆಗುವುದು ಎಂದು ಯಾವಾಗ ಹೇಳಿದರು."

ವಸಿಷ್ಠರ ಆಶ್ರಮದಲ್ಲಿ ನಡೆದುದೆಲ್ಲವನ್ನೂ ತ್ರಿಶಂಕುವು ಸೂಕ್ಷ್ಮವಾಗಿ ಹೇಳಿದನು. ಕಾಮ್ಯಕರ್ಮವೆಂದು ವಸಿಷ್ಠರು ಮಾಡಿಸುವುದಿಲ್ಲವೆಂದರು. ಅರುಂಧತೀ ದೇವಿಯು ಮಾತೃಸಹಜವಾದ ವಾತ್ಸಲ್ಯದಿಂದ ಇಷ್ಟಾರ್ಥ ಸಿದ್ಧಿಯಾಗಲೆಂದರು. ಮತ್ತೆ ಭಗವಾನರ ಬಳಿಗೆ ಹೋಗಲು ಧೈರ್ಯ ಸಾಲದೆ ವಸಿಷ್ಠಪುತ್ರರ ಬಳಿಗೆ ಹೋಗಿ, ಅಲ್ಲಿ ಮಾತನಾಡುತ್ತಾ ಇರುವಾಗ ಒಬ್ಬರು ಇನ್ನು ಯಾರಾದರೂ ಶಕ್ತರನ್ನು ಹುಡುಕಿಕೊಂಡು ಹೋದರಾಯಿತು ಎಂದರು. ಇನ್ನೊಬ್ಬರು ಕುಲಗುರುಗಳನ್ನು ಬಿಡುವುದೇ? ಎಂದರು. ಮತ್ತೊಬ್ಬರು ಬಿಟ್ಟರೆ ಚಂಡಾಲತೆಯು ಬರುವುದು ಎಂದರು. ತಾನು ಹೀಗೆಂದರಲ್ಲಾ ಎಂದು ಖಿನ್ನನಾಗುತ್ತಿದ್ದ ಹಾಗೆಯೇ ಭಗವಾನರೇ ಬಂದು "ದಕ್ಷಿಣಕ್ಕೆ ಹೋಗು. ಅಲ್ಲಿ ರಾಜರ್ಷಿಯೊಬ್ಬನುಂಟು. ಆತನಿಂದ ಈ ಕೆಲಸವಾಗುವುದು. ನೀನು ಇನ್ನೊಬ್ಬನನ್ನು ಗುರುವೆಂದು ಅಂಗೀಕರಿಸುವವರೆಗೆ ಈ ಚಾಂಡಾಲ್ಯವು ನಿನ್ನನ್ನು ಮುಟ್ಟದಿರಲಿ" ಎಂದು ಅಪ್ಪಣೆಕೊಟ್ಟರು. ಹೀಗಾಯಿತಲ್ಲ ಎಂಬ ಖೇದವೂ ಆಸೆಯು ಕೈಗೂಡುವುದೆಂಬ ಮೋದವೂ ಬೆಳಕು ಕತ್ತಲೆಗಳಂತೆ ಮನದಲ್ಲಿ ಮನೆಮಾಡಿಕೊಂಡಿರಲು, ಅಷ್ಟುಕಾಲ ರಾಜಧಾನಿಯಲ್ಲಿದ್ದೆ. ಆದರೆ ಆಸೆಯ ಕಾಟ ಬಲವಾಗಿ ಸಶರೀರವಾಗಿ ಸ್ವರ್ಗಕ್ಕೆ ಕಳುಹಿಸಬಲ್ಲ ಮಹಾತಪಸ್ವಿಯು ನನ್ನ ಚಾಂಡಾಲ್ಯವನ್ನು ನಿರ್ಮೂಲವಮಾಡಲಾರನೇ? ಎಂದು ತಮ್ಮನ್ನು ಹುಡುಕಿಕೊಂಡು ಈಗ ಬಂದೆ"

ವಿಶ್ವಾಮಿತ್ರನು ಎಲ್ಲವನ್ನೂ ಕೇಳಿದನು: "ವಸಿಷ್ಠರು ತನ್ನನ್ನು ರಾಜರ್ಷಿಯೆಂದು ಕರೆದಿದ್ದಾರೆ. ಬೇಕಾದರೆ ಆತನು ಈ ಕಾರ್ಯವನ್ನು ಮಾಡಬಲ್ಲನು ಎಂದೂ ಹೇಳಿದ್ದಾರೆ. ಗುರುಪತ್ನಿಯು ಇಷ್ಟಾರ್ಥ ಸಿದ್ಧಿಯಾಗಲೆಂದು ಆಶೀರ್ವದಿಸಿದ್ದಾರೆ. ಇದುವರೆಗೆ ಅನೇಕ ಕ್ಷತ್ರಿಯರು ದೇವಕಾರ್ಯಾರ್ಥವಾಗಿ ಲೋಕಾಂತರಗಳಿಗೆ ಹೋಗಿ ಬಂದಿದ್ದಾರೆ. ನಹುಷನಂತೂ ಮಾನುಷ ದೇಹದಲ್ಲಿಯೇ ದೇವಾಧಿಪತ್ಯವನ್ನೂ ನಿರ್ವಹಿಸಿದ್ದಾನೆ. ಹೀಗಿರಲು ತ್ರಿಶಂಕುವು ತಾನು ಸ್ವರ್ಗಕ್ಕೆ ಹೋಗಬೇಕೆಂದರೆ ತಪ್ಪೇನು?" ಎಂದು ದೀರ್ಘವಾಗಿ ವಿಚಾರಮಾಡುತ್ತ ಕೇಳಿದನು :—

"ಆಯಿತು, ಮಹಾರಾಜ, ನೀನು ಅನೇಕ ಯಾಗಗಳನ್ನು ಮಾಡಿರುವೆ. ನಿನಗೆ ಸ್ವರ್ಗವು ದೊರೆತೇ ದೊರೆಯುವುದಲ್ಲ. ಈಗೇನು ಅವಸರ?"

ತ್ರಿಶಂಕುವು ಹೇಳಿದನು: "ದೇವಾ, ತಾವು ಹೇಳಿದುದು ನಿಜ. ನಾನು ಮಾಡಿರುವ ಯಾಗಗಳ ಫಲವಾಗಿ ಈ ದೇಹವು ಹೋದಮೇಲೆ ನನಗೆ ಸ್ವರ್ಗವು ಸಿಕ್ಕಿಯೇ ಸಿಕ್ಕುವುದು. ಆದರೆ, ಈಗ ಈ ಮಾನವದೇಹದಿಂದಲೇ ಸ್ವರ್ಗಕ್ಕೆ ಹೋಗಿ ಅಲ್ಲಿನ ಭೋಗಗಳನ್ನೆಲ್ಲ ಅನುಭವಿಸಬೇಕು.

"ಮತ್ತೊಂದು ದೇಹ ಬಂದಾಗ ನಾನೇ ತ್ರಿಶಂಕುವಾಗಿದ್ದವನು ಎಂಬ ನೆನೆಪು ಇದ್ದು, ಇಲ್ಲಿನ ಭೋಗಗಳೆಲ್ಲ ಮರೆಯದೆ ಇದ್ದರೆ ಆಯಿತಲ್ಲಾ ಇದಕ್ಕಾಗಿ ಇಷ್ಟು ಆಯಾಸ ಪಡೆಯಬೇಕೇಕೆ?"

"ದೇವಾ, ನಿಜವಾಗಿಯೂ ಒಳಗಿನ ತತ್ತ್ವವಿಷ್ಟು. ತಾವೂ ಕ್ಷತ್ರಿಯರು ಎಂಬುದರ ಮೇಲೆ ತಮ್ಮಲ್ಲಿ ಹೇಳುವೆನು. ಅಪಚಾರವಾಗಿದ್ದರೆ ಕ್ಷಮಿಸಿ. ಈ ದೇವತೆಗಳೆನ್ನುವವರು ನಮ್ಮ ಹವಿಸ್ಸುಗಳಿಂದ, ನಾವು ಕೊಟ್ಟ ಆಹುತಿಗಳಿಂದ ಬಲಿತು ನಮ್ಮನ್ನು ಆಳುವವರು. ನಿಸ್ಸಪತ್ನನಾಗಿ ಈ ಭೂಮಿಯನ್ನೆಲ್ಲ ಗೆದ್ದು ಆಳುವಂತೆ, ನನ್ನ ತಪೋಬಲದಿಂದ ಸ್ವರ್ಗವನ್ನು ಗೆದ್ದವನೆಂಬ ಕೀರ್ತಿಯನ್ನು ಸಂಪಾದಿಸಬೇಕು, ಎಂದು ನನ್ನ ಒಳಒಳಗಿನ ಆಸೆ. ಭಗವಾನರು ಇದನ್ನು ತಪ್ಪು ಎಂದಿದ್ದರೆ ಅಂದೇ ನಾನು ಈ ಆಸೆಯನ್ನು ತುಳಿದುಬಿಡುತ್ತಿದ್ದೆ. ಹೇಳಿದಾಗಲೆಲ್ಲ ಅಸಾಧ್ಯವಾದ ಆಸೆಗಳನ್ನು ಹಿಡಿದು ಹಂಬಲಿಸುವುದೂ ಒಂದು ಸಾಹಸ. ಆಗಲಿ. ಆಗಲಿ. ಏನವಸರ? ಎನ್ನುತ್ತಿದ್ದರು. ಆದರಿಂದ ನನ್ನ ಭಾವನೆಯು ಇನ್ನಷ್ಟು ಹುರುಪುಗೊಂಡಿತು. ಕೊನೆಗೆ ಅವರನ್ನು ಕೊಂಚ ಬಲಾತ್ಕರಿಸಿದೆ. ಅವರ ಮನಸ್ಸು ನೊಂದಿತೇನೋ ಅವರಿಂದ ಹಾನಿಯಾಗದಿದ್ದರೂ ಅವರ ಮಕ್ಕಳಿಂದ ಹಾನಿಯಾಯಿತು."

"ಈ ಪ್ರಯತ್ನವನ್ನೇ ಬಿಟ್ಟುಬಿಟ್ಟರೆ ಹಾನಿಯನ್ನೂ ತಪ್ಪಿಸಿಕೊಳ್ಳಬಹುದಲ್ಲ!"

"ಹಾನಿಯನ್ನು ಕಳೆದುಕೊಳ್ಳಬೇಕು. ಆಸೆಯನ್ನೂ ಗೆಲ್ಲಬೇಕು" ಎಂದು ತಮ್ಮನ್ನು ಆಶ್ರಯಿಸಿದ್ದೇನೆ. ತಾವೇ ಹೇಳಿ. ಮನುಷ್ಯನು ಸ್ವರ್ಗವನ್ನು ಗೆದ್ದನು ಎಂಬುದು ಮನುಷ್ಯತ್ವಕ್ಕೇ ಗೌರವವಲ್ಲವೆ? ಕ್ಷತ್ರಿಯನಲ್ಲದೆ, ಅದರಲ್ಲೂ ಪ್ರತಾಪಶಾಲಿಯಾದ ಭಾಸ್ಕರನ ವಂಶದ ಕ್ಷತ್ರಿಯನಲ್ಲದೆ, ಮತ್ತಾರು ತಾನೇ ಈ ಸಾಹಸ

ವನ್ನು ಮಾಡಬೇಕು? ಅದರಿಂದ, ಪೂಜ್ಯರೆ, ತಾವು ಮನಸ್ಸುಮಾಡಿ. ತಾವು ಆಗಬಹುದು ಎಂದರೆ, ಇನ್ನು ಹತ್ತು ವರ್ಷಗಳ ಮೇಲೆ ಆದರೂ ಚಿಂತೆಯಿಲ್ಲ. ಅದುವರೆಗೆ ನಾನೂ ಒಂದು ಆಶ್ರಮದಲ್ಲಿ ಅಪ್ಪಣೆಯಾದರೆ ಇಲ್ಲಿಯೇ ಒಂದು ಮೂಲೆಯಲ್ಲಿ ಒಂದು ಗುಡಿಸಲು ಕಟ್ಟಿಕೊಂಡು ತಪಸ್ಸು ಮಾಡುತ್ತಿರುವೆನು."

ವಿಶ್ವಾಮಿತ್ರನು ಯೋಚಿಸಿದನು: "ಸ್ವರ್ಗವೆಂದರೇನು ಕೇವಲ ಭೋಗ ಭೂಮಿ; ಗೀತ, ಭೋಗ, ಎರಡರಲ್ಲಿ ಮುಳುಗಿ ತೇಲುವುದು. ಅರಮನೆಯ ಭೋಗದಲ್ಲಿ ಬೇಸರವಾದ ಅರಸನು, ಸುರ ಭೂಮಿಯ ಭೋಗವನ್ನು ಬಯಸು ತ್ತಿದ್ದಾನೆ. ಅಷ್ಟೆ! ಅಲ್ಲಿನ ಆ ಅಪ್ಸರೆಯರ ಸಹವಾಸ, ಗಂಧರ್ವರ ನೃತ್ಯ ಗೀತಾದಿಗಳು, ಆ ಮಂದಾರ ನಂದನಗಳು, ಎಲ್ಲವೂ ಭೋಗಿಯ ಮನಸ್ಸನ್ನು ಸೆಳೆದರೆ ತಪ್ಪೇನು? ನನಗೂ ಎಷ್ಟೋಸಲ ಬಂದಿರುವ ಯೋಚನೆಯೇ ತಾನೇ ಇದು? ಇಲ್ಲಿನ ಕ್ಷಣಿಕಭೋಗ ಬೇಡವೆಂದು ಅಲ್ಲಿನ ನಿರಂತರ ಭೋಗ ಬೇಕೆಂದರೆ ತಪ್ಪೇನು? ಆದರೆ, ಈಗ ಇವನನ್ನು ನಾನು ಶಿಷ್ಯನೆಂದು ಅಂಗೀ ಕರಿಸಿದರೆ ಇವನಿಗೆ ಚಂಡಾಲತ್ವವು ಈ ಕೂಡಲೇ ಬರುವುದು. ಅದರಿಂದ ಈತನನ್ನು ಸದ್ಯದಲ್ಲಿ ತಡೆಯೋಣ. ಈ ಕಾರ್ಯವನ್ನು ಒಪ್ಪಿಕೊಂಡು ಮಾಡಿ ದರೆ, ಅನನ್ಯಸಾಧ್ಯವಾದ ಕಾರ್ಯವನ್ನು ಮಾಡಿದನೆಂದು ನನಗೂ ಕೀರ್ತಿ ಬರುವುದು. ಆಗ ನನ್ನನ್ನು ಇತರ ಋಷಿಗಳೂ ತಪಸ್ವಿಗಳೂ ವಸಿಷ್ಠನಷ್ಟೇ ಅಲ್ಲದಿದ್ದರೆ ತತ್ಸಮನೆಂದಾದರೂ ಗೌರವಿಸುವರು" ಎಂದು ಬಹುವಿಧವಾಗಿ ಪರ್ಯಾಲೋಚನೆಮಾಡಿ ಕೊನೆಗೆ ಹೇಳಿದನು:—

"ಭಗವಾನ್‌ರು ಹೇಳಿದಂತೆ ಇದು ಕೇವಲ ಕಾಮ್ಯ. ಆದರೂ ನೀನು ಕ್ಷತ್ರಿಯನಾದುದರಿಂದ ಅದು ಅಷ್ಟು ತಪ್ಪಲ್ಲ. ಭಗವಾನ್‌ರೇ ಮಾಡಿಸಬಹು ದಾಗಿತ್ತು. ಆದರೂ ನಿನ್ನನ್ನು ಇಲ್ಲಿಗೆ ಕಳುಹಿಸಿದ್ದಾರೆ. ಆಗಲಿ. ಮಾಡೋಣ. ಕೊಂಚಕಾಲ ನೀನು ಆಶ್ರಮದಲ್ಲಿಯೇ ಇರು. ಈಗಲೇ ನೀನು ನನ್ನನ್ನು ಗುರುವೆಂದು ಅಂಗೀಕರಿಸಬೇಡ. ನಾನು ಜಮದಗ್ನಿಯೊಡನೆ ಯೋಚಿಸ್ಸು ವೆನು. ನನಗೆ ಮಾಡಿಸುವುದಕ್ಕೆ ಇಷ್ಟವೇನೋ ಇದೆ. ಆದರೆ, ಇದುವರೆಗೆ ಇಂತಹ ಯಾಗವನ್ನು ಯಾರೂ ಮಾಡಿಸಿಲ್ಲ. ಅದರಿಂದ ವಿಧಾನ, ದೇವತಾ ಮೊದಲಾದ ವಿವರಗಳನ್ನೆಲ್ಲ ಗೊತ್ತುಮಾಡೋಣ. ಅದುವರೆಗೆ ನೀನು ಆಶ್ರಮದಲ್ಲಿ ಮಿತ್ರನಾಗಿರು" ಎಂದನು.

ಆ ಮಾತು ತ್ರಿಶಂಕುವಿಗೆ ಒಪ್ಪಿತು. ಆಗಲಿ ಎಂದು ಮಹಾರಾಜನು ಆಶ್ರಮವಾಸಿಯಾದನು.

---

## ಹತ್ತೊಂಬತ್ತನೆಯ ತರಂಗ

ವಿಶ್ವಾಮಿತ್ರನ ಕೋರಿಕೆಯಂತೆ ಜಮದಗ್ನಿಯು ಬಂದನು. ಈತನ ಯೋಚನೆಗಳು ಆತನಿಗೆ ಒಪ್ಪಿತು. "ಈಗ ಇರುವ ಯಾಗ ಯಾವುದೂ ಈ ಅರ್ಥವನ್ನು ಸಾಧಿಸಿಕೊಡಲಾರದು. ಆದರಿಂದ ಹೊಸದೊಂದು ಯಾಗ ವನ್ನು ಕಲ್ಪಿಸಬೇಕು. ಹಾಗೆ ಕಲ್ಪನೆಮಾಡುವುದು ಏನೂ ಅಂತಹ ಅತಿಶಯ ವಲ್ಲ. ಈಗಿನ ದೇವತೆಗಳೂ ಅಸುರರೂ ಸಹ ಹೀಗೆ ಹೊಸದೊಂದು ಯಾಗ ವನ್ನು ಕಂಡುಹಿಡಿದು ತಾನೇ ಸ್ವರ್ಗವನ್ನು ಕಟ್ಟಿದುದು. ಅದನ್ನು ದೇವತೆಗಳು ಎಲ್ಲರಿಗೂ ಸಿಕ್ಕಬಾರದೆಂದು ಮುಚ್ಚಿಟ್ಟುಕೊಂಡಿರುವರು. ಅಥರ್ವನಿಗೆ ಈ ರಹಸ್ಯವು ಗೊತ್ತು. ಋಭುಗಳಿಗೆ ಗೊತ್ತು. ಯಮನಿಗೆ ಗೊತ್ತು. ಇವ ರೆಲ್ಲರೂ ತಿಳಿದಿರುವ ರಹಸ್ಯವನ್ನು ನಾವೂ ಭೇದಿಸುವುದು. ಇಲ್ಲದಿದ್ದರೆ ಇವರ ತಂಟೆಯೇ ಬೇಡ. ನಾವು ಇನ್ನೊಂದು ಕ್ರಮವನ್ನು ಹಿಡಿಯುವುದು" ಎಂದನು. ಜಮದಗ್ನಿ ವಿಶ್ವಾಮಿತ್ರರ ಯೋಗವು ಅನಲಾನಿಲ ಸಂಯೋಗ ವಾಯಿತು.

ವಿಶ್ವಾಮಿತ್ರನಿಗೆ ವಾಮದೇವನನ್ನು ಕರೆಯಬೇಕೆಂದು ಇಷ್ಟ. ಆದರೆ, ಏಕೋ ಮನಸ್ಸು ಸಂಕಲ್ಪದಿಂದ ಮುಂದಕ್ಕೆ ಹೋಗಲೊಲ್ಲದು. "ಇಷ್ಟರ ಮೇಲೆ ನಾನು :ಯಾವ ಕೆಲಸಮಾಡಿದರೂ ಆತನು ಇದ್ದೇ ಇರುವನಲ್ಲ! ಪ್ರತ್ಯಕ್ಷ ವಾಗಿ ಇಲ್ಲದಿದ್ದರೆ ಏನು?" ಎಂದುಕೊಂಡು ಮುಂದೆ ನುಗ್ಗಿದನು.

ದಿನದಿನವೂ ಜಮದಗ್ನಿ ವಿಶ್ವಾಮಿತ್ರರು ಸ್ವರ್ಗವನ್ನು ಕೊಡುವ ಯಜ್ಞ ಗಳು ಯಾವ ಯಾವವು ಎಂದು ವಿಚಾರಮಾಡುವರು. ಆದರೆ ಸಶರೀರವಾಗಿ ಸ್ವರ್ಗಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಶಾಶ್ವತವಾಗಿ ಇರುವಂತಹ ಫಲ ವನ್ನು ಕೊಡುವ ಯಾವ ಯಾಗವೂ ಇದ್ದಂತೆ ತೋರದು. ತ್ರಿಶಂಕುವಿಗೆ ಬೇಕಾದುದು ಶಾಶ್ವತ ಸ್ವರ್ಗ. ಮನುಷ್ಯನು ಸ್ವರ್ಗಕ್ಕೆ ಹೋಗಿಬರಲು ದೇವತೆ

ಗಳು ಒಪ್ಪಿದರೂ ಅಲ್ಲಿಯೇ ಶಾಶ್ವತವಾಗಿರಲು ಒಪ್ಪುವರೆ? ಹಾಗೆ ಶಾಶ್ವತ ವಾಗಿ ಇರಬೇಕಾದರೆ, ಏನು ಮಾಡಬೇಕು? ದೇವತೆಯಾಗಬೇಕು. ಮನು ಷ್ಯನು ದೇವತೆಯೇ ಆದರೆ, ಆಗ ಶಾಶ್ವತ ಸ್ವರ್ಗವಾಸವು ಲಭಿಸುವುದು.

ಕೊನೆಗೆ ವಿಶ್ವಾಮಿತ್ರನು ಜಮದಗ್ನಿಯನ್ನು ಕುರಿತು "ನಾವೇಕೆ ಇಷ್ಟು ಚಿಂತಿಸಬೇಕು? ಅಥರ್ವ ಮಹರ್ಷಿಯನ್ನು ಕರೆದು ಪ್ರಾರ್ಥಿಸೋಣ. ಆತನು ಅಂತಹದೊಂದು ಯಾಗವನ್ನು ಕಲ್ಪಿಸಿಕೊಡುವನು" ಎಂದನು. ಜಮ ದಗ್ನಿಯು ಆಗಲಿ ಎಂದನು. ಇಬ್ಬರೂ ಧ್ಯಾನಕ್ಕೆ ಕುಳಿತರು.

ಇಂದ್ರಿಯಗಳ ಬಹಿರ್ವೃತ್ತಿಯನ್ನು ನಿರೋಧಿಸಿ ಪ್ರಾಣಬಲವನ್ನು ವೃದ್ಧಿ ಪಡಿಸಿಕೊಂಡು ಇಬ್ಬರೂ ಏಕಕಾಲದಲ್ಲಿ ಸಂಯಮಮಾಡಿದರು. ಅಥರ್ವ ಮಹರ್ಷಿಯು ದೃಗ್ಗೋಚರನಾದನು. ಗೋತ್ರಪ್ರವರಕರ್ತನೂ ಮಂತ್ರ ದ್ರಷ್ಟೃವೂ ಆದ ಮಹರ್ಷಿಗೆ ಸಲ್ಲಬೇಕಾದ ಉಪಚಾರಗಳನ್ನೆಲ್ಲ ಕ್ರಮವಾಗಿ ಸಲ್ಲಿಸಿ, ಆತನ ಅಪ್ಪಣೆ ಪಡೆದು, ಸಂಪೂರ್ಣ ವಿನಯದಿಂದ ಪ್ರಾರ್ಥಿಸಿ ಕೊಂಡರು: "ಋಷೀಂದ್ರ, ಸಶರೀರನಾಗಿ ಶಾಶ್ವತ ಸ್ವರ್ಗವನ್ನು ಪಡೆಯುವು ದಕ್ಕೆ ಸಾಧಕವಾದ ಯಾಗವನ್ನು ಕರುಣಿಸಬೇಕು."

ಅಥರ್ವನು ಹೇಳಿದನು: "ನೀವು ಕೇಳುವಂತಹ ಯಾಗವು ಇಲ್ಲ; ಈಗ ತ್ರಿಶಂಕುವಿನ ಅಪೇಕ್ಷೆಯು ನೀವು ಯೋಚಿಸಿರುವಂತೆ ದೇವತೆಯಾಗ ಬೇಕೆಂದು. ಮನುಷ್ಯದೇಹವು ಸುಖದುಃಖಗಳನ್ನು ದ್ವಂದ್ವವಾಗಿ ಅನುಭವಿಸು ವುದಲ್ಲದೆ, ಕೇವಲ ಸುಖವನ್ನಾಗಲೀ ದುಃಖವನ್ನಾಗಲೀ ಅನುಭವಿಸಲಾರದು. ಹೀಗೆ ಕೇವಲ ಸುಖಕ್ಕೆ ಒಗ್ಗದ ದೇಹದಿಂದ ಸ್ವರ್ಗಕ್ಕೆ ಹೋದರೆ ತಾನೇ ಅಲ್ಲಿ ಮಾಡುವುದೇನು? ಜರಾಮರಣಗಳೇ ಸ್ವಭಾವವಾಗಿ ಉಳ್ಳ ಮನುಷ್ಯದೇಹವು ಸ್ವರ್ಗಭೂಮಿಯಲ್ಲಿದ್ದರೆ, ಇನ್ನೂ ಅಷ್ಟುಕಾಲ ದೃಢವಾಗಿರಬಹುದು. ಆದರೆ ಕಲ್ಪಾಂತಸ್ಥಾಯಿಯಾಗಬೇಕಾದರೆ ಸಾಧ್ಯವಿಲ್ಲ. ಅದರಿಂದ ನೀವಿಬ್ಬರೂ ಸೇರಿ ಮನುಷ್ಯದೇಹವನ್ನು ದಿವ್ಯದೇಹವನ್ನು ಮಾಡುವುದಕ್ಕೆ ಪ್ರಯತ್ನಿಸಿ. ನೀವು ಗೆದ್ದರೆ ನಿಮ್ಮ ಇಷ್ಟಾರ್ಥವು ಲಭಿಸುವುದು."

ಜಮದಗ್ನಿಯು ಕೇಳಿದನು:—"ದೇವಾ, ನೀನೇ ದಯಮಾಡಿ ನಮ ಗೊಂದು ಯಾಗವನ್ನು ಮಾಡಿಕೊಡು."

ಅಥರ್ವನು ಹೇಳಿದನು : "ಅದಾಗುವುದಿಲ್ಲ. ಅಂತಹ ಯಾಗವನ್ನು ಮಾಡುವುದು ಅಸಾಧ್ಯವಿಲ್ಲ. ರುದ್ರ ಯಮ ವರುಣ ಪಾಶಗಳಿಂದ ದೇಹವನ್ನು ಬಿಡಿಸಿ, ಜರಾಮರಣ ಧರ್ಮವನ್ನು ತಪ್ಪಿಸಿದರೆ ಮನುಷ್ಯದೇಹವು ದಿವ್ಯದೇಹ ವಾಗುವುದು. ಇಂತಹ ವಿಶೇಷ ಸಿದ್ಧಿಗಳು ಏನಿದ್ದರೂ ವೈಯಕ್ತಿಕವಾಗಿರ ಬೇಕೇ ಹೊರತು, ಸಾಮೂಹಿಕವಾಗಬಾರದು. ಇದಕ್ಕಾಗಿ ಒಂದು ಯಾಗ ವನ್ನು ಕಲ್ಪಿಸಿದರೆ, ದೇವದತ್ತ ಸಿಂಹದತ್ತರೆಲ್ಲರೂ ಸ್ವರ್ಗಕ್ಕೆ ನುಗ್ಗಿ ಬಿಡುವರು. ಆಗ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ವ್ಯವಸ್ಥೆಯು ಕೆಡುವುದು. ನಾವು ಋಷಿಗಳು ಪ್ರಕೃತಿ ವಿಕೃತಿ ಧರ್ಮವನ್ನು ತಿಳಿಯಬೇಕು. ಅದಷ್ಟುಮಟ್ಟಿಗೆ ಪ್ರಕೃತಿ ಧರ್ಮನಿಷ್ಠೆಯಲ್ಲಿರಬೇಕು."

"ಹಾಗಾದರೆ, ಈ ತ್ರಿಶಂಕುವಿನ ಯಾಗವು ನಡೆಯುವುದಿಲ್ಲವೇನು ?"

"ನಡೆಯಲೇ ಬೇಕು. ಕಾಲದೇಶೋಚಿತವಲ್ಲದೆ ಅಸಹಜವಾಗಿ ತೋರುವ ಆಸೆಯು ಅಲೌಕಿಕವು. ಅದು ಮುಂದೆ ಆಗಬೇಕಾಗಿರುವ ಯಾವುದೋ ಮಹತ್ಕಾರ್ಯವನ್ನು ಕುರಿತ ಈಶ್ವರೇಚ್ಛೆಯ ಪ್ರತಿಬಿಂಬವು. ಇದನ್ನು ಅರಿತು ನಡೆಯಬೇಕು. ಈ ಯಾಗವು ಅಷ್ಟು ಸುಲಭವಲ್ಲ. ನೀವು ಸೋಮಯಾಗ ಮಾಡಿದಾಗ ಯಾವ ಧರ್ಮವು ನಿಮ್ಮ ಸ್ಥೂಲ ಸೂಕ್ಷ್ಮದೇಹ ಗಳಲ್ಲಿರುವುದೋ ಅದೇ ಕಾರಣಕ್ಕೂ ವ್ಯಾಪಿಸುವವರೆಗೂ ದೇವತೆಯಾಗು ವಂತಿಲ್ಲ. ಹಾಗಾಗಲು, ಮನುಷ್ಯನ ಆನಂದಾನುಭವಶಕ್ತಿಯು ಎಷ್ಟು ಬೆಳೆಯ ಬೇಕು ! ಮನುಷ್ಯನ ಆನಂದದ ನೂರರಷ್ಟು ಆದರೆ ಮನುಷ್ಯ ಗಂಧರ್ವರ ಆನಂದ, ಅದರ ನೂರರಷ್ಟು ಆದರೆ ದೇವ ಗಂಧರ್ವರ ಆನಂದ, ಅದರ ನೂರ ರಷ್ಟು ಆದರೆ ದೇವಾನಂದ, ಅಷ್ಟಾದರೂ ಬಂದರಲ್ಲವೆ ಶಾಶ್ವತ ಸ್ವರ್ಗಸ್ಥಿತಿ. ಅದಷ್ಟು ಮಾತ್ರ ಪಡೆದು ಸ್ವರ್ಗದಲ್ಲಿ ಯಃಕಶ್ಚಿತನಾಗಿ ಬಾಳುವುದಕ್ಕಿಂತ ಚಕ್ರವರ್ತಿಯಾಗಿ ಇಲ್ಲಿಯೇ ಇರುವುದು ಉತ್ತಮ. ಅದರಿಂದ ಅವನಿಗೆ ಒಂದು ಕರ್ಮಜದೇವತೆಯ ಆನಂದವಾದರೂ ಬೇಡವೆ ? ಹಾಗಾಗಲು ಇಂದ್ರನ ಅಪ್ಪಣೆಯಾಗಬೇಕು. ಇಂದ್ರನ ಅಪ್ಪಣೆಯಿಲ್ಲದೆ ಕಾರಣದೇಹದ ಬಲವೂ ಆನಂದಾನುಭವಶಕ್ತಿಯೂ ಬೆಳೆಯುವುದಿಲ್ಲ. ಈ ಯಾಗಕ್ಕೆ ವಸಿಷ್ಠರು ಬರುವುದಿಲ್ಲ. ವಸಿಷ್ಠರು ಬರದೆ ಇಂದ್ರನು ಬರುವುದಿಲ್ಲ. ಇಂದ್ರನಿಲ್ಲದೆ ಯಾಗವು ನಡೆಯಬೇಕು."

"ಎಂದರೆ ಯಾಗವು ಸಹಜವಾಗಿ ನಡೆಯದೆ ಸಾಹಸದಿಂದ ಆಗಬೇಕು ಎಂದಂತಾಯಿತು."

"ಅದರಲ್ಲಿ ಏನೂ ಸಂದೇಹವಿಲ್ಲ. ನೀವಿಬ್ಬರೂ ಅಸಹಜವಾಗಿ ಹುಟ್ಟಿದವರು. ತ್ರಿಶಂಕುವಿನ ಆಶೆ ಅಸಹಜವಾದುದು. ಅದಕ್ಕಾಗಿ ನೀವು ಮಾಡುವ ಕಾರ್ಯ ಅಸಹಜವಾದುದು. ಈ ಸಾಹಸಗಳಿಂದ ಅನಾಹುತಗಳೂ ನಡೆಯುವುವು. ಆದರೆ, ಆ ಅನಾಹುತಗಳೇನು ಎಂಬುದನ್ನು ಮಾತ್ರ ನೋಡಬೇಡಿ. ಆ ಅನಾಹುತಗಳನ್ನು ಕಂಡರೂ ಕಾಣದಂತಿದ್ದು ಇಂದಿನ ಕಾರ್ಯದಲ್ಲಿ ಪ್ರವೃತ್ತರಾಗುವುದು ನಿಮಗೆ ಸಾಧ್ಯವಿಲ್ಲ. ನಿಮ್ಮಲ್ಲಿ ಒಬ್ಬನು ರುದ್ರ ವಿದ್ಯವನ್ನು ಬಲ್ಲವನು. ಇನ್ನೊಬ್ಬನು ವರುಣ ವಿದ್ಯವನ್ನು ಬಲ್ಲವನು. ನೀವಿಬ್ಬರೂ ಸೇರಿ ಮೊದಲು ಅಶ್ವಿನಿಯರನ್ನು ಒಲಿಸಿಕೊಳ್ಳಿ. ಅವರು ಅಗ್ನಿ ವಾಯುಗಳ ರಹಸ್ಯವನ್ನು ತಿಳಿಸುವರು. ಮುಂದೆ ಏನು ಮಾಡಬೇಕು ಎಂಬುದನ್ನು ನೀವೇ ಗೊತ್ತುಮಾಡಿಕೊಳ್ಳಿ. ಆದರೆ, ಎಚ್ಚರಿಕೆ, ನಿಮ್ಮ ಬುದ್ಧಿಶಕ್ತಿಯೆಲ್ಲವನ್ನೂ ಪ್ರಯೋಗಿಸಿ, ಅನಂತರವೇ ನೀವು ಸಂಯಮಕ್ಕೆ ಬರಬೇಕು. ನೀವು ಮಾತೆತ್ತಿದರೆ ಸಂಯಮಮಾಡಿದರೆ ಅಂತಃಪುರುಷನು ಸರಿಯಾಗಿ ವಾಣಿಯನ್ನು ಕೊಡುವುದಿಲ್ಲ.

ಅಥರ್ವನು ಹೊರಟನು : ಜಮದಗ್ನಿ ವಿಶ್ವಾಮಿತ್ರರು ಮತ್ತೆ ಪ್ರಾರ್ಥಿಸಿ ಆತನನ್ನು ಇನ್ನೊಂದು ಗಳಿಗೆ ನಿಲ್ಲಬೇಕೆಂದು ಕೋರಿದರು. ವಿಶ್ವಾಮಿತ್ರನು ಕೇಳಿದನು : "ಮಹರ್ಷಿವರ್ಯ, ಈ ಯಾಗಕ್ಕೆ ಬ್ರಹ್ಮನಾಗುವ ಯೋಗ್ಯತೆಯು ಯಾರಿಗುಂಟೋ ತಿಳಿಯದು. ಅನಾಹುತಗಳಾಗುವುವೆಂದು ಅಪ್ಪಣೆಯಾಯಿತು. ಆ ಅನಾಹುತದಿಂದ ಯಜ್ಞವು ಕೆಡದಂತೆ ಕಾಪಾಡಬಲ್ಲ ಬ್ರಹ್ಮನು ಯಾರು ಎಂಬುದನ್ನು ಅನುಗ್ರಹಿಸಬೇಕು."

ಅಥರ್ವನು ನಕ್ಕನು : "ಕೌಶಿಕ, ಒಳ್ಳೆಯ ಕೆಲಸಮಾಡಿದೆ. ಚಂಡಾಲನು ಯಜ್ಞದೀಕ್ಷಿತ, ಕ್ಷತ್ರಿಯನು ಅಧ್ವರ್ಯು. ಉದ್ದೇಶ ಸಶರೀರವಾಗಿ ಶಾಶ್ವತ ಸ್ವರ್ಗವಾಸ. ಇದಕ್ಕೆ ಯಾವ ಮಹರ್ಷಿಗಳು ಬರುವರು? ಇದೇ ನಿದ್ದರೂ ಭರತರು, ಭಾರ್ಗವರು, ನಿರ್ವಹಿಸಬೇಕಾದ ಕಾರ್ಯ. ನಿನ್ನ ಮೇಲಿನ ವಿಶ್ವಾಸದಿಂದ ಕೆಲವರು, ಜಮದಗ್ನಿಯ ಭಯದಿಂದ ಕೆಲವರು ಬರಬಹುದು.

ಬರದಿದ್ದವರನ್ನು ಕರೆದು ಆಭಾಸಮಾಡಬೇಡ. ಜಮದಗ್ನಿಯು ಬ್ರಹ್ಮನಾಗಲಿ. ಆತನು ಶಾಂತ ಘೋರ ಕರ್ಮಗಳನ್ನೆಲ್ಲ ಸಾಂಗವಾಗಿ ಬಲ್ಲವನು. ಒಂದು ವೇಳೆ, ಅವಶ್ಯವಾದರೆ, ಜಮದಗ್ನಿ, ನನ್ನನ್ನು ಸ್ಮರಿಸಿ ಬೇಕಾದ ಪ್ರಯೋಗ ಮಾಡು. ಸಿದ್ಧಿಸುವುದು. ಆದರೆ, ಎಚ್ಚರಿಕೆ, ಈ ಯಾಗವು ಮುಗಿಯುವ ವರೆಗೂ ನಿನಗೆ ಕೋಪವು ಬರಬಾರದು. ನೀವು ಭಾರ್ಗವರು. ನಿಮಗೆ ಮೂಗಿನ ಮೇಲೆ ಕೋಪ. ನೀನು ಕೋಪ ಮಾಡಿಕೊಂಡೆಯೋ ಯಾಗವು ಕೆಟ್ಟಿತು. ಎಚ್ಚರಿಕೆ."

ಅಥರ್ವ ಮಹರ್ಷಿಯು ಹೇಳ್ಕೊಂಡನು. ಜಮದಗ್ನಿ ವಿಶ್ವಾಮಿತ್ರರು ಆತನಿಗೆ ಪುನಃ ಪೂಜೆಯನ್ನು ಸಮರ್ಪಣೆಮಾಡಿ ಬೀಳ್ಕೊಟ್ಟು, ತಮ್ಮ ಮುಂದಿನ ಕಾರ್ಯದಲ್ಲಿ ಪ್ರವೃತ್ತರಾದರು.

---

## ಇಪ್ಪತ್ತನೆಯ ತರಂಗ

ಜಮದಗ್ನಿ ವಿಶ್ವಾಮಿತ್ರರು ಸೋಮ ಯಾಗವನ್ನು ಆರಂಭಿಸಿದರು. ಆದರ ದೇವತೆಗಳು ಅಶ್ವಿನಿಗಳು. ಯಾಗವು ಏನೊಂದು ವಿಘ್ನವೂ ಇಲ್ಲದೆ ನೆರವೇರಿತು. ಯಾಗಾಂತದಲ್ಲಿ ಅವಭೃತವೂ ಆಯಿತು. ಮರುದಿನ ಇಬ್ಬರು ಋಷಿಗಳೂ ಕುಳಿತು ಅಶ್ವಿನೀ ದೇವತೆಗಳನ್ನು ಬರಮಾಡಿಕೊಂಡರು. ನವ ಯೌವನ ಸಂಪನ್ನರೂ ಸುರೂಪಶಾಲಿಗಳೂ ಕಮಲಹಾರಗಳನ್ನು ಧರಿಸಿ, ಸುದೀರ್ಘ ಕೇಶಗಳಿಂದ ಮನೋಹರರೂ ಆದ ಆ ದೇವತೆಗಳೂ ಶಿಂಶುಮಾರ ರಥದಲ್ಲಿ ಬಂದು ದರ್ಶನಕೊಟ್ಟರು.

ಅವರಿಗೆ ಸಲ್ಲಬೇಕಾದ ಪೂಜೆಯನ್ನೆಲ್ಲ ಸಲ್ಲಿಸಿ ಇಬ್ಬರೂ ಸೋಪಚಾರ ವಾಗಿ, ತ್ರಿಶಂಕುವಿನ ಸಂಗತಿಯನ್ನು ಅವರಿಗೆ ಅರಿಕೆಮಾಡಿದರು: ಅವರು ಸಂತುಷ್ಟರಾಗಿ "ಮನುಷ್ಯರು ಹೀಗೆ ಸಾಹಸಪರರಾಗಿ ಇರುವುದೇ ನಮಗೆ ಬೇಕಾದುದು. ಅಲ್ಲದೆ, ಹುಟ್ಟಿದ್ದು ಹುಟ್ಟಿದಹಾಗೆ ಮರದ ತುಂಡಿನಂತೆ ಬಿದ್ದಿರುವುದು ಮನುಷ್ಯ ಧರ್ಮವಲ್ಲ. ಜಡಧರ್ಮ. ಕ್ರಿಮಿಕೀಟಗಳು ಆಹಾರ ವನ್ನೂ ಭೋಗವನ್ನೂ ಹುಡುಕಿಕೊಂಡು ತಿರುಗುವುವು. ಮನುಷ್ಯರು ಸಿದ್ಧಿ

ಗಳನ್ನೂ ಪ್ರಭಾವಗಳನ್ನೂ ಹುಡುಕಿಕೊಂಡು ತಿರುಗುವುದು. ಅಂತಹವರನ್ನು ಕಂಡರೆ ನಮಗೆ ಸಂತೋಷ. ನಮ್ಮಿಂದ ಈ ಸಂಬಂಧವಾಗಿ ಏನಾಗಬೇಕು ಹೇಳಿ. ಅವಶ್ಯವಾಗಿ ಮಾಡಿಕೊಡುವೆವು" ಎಂದು ಮಾತುಕೊಟ್ಟರು.

ವಿಶ್ವಾಮಿತ್ರನು ಜಮದಗ್ನಿಯ ಪ್ರೇರಣೆಯಿಂದ ಮಾತನಾಡಿದನು : "ಅಶ್ವಿನೀ ದೇವತೆಗಳೇ, ತಾವು ಸತ್ಯವಂತರೆಂದು ಪ್ರಸಿದ್ಧರಾದವರು. ಹಿಂದೆ ಎಷ್ಟೋ ಜನ ಭಕ್ತರಿಗೆ ಬೇಕು ಬೇಕಾದ ವರಗಳನ್ನೆಲ್ಲ ಕೊಟ್ಟು ಕಾಪಾಡಿದವರು. ದೇವವೈದ್ಯರೆಂದು ಪ್ರಸಿದ್ಧರಾಗಿ, ಭಕ್ತರನ್ನು ಕಾಪಾಡಲು ಓಡೋಡಿ ಬರುವವರು ತಾವು. ಅದರಿಂದ ತಮ್ಮನ್ನು ಪ್ರಾರ್ಥಿಸುವೆನು. ಈ ತ್ರಿಶಂಕುವಿನ ಇಷ್ಟವು ನೆರವೇರುವ ಬಗೆಯನ್ನು ನಮಗೆ ಅನುಗ್ರಹಿಸಬೇಕು. ಯಾವ ವಿಧಾನದಿಂದ ಮರ್ತ್ಯನಾದೀತನು ತನ್ನ ಮರ್ತ್ಯದೇಹವನ್ನು ಬಿಡದೆ ಅಮರನಾಗಿ ಸುರಭೋಗಗಳಿಗೆ ಅರ್ಹನಾಗುವನೋ ಅದನ್ನು ಉಪದೇಶಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕು."

ಅಶ್ವಿನಿಗಳು ನಕ್ಕರು : "ರಾಜರ್ಷಿಯೆ, ನೀನು ಈಗ ಕೇಳುತ್ತಿರುವುದು ಎಷ್ಟು ಗಹನವಾದ ವಿಚಾರ ಗಮನಿಸಿರುವೆಯಾ ? ಲೋಕದಲ್ಲಿ ಯಾರೇ ಆಗಲಿ, ಅಜ್ಞರಾಗಲಿ, ಪ್ರಾಜ್ಞರಾಗಲಿ, ವಸ್ತುವಿಂಥದು ಎಂದು ಗೊತ್ತು ಮಾಡುವುದು ಗುಣಧರ್ಮಗಳಿಂದ. ಗುಣಧರ್ಮಗಳನ್ನು ಬದಲಾಯಿಸಿದರೆ ವಸ್ತುವೂ ಬೇರೆಯಾಗುವುದಿಲ್ಲವೆ ? ವಸ್ತುವು ಬೇರೆಯಾಗದೆ ಗುಣಧರ್ಮಗಳು ಬದಲಾಯಿಸುವುದೆಂತು ? ಮರ್ತ್ಯ, ಅಮರ್ತ್ಯದೇಹಗಳೆರಡೂ ಪರಸ್ಪರ ವಿರುದ್ಧ ಧರ್ಮಗಳು. ಜರಾಮರಣ ಧರ್ಮವುಳ್ಳದ್ದಾಗಿರುವ ಮಾನವದೇಹವು ಅಮರ್ತ್ಯವಾದರೆ, ಅದೊಂದು ವಿಚಿತ್ರ. ಅಂತಹದೊಂದು ವಿಚಿತ್ರವಿಧಾನವನ್ನು ಕಲ್ಪಿಸಿದರೆ ಲೋಕದ ಮರ್ಯಾದೆಯು ಕೆಟ್ಟು, ವ್ಯವಸ್ಥೆಯಿಲ್ಲದ ವಿಚಿತ್ರ ಸೃಷ್ಟಿಯಾಗಿ ಸಂಕರಧರ್ಮವು ಬಂದು ಲೋಕವು ವ್ಯಥಿತವಾಗುವುದು. ಆದರೂ ನಾವು ಮಾತುಕೊಟ್ಟಿರುವುದರಿಂದ ಇದನ್ನು ಮಾಡಿಕೊಡುವೆವು. ಆದರೆ ಒಂದು ಮಾತು. ನೆನೆಪಿರಲಿ. ಈಗ ನಾವು ತೋರಿಸುವ ಈ ಮಾರ್ಗವನ್ನು ಮತ್ತೆ ಮತ್ತೆ ಉಪಯೋಗಿಸುವುದಕ್ಕೆ ಹೋಗಬೇಡಿ ಮಾನವರು ಪ್ರಕೃತಿ ಕೃಪಣರು. ಯಾವಾಗಲೂ ಏನಾದರೂ ಬೇಕು ಎಂಬ ಲೋಭಕ್ಕೆ ಸಿಕ್ಕಿ ಒದ್ದಾಡುವವರು. ತೃಪ್ತಿಗಾಣದ ಚಂಚಲ ಮನಸ್ಸಿನವರು. ಅದರಿಂದ

ಇದನ್ನು ಆದಷ್ಟು ರಹಸ್ಯವಾಗಿಡಿ. ದುರ್ವಿನಿಯೋಗ ಮಾಡುವ ಅನಧಿಕಾರಿಗೆ ಹೇಳಬೇಡಿ."

ವಿಶ್ವಾಮಿತ್ರನ ಮನಸ್ಸು ಏತಕ್ಕೋ ಕಾತರವಾಗಿ ಈ ಮಾತು ನನಗೇ ಹೇಳಿದುದು ಎಂದುಕೊಂಡಿತು.

ಅಶ್ವಿನೀ ದೇವತೆಗಳು ಮುಂದೆ ಹೇಳಿದರು :—" ಮನುಷ್ಯರೂ ದೇವತೆಗಳೂ ಒಂದೇ ರಜೋಗುಣದವರು. ರಜೋಗುಣದಲ್ಲಿ ತಮಾಂಶ ಅಧಿಕವಾಗಿ ಮನುಷ್ಯರೂ, ಸತ್ವಾಂಶ ಅಧಿಕವಾದರೆ ದೇವತೆಗಳೂ ಹುಟ್ಟುವರು. ಅದರಿಂದ ಈಗ ತ್ರಿಶಂಕುವಿನ ದೇಹದಲ್ಲಿರುವ ರಜಸ್ಸು ತಮಸ್ಸುಗಳ ಅಂಶಗಳನ್ನು ಪ್ರತ್ಯೇಕಿಸಿ, ತಮಸ್ಸಿನ ಅಂಶಕ್ಕೆ ಬದಲಾಗಿ ಸತ್ವವನ್ನು ಇಟ್ಟರೆ ಅವನು ದೇವತೆಯಾಗುವನು. ಅದು ಆಗಬೇಕಾದರೆ ಚತುರ್ವಿಂಶತಿ ತತ್ವಗಳ, ಪಂಚಭೂತಗಳ, ಮುಖ್ಯವಾಗಿ ಇಂದ್ರನ ಅಪ್ಪಣೆಯಾಗಬೇಕು. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಹೊರಡಿ. ಪಲಾಶ, ಅಶ್ವತ್ಥಗಳು ಯಮ, ವರುಣ ಪಾಶಗಳನ್ನು ಬಿಡಿಸುವುವು. ಯಮಪಾಶದಿಂದ ತಪ್ಪಿಸಿಕೊಂಡವನು ಅಮರನಾಗುವನು. ವರುಣ ಪಾಶದಿಂದ ಬಿಡಿಸಿಕೊಂಡವನು ಪಂಚಭೂತವ್ಯತ್ಯಯದಿಂದ ಆಗುವ ವಿಕಾರ ರೂಪವಾದ ಜರೆಯಿಂದ ನಿರ್ಮುಕ್ತನಾಗಿ ಅಜರನಾಗುವನು. ಸೋಮಯಾಗದಿಂದ ದೇವತೆಗಳನ್ನು ತೃಪ್ತಪಡಿಸಿ, ಅವರ ಅಪ್ಪಣೆಯನ್ನು ಪಡೆದು ಸ್ವರ್ಗಕ್ಕೆ ಕಳುಹಿಸಿ. ಅಲ್ಲಿ ಶಾಶ್ವತವಾಗಿ ನೆಲಸುವನು."

ವಿಶ್ವಾಮಿತ್ರನು ಕೇಳಿದನು :—" ಆಯಿತು. ದೇವದೇವರೆ, ಆತನಿಗೆ ಗುರುಪುತ್ರರಿಂದ ಶಾಪ ಬಂದಿರುವುದಲ್ಲ. ಅದಕ್ಕೇನು ಮಾಡುವುದು ? "

"ಆ ಶಾಪವು ಅವನಿಗೆ ಆಗಲೇ ಚಂಡಾಲತ್ವವನ್ನು ತಂದುಕೊಟ್ಟಿರುವುದು. ಜೀವನಿಗೆ ಕರ್ಮ ಕಳಾ ಎಂದು ಎರಡು ರೂಪಗಳು. ನಾವು ಹೇಳಿದ ವಿಧಾನವು ಕರ್ಮವನ್ನು ತೊಳೆಯುವುದು. ಈತನ ಗುರುಶಾಪವು ಕಳೆಗೆ ತಗುಲಿರುವುದು. ಅದರಿಂದ ನಿನ್ನ ತಪೋಬಲದಿಂದ ಅದನ್ನು ಆಕರ್ಷಿಸಿ ಒಂದು ಕುಂಭದಲ್ಲಿಟ್ಟಿದ್ದು, ಸೋಮಯಾಗದ ಅವಭೃತದ ವೇಳೆಯಲ್ಲಿ ಅದನ್ನು ವಿಸರ್ಜಿಸು, ಆದರೂ, ಅದು ವಸಿಷ್ಠ ಶಾಪ, ವಸಿಷ್ಠರ ಮೇಲೆ ಇಂದ್ರನಿಗೆ ಬಹಳ ವಿಶ್ವಾಸ, ಅದರಿಂದ ಆ ಕುಲದವರು ತೀರಿತೆನ್ನುವವರೆಗೆ ಆ ಶಾಪವು ಪೂರ್ಣವಾಗಿ ತೀರುವಂತಿಲ್ಲ."

ಜಮದಗ್ನಿಯು ವಿಶ್ವಾಮಿತ್ರನಿಗೆ ಸನ್ನೆಮಾಡಿ ಸುಮ್ಮನಿರಿಸಿ ತಾನು ಮಾತನಾಡಿದನು: "ಎಲ್ಲೈ ಯಮಳರೆ, ತಾವು ಹೇಳಿರುವ ವಿಧಾನವನ್ನು ಮಾಡುವದು ತಮ್ಮಿಂದಲೇ ಸಾಧ್ಯ. ಅಲ್ಲದೆ, ವಿಧಾನವನ್ನು ಈ ಕಾಲ ದೇಶಾನು ಗುಣವಾಗಿ ಸರಿಹೋಗಿಸಿಕೊಳ್ಳುವ ಶಕ್ತಿಯೂ ಸಾಧನವೂ ನಮಗೆ ಸಾಲವು. ಆದರಿಂದ ತಮ್ಮ ಅಪ್ಪಣೆಯಾದರೆ, ತಾವು ಈ ಉದ್ದೇಶಕ್ಕೆ ವಿರೋಧವಾಗಿಲ್ಲ ವಾಗಿ ಕೇಳಿಕೊಳ್ಳುವೆನು. ದೊಡ್ಡ ಮನಸ್ಸುಮಾಡಿ, ನಮ್ಮ ಮೇಲೆ ಅನುಗ್ರಹ ಮಾಡಿ, ಆ ತ್ರಿಶಂಕುವಿನ ದೇಹವನ್ನು ತಾವೇ ಚಿಕಿತ್ಸೆಮಾಡಿ ದಿವ್ಯದೇಹವನ್ನು ಮಾಡಿಕೊಡಬೇಕು.

ಯಮಳರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ನಕ್ಕರು. "ಅದೂ ಸರಿ" ಎಂದು ಒಪ್ಪಿದರು. ಮರುದಿನ ರಾತ್ರಿಯಲ್ಲಿ ಚಿಕಿತ್ಸೆಯು ನಡೆಯುವುದೆಂದು ಗೊತ್ತಾಯಿತು.

ತ್ರಿಶಂಕುವಿಗೆ ಆಗಲೇ ಚಂಡಾಲತ್ವವು ಬಂದಿದೆ. ಮುಖದಲ್ಲಿ ತೇಜಸ್ಸಿಲ್ಲ: ದೇಹದಲ್ಲಿ ಬಲವಿಲ್ಲ: ಮನಸ್ಸಿನಲ್ಲಿ ಯಾವುದಕ್ಕೂ ಇಚ್ಛೆಯಿಲ್ಲ. ವಿಶ್ವಾಮಿತ್ರನು ಇದನ್ನು ಕಂಡು, ಇನ್ನು ಕೈ ಮೀರುವವರೆಗೂ ಸುಮ್ಮನಿರಬಾರದು ಎಂದು ಅವನಿಗೆ ಮಂತ್ರಸ್ನಾನ ಮಾಡಿಸಿ, ಅವನ ಚಂಡಾಲತ್ವವನ್ನು ಆಕರ್ಷಿಸಿ ಒಂದು ಕುಂಭದಲ್ಲಿಟ್ಟು, ಅದನ್ನು ಆಶ್ರಮದ ಹಿಂದೆ ಯಾರೂ ಹೆಚ್ಚಾಗಿ ಹೋಗದ ಏಕಾಂತ ಪ್ರದೇಶದಲ್ಲಿದ್ದ ಒಂದು ಮುಳ್ಳು ಮುತ್ತುಗದ ಮರಕ್ಕೆ ಕಟ್ಟಿದನು. ತ್ರಿಶಂಕುವು ಅರೆವಾಸಿ ಮೊದಲಿನಂತಾದನು.

ಆಮೇಲೆ ಮತ್ತೆ ಆತನು ಮೃತ್ತಿಕಾ ಶೌಚಾದಿಗಳಿಂದ ದೇಹನನ್ನು ಶುದ್ಧಿ ಮಾಡಿಕೊಂಡು ನದೀಸ್ನಾನಮಾಡಿ ಬಂದನು.

ಆಶ್ರಮದಲ್ಲಿ ಒಂದು ಹೊಸ ಗುಡಿಸಲು ಏರ್ಪಟ್ಟಿದೆ. ಅದರ ನಡುವೆ ಜ್ಯೋತಿರ್ಲತೆಯೊಂದು ಬೆಳಗುತ್ತಾ ಸುಖವಾದ ಬೆಳಕನ್ನು ಹರಡುತ್ತಿದೆ. ಅದರ ಕೆಳಗೆ ಒಂದು ದರ್ಭಶಯ್ಯೆ. ಅದರ ಎರಡು ಮಗ್ಗುಲುಗಳಲ್ಲಿ ಎರಡು ಆಸಂದಿಗಳು. ಅವುಗಳ ಮೇಲೆ ದರ್ಭಾಸನಗಳು. ಸುತ್ತಲೂ ಸಣ್ಣ ಜಗುಲಿ· ಅದರಮೇಲೆ ಅರಳಿ, ಮುತ್ತುಗ, ಬಾಳೆ ಎಲೆಗಳಿಂದ ಆದ ದೊನ್ನೆಗಳು. ಒಂದು ದೊಡ್ಡ ಮಡಕೆಯ ತುಂಬಾ ನೀರು. ಇನ್ನೊಂದು ಬಾಳೆಯೆಲೆಯ ದೊನ್ನೆಯ ತುಂಬಾ ನವನೀತ. ಇನ್ನೊಂದರಲ್ಲಿ ಸದ್ಯೋಘೃತ. ಆ ಗುಡಿಸಲಿನ

ಇನ್ನೊಂದು ಕಡೆಯಲ್ಲಿ ಒಂದು ಸಣ್ಣ ಅಗ್ನಿಕುಂಡ. ಅದರಲ್ಲಿ ಲೌಕಿಕಾಗ್ನಿಯು ಸಣ್ಣಗೆ ಉರಿಯುತ್ತಿದೆ. ಅದರ ಮಗ್ಗುಲಲ್ಲಿ ಬೇರೆಬೇರೆಯಾಗಿ ಕಟ್ಟಿರುವ ನಾನಾವಿಧ ಸಮಿತ್ತುಗಳ ಇಪ್ಪತ್ತುನಾಲ್ಕು ಕಂತೆಗಳು.

ನಿರ್ದಿಷ್ಟಕಾಲಕ್ಕೆ ತ್ರಿಶಂಕುವು ಬಂದನು. ಅಶ್ವಿನೀ ದೇವತೆಗಳು ಅಂದು ಚಿಕಿತ್ಸೆಮಾಡುವರು. ಮಾನವ ದೇಹವನ್ನು ದಿವ್ಯ ದೇಹವನ್ನು ಮಾಡುವರು ಎಂಬುದು ಆತನಿಗೆ ಗೊತ್ತಿದೆ. ಆತನೂ ಸಂತೋಷವಾಗಿ ಒಪ್ಪಿದ್ದಾನೆ. ನಾರು ಮಡಿಯೊಂದು ಉಟ್ಟು ನಾರುಮಡಿಯೊಂದರ ಉತ್ತರೀಯವನ್ನು ಸವ್ಯವಾಗಿ ಹಾಕಿಕೊಂಡು ಬಂದಿದ್ದಾನೆ. ಅನೇಕಸಲ ಅವಭೃತ ಸ್ನಾನಗಳನ್ನು ಮಾಡಿದ್ದು ದೆಲ್ಲ ನೆನೆಪಾಗುತ್ತಿದೆ. ಸೋಮಪಾನಮಾಡಿ ಆನಂದೋನ್ಮತ್ತನಾಗಿದ್ದುದು ನೆನೆಪಾಗಿ ಮನಸ್ಸು ಅಂದಿನ ಆನಂದಾತಿರೇಕವನ್ನು ಪೂರ್ಣವಾಗಿ ಅನುಭವಿಸು ವುದರೊಳಗಾಗಿ ಯಾವುದೋ ನೆರಳು ಬಂದು ಥಟ್ಟನೆ ಆಕ್ರಮಿಸಿ, ಆನಂದವನ್ನು ಕುಗ್ಗಿಸುತ್ತದೆ. ಆದರೂ ತ್ರಿಶಂಕುವು ಇಂದು ಹಿಂದಿನ ದಿನದ ತ್ರಿಶಂಕುವಲ್ಲ: ಹಿಂದಿನ ದಿನಗಳ ತ್ರಿಶಂಕುವೂ ಅಲ್ಲ. ವಸಿಷ್ಠಾಶ್ರಮಕ್ಕೆ ಹೋಗಿ ಅಲ್ಲಿ ಶಾಪ ವನ್ನು ಪಡೆದು ನಿತ್ಯದುಃಖಿಯಾಗಿ ಬಂದ ತ್ರಿಶಂಕುವಂತೂ ಅಲ್ಲವೇ ಅಲ್ಲ: ಅದಕ್ಕೆ ಹಿಂದೆ ಲೋಕದ ಉತ್ತಮೋತ್ತಮ ಸುಖಗಳನ್ನು ಅನುಭವಿಸುತ್ತಿದ್ದರೂ ಅಶಾಂತನಾಗಿ ಅದಕ್ಕಿಂತ ಉತ್ತಮವಾದ ದಿವ್ಯಭೋಗಗಳನ್ನು ಬಯಸುತ್ತಿದ್ದ ತ್ರಿಶಂಕುವಿಂದು, ಸಮಾಧಾನವಾಗಿ ಮಳೆಗರೆಯುವುದಕ್ಕೆ ಸಿದ್ಧವಾಗಿದ್ದರೂ ನಿಶ್ಚಲವಾಗಿ ನಭಸ್ಥಲದಲ್ಲಿ ನಿಂತಿರುವ ನೀಲ ಮೇಘದಂತೆ ಸ್ಥಿರನೂ ಪೂರ್ಣನೂ ಆಗಿದ್ದಾನೆ.

ರಾತ್ರಿಯಾಯಿತು. ಒಂದು ಝಾವವು ಕಳೆಯಿತು ಎನ್ನುವುದರೊಳ ಗಾಗಿ ಜಮದಗ್ನಿ ವಿಶ್ವಾಮಿತ್ರರು ಬಂದು ಆ ಲೌಕಿಕಾಗ್ನಿಯಲ್ಲಿ ಹೋಮ ಮಾಡಿದರು. ಯಮಳರು ಆಹುತಿಗಳಿನ್ನೂ ಅಗ್ನಿ ಸಾತ್ಮ್ಯಾಗುತ್ತಿದ್ದ ಹಾಗೆಯೇ ಕಾಣಿಸಿಕೊಂಡರು. ಹೋಮವನ್ನು ಮುಗಿಸಿ ಋಷಿಗಳಿಬ್ಬರೂ ಎದ್ದು ಯಮಳ ರಿಬ್ಬರಿಗೂ ಅರ್ಘ್ಯಪಾದ್ಯಾದಿಗಳನ್ನು ಒಪ್ಪಿಸಿದರು. ತ್ರಿಶಂಕುವಿಗೂ ದೇವತೆ ಗಳ ದರ್ಶನವಾಯಿತು. ಆತನೂ ನಮಸ್ಕಾರಾದಿಗಳಿಂದ ಅರ್ಚಿಸಿದನು.

ಯಮಳರು ಕೇಳಿದರು: "ಏನು ಮಹಾರಾಜ, ಈ ದೇವೀಕರಣವನ್ನು ಒಪ್ಪುವೆಯಾ? ನಿನ್ನ ದೇಹದಲ್ಲಿ ನಾವು ವ್ಯಾಪಾರ ಮಾಡಬಹುದೇ?"

ತ್ರಿಶಂಕುವು ನಮಸ್ಕಾರ ಮಾಡಿ "ತಾವು ಏನು ಬೇಕಾದರೂ ಮಾಡ ಬಹುದು. ದೇವಲೋಕದಲ್ಲಿ ಶಾಶ್ವತವಾಗಿ ಇರಬೇಕೆಂಬ ಆಸೆ ನನಗೆ. ಅದನ್ನು ವಿಶ್ವಾಮಿತ್ರರಿಂದ ಸಾಧಿಸಿಕೋ ಎಂದು ಗುರುಗಳ ಅಪ್ಪಣೆಯಾಯಿತು. ಅದ ರಿಂದ ಅವರನ್ನು ಆಶ್ರಯಿಸಿರುವೆನು. ಅವರು ತಮ್ಮನ್ನು ಕರೆಸಿರುವುದು. ತಾವು ಮಾಡುವುದೆಲ್ಲ ನನ್ನ ಶ್ರೇಯಸ್ಸಿಗೇ ಎಂದು ನನಗೆ ಗೊತ್ತಿರುವಾಗ ನಾನು ಮಾಡಬೇಕಾಗಿರುವುದು ಒಂದೇ ಒಂದು. ಅದು ನನ್ನನ್ನು ತಮಗೊಪ್ಪಿಸಿ ಕೊಳ್ಳುವುದು" ಎಂದು ಕೈ ಮುಗಿದನು.

ಅಶ್ವಿನಿಯರು ಸರಿ ಎಂದು ಚಿಕಿತ್ಸೆಗೆ ಸಿದ್ಧರಾದರು. ತ್ರಿಶಂಕುವಿಗೆ ಸದ್ಯೋಘೃತವನ್ನು ಮಂತ್ರ ಪೂರ್ವಕವಾಗಿ ಪಾನಮಾಡಿಸಿ, ದೇಹಾದ್ಯಂತವೂ ನವನೀತವನ್ನು ಸವರಿ ಮಂತ್ರೋದಕವನ್ನು ತಳಿದರು. ತ್ರಿಶಂಕುವು ನಿಶ್ಚೇಷ್ಟ ನಾದನು. ಆ ದೇಹವನ್ನೆತ್ತಿ ದರ್ಭಶಯ್ಯೆಯ ಮೇಲೆ ಮಲಗಿಸಿದರು.

ಜಮದಗ್ನಿಯು ಅಗ್ನಿಕುಂಡದ ಬಳಿ ಕುಳಿತು ರಕ್ಷೋಘ್ನ ಮಂತ್ರಗಳನ್ನು ಜಪಿಸುತ್ತ ಕುಳಿತನು. ವಿಶ್ವಾಮಿತ್ರನು ದೇವವೈದ್ಯರ ಅಪ್ಪಣೆ ಪಡೆದು ನಡೆ ಯುವುದೆಲ್ಲವನ್ನೂ ನೋಡುತ್ತ ಅವರ ಮಗ್ಗುಲಲ್ಲಿ ನಿಂತನು.

---

## ಇಪ್ಪತ್ತೊಂದನೆಯ ತರಂಗ

ಚಿಕಿತ್ಸೆಯು ಆರಂಭವಾಯಿತು. ದೇವವೈದ್ಯರು ಅಲ್ಲಿ ಇಟ್ಟಿದ್ದ ಅರಳಿ ಮುತ್ತುಗದ ದೊನ್ನೆಗಳಲ್ಲಿ ನೀರು ತುಂಬಿಕೊಂಡು ದರ್ಭ ಪಿಂಜೂಲಗಳನ್ನು ಹಿಡಿದು ಮಂತ್ರ ಜಲವನ್ನು ಪ್ರೋಕ್ಷಿಸುತ್ತ ಬಂದರು. ವಿಶ್ವಾಮಿತ್ರನು ನೋಡು ತ್ತಿದ್ದ ಹಾಗೆಯೇ ಒಂದು ಸಣ್ಣ ನೀರು ಹಬೆಯಂತಹದೊಂದು ಸೂಕ್ಷ್ಮ ದ್ರವ್ಯವು ಆ ದೇಹದ ಸುತ್ತಲೂ ಸೇರಿದಂತಾಗುತ್ತ ಬಂದು ಒಂದು ಗಳಿಗೆ ಯೆನ್ನುವುದರೊಳಗಾಗಿ ಆ ದೇಹದ ಸುತ್ತಲೂ ಒಂದು ಬಿಳಿಯ ಮೋಡವು ಕಟ್ಟಿದಂತಾಯಿತು. ಅದನ್ನೆಲ್ಲ ಸೇರಿಸಿ ಒಂದು ಗುಡ್ಡೆಮಾಡಿ, ಅದರಮೇಲೆ ಮಂತ್ರಜಲವನ್ನು ಮತ್ತೆ ಪ್ರೋಕ್ಷಿಸಲು ಅದು ಒಂದು ಉಂಡೆಯಾದಂತಾಗಿ, ಘನವಾದ ತೇಜೋಮೂರ್ತಿಯಾಗಿ ನಿಂತಿತು.

ಅದನ್ನು ಮತ್ತೆ ಮಂತ್ರ ಜಲದಿಂದ ಪ್ರೋಕ್ಷಿಸುತ್ತ ಬರಲು ವಿದ್ಯುಲ್ಲತೆಯಂತೆ ನೀಲವರ್ಣ ವಿಶಿಷ್ಟವಾಗಿ ಎರಕ ಹೊಯ್ದು ಸೂರ್ಯಕಿರಣದಂತೆ ಉಜ್ವಲವಾಗಿರುವ ಒಂದು ತೇಜಃಕಣವು ಹೊರಬಿತ್ತು. ಅದನ್ನು ಒಂದು ದರ್ಭೆಯ ಅಗ್ರದಲ್ಲಿಟ್ಟು ಮೊದಲು ಬಂದ ತೇಜೋಮೇಘದ ಕಡೆಗೆ ತಿರುಗಿದರು. ಅದನ್ನು ಮಂತ್ರಜಲದಿಂದ ಪ್ರೋಕ್ಷಿಸುತ್ತ ಬರಲು ಅದರಿಂದ ಬೇಯಿಸಿದ ರೇಶಿಮೆಯ ಗೂಡಿನಿಂದ ಎಳೆಯು ಎದ್ದು ಬರುವಂತೆ ಸೂಕ್ಷ್ಮವಾದ ತಂತುವೊಂದು ಎದ್ದುಬಂತು. ಜಾಡರ ಹುಳುವಿನ ದಾರಕ್ಕಿಂತಲೂ ನವಿರಾದ ಆ ದಾರವನ್ನು ಆ ವೈದ್ಯವರೇಣ್ಯರು ಬೇಗಬೇಗ ಸುತ್ತಿ ಅತ್ತಿಟ್ಟರು.

ಆ ದಾರವನ್ನು ಬಿಚ್ಚಿ ತೆಗೆಯುತ್ತಲೂ ಆ ತೇಜೋಮೇಘವು ಅಂತಃಪ್ರಕಾಶ ಸುಂದರವಾಯಿತು. ಅದುವರೆಗೆ ಕಾಣದಿದ್ದ ಅದರ ಅಂತಸ್ಥವು ಕಾಣುವಂತಾಗಿ, ಅಲ್ಲಿ ಬಿಳುಪು, ಕಪ್ಪು, ಕೆಂಪು, ನೀಲ, ಹಳದಿ ಬಣ್ಣಗಳು ಕಾಣಿಸಿದುವು. ಅವು ಬರುಬರುತ್ತ ತಿಳಿಯಾಗಿ ಎಲ್ಲವೂ ಬೇರೆಬೇರೆ ಬಣ್ಣಕ್ಕೆ ತಿರುಗಿದುವು. ಕಪ್ಪು ಬಿಳುಪಾಯಿತು. ಹಾಲು ಬಣ್ಣದ ಬಿಳುಪು ಶುದ್ಧವಾಗಿ ತೇಲಿ, ಪಾದರಸದ ಬಿಳುಪಾಯಿತು. ಕೆಂಪು ಪಾಟಲವರ್ಣವಾಗಿದ್ದರೂ ಹವಳದ ಬಣ್ಣಕ್ಕೆ ತಿರುಗಿತು, ಹಳದಿಯು ಅರಸಿನ ಬಣ್ಣವಿದ್ದುದು ರೇಗಿ ಯಾವುದೋ ಯಾವುದೋ ಬಣ್ಣಕ್ಕೆ ತಿರುಗಿ ಕೊನೆಗೆ ಅಪರಂಜಿಯ ಬಣ್ಣಕ್ಕೆ ನಿಂತಿತು. ನೀಲವು ಮೊಂಕುಮೊಂಕಾಗಿ ಹೊಳಪಿಲ್ಲದುದು ತಪ್ಪಿ, ಉತ್ತಮವಾದ ನೀಲರತ್ನದ ಹೊಳಪಿಗೆ ಇಳಿಯಿತು. ಇನ್ನೊಂದು ಗಳಿಗೆಯೊಳಗಾಗಿ ಅದೆಲ್ಲವೂ ಸೇರಿ ಮತ್ತೆ ಎಲೆಹಸುರು ಬಣ್ಣವಾಗಿ ನಿಂತಿತು.

ಅದನ್ನತ್ತ ಇಟ್ಟು ನೀಲಪ್ರಕಾಶಯುತವಾದ ಆ ತೇಜಃಕಣವನ್ನು ತೆಗೆದುಕೊಂಡರು. ಅದರಿಂದಲೂ ಶುಭ್ರವಾದ ಸೂಕ್ಷ್ಮಾತ್ಸೂಕ್ಷ್ಮವಾದ ತಂತುವೊಂದು ಎದ್ದು ಬಂತು. ಅದನ್ನು ಸುತ್ತಿಕೊಂಡು ಅದನ್ನು ಪ್ರತ್ಯೇಕಿಸಿದರು. ಅದುವರೆಗೆ ಕಣ್ಣುಕುಕ್ಕುವಂತೆ ಪ್ರಕಾಶವನ್ನು ಹೊರಚೆಲ್ಲುತ್ತಾ ಚಮಕಿಸುತ್ತಿದ್ದ ಆ ಪ್ರಕಾಶವು ಸ್ಥಿರವೂ ಸೌಮ್ಯವೂ ಆಯಿತು. ಅದನ್ನು ಪೂರ್ವಸಿದ್ಧವಾಗಿದ್ದ ತೇಜೋಮಂಡಲದಲ್ಲಿಟ್ಟರು.

ಇತ್ತ ಸ್ಥೂಲದೇಹವು ಆ ವೇಳೆಗೆ ಸೊರಗಿದೆ. ಪುರುಷ ಪ್ರಮಾಣವಾಗಿ ಪುಷ್ಟವಾಗಿ ದೃಢವಾಗಿದ್ದ ದೇಹವು ಸೊರಗಿ ಒಂದು ಚೋಟುದ್ದದ ಬೊಂಬೆ

ಯಾಗಿ ಮಲಗಿದೆ. ಅದನ್ನು ಮತ್ತೆ ಮಂತ್ರೋದಕಗಳಿಂದ ಪ್ರೋಕ್ಷಿಸುತ್ತ ಬರಲು ಅದರಿಂದ ನಾನಾವರ್ಣದ ಬೆಳಕುಗಳುಳ್ಳ ಜ್ವಾಲೆಗಳು ಎದ್ದುವು. ಅವು ಅಷ್ಟಷ್ಟು ಹೊತ್ತು ಉರಿದುರಿದು ಶಾಂತವಾಗಲು, ದೇಹವು ತೇಜಸ್ಸಂಪನ್ನ ವಾಗಿ ಗಾಜಿನ ಬೊಂಬೆಯಂತಾಯಿತು. ತೇಜೋಮಂಡಲವು ಆ ಬೊಂಬೆ ಯೊಳಕ್ಕೆ ನುಗ್ಗಿ ಅದರಲ್ಲಿ ಅಡಗಿತು. ಚೋಟುದ್ದದ ದೇಹವು ನೋಡು ನೋಡುತ್ತಿದ್ದಹಾಗೆಯೇ ದೊಡ್ಡದಾಯಿತು. ಮೊದಲಿನಂತೆ ಪುರುಷಪ್ರಮಾಣ ವಾಯಿತು.

ದೇವತೆಗಳಿಬ್ಬರೂ ಅದನ್ನು ಅತ್ತಕಡೆಯೊಬ್ಬರು ಇತ್ತಕಡೆಯೊಬ್ಬರು ಹಿಡಿದುಕೊಂಡು, "ನೀನು ಯಾರು ನೆನೆಪಿದೆಯೇ?" ಎಂದರು. ಉತ್ತರವು ಬಂತು: "ನಾನು ಅಯೋಧ್ಯಾಪತಿಯಾದ ತ್ರಿಶಂಕು." ದೇವತೆಗಳು ಮತ್ತೆ ಹೇಳಿದರು: "ನೀನು ಸೋಮಯಾಗವು ಪೂರ್ಣವಾಗಿ ಅವಭೃತವಾಗುವ ವರೆಗೂ, ವಿಶ್ವಾಮಿತ್ರ ಮಹರ್ಷಿಯ ಅಪ್ಪಣೆಯಾಗುವವರೆಗೂ ಭೂಲೋಕ ವನ್ನು ಬಿಟ್ಟು ಹೋಗಕೂಡದು. ಅವಭೃತವಾಗುವವರೆಗೂ ನಿನಗೆ ಭೂಸ್ಪರ್ಶ ದಿಂದ ಉಂಟಾಗುವ ಪ್ರಜ್ಞಾಮಾಂದ್ಯವೂ ದೇಹದ ತೂಕವು ಇರುವುದು. ತಿಳಿ ಯಿತೆ?" ಆ ದೇಹವು ಅವರು ಹೇಳಿದುದನ್ನು ಒಪ್ಪಿಕೊಳ್ಳುವುದಕ್ಕೆ ಇಷ್ಟವಿಲ್ಲ ದಂತೆ ಕೊಂಚ ನೋವಿನಿಂದ ಮುಖವನ್ನು ಸಿಂಡರಿಸಿತು. "ಉಹು. ಪ್ರತಿ ಯಾಡಕೂಡದು. ನಾವು ಮಾಡಿರುವುದು ಸರಿ."

ದೇಹವು ಒಪ್ಪಿ ಸುಮ್ಮನಾಯಿತು. ಅಪ್ಪಣೆ ಎಂದು ಪ್ರತ್ಯುತ್ತರವು ಬಂತು.

ಅಶ್ವಿನಿಯರು ಜಮದಗ್ನಿಯನ್ನು ಸಂಬೋಧಿಸಿ, "ನಮ್ಮ ಕಾರ್ಯ ವಾಯಿತು. ಪುರುಷಸೂಕ್ತದಿಂದ ಪೂರ್ಣಾಹುತಿಯನ್ನು ಕೊಡು. ನಮ್ಮ ಕಾರ್ಯವು ಸಫಲವಾಗಲಿ" ಎಂದರು. ಜಮದಗ್ನಿಯು ಪೂರ್ಣಾಹುತಿ ಯನ್ನು ಕೊಡುತ್ತಿದ್ದಂತೆಯೇ ತ್ರಿಶಂಕುವು ನಿದ್ದೆಯಿಂದ ಎದ್ದವನಂತೆ ಎದ್ದು ಕುಳಿತನು.

ದೇವತೆಗಳು ವಿಶ್ವಾಮಿತ್ರನ ಕಡೆ ತಿರುಗಿದರು: "ಎಲ್ಲವೂ ಅರ್ಥವಾಯಿ ತಷ್ಟೆ?"

"ಆಯಿತು."

"ಎಲ್ಲಿ? ನಿನಗೆ ತಿಳಿದುದನ್ನು ಒಮ್ಮೆ ಹೇಳು."

"ಮಂತ್ರಜಲ ಪ್ರೋಕ್ಷಣೆಯಿಂದ ಮೇಲಕ್ಕೆ ನೀಹಾರದಂತೆ ಎದ್ದು ಬಂದುದು ಪ್ರಾಣಪಂಚಕದ ಪ್ರಭೆ. ಅದರಲ್ಲಿದ್ದುದ್ದು ಜೀವಜ್ಯೋತಿ. ಪ್ರಾಣ ಪ್ರಭಾಮಂಡಲದಿಂದ ಬಿಚ್ಚಿ ತೆಗೆದುದು ಯಮಪಾಶ. ಅನಂತರ ಆ ಬೆಳಕು ಗಳು ಹೆಚ್ಚುಕಡಿಮೆಯೆಲ್ಲ ತನ್ಮಾತ್ರಗಳ ನ್ಯೂನಾತಿರೇಕಗಳನ್ನು ನಿವಾರಿಸಿ ಸರಿ ಮಾಡಿ ಜೋಡಿಸಿದುದು. ಈಗ ಇವನು ಕಾಮರೂಪನಾಗಿರುವನು. ಆ ಜೀವ ಜ್ಯೋತಿಃಕೋಶದಿಂದ ಬಿಚ್ಚಿ ತೆಗೆದ ಎಳೆಗಳು ವರುಣಪಾಶ. ಇನ್ನು ಈ ಜೀವ ನಿರುವ ದೇಹದಲ್ಲಿರುವ ಭೂತಗಳು ವ್ಯತ್ಯಯವನ್ನು ಹೊಂದದೆ ಕಲ್ಪಾಂತದವ ರೆಗೂ ಸಮನಾಗಿರುವುವು. ಇದುವರೆಗೆ ಈತನಿಗಿದ್ದ ದೇಹವು ಪಾರ್ಥಿವದೇಹ. ಅದರಲ್ಲಿ ಪೃಥ್ವಿಯ ಅಂಶವು ತಾನೇ ತಾನಾಗಿತ್ತು. ತನ್ಮಾತ್ರೆಗಳ ಸಮ ಜೋಡಣೆಯಲ್ಲಿ ಆ ಕಪ್ಪು ಹರಿದುಹೋದುದೇ ದೇಹದ ಪೃಥ್ವಿಯಂಶ ಕಡಿಮೆ ಯಾದುದರ ಗುರುತು. ಹಾಗೆಯೇ ಹಾಲುಬಿಳುಪು ಪಾದರಸದ ಬಿಳುಪಾದುದು ಅಪೋಭೂತವು ಹ್ರಸ್ವನಾದುದರ ಗುರುತು. ಈಗ ಈ ದೇಹವು ತೈಜಸ ವಾಗಿರುವುದು. ಒಳಗಿನ ಆಕಾಶ ವಾಯು ತೇಜೋಭೂತಗಳೂ ಮಾಲಿನ್ಯ ವನ್ನು ಬಿಟ್ಟು ಸತ್ವಸಂಪನ್ನಗಳಾದುವು. ಅದೇ ಆ ದೇಹದಲ್ಲಿ ಉರಿದ ಉರಿ ಗಳು. ಈಗ ಈ ಯಾಗವು ಮುಗಿಯುವವರೆಗೆ ಪೃಥ್ವಿಯಂಶವು ಹೊರ ಹೊದಿಕೆಯಾಗಿರುವುದರಿಂದ ಈ ದೇಹಕ್ಕೆ ಆಕಾಶಗಮನ, ತೇಜೋವಿಕಿರಣ, ಮೊದಲಾದ ದಿವ್ಯದೇಹದ ಗುಣಗಳು ಕಾಣಿಸವು."

ಅಶ್ವಿನೀ ದೇವತೆಗಳು ಈ ವರದಿಯನ್ನು ಕೇಳಿ ಬಹು ಸಂತೋಷಪಟ್ಟರು. ಕುಶಾಗ್ರಬುದ್ಧಿಯಾಗಿ ಏಕಸಂತಗ್ರಾಹಿಯಾದ ಶಿಷ್ಯನ ಕೃತವಿದ್ಯತೆಯನ್ನು ಕಂಡು ಸಂತೋಷಿಸುವ ಗುರುಗಳಂತೆ ಸಂತೋಷಪಟ್ಟರು. ಅವರ ಪ್ರಸ ನ್ನತೆಯು ಪ್ರಕಟವಾಗಿ ಕಾಣಿಸುತ್ತಿರಲು, ಅವರ ಮುಖಮುದ್ರೆಯು ಬೇಕಾದ ವರವನ್ನು ಕೇಳು ಕೊಡುವೆವು ಎಂಬ ಭಾವವನ್ನು ಬೀರುತ್ತಿರಲು, ವಿಶ್ವಾ ಮಿತ್ರನು ಅವರಿಗೆ ಮತ್ತೆ ಸ್ತುತಿಯೆಂಬುಪಹಾರವನ್ನು ಒಪ್ಪಿಸಿ, "ಕೇಳಿದು ದನ್ನು ಕೊಡುವವರೆಂದು ಪ್ರಸಿದ್ಧರಾದ ದೇವವರೇಣ್ಯರೆ, ಕೊಡುವೆವು ಎಂದು ದನ್ನು ತಪ್ಪದೆ ಕೊಡುವ ಸತ್ಯವಂತರೆ, ಕೃಪೆಮಾಡಿ ನನಗೊಂದು ವರವನ್ನು ಕೊಡಿರಿ, ನನಗೆ ಬ್ರಾಹ್ಮಣತನುವನ್ನು ಕೊಡಿ" ಎಂದು ಪ್ರಾರ್ಥಿಸಿಕೊಂಡನು.

ಅಶ್ವಿನೀ ದೇವತೆಗಳು ವಿಶ್ವಾಮಿತ್ರನನ್ನು ಆಲಿಂಗಿಸಿಕೊಂಡರು: "ಗಾಧಿ ತನಯ, ನಿನ್ನ ಪಿತಾಮಹನ ಸಂಕಲ್ಪವು ನೆರವೇರುವುದು. ಋಚೀಕನ ಅನುಗ್ರಹವು ಫಲಿಸುವುದು. ನಿನ್ನ ಪೂರ್ವಜನಾದ ಸಿಂಧುದ್ವೀಪನು ಆದಂತೆ ನೀನೂ ಬ್ರಾಹ್ಮಣನಾಗುವೆ. ಅಷ್ಟೇ ಅಲ್ಲ ಮಹಾಬ್ರಾಹ್ಮಣನೂ ಆಗುವೆ. ಆದರೆ, ಅದು ಅಷ್ಟು ಸುಲಭವಲ್ಲ. ಮಾನವದೇಹವನ್ನು ದಿವ್ಯದೇಹವನ್ನು ಮಾಡಿದವರಿಗೆ ಕ್ಷತ್ರಿಯ ದೇಹವನ್ನು ಬ್ರಾಹ್ಮಣದೇಹ ಮಾಡುವುದೇನು ಕಷ್ಟ? ಎನ್ನುವೆಯೇನೋ? ಬೆಳೆದು ನಿಂತಿದ್ದ ಮರವನ್ನು ಕಡಿದು ಯೂಪಸ್ತಂಭವನ್ನು ಮಾಡುವಂತಹ ಕೆಲಸ ಈಗ ನಾವು ಮಾಡಿದುದು. ನೀನು ಕೇಳುತ್ತಿರುವುದು, ಯೂಪವನ್ನು ಚಿಗುರುವಂತೆ ಮಾಡುವಂತಹ ಕಾರ್ಯ. ದೇಹವು ಬ್ರಾಹ್ಮಣವಾಗಬೇಕಾದರೆ, ಅದರಲ್ಲಿ ಭೂತ, ಭವ್ಯ, ಭವದ್ದೇವತೆಗಳೆಲ್ಲರಿಗೂ ಒಂದೊಂದು ಸ್ಥಾನವನ್ನು ಕಲ್ಪಿಸಬೇಕು. ಪೃಥ್ವಿ, ಅಂತರಿಕ್ಷ, ಸ್ವರ್ಗಗಳಲ್ಲಿ ಯಾರು ಯಾರು ದೇವತೆಗಳೆಂದು ಇರುವರೋ, ಯಾರು ಯಾರು ದೇವತೆಗಳಾಗಿ ಇದ್ದರೋ, ಯಾರು ಯಾರು ಮುಂದೆ ದೇವತೆಗಳಾಗುವರೋ ಅವರಿಗೆಲ್ಲ ಸ್ಥಾನವನ್ನು ಕಲ್ಪಿಸಿಟ್ಟಿರುವ ದೇಹವು ಬ್ರಾಹ್ಮಣವು. ಅಷ್ಟೇನು? ವಿಶ್ವಾಮಿತ್ರ, ಸಮಷ್ಟಿಯ ಪ್ರತಿಬಿಂಬವಾದ ವ್ಯಷ್ಟಿದೇಹವು ಯಾವುದೋ ಅದು ಬ್ರಾಹ್ಮಣವು. ಈ ವಿಶ್ವದ ಮೇರೆಯಾದ ರಸಾನದಿಯವರೆಗೆ ನೋಡಬಲ್ಲ ಪ್ರಜ್ಞಾಚಕ್ಷುವನ್ನು ಧಾರಣಮಾಡಬಲ್ಲ ದೇಹವು ಬ್ರಾಹ್ಮಣವು. ದೇವ ದೇವರೆಲ್ಲರನ್ನೂ ಸೃಷ್ಟಿಸಿದ ಪ್ರಜಾಪತಿಗೂ ಪುರುಷನಿಗೂ ಹಿಂದಿರುವ ಬ್ರಹ್ಮತತ್ವವನ್ನು ಸಂತತವಾಗಿ ಚಿಂತಿಸುವ ವೃತ್ತಿಯನ್ನು ಉಳ್ಳ ಅಂತಃಕರಣವನ್ನು ಧರಿಸಬಲ್ಲ ದೇಹವು ಬ್ರಾಹ್ಮಣವು. ಅಖಂಡವಾದ ಬ್ರಹ್ಮದ ವರ್ಚಸ್ಸನ್ನು ಖಂಡದಲ್ಲಿ ಪ್ರತಿಬಿಂಬಿಸಬಲ್ಲ ದೇಹವು ಬ್ರಾಹ್ಮಣವು. ಅಂತಹ ದೇಹವನ್ನು ಮಾಡುವುದು ಸಾಧ್ಯವಾದರೂ ಸುಲಭವಲ್ಲ. ಕಾಲದೇಶಗಳು ಕೂಡಬೇಕು. ಕಾಲದೇಶಗಳು ಕೂಡಿದರೂ ಆ ಕಾರ್ಯವಾಗಬೇಕಾದರೆ, ನಮ್ಮ ಜೊತೆಗೆ, ಉಷಸ್ಸು, ಸವಿತೃ, ಬ್ರಹ್ಮಣಸ್ಪತಿ, ಮೂವರೂ ಸೇರಬೇಕು. ಆಗುವುದು – ಆಗುವುದು. ಹಿಂದೆಗೆಯದೆ ಮುಂದೆ ನುಗ್ಗು. ಗೆಲ್ಲುವೆ, ನಿನ್ನ ಹೆಸರು ಶಾಶ್ವತವಾಗುವುದು. ಯಾರೂ ಮಾಡದಂತಹ ಕಾರ್ಯವನ್ನು ಮಾಡಿದನೆಂದು ನಿನಗೆ ಕಲ್ಪಕಲ್ಪಾಂತಸ್ಥಾಯಿಯಾದ ಕೀರ್ತಿಯು

ಬರುವುದು. ಅಷ್ಟೇ ಅಲ್ಲ. ಬ್ರಾಹ್ಮಣನಾಗಬೇಕೆಂಬ ಪ್ರತಿಯೊಬ್ಬನೂ ದಿನ ದಿನವೂ ಪ್ರತಿ ಸಂಧ್ಯೆಯಲ್ಲಿಯೂ ನಿನ್ನ ಹೆಸರನ್ನು ಹೇಳಬೇಕಾಗುವುದು. ಆದರೆ ವತ್ಸ, ಅವಸರಪಡಬೇಡ. ಆತುರಪಟ್ಟು ಕಾರ್ಯವನ್ನು ಕೆಡಿಸಬೇಡ. ಶಾಂತನಾಗಿ, ದಾಂತನಾಗಿ, ಕಾಲನಿರೀಕ್ಷಣಮಾಡುತ್ತ ಇರು" ಎಂದು ಹೇಳಿದರು.

ಈ ಅಭಿವಚನವನ್ನು ಕೇಳಿ ವಿಶ್ವಾಮಿತ್ರನ ಅಂಗಾಂಗಗಳಿರಲಿ, ದೇಹದಲ್ಲಿರುವ ಪ್ರತಿಯೊಂದು ಜಡಚೇತಃಕಣವೂ ಅಮೃತಾಭಿಷೇಕ ಮಾಡಿಸಿಕೊಂಡಷ್ಟು ಸಂತೋಷಪಟ್ಟಿತು.

ಅಶ್ವಿನೀ ದೇವತೆಗಳು ಜಮದಗ್ನಿಗೆ ಯಥಾಯೋಗ್ಯವಾಗಿ ವರವನ್ನು ಕೊಟ್ಟು, ಆ ಇಬ್ಬರು ಋಷೀಂದ್ರರಿಂದ ಪೂಜಾಸತ್ಕಾರಾದಿಗಳನ್ನು ಯಥಾವಿಧಿಯಾಗಿ ಪಡೆದು ಮರೆಯಾದರು.

---

## ಇಪ್ಪತ್ತೆರಡನೆಯ ತರಂಗ

ಅಯೋಧ್ಯಾನಗರದ ಬಳಿಯಲ್ಲಿ, ಸರಯೂ ನದಿಯ ತೀರದಲ್ಲಿ ಭವ್ಯವಾದ ದೇವಯಜನವೊಂದು* ಸಿದ್ಧವಾಗಿದೆ. ಇಕ್ಷ್ವಾಕು ಕುಲದ ತ್ರಿಶಂಕು ಮಹಾರಾಜನು ಇಂದು ಸಶರೀರವಾಗಿ ಸ್ವರ್ಗಕ್ಕೆ ಕೊಂಡೊಯ್ಯುವ ಯಾಗವೊಂದನ್ನು ಆರಂಭಿಸಲಿದ್ದಾನೆ. ರಾಜರ್ಷಿಯೆಂದು ಪ್ರಸಿದ್ಧನಾಗಿರುವ ವಿಶ್ವಾಮಿತ್ರನು ಆ ಯಜ್ಞವನ್ನು ಮಾಡಿಸಲು ಅಧ್ವರ್ಯುವಾಗಿ ನಿಂತಿದ್ದಾನೆ. ಭಾರ್ಗವರಲ್ಲಿ ಹೆಸರಾದ ಜಮದಗ್ನಿಯು ಬ್ರಹ್ಮ. ಹಾಗೆಯೇ ವೇದವೇತ್ತೃಗಳಲ್ಲಿ ಅಗ್ರಗಣ್ಯರೆಂದು ಹೆಸರಾದ ಮೇಧಾತಿಥಿ, ಗೃತ್ಸಮದ, ಕಣ್ವ ಮುಂತಾದ ಹಲವರು ಹಿರಿಯ ಋಷಿಗಳು ಆರ್ತ್ವಿಜ್ಯಕ್ಕೆ ಒಪ್ಪಿದ್ದಾರೆ. ವಸಿಷ್ಠರು ಮಾತ್ರ ಈ ಯಾಗಕ್ಕೆ ಬಂದಿಲ್ಲ. ಜನಜನಕ್ಕೆಲ್ಲ ಗೊತ್ತು ವಸಿಷ್ಠ ವಿಶ್ವಾಮಿತ್ರರ ಸಂಬಂಧ. ಅದರಿಂದ ಅವರು ಬರದಿರುವುದು ಯಾರಿಗೂ ಸೋಜಿಗವೆನಿಸಲಿಲ್ಲ. ಆದರೆ ಯಾಜ್ಞಿಕವನ್ನು ಬಲ್ಲವರು ಮಾತ್ರ ವಸಿಷ್ಠರಿಲ್ಲದ ಯಾಗವೆಂತಹುದು ಅಲ್ಲದೆ,

---

* ಯಾಗಶಾಲೆಗೆ ದೇವಯಜನವೆಂದು ಹೆಸರು.

ವಸಿಷ್ಠರ ಶಾಪವನ್ನು ಇವರು ತಡೆದು ತ್ರಿಶಂಕುವಿನ ಕೈಯಲ್ಲಿ ಯಾಗವನ್ನು ನಿಜವಾಗಿಯೂ ಮಾಡಿಸುವರೆ ಎಂದು ಶಂಕಿಸುವರು.

ದೇವಯಜನವನ್ನು ಕಟ್ಟುವುದಕ್ಕೆ ಲಗ್ನವಿಟ್ಟುದು ಮೊದಲು, ಹೇಗೆ ಹೇಗೆ ನೋಡಿದರೂ ಈ ಯಜ್ಞಕ್ಕೆ ವಿಘ್ನ ಬರುವುದು ಎಂದು ಸ್ಪಷ್ಟವಾಗಿ ಕಾಣುತ್ತದೆ. ಅದನ್ನು ಕೇಳಿದವರು ಬ್ರಾಹ್ಮಣನು ಮಾಡಿಸುವ ಯಾಗವನ್ನು ಕ್ಷತ್ರಿಯನು ಮಾಡಿಸುವನೆಂದರೆ ಆದೀತೆ? ಎನ್ನುತ್ತಾರೆ. ಇನ್ನು ಕೆಲವರು, ಛೀ ಛೀ, ಋತ್ವಿಕ್ಕರಿಂದ ಯಾಗಕ್ಕೆ ವಿಘ್ನವಾಗುವುದೆಂದರೇನು? ಆಗುವುದೆಲ್ಲ ಯಜಮಾನನಿಂದ. ಫಲಭೋಕ್ತೃವು ಯಾರು, ಯಜಮಾನನೋ ಋತ್ವಿಕ್ಕನೋ? ಅದರಿಂದ ಯಜಮಾನನ ದುರದೃಷ್ಟದಿಂದ ಯಾಗವು ಕೆಡಬೇಕು. ಅಲ್ಲದೆ ಸಶರೀರವಾಗಿ ತ್ರಿಶಂಕುವು ಸ್ವರ್ಗಕ್ಕೆ ಹೋಗಬಹುದು ಎನ್ನುವುದಾದರೆ, ಅದೇ ಯಾಗವನ್ನು ಇನ್ನೂ ಅಷ್ಟು ಬೆಳೆಸಿ ಅಯೋಧ್ಯೆಯನ್ನೆಲ್ಲ ಸ್ವರ್ಗಕ್ಕೆ ಏಕೆ ಕೊಂಡೊಯ್ಯಬಾರದು? ಎನ್ನುವರು. ಇನ್ನೊಬ್ಬನು ಪಂಡಿತಂಮನ್ಯನು, "ಇಲ್ಲವಂತೆ, ಮಹಾರಾಜನು ಸ್ವರ್ಗಕ್ಕೆ ಹೋಗಿ ಅದರ ರಹಸ್ಯವನ್ನು ಭೇಧಿಸಿ, ಅದನ್ನೇ ಇಲ್ಲಿಗೆ ಎಳೆದುಕೊಂಡು ಬರುವನಂತೆ" ಎನ್ನುವನು. ಇನ್ನೊಬ್ಬನು ಶ್ರದ್ಧಾವಂತನು "ಅದೂ ಸಾಧ್ಯ. ಮಂತ್ರ ಬಲವಿದ್ದವರು ಏನು ತಾನೇ ಮಾಡಲಾರರು? ಎಷ್ಟೋ ಜನರು ಮಂತ್ರ ಬಲದಿಂದ ದೇವತೆಗಳನ್ನೂ ಕಟ್ಟಿ ಹಾಕಿಲ್ಲವೆ?" ಎನ್ನುವನು.

ಅಂತೂ ಯಾಗವು ಆರಂಭವಾಯಿತು. ಯಜಮಾನನು ಅಂದು ನರ್ಮದಾ ತೀರದ ಆಶ್ರಮದಲ್ಲಿ ಅಶ್ವಿನೀ ದೇವತೆಗಳು ಕೊಟ್ಟಿರುವ ಅಭಿವಚನವನ್ನು ಸ್ಮರಿಸಿ, ತನಗೆ ಯಾಗಫಲವು ನಿಜವಾಗಿಯೂ ದೊರೆಯುವುದೆಂದು ನಂಬಿದ್ದರೂ "ಲಗ್ನದ ಬಲ ಏನು ಆದೀತೋ? ಎಲ್ಲದಕ್ಕೂ ಸಿದ್ಧವಾಗಿರಬೇಕು" ಎಂದು ಋತ್ವಿಕ್ಕರಿಗೆ ಸಲ್ಲಬೇಕಾದ ದಕ್ಷಿಣೆಗೆ ಎರಡು ಮೂರು ಪಟ್ಟು ದ್ರವ್ಯವನ್ನು ಮೊದಲೇ ಒಪ್ಪಿಸಿದ್ದಾನೆ. ವಿಶ್ವಾಮಿತ್ರನಿಗೆ ತನ್ನ ರಾಜ್ಯದ ದಕ್ಷಿಣ ಭಾಗವನ್ನೆಲ್ಲ ದಕ್ಷಿಣೆಯಾಗಿ ಸಮರ್ಪಿಸಿದ್ದಾನೆ.

ವಿಶ್ವಾಮಿತ್ರನಿಗೂ ಆಶ್ಚರ್ಯ. "ಹೇಗೆ ಹೇಗೆ ನೋಡಿದರೂ ಯಾಗವು ಪೂರ್ಣವಾಗುವಂತಿಲ್ಲ. ಆದರೂ ತ್ರಿಶಂಕುವಿಗೆ ಲೋಕಾಂತರವಾಗುವ ಯೋಗವು ಮಾತ್ರ ಪೂರ್ಣವಿದೆ. ಯಾಗವು ನಿಲ್ಲುವುದಕ್ಕೆ ಕಾರಣವೇನೇ

ನುಂಟು ? ವಸಿಷ್ಠರು ಬರದಿರುವುದು ಒಂದು ಕಾರಣ. ವಾಮದೇವನಾದರೂ ಬಂದಿದ್ದರೆ ಚೆನ್ನಾಗಿತ್ತು. ಆತನು ಯಾವುದೋ ವ್ರತವನ್ನು ಹಿಡಿದು ಕುಳಿತಿರುವನು. ವಸಿಷ್ಠರು ಬರದಿದ್ದರೆ ಇಂದ್ರನು ಬರುವುದಿಲ್ಲ ಎನ್ನುವುದು ನಿಜವೇ ? ಹಾಗೇನಾದರೂ ಆದರೆ, ತಾತ್ಕಾಲಿಕವಾಗಿ ಒಂದಷ್ಟುಹೊತ್ತು ಯಾರಲ್ಲಾದರೂ ವಸಿಷ್ಠತ್ವವನ್ನು ಆರೋಪಿಸುವುದು ಕೆಲಸವನ್ನು ಮುಗಿಸುವುದು ? "

"ಹಾಗೂ ಒಂದುವೇಳೆ ಯಾಗವು ನಿಲ್ಲಬೇಕಾಗಿ ಬಂದು ನಿಂತರೆ? ಏನು ಮಹಾ ! ಪ್ರಾಯಶ್ಚಿತ್ತವಾಗಿ ವಿಶ್ವಜಿದ್ಯಾಗವನ್ನು ಮಾಡುವುದು. ಯಾರ ಯಾಗಕ್ಕೆ ಯಾರು ಪ್ರಾಯಶ್ಚಿತ್ತಮಾಡಿಕೊಳ್ಳುವುದು ? ಆದರಿಂದ ಯಾಗ ಪೂರ್ಣಾರ್ಥವಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಕ್ಕಾದರೂ ತಾನೂ ಯಾಗಕರ್ತೃವಿನ ಜೊತೆಯಲ್ಲಿ ಕರ್ತೃವಾಗಿರಬೇಕು."

ಜಮದಗ್ನಿಯು ಒಪ್ಪಿದನು. ತ್ರಿಶಂಕುವೂ ಒಪ್ಪಿದನು. ತ್ರಿಶಂಕುವು ವಿಧಿಪೂರ್ವಕವಾಗಿ ದೀಕ್ಷೆಯನ್ನು ವಹಿಸಿದನು. ಯಜ್ಞದೀಕ್ಷೆಯನ್ನು ವಹಿಸುವ ದಿನದ ದೀಕ್ಷಾಯಣೀಯ ಇಷ್ಟಿಯಾಯಿತು. ಕ್ರಮಕ್ರಮವಾಗಿ, ನಿರ್ವಿಘ್ನವಾಗಿ ಯಾಗವು ಮುಂದುವರಿಯಿತು. ಸೋಮಕ್ರಯಣವಾಯಿತು. ಆ ದಿನದ ಇಷ್ಟಿಯೂ ನಡೆಯಿತು. ನಾಳೆಯ ದಿನ ಸೋಮಯಾಗ. ಇದುವರೆಗೆ ಅಗ್ನಿ, ಮಿತ್ರ, ವರುಣ, ವಾಯು ಎಲ್ಲರೂ ಬಂದಿದ್ದಾರೆ. ಇದುವರೆಗೆ ಇಂದ್ರನನ್ನು ಕರೆಯಬೇಕಾದ ಸಂದರ್ಭವು ಬಂದಿಲ್ಲ. ನಾಳೆ ಸೋಮಯಾಗದಲ್ಲಿ ಆತನನ್ನು ಕರೆಯದೆ ಯತ್ನವಿಲ್ಲ. ಆತನದೇ ಪ್ರಯಾಜ. *

ಮತ್ತೆ ಜಮದಗ್ನಿ ವಿಶ್ವಾಮಿತ್ರ ತ್ರಿಶಂಕುಗಳು ಸೇರಿದರು. "ನಾಳೆಯ ದಿನ ಇಂದ್ರನು ಬರಬೇಕು. ವಸಿಷ್ಠರಿಲ್ಲ. ವಸಿಷ್ಠಕುಲದವರೂ ಇಲ್ಲ. ಏನು ಮಾಡುವುದು ? ಇಂದ್ರಮಂತ್ರಕ್ಕೆ ಪ್ರೈಷ † ಕೊಡುವುದು. ಇಂದ್ರನು ಬಂದರೆ ಸರಿ. ಬರದೆಹೋದರೆ ಹೋತೃ‡ವಿನಲ್ಲಿ ವಸಿಷ್ಠರನ್ನು ಆವಾಹಿಸು

---

* ಪ್ರಧಾನವಾದ ಆಹುತಿಗೆ ಪ್ರಯಾಜ ಎಂದು ಹೆಸರು.

† ಅಧ್ವರ್ಯುವು ಯಜಮಾನನ ಪ್ರತಿನಿಧಿಯಾಗಿ ನಿಂತು ಯಾಗಮಾಡುವನು. ಆತನು ದೇವತೆಯನ್ನು ಕರೆ ಎಂದು ಆಜ್ಞೆ ಮಾಡುವುದು ಪ್ರೈಷವು.

‡ ಋಕ್ಕುಗಳನ್ನು ಹೇಳಿ ದೇವತೆಯನ್ನು ಕರೆಯುವವನು ಹೋತೃ.

ವುದು ಅಷ್ಟು ಸುಲಭವಲ್ಲ. ಅದರಿಂದ ಸಾಧ್ಯವಾದರೆ ಅದನ್ನು ಬಿಡಬೇಕು. ಯತ್ನವಿಲ್ಲದ ಅಗತಿಕವಾಗಿ ಬಂದರೆ ಮಾತ್ರ ಮಾಡುವುದು" ಎಂದು ಜಮದಗ್ನಿಯ ಸಲಹೆ. ಎಲ್ಲರೂ ಒಪ್ಪಿದರು. ಈ ವಿಷಯವನ್ನು ಋತ್ವಿಗ್ಗಣಕ್ಕೂ ತಿಳಿಸಿಯಾಯಿತು. ಅವರೂ ಒಪ್ಪಿದರು.

ಭಾಂಡ ಭಾಂಡ ಸೋಮವು ಸಿದ್ಧವಾಗಿದೆ. ಕರಗಿಟ್ಟ ಅಪರಂಜಿಯಂತೆ, ದ್ರವವಾಗಿ ಶೇಖರಿತವಾಗಿರುವ ಅಗ್ನಿಜ್ವಾಲೆಯಂತೆ ಸೋಮರಾಜನು ಮೆರೆಯುತ್ತಿದ್ದಾನೆ. ಸೋಮಪಾನಕ್ಕಾಗಿ ಆತುರಪಡುತ್ತ ಓಡೋಡಿ ಬರುತ್ತಿರುವ ದೇವತೆಗಳ ಕಾಂತಿಯು ಅವರಿಗಿಂತ ಮುಂದೋಡಿ ಬಂದಿದೆಯೋ ಎಂಬಂತೆ, ಯಜ್ಞೇಶ್ವರನ ಜ್ವಾಲಾಕಲಾಪಗಳು ಏಳೇಳುತ್ತಿವೆ. ದೇವಯಜನದಲ್ಲಿ ಈ ಕೊನೆಯಿಂದ ಆ ಕೊನೆಯವರೆಗೆ ಇದ್ದವರೆಲ್ಲರೂ ದೇವಯು* ಗಳಾಗಿ ಶ್ರದ್ಧಾಭಕ್ತಿ ನಮ್ರರಾಗಿ ಕಾದಿದ್ದಾರೆ. ಋತ್ವಿಕ್ಕರೆಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಜಾಗರೂಕರಾಗಿ ಮೈಯೆಲ್ಲ ಕಣ್ಣಾಗಿ ಕಾದಿದ್ದಾರೆ. ಗಾರ್ಹಪತ್ಯಾ ಆಹವನೀಯ ದಕ್ಷಿಣಾಗ್ನಿಗಳು ಮಂಗಳವಾಗಿ ಶುಭವಾಗಿ ಸುಖವಾಗಿ ಜ್ವಲಿಸುತ್ತಿವೆ.

ಇಷ್ಟಿಯು ಆರಂಭವಾಯಿತು. ಯಜಮಾನನ ಅಪ್ಪಣೆಪಡೆದು ಅಧ್ವರ್ಯುವು ಹೋತೃವಿಗೆ - ಇಂದ್ರನನ್ನು ಕರೆಯೆಂದು ಪ್ರೈಷವನ್ನು ಕೊಟ್ಟನು. ಹೋತೃವು ವೇದಮಂತ್ರಗಳಿಂದ ಕರೆದನು. ಉದ್ಗಾತೃವು ಹೋತೃವು ಜಪಿಸಿದ ಋಕ್ಕನ್ನು ಉಪಬೃಂಹಣ‡ ಮಾಡಿ ಸಾಮವಾಗಿ ಹಾಡಿದನು. ಇಂದ್ರನು ಬರಲಿಲ್ಲ.

ವಿಶ್ವಾಮಿತ್ರನಿಗೆ ಕೆಲಸ ಕೆಟ್ಟಿತು ಎನ್ನಿಸಿತು. ಇಂದ್ರನು ಬರದಿದ್ದರೆ ಇಷ್ಟಿಯು ನಡೆಯುವ ಹಾಗಿಲ್ಲ. ವಸಿಷ್ಠರೋ ವಾಸಿಷ್ಠರೋ ಇಲ್ಲದಿದ್ದರೆ ಇಂದ್ರನು ಬರುವ ಹಾಗಿಲ್ಲ. ಏನು ಮಾಡುವುದು ?

ಕೂಡಲೇ ಇತ್ಯರ್ಥಮಾಡಿದನು. ಈಗ ಹೋತೃವಾಗಿ ಕುಳಿತಿರುವನಲ್ಲಿ ಒಂದು ಗಳಿಗೆ ವಸಿಷ್ಠತ್ವವನ್ನು ಆರೋಪಣಮಾಡುವುದು ಎಂದುಕೊಂಡನು.

---

* **ದೇವಯು = ದೇವತೆಗಳು ಬೇಕು ಎನ್ನುವ ಶ್ರದ್ಧಾವಂತರು.**

‡ **ಉಪಬೃಂಹಣ = ಚಿಕ್ಕದನ್ನು ದೊಡ್ಡದನ್ನು ಮಾಡುವುದು. ಪರಮಾಣುವನ್ನು ಪರ್ವತವನ್ನಾಗಿ ಮಾಡುವುದು.**

ವಸಿಷ್ಠರ ತೇಜಸ್ಸನ್ನು ಆಕರ್ಷಿಸಿ, ಇನ್ನೊಬ್ಬರಲ್ಲಿ ನಿಕ್ಷೇಪಮಾಡುವುದು ಸಾಧ್ಯವೇ, ಅಸಾಧ್ಯವೇ ಎಂಬ ಸಂಶಯವೇ ಆತನಿಗೆ ಬರಲಿಲ್ಲ. ಹಾಗೆಯೇ ಮಾಡುವುದು ಎಂದು ಅರ್ಧಕ್ಷಣದೊಳಗಾಗಿ ಸಿದ್ಧಾಂತಮಾಡಿಕೊಂಡು, ಬ್ರಹ್ಮನಿಗೆ ಆ ವಿಚಾರವನ್ನು ತಿಳಿಸಿ ಅಪ್ಪಣೆಪಡೆದು, ಯಜಮಾನನಿಗೂ ಅದನ್ನು ತಿಳಿಸಿ, ಹೋತೃವನ್ನು ದಕ್ಷಿಣ ಕಪರ್ದಿಯಾಗಬೇಕೆಂದು ಪ್ರಾರ್ಥಿಸಿ ತಾನು ವಸಿಷ್ಠಾಕರ್ಷಣಕ್ಕೆ ಕುಳಿತನು.

ವಿಶ್ವಾಮಿತ್ರನು ಆಕರ್ಷಣಕ್ಕೆ ಕುಳಿತು ಮಂತ್ರಗಳನ್ನು ಹೇಳುತ್ತಲೂ ಮಂತ್ರಶಕ್ತಿಯು ಮನೋವೇಗದಿಂದ ಆತನನ್ನು ವಸಿಷ್ಠರ ಆಶ್ರಮಕ್ಕೆ ಹೊತ್ತುಕೊಂಡು ಹೋಯಿತು. ಬಳ್ಳಿಯೊಂದು ವಿಚಿತ್ರ ಪ್ರಭಾವಕ್ಕೆ ಸಿಕ್ಕಿ ಒಂದೇ ದಿಕ್ಕಿನಲ್ಲಿ ತನ್ನದೊಂದು ಶಾಖೆಯನ್ನು ವಿದ್ಯುದ್ವೇಗದಿಂದ ಪ್ರಸರಿಸಿದರೆ, ಅದೆಂತು ಇದ್ದಲ್ಲಿಯೇ ಇದ್ದರೂ ಆದರ ಶಾಖೆಯು ದೂರಕ್ಕೆ ಹೋಗುವುದೋ ಹಾಗೆ, ಎತ್ತರವಾಗಿ ಮರದಲ್ಲಿರುವ ಬೀಜಕೋಶವು ಪಕ್ವವಾಗಿ ಸಿಡಿದರೆ ಅದರಲ್ಲಿದ್ದ ಬೀಜಗಳು ಥಟ್ಟನೆ ದಿಕ್ಕುವಿದಿಕ್ಕುಗಳಲ್ಲಿ ಚೆಲ್ಲುವಾಗ ಬಿರುಗಾಳಿಯು ಹುಟ್ಟಿದರೆ ಆ ಬೀಜಗಳು ದೇಶಾಂತರವಾಗುವಂತೆ, ಸಂಕಲ್ಪವಾಗಿ ಪೂರ್ವವಾಗಿ ಅವಲಂಬಿಸಿದ ಮಂತ್ರಶಕ್ತಿಯು ಪ್ರಭಾವದಿಂದ ವಿಶ್ವಾಮಿತ್ರನು ಸೂಕ್ಷ್ಮಾತ್ಸೂಕ್ಷ್ಮವಾಗಿ ಒಂದು ತೇಜಃಕಣಕ್ಕಿಂತಲೂ ಕಿರಿಯ ಆಕಾರದಿಂದ ವಸಿಷ್ಠರ ಆಶ್ರಮವನ್ನು ಪ್ರವೇಶಿಸಿದನು. ವಸಿಷ್ಠರನ್ನು ಹಿಡಿಯಲು ಏಕೋ ಹೆದರಿಕೆಯಾಗಿ ಆತನ ಪುತ್ರರಲ್ಲಿ ಒಬ್ಬನನ್ನು ಹಿಡಿದನು. ಜ್ಯೇಷ್ಠನಾದ ಶಕ್ತಿಯು ಸೋದರರೊಡನೆ ಕುಳಿತು ವೇದಾಧ್ಯಯನ ಮಾಡುತ್ತಿದ್ದನು. ವಿಶ್ವಾಮಿತ್ರ ಗೃಹೀತನಾದವನ ಬಾಯಿಂದ ವೇದವು ಹೊರಡುತ್ತಿಲ್ಲ. ರಾಹುಗ್ರಸ್ತವಾದ ತೇಜೋಬಿಂಬವು ನಷ್ಟ ತೇಜವಾಗುವಂತೆ ಆತನೂ ನಷ್ಟವಾಕ್ಕಾಗಿ, ಬಿಟ್ಟ ಕಣ್ಣು ಬಿಟ್ಟಂತೆ ಕುಳಿತಿದ್ದಾನೆ.

ಶಕ್ತಿಯು ಇದೇನು ಹೀಗಾಗಿದೆಯೆಂದು ನೋಡಿದನು. ಸ್ಥೂಲ ಚಕ್ಷುಸ್ಸಿಗೆ ಕಾಣದ ವಿಶ್ವಾಮಿತ್ರ ಗ್ರಹಣವು ಆತನ ಪ್ರಜ್ಞಾ ಚಕ್ಷುಸ್ಸಿಗೆ ತಿಳಿಯದೆ ಹೋಗಲಿಲ್ಲ. ತಮ್ಮ ಕ್ಷೇತ್ರವನ್ನು ಪ್ರವೇಶಿಸಿ, ತಮ್ಮ ತೇಜಸ್ಸನ್ನು, ತಮ್ಮ ಅಪ್ಪಣೆಯಿಲ್ಲದೆ ಹೊತ್ತುಕೊಂಡು ಹೋಗುವುದನ್ನು ಆ ತೇಜಸ್ವಿಯೆಂತು ಸೈರಿಸುವನು ? ಕಳ್ಳನನ್ನು ಹಿಡಿದು ಕಟ್ಟುವ ಸದ್ಗೃಹಸ್ಥನಂತೆ ವಿಶ್ವಾಮಿತ್ರನನ್ನು

ಹಿಡಿದು ಹಾಕಿದನು. ಲೋಹವು ಚುಂಬಕವನ್ನು ಮುಟ್ಟಿ ಅದಕ್ಕೆ ಹತ್ತಿಕೊಂಡಂತಾಯಿತು.

ಇತ್ತ ವಿಶ್ವಾಮಿತ್ರನು ನಿಸ್ತೇಜನಾದನು. ಅಂಗಾಂಗಗಳು ನಿಶ್ಚೇಷ್ಟವಾದವು. ಕೂಡಲೇ ಬ್ರಹ್ಮನ ಬಳಿಯಲ್ಲಿದ್ದ ಅಗ್ನಿಯು ದುಷ್ಟ ವರ್ಣಗಳ ಜ್ವಾಲೆಗಳಿಂದ ವಿಜೃಂಭಿಸಿ, ಬಂದಿರುವ ಅನಿಷ್ಟವನ್ನು ಸೂಚಿಸಿತು. ಕೂಡಲೇ ಬ್ರಹ್ಮನು ತನ್ನ ಶಕ್ತಿ ಸರ್ವಸ್ವವನ್ನೂ ಪ್ರಯೋಗಿಸಿ ವಾಗ್ದೇವಿಯನ್ನು ಕರೆದನು. ಋತ್ವಿಗ್ಗಣವೆಲ್ಲವೂ ಜಾಗ್ರತವಾಯಿತು. ಬ್ರಹ್ಮನ ಋಕ್ಕನ್ನು ಹೋತೃವು ಜಪಮಾಡಿದನು. ಉದ್ಗಾತೃವು ಸಾಮವನ್ನಾಗಿಮಾಡಿ ಹಾಡಿದನು. ಅಧ್ವರ್ಯುಗಣವು ಸರಸ್ವತಿಗೆಂದು ಬೇಗಬೇಗ ಹೋಮಮಾಡಿತು.

ಜಮದಗ್ನಿಯ ಮಂತ್ರಪ್ರಭಾವವು ವಿಶ್ವಾಮಿತ್ರ ತೇಜಸ್ಸನ್ನು ನಿಗ್ರಹಿಸಿದ್ದ ತೇಜಸ್ಸನ್ನು ಕಬಳಿಸಿತು. ನಿಗೃಹೀತವಾಗಿ ಕುಳಿತಿದ್ದ ಆ ತೇಜಸ್ಸು ತನ್ನನ್ನು ಬಿಡಿಸಲು ಬಂದ ತೇಜಸ್ಸಿನೊಡನೆ ಸೇರಿತು. ಎರಡೂ ವಿಚಿತ್ರವಾಗಿ ವಿಜೃಂಭಿಸಿದುವು. ಶಕ್ತ್ರಿಯು ಹಾಹಾಕಾರ ಮಾಡಿದನು. ಆತನ ಸೋದರರೆಲ್ಲರೂ ಸೇರಿದರು. ಮತ್ತೆ ಈ ಎರಡು ತೇಜಸ್ಸುಗಳೂ ಒಂದರಮೇಲೊಂದು ಬಿದ್ದುವು.

ಜಮದಗ್ನಿಯು ಯತ್ನವಿಲ್ಲವೆಂದು ಆಂಗಿರನನ್ನು ನೆನೆದು ಘೋರನಾದನು. ಎದುರುಗಡೆಯ ತೇಜಸ್ಸಿಗೆ ಅವಕಾಶವಿದ್ದರೆ ಏನಾಗುತ್ತಿತ್ತೋ? ಉಸಿರು ಮುಗುಚುವುದರೊಳಗಾಗಿ ಘೋರನಾದ ಜಮದಗ್ನಿಯ ತೇಜಸ್ಸಿನೊಡನೆ, ಅಭಿಭೂತವಾಗಿದ್ದ ವಿಶ್ವಾಮಿತ್ರ ತೇಜಸ್ಸೂ ಸೇರಿ, ಶಕ್ತ್ರಿಯ ಮತ್ತು ಆತನ ಸೋದರರ ತೇಜಸ್ಸನ್ನೆಲ್ಲಾ ಸ್ವಾಹಾ ಮಾಡಿಬಿಟ್ಟುವು. ಜಮದಗ್ನಿ ವಿಶ್ವಾಮಿತ್ರರು ಯಾಜ್ಞಿಕರಾಗಿದ್ದುದರಿಂದ ಆಶ್ರಮದ ದೇವತೆಗಳು ನಿರುಪಾಯರಾಗಿ ಆಕಾಲದ ಶಕ್ತ್ರಿಗೂ ಆತನ ಸೋದರರಿಗೂ ಸಹಾಯ ಮಾಡಲಾರದೆ ನಿರ್ಬಲರಂತೆ ಸುಮ್ಮನಿರಬೇಕಾಯಿತು.

ವಿಶ್ವಾಮಿತ್ರನು ಕೆಟ್ಟ ಕನಸು ಕಾಣುತ್ತಿದ್ದವನು ಬಹು ಸಾಹಸಮಾಡಿ ಒದರಿಕೊಂಡು ಏಳುವಂತೆ ಎದ್ದನು. ಬೇಕಾದಹಾಗೆ ಆಯಾಸವಾಗಿದ್ದರೂ ಯಜ್ಞವು ಕೆಟ್ಟಿತಲ್ಲಾ ಎಂಬ ವ್ಯಥೆಯಿಂದಲೂ ಅಪಮಾನದಿಂದಲೂ ರೇಗಿ ಹವಿಸ್ಸಿನಿಂದ ವಿವೃದ್ಧನಾದ ಯಜ್ಞೇಶ್ವರನಂತೆ ವಿಜೃಂಭಿಸಿದನು.

# ಇಪ್ಪತ್ತಮೂರನೆಯ ತರಂಗ

ತ್ರಿಶಂಕುವಿನ ಯಾಗವು ಕೆಟ್ಟಿತು ಎಂಬುದು ನಿಶ್ಚಯವಾಯಿತು. ಯಜಮಾನ, ಋತ್ವಿಕ್ಕುಗಳು, ಎಲ್ಲರೂ ಅಪ್ರತಿಭರಾದರು. ಅಧ್ವರ್ಯು, ಬ್ರಹ್ಮರು ಮಾತ್ರ ಕದಲಲಿಲ್ಲ. ಹೀಗೆ ಆಗುವುದೆಂದು ಗೊತ್ತುಮಾಡಿಕೊಂಡು ಅದಕ್ಕೆ ಸಿದ್ಧರಾಗಿದ್ದವರಂತೆ, ಮುನ್ನಡೆದರು. ಇಷ್ಟಿಯು ಅಲ್ಲಿಗೇ ನಿಂತುದರ ಗುರುತಾಗಿ ಸ್ವಿಷ್ಟಕೃತ್ ಹೋಮವು * ನಡೆಯಿತು. ಯಾಗಭಂಗ ಪ್ರಾಯಶ್ಚಿತ್ತವಾಗಿ ವಿಶ್ವಾಮಿತ್ರನು ವಿಶ್ವಜಿದ್ಯಜ್ಞವನ್ನು ಸಂಕಲ್ಪಮಾಡಿ, ತ್ರಿಶಂಕುವಿನ ಸೋಮಯಾಗದ ಅವಭೃತವನ್ನು ನೆರವೇರಿಸಿದನು. ‡ ಪ್ರತಿಪತ್ತಿಕರ್ಮವೂ ನಡೆಯಿತು.

ಅಶ್ವಿನೀ ದೇವತೆಗಳನ್ನು ಸ್ಮರಿಸಿ, ಅಧ್ವರ್ಯು ಬ್ರಹ್ಮರು ತ್ರಿಶಂಕುವಿಗೆ ಯಾಗಫಲವನ್ನು ಕೊಟ್ಟರು. ಆತನಿಗೆ ಅದುವರೆಗೆ ಇದ್ದ ಪೃಥಿವೀ ಭೂತಾಂಶದ ಹೊರಹೊದಿಕೆಯು ಕಳಚಿತು. ತೇಜೋಭೂತಪ್ರಧಾನವಾಗಿ ಆದ ತೈಜಸದೇಹವು ಪೃಥ್ವಿಯ ಪಾರ್ಥಿವಾಂಶದ ಭಾರವನ್ನೂ ಅಪೋಭೂತದ ಗುರುತಾದ ಚಾಂಚಲ್ಯವನ್ನೂ ಬಿಟ್ಟು ಜೀವನಿಚ್ಛೆಯಂತೆ ಎಲ್ಲಿಂದರಲ್ಲಿಗೆ ಹೋಗುವ ಸಾಮರ್ಥ್ಯವುಳ್ಳದಾಯಿತು. ಆ ದೇಹವು ನೆಲವನ್ನು ಮುಟ್ಟದೆ ಮೊಳದ ಎತ್ತರದಲ್ಲಿರುವುದನ್ನು ಕಂಡು ಎಲ್ಲರೂ ಸಂತೋಷಪಟ್ಟರು. ವಿಮಾನವು ಬರುವುದು ತ್ರಿಶಂಕುವು ಸ್ವರ್ಗಕ್ಕೆ ಹೊರಡುವನು ಎಂದು ಅಯೋಧ್ಯೆಯ ಜನವಿರಲಿ, ಕೋಸಲದೇಶಕ್ಕೆ ದೇಶವೇ ಅಲ್ಲಿಗೆ ಮೊಗಚಿದೆ. ಎಲ್ಲರೂ ಆಕಾಶದ ಕಡೆ ನೋಡುವವರೇ. ಅಗ್ನಿಕುಂಡದಿಂದ ಏನಾದರೂ ಬಂದೀತೋ ಎಂದು ಅತ್ತಕಡೆ ಒಂದುಸಲ ನೋಡುವರು. ವಿಮಾನವು ಬರಲಿಲ್ಲ.

ವಿಶ್ವಾಮಿತ್ರನು ವಸಿಷ್ಠ ಶಾಪವನ್ನು ಕುರಿತು ಸ್ಮರಿಸಿಕೊಂಡನು. ಅಶ್ವತ್ಥದಲ್ಲಿಟ್ಟಿದ್ದ ಕುಂಭದ ನೆನೆಪಾಯಿತು. ಕೂಡಲೇ ಚಾಂಡಾಲ್ಯ ಪರಿಹಾರಕ್ಕೆಂದು

---

* ಸ್ವಿಷ್ಟಕೃತ್ ಹೋಮ ಎಂದರೆ ಅದುವರೆಗೆ ಆಗಿರುವ ನ್ಯೂನ ಅತಿರೇಕಗಳನ್ನೆಲ್ಲ ಸರಿಮಾಡೆಂದು ಅಗ್ನಿಯನ್ನು ಪ್ರಾರ್ಥಿಸಿ ಆತನಿಗೆ ಹವಿಸ್ಸನ್ನು ಕೊಡುವುದು.

‡ ಪ್ರತಿಪತ್ತಿ=ಎಂದರೆ ಯಜ್ಞದಲ್ಲಿ ಉಳಿದಿರುವುದನ್ನೆಲ್ಲ ವಿನಿಯೋಗಿಸುವುದು.

ಹೋಮಮಾಡಿದನು. ಅದೂ ನಿವಾರಣವಾಯಿತು. ಆದರೂ ವಿಮಾನವು ಬರಲಿಲ್ಲ.

ವಿಶ್ವಾಮಿತ್ರನು ಮತ್ತೆ ವಿಶ್ವಜಿದ್ಯಾಗ ಸಂಕಲ್ಪವನ್ನು ಮಾಡಿದನು. ಜಮದಗ್ನಿಯು ಅಗ್ನಿಯನ್ನು ಏಕಾಂತವಾಗಿ ಪ್ರಾರ್ಥಿಸಿ ವಿಮಾನವೇಕೆ ಬರಲಿಲ್ಲವೆಂದು ಕೇಳಿದನು. ಅಗ್ನಿಯು "ನಿಮ್ಮ ಮೇಲಿನ ವಿಶ್ವಾಸದಿಂದ ನಾನೂ ನನ್ನ ಸಖನಾದ ವಾಯುವೂ ರುದ್ರನೂ ವರುಣನೂ, ಈ ಯಾಗವನ್ನು ಒಪ್ಪಿಕೊಂಡಿದ್ದೇವೆ. ಆದರೆ ಇಂದ್ರನು ಒಪ್ಪಿಲ್ಲ. ನಾವೆಷ್ಟು ಕರೆದರೂ ಆತನು ಬರಲಿಲ್ಲ. ನಾವೆಲ್ಲರೂ ಒಪ್ಪಿ, ಅಶ್ವಿನೀ ದೇವತೆಗಳು ತ್ರಿಶಂಕುವಿಗೆ ಕೊಟ್ಟ ದಿವ್ಯ ದೇಹವನ್ನು ಅಂಗೀಕರಿಸಿದ್ದೇವೆ. ವಿಮಾನವನ್ನು ಕೊಡುವುದು ಬಿಡುವುದು ಇಂದ್ರನಿಗೆ ಸೇರಿದುದು. ಆದರೂ ಚಿಂತೆಯಿಲ್ಲ. ಈತನಿಗೆ ಈಗ ಆಕಾಶಗಮನ ಸಾಮರ್ಥ್ಯವು ಬಂದಿದೆ. ಮಾರ್ಗದಲ್ಲಿರುವ ಸಪ್ತ ಮರುತ್ತುಗಳಿಂದ ತೊಂದರೆಯಾಗದಂತೆ ಮರುತ್ತುಗಳಿಗಾಗಿ ಒಂದು ಇಷ್ಟಿಯನ್ನುಮಾಡಿ, ಅನುಜ್ಞೆಯನ್ನು ಕೊಟ್ಟು ಕಳುಹಿಸಿ. ಅವನು ಸ್ವರ್ಗದವರೆಗೂ ನಿರ್ವಿಘ್ನನಾಗಿ ಹೋಗುವನು" ಎಂದನು.

ಜಮದಗ್ನಿಯು ಮುಂದೆ ಕೇಳಲಿಲ್ಲ. ಯಜ್ಞದೇವನಪ್ಪಣೆಯಾದಂತೆ ಮರುತ್ತುಗಳನ್ನು ಕುರಿತು ಒಂದು ಇಷ್ಟಿಯನ್ನು ಮಾಡಿ, ಅನುಜ್ಞೆಯನ್ನು ಕೊಟ್ಟು ತ್ರಿಶಂಕುವನ್ನು ಕಳುಹಿಸಿದರು. ತ್ರಿಶಂಕುವಿನ ದೇಹವು ಆತನ ಸಂಕಲ್ಪ ಮಾತ್ರದಿಂದಲೇ ಹತ್ತಿಗಿಂತ ಹಗುರವಾಗಿ ಮೇಲಕ್ಕೆ ಏಳಲು ಆರಂಭಿಸಿತು. ತ್ರಿಶಂಕುವು ತನ್ನ ಪ್ರಜೆಗಳನ್ನೆಲ್ಲ ಕೈಮುಗಿದು ಅಪ್ಪಣೆ ಕೇಳಿ, ತನ್ನನ್ನು ಕೃತಕಾರ್ಯನನ್ನಾಗಿ ಮಾಡಿದ ಋಷೀಂದ್ರರಿಗೆ ನಮಸ್ಕರಿಸಿ ಮಗನಿಗೆ ರಾಜ್ಯವನ್ನು ಕೊಡುವಂತೆ ಪ್ರಜಾ ಶ್ರೇಷ್ಠರನ್ನು ಪ್ರಾರ್ಥಿಸಿಕೊಂಡು ಸ್ವರ್ಗಾಭಿಮುಖನಾಗಿ ಹೊರಟನು. ಮೇಘ ಮಂಡಲವನ್ನು ಅತಿಕ್ರಮಿಸಿ ಆತನು ಕಣ್ಮರೆಯಾಗುವ ವರೆಗೂ ನೋಡುತ್ತಿದ್ದು ಎಲ್ಲರೂ ಯಾಗ ಮಹಿಮೆಯನ್ನು ಹೊಗಳುತ್ತ ಹಿಂತಿರುಗಿದರು.

ಇತ್ತ ವಿಶ್ವಾಮಿತ್ರನು ಯಜ್ಞವು ಅರ್ಧಾರ್ಧವಾಗಿ ನಿಂತುಹೋದುದಕ್ಕೆ ಪ್ರಾಯಶ್ಚಿತ್ತವಾಗಿ ಮಾಡಬೇಕಾದ ವಿಶ್ವಜಿತ್ತನ್ನು ಪೂರಯಿಸಬೇಕೆಂದು ಕುಳಿತನು. ಆದೇ ಋತ್ವಿಕ್ಕರನ್ನು ಒಪ್ಪಿಸಿಕೊಂಡು ಇನ್ನೇನು ಯಾಗವನ್ನು

ಆರಂಭಿಸಬೇಕು ಎನ್ನುವುದರೊಳಗಾಗಿ ಆಕಾಶದಿಂದ ಹೃದಯಭೇದಿಯಾದ ಒಂದು ಕೂಗು ಕೇಳಿಸಿತು. "ವಿಶ್ವಾಮಿತ್ರರೇ, ನನ್ನನ್ನು ತಳ್ಳಿಬಿಟ್ಟರು. ಬಿದ್ದುಹೋದೆ. ಕಾಪಾಡಿ. ಕಾಪಾಡಿ" ಎಂದು ಆರ್ತನಾಗಿ, ಭೀತನಾಗಿ, ಕೂಗುತ್ತಿರುವ ತ್ರಿಶಂಕುವಿನ ಕೂಗು.

ವಿಶ್ವಾಮಿತ್ರನು ತಾನು ವಿಶ್ವಮಿತ್ರನಾಗಿರಬೇಕೆಂದು ಸಂಕಲ್ಪಿಸಿಕೊಂಡು ತನಗೆ ತಾನು ಇಟ್ಟುಕೊಂಡಿರುವ ಹೆಸರನ್ನು ಮರೆತು ರೋಷ ಭೀಷಣನಾದನು. ಜಮದಗ್ನಿಯು "ತಡೆ, ತಡೆ, ಅಲ್ಲಿಯೇ ನಿಲ್ಲುವಂತೆ ತಡೆ, ನಿನ್ನ ತಪೋಬಲ ವನ್ನು ಕೊಡು" ಎಂದನು.

ವಿಶ್ವಾಮಿತ್ರನು "ನಿಲ್ಲು, ನಿಲ್ಲು, ಅಲ್ಲಿಯೇ ನಿಲ್ಲು" ಎಂದು ಗರ್ಜಿಸಿ ದನು. ತ್ರಿಶಂಕುವು ತಲೆಗೆಳಗಾಗಿ ಅಲ್ಲಿಯೇ ಹಾಗೆಯೇ ಅಂತರಿಕ್ಷದಲ್ಲಿಯೇ ನಿಂತನು.

ವಿಶ್ವಾಮಿತ್ರನು ತ್ರಿಶಂಕುವು ಸ್ವರ್ಗಕ್ಕೆ ಬರದಂತೆ ತಡೆದವರಾರು ! ಬರ ಬೇಕು ಎಂದು ಕೋರಿದನು. ಒಬ್ಬ ದೇವದೂತನು ನಡುಗುತ್ತಾ ಎದುರು ಬಂದು ನಿಂತನು. "ಋಷಿವರ್ಯನು ನನ್ನಮೇಲೆ ಕೋಪ ಮಾಡಕೂಡದು. ನಾನು ಕೇವಲ ಆಜ್ಞಾಧಾರಕ" ಎಂದನು.

ವಿಶ್ವಾಮಿತ್ರನು "ಯಾರ ಆಜ್ಞೆಯಮೇಲೆ, ಏಕೆ ನೂಕಿದೆ ?" ಎಂದು ಕೇಳಿದನು.

ದೇವದೂತನು ನಡುಗುತ್ತಾ ಅರಿಕೆಮಾಡಿದನು : "ಸ್ವರ್ಗದ ಪ್ರಭುವು ಇಂದ್ರನು. ಆತನಪ್ಪಣೆಯಿಲ್ಲದೆ ಯಾರನ್ನೂ ಸ್ವರ್ಗಕ್ಕೆ ಸೇರಿಸುವುದಿಲ್ಲ. ಸ್ವರ್ಗಕ್ಕೆ ಬರಬೇಕಾದರೂ ಸ್ವರ್ಗದಿಂದ ಹೋಗಬೇಕಾದರೂ ಆತನಪ್ಪಣೆ ಯಾಗಬೇಕು. ಈ ತ್ರಿಶಂಕುವಿಗೆ ಯಾಗಫಲವಾಗಿ ಸ್ವರ್ಗವು ಲಭಿಸಿದೆ. ದೇಹವೂ ಅಶ್ವಿನೀ ದೇವತೆಗಳ ದಯೆಯಿಂದ ದಿವ್ಯವಾಗಿದೆ. ಆದರೂ ವಸಿಷ್ಠ ಶಾಪದ ಚಂಡಾಲತ್ವವು ಬಿಟ್ಟಿಲ್ಲ. ಅದರಿಂದ ನೂಕಬೇಕಾಯಿತು."

"ಚಂಡಾಲತ್ವವನ್ನು ನಾವು ಕಳೆದಿದ್ದೇವಲ್ಲ ?"

"ಶಾಪವು ಯಾರಿಂದ ಬಂತೋ ಅವರಿಂದಲೇ ಉಪಸಂಹಾರವಾಗಬೇಕು. ಇಲ್ಲವಾದರೆ ದೇವಗುರುಗಳಾದ ಬೃಹಸ್ಪತಿಗಳಿಂದ ನಿವಾರಣೆಯಾಗಬೇಕು. ಹಾಗಿಲ್ಲದೆ ಒಬ್ಬರ ಶಾಪವನ್ನು ಇನ್ನೊಬ್ಬರು ಕಳೆಯುವಂತಿಲ್ಲ."

ವಿಶ್ವಾಮಿತ್ರನು ಮಂತ್ರಬದ್ಧವಾದ ಮಹಾ ಸರ್ಪದಂತೆ ಭುಸುಗುಟ್ಟುತ್ತಾ "ಹೋಗು ಇಂದ್ರನಿಗೆ ಹೇಳು. ತ್ರಿಶಂಕುವು ಇಂದ್ರನಾಗುವನು. ಇಂದ್ರ ಲೋಕದಲ್ಲಿ ಆತನಿಗೆ ಸ್ಥಾನವು ಸಿಕ್ಕದಿದ್ದರೆ ಅಷ್ಟೇ ಹೋಯಿತು. ಅವನಿರುವೆಡೆಯಲ್ಲಿ ಇಂದ್ರ ಲೋಕವಾಗುವುದು ಎಂದು ಹೇಳು ಹೋಗು" ಎಂದನು.

ದೇವದೂತನು ಅದನ್ನು ಕೇಳಿ ನಡುಗಿದನು. ಅವನಿಗೆ ಗೊತ್ತು. "ತಪಸ್ವಿಗಳಿಗೆ ಅಸಾಧ್ಯವಾದುದು ಯಾವುದೂ ಇಲ್ಲ: ತಪೋಬಲವು ಏನು ಬೇಕಾದರೂ ಮಾಡಬಲ್ಲುದು" ಎಂದು.

ವಿಶ್ವಾಮಿತ್ರನಿತ್ತ ತಿರುಗಿದನು: "ಜಮದಗ್ನಿ, ಕಾಲವು ಸನ್ನಿಹಿತವಾಗಿದೆ. ಅಂದು ಆಪೋಜ್ಯೋತಿಯನ್ನು ಕಂಡಾಗ ಆಪೋದೇವಿಯರು 'ಬ್ರಹ್ಮಾಂಡವನ್ನೇ ಬೇಕಾದರೂ ಸೃಷ್ಟಿಸಬಹುದು. ಬ್ರಹ್ಮಾಂಡ ಸೃಷ್ಟಿಗೆ ಬೇಕಾದುದೆಲ್ಲವೂ ಪಿಂಡಾಂಡದಲ್ಲಿ ಬೀಜರೂಪವಾಗಿದೆ' ಎಂದರು. ಅದನ್ನು ಇಂದು ನೋಡಿಬಿಡುತ್ತೇನೆ. ತ್ರಿಶಂಕುವು ಇಂದ್ರನಾಗಬೇಕು. ಇಲ್ಲದಿದ್ದರೆ ಲೋಕದಲ್ಲಿ ಇಂದ್ರನೇ ಇಲ್ಲದೆ ಹೋಗಬೇಕು" ಎಂದನು.

ಜಮದಗ್ನಿಯು ಗಹಗಹಿಸಿ ನಕ್ಕನು: "ಕೌಶಿಕ, ಲೋಕಪಾಲಕರು ನಿನ್ನನ್ನು ಅಷ್ಟುದೂರ ಬಿಡುವರೆಂದುಕೊಂಡಿದ್ದೀಯೇನು? ನಿನಗೆ ನೂತನ ಸೃಷ್ಟಿ ಮಾಡಲು ಬೇಕಾದ ಅರ್ಥಿತ್ವ ಸಾಮರ್ಥ್ಯ, ವಿದ್ಯಾಸಂಪತ್ತು, ಎಲ್ಲವೂ ಇದೆ. ಆದರೆ ಒಂದು ಕಿವಿಗೆ ಎರಡು ಓಲೆಯೆಲ್ಲಾದರೂ ಉಂಟೆ? ಅತ್ತ ನೋಡು ಯಾರು ಬಂದಿರುವರು?" ಎಂದನು.

ವಿಶ್ವಾಮಿತ್ರನಿತ್ತ ತಿರುಗಿದನು. ವೃದ್ಧಾಪ್ಯದ ಶಾಂತಿ ತಾರುಣ್ಯದ ತೇಜಸ್ಸು ಎರಡೂ ಸೇರಿ ಬೆಳ್ಳಿಯ ದೇಹವನ್ನು ಪಡೆದು, ಧರಿಸಿರುವ ಸ್ವರ್ಣ ಮಾಲ್ಯಾಧ್ಯಾಭರಣಗಳ ಕಾಂತಿಯಿಂದ ಸುವರ್ಣಚ್ಛಾಯೆಯು ದೇಹವನ್ನೆಲ್ಲಾ ವ್ಯಾಪಿಸಿರಲು ಚಿನ್ನದ ನೀರಿನಲ್ಲಿ ಅದ್ದಿರುವ ಚೊಕ್ಕಬೆಳ್ಳಿಯ ಮುದ್ದೆಯಂತೆ ಕಾಣುತ್ತಿರುವ ಮೂರ್ತಿಯೊಂದು ಕಾಣಿಸಿತು. ವಿಶ್ವಾಮಿತ್ರನಿಗೆ ಅದು ಯಾರು ಎಂಬುದು ತಿಳಿಯದಿದ್ದರೂ ಆತನ ಮನಸ್ಸು ಬಂದಿರುವುದು ಬೃಹಸ್ಪತಿಯೆಂದು ಗುರುತುಹಿಡಿಯಿತು. ಕೌಶಿಕನು ಥಟ್ಟನೆದ್ದು ನಮಸ್ಕಾರ ಮಾಡಿ ಗುರುದೇವನಿಗೆ ಸಲ್ಲಬೇಕಾದ ಪೂಜಾಸತ್ಕಾರಾದಿಗಳನ್ನೆಲ್ಲ ಸಮರ್ಪಿಸಿದನು. ಗುರುವು ಮಂದಹಾಸದಿಂದ ಸುತ್ತಮುತ್ತಲನ್ನೆಲ್ಲ ಮೃದುವಾಗಿ ಬೆಳ

ಗುತ್ತ "ಮಹರ್ಷಿಗಳು ಕುಪಿತರಾಗಿ, ಕ್ರೋಧೋದ್ದೀಪಿತರಾಗಿ ಸೃಷ್ಟಿಗೆ ಹೊರಟಿದ್ದಾರೆ. ಹೀಗೆ ಕ್ರೋಧಾದಿಗಳಿಂದ ಆದ ಸೃಷ್ಟಿಯಿಂದ ಆಗುವ ಅನರ್ಥ ವನ್ನು ಕುರಿತು ಚಿಂತಿಸಿದ್ದಾರೆಯೇ ?" ಎಂದು ಕೇಳಿದನು.

ದೇವಗುರು ದರ್ಶನದಿಂದಲೇ ಶಾಂತಿಯನ್ನು ಪಡೆದ ಆತನ ಮನಸ್ಸು ಆ ಮಹಾ ತೇಜಃಪುಂಜದ ಸನ್ನಿಧಿಯಿಂದ ಸಂಪೂರ್ಣವಾಗಿ ಪ್ರಸಾದವನ್ನು ತಳೆದು ಶುದ್ಧ ಜಲಕ್ಕಿಂತ ನಿರ್ಮಲವಾಗಿತ್ತು. ಆತನು ಅನರ್ಥವೆನ್ನುತ್ತಲೂ ಆಗಬಹುದಾದ ಅನರ್ಥಪರಂಪರೆಯ ಚಿಂತೆಯಿಂದ ನಡುಗಿಹೋಯಿತು. ಲೋಕಲೋಕಗಳನ್ನೆಲ್ಲ ಹಾಳುಮಾಡುವ ಕಾಲಾಗ್ನಿ ಕುಂಡವಾಗುತ್ತಿತ್ತು ತನ್ನ ಸೃಷ್ಟಿಯೆಂಬುದು ಅರಿವಾಗಿ ಮನಸ್ಸು ಒಂದುಸಲ ನಡುಗಿತು. ಆದರೂ ಕೌಶಿ ಕನು ಇನ್ನೂ ಮೌನವಾಗಿಯೇ ನಿಂತಿದ್ದನು. ಆತನ ಮನಸ್ಸು ಏನೇನೋ ಪ್ರಶ್ನೆ ಗಳನ್ನು ಕೇಳಬೇಕು ಎಂದುಕೊಳ್ಳುತ್ತಿದೆ. ಆದರೂ ಯಾವುದೊಂದೂ ಖಚಿತ ವಾಗಿ ನಿರ್ದಿಷ್ಟವಾಗಿ ಒಂದು ರೂಪಕ್ಕೆ ಬರಲೊಲ್ಲದು. ವಾಕ್ಪತಿಯೇ ಎದು ರಿಗೆ ಬಂದಿರುವಾಗ ಆತನಪ್ಪಣೆಯಿಲ್ಲದೆ ವಾಕ್ಕು ಎಂತು ರೂಪುಗೊಂಡು ಹೊರ ಬೀಳುವುದು ? ಕ್ರೋಧ ಮೂರ್ಛಿತವಾಗಿದ್ದ ಮನಸ್ಸು ಪರಸನ್ನಿಧಿ ಪ್ರಭಾವ ದಿಂದ ಕ್ರೋಧವನ್ನು ಬಿಟ್ಟಿದ್ದರೂ ಪ್ರಸಾದವನ್ನು ಪಡೆದಿದ್ದರೂ, ನಿದ್ದೆಯಿಂದ ಹಠಾತ್ತಾಗಿ ಎದ್ದವನಿಗೆ, ಜಾಗ್ರದ್ವೃತ್ತಿಗೆ ಬಂದಿದ್ದರೂ ಇಂದ್ರಿಯ ವ್ಯಾಪಾರ ಗಳು ಇನ್ನೂ ಅರ್ಧಾರ್ಧವಾಗಿಯೇ ಇರುವಂತೆ, ಇನ್ನೂ ಅದು ಸಂಪೂರ್ಣ ವಾಗಿ ತನ್ನ ಸಹಜಾವಸ್ಥೆಗೆ ಬಂದಿರಲಿಲ್ಲ, ದೇವ ಗುರುವಿಗೆ ಅದೂ ತಿಳಿಯಿತು. ನಕ್ಕನು.

---

## ಇಪ್ಪತ್ತನಾಲ್ಕನೆಯ ತರಂಗ

ದೇವಗುರುವು ಮುಸಿಮುಸಿ ನಗುತ್ತಾ "ಮಹರ್ಷಿಗಳ ಸಂಕಲ್ಪವು ಅನ್ಯಥಾ ಆಗಬಾರದು. ನನ್ನಿಂದ ತಮ್ಮ ಕಾರ್ಯಕ್ಕೆ ತೊಂದರೆಯೆನ್ನುವ ಹಾಗಿದ್ದರೆ, ನಾನು ಹೊರಡುವೆನು. ಯಾವ ಅಡ್ಡಿಯೂ ಇಲ್ಲದೆ ಸೃಷ್ಟಿ ಕಾರ್ಯವು ನಡೆಯಲಿ" ಎಂದನು.

ವಿಶ್ವಾಮಿತ್ರನು ಎಳೆಯ ಮಗುವಿನ ಶುದ್ಧಭಾವದಿಂದ ಗುರುವಿಗೆ ಮತ್ತೆ ನಮಸ್ಕಾರಮಾಡಿ "ದೇವಾ, ಮನ್ನಿಸು. ತ್ರಿಶಂಕುವಿಗೆ ಏಕೆ ಸ್ವರ್ಗವು ದೊರೆಯಲಿಲ್ಲ ಅಪ್ಪಣೆಯಾಗಲಿ" ಎಂದು ಪರಮಸಾಧುವಾಗಿ, ಸರಳತಮ ವಾಗಿ ಕೇಳಿದನು.

"ಕೌಶಿಕ, ಯಾವುದೇ ಆಗಲಿ ಸೃಷ್ಟಿಗೆ ಬರುವಾಗ ಅದಕ್ಕೊಂದು ವಿಧಿ ನಿಷೇಧ ನಿಯಮಾವಲಿಯು ಸಹಜವಾಗಿ ಏರ್ಪಡುವುದು. ಅದರಂತೆ ಸ್ವರ್ಗವು ಏರ್ಪಟ್ಟಾಗ ಅದಕ್ಕೊಬ್ಬ ಇಂದ್ರ, ಆ ಸ್ವರ್ಗಕ್ಕೆ ಬಂದುಹೋಗುವರೆಲ್ಲ ಆತನಪ್ಪಣೆಗೆ ಒಳಪಟ್ಟು ನಡೆಯಬೇಕೆಂಬ ನಿಯಮ, ಇವೆಲ್ಲವೂ ಏರ್ಪಟ್ಟಿವೆ. ಯಜ್ಞವೇ ಮನುಷ್ಯರ ಕಾಮಧೇನು. ಅದರಿಂದ ಏನನ್ನು ಬೇಕಾದರೂ ಸಾಧಿಸಬಹುದೆಂಬ ನಿಯಮವೂ ಇದೆ. ಇವೆರಡೂ ಧರ್ಮಗಳು. ಆದರೆ ಒಂದು ಧರ್ಮದಿಂದ ಇನ್ನೊಂದು ಧರ್ಮಕ್ಕೆ ಬಾಧೆಬರದಂತೆ ನೋಡಿಕೊಳ್ಳು ವುದಲ್ಲವೆ ಬುದ್ಧಿವಂತಿಕೆ. ನೀನು ಬಲ್ಲೆ ಇಂದ್ರನಪ್ಪಣೆಯಿಲ್ಲದೆ ಸ್ವರ್ಗವು ಲಭಿಸುವುದಿಲ್ಲವೆಂದು: ಅದಕ್ಕಾಗಿಯೇ ಇಂದ್ರನಿಗೂ ತೃಪ್ತಿಯಾಗಲೆಂದೇ ಯಾಗವನ್ನು ಹೂಡಿದೆ. ನೀನು ಕರೆದಾಗ ಇಂದ್ರನು ಬರಲಿಲ್ಲ. ಆದಕ್ಕಾಗಿ ಹೋತೃವಿನಲ್ಲಿ ವಸಿಷ್ಠನನ್ನು ಆಹ್ವಾನಿಸುವೆನೆಂದು ಹೊರಟೆಯಲ್ಲ: ದೇವತೆ ಗಳಿಗಿಂತ ಋಷಿಗಳನ್ನು ಕರೆಯುವುದು ಸುಲಭವೆಂದು ನಿನಗಾರು ಹೇಳಿದರು? ಹೋಗಲಿ. ನಿನ್ನ ಸರ್ವಶ್ರೇಯಸ್ಸಿಗೂ ಮೂಲವಾದ ವಾಮದೇವನನ್ನಾ ದರೂ ಕರೆದು ಕೇಳಿದೆಯಾ? ಕರೆದ ದೇವತೆಯು ಬರದಿದ್ದರೆ ಏನು ಮಾಡ ಬೇಕೆಂದು ಈ ಯಜ್ಞವನ್ನು ಕ್ರಮಪಡಿಸಿದ ಅಂಗಿರನನ್ನು ಆದರೂ ಕೇಳಿ ದೆಯಾ? ನಿನಗೆ ಬಾಯಿ ಕಟ್ಟಿಹೋಯಿತಲ್ಲ, ಆಗ, ವಾಕ್ಕನ್ನು ಕರೆದ ನಿನ್ನ ಬ್ರಹ್ಮನು ವಾಕ್ಪತಿಯಾದ ನನ್ನನ್ನೇಕೆ ಕರೆಯಲಿಲ್ಲ? ಹೀಗೆ ಒಂದೇ ಸಮನಾಗಿ ಎಡವಿದ ಕಾಲೇ ಎಡಹುವಂತೆ ಮಾಡಿಕೊಂಡು, ಕೊನೆಗೆ ರೋಷ ಪರವಶನಾಗಿ ಇನ್ನೊಬ್ಬ ಇಂದ್ರನನ್ನು ಮಾಡುವೆನೆಂದು ಹೊರಡುವುದೆಲ್ಲಿಯ ನ್ಯಾಯ?"

ವಿಶ್ವಾಮಿತ್ರನು ತಲೆಯನ್ನು ತಗ್ಗಿಸಿ ಕುಳಿತಿದ್ದನು: ಜಮದಗ್ನಿಯು ಕೈಮುಗಿದು "ದೇವಗುರುವು ಪ್ರಸನ್ನನಾಗಿ ನನಗೆ ವರವನ್ನು ಕೊಡಲಿ. ವಾಕ್ಪ ತಿಯು ಕೃಪೆಮಾಡಲಿ. ಬ್ರಹ್ಮಣಸ್ಪತಿಯು ದಯೆಮಾಡಲಿ. ಬ್ರಹ್ಮನಾಗಿದ್ದ

ಸಮಯದಲ್ಲಿ ನನ್ನ ಬುದ್ಧಿಗೆ ಸಸರ್ಪರಿ*ಯಾದ ವಾಕ್ಕನ್ನು ಕರೆಯಬೇಕು, ಎನ್ನಿಸಿತು. ಇನ್ನೊಂದು ಹಜ್ಜೆ ಮುಂದೆ ಹೋಗಿ ವಾಕ್ಪತಿಯನ್ನೂ ಕರೆಯಬೇಕು ಎಂದು ಏಕೆ ಎನ್ನಿಸಲಿಲ್ಲ? ಅಪ್ಪಣೆಯಾಗಬೇಕು? ಎಂದು ವಿನಯದಿಂದ ಪ್ರಾರ್ಥಿಸಿದನು.

ಬೃಹಸ್ಪತಿಯು ಹೇಳಿದನು: "ಜಮದಗ್ನಿ, ನಿನ್ನ ವಿನಯವು ಭಾರ್ಗವರಲ್ಲಿ ಅಪರೂಪವಾದುದು. ಈಗ ನೀನು ಕೇಳಿದ ಪ್ರಶ್ನೆಯನ್ನು ಕಾಲಾಂತರದಲ್ಲಿ ನಿನ್ನ ಈ ಸೋದರಮಾವನು ಬಿಡಿಸುವನು. ರಾಜರ್ಷಿಯಾಗಿದ್ದ ಈತನು ಈಗ ಮಹರ್ಷಿಯಾಗಿರುವನು. ಮುಂದೆ, ಬ್ರಾಹ್ಮಣನಾಗಿ, ಮಹಾ ಬ್ರಾಹ್ಮಣನಾಗಿ ಸರ್ವ ವೇದರಹಸ್ಯವನ್ನೂ ಲೋಕೋದ್ಧಾರಕ್ಕಾಗಿ ಭೇದಿಸುವನು. ಅದುವರೆಗೆ ಇದರ ಪೂರ್ವೋತ್ತರವನ್ನೆಲ್ಲ ಸಾಂಗವಾಗಿ ಯಾರೂ ಹೇಳಬಾರದು. ಅದರಿಂದ ನೀನು ವಿಶ್ವಾಮಿತ್ರನು ವಸಿಷ್ಠನನ್ನು ಕರೆಯುವೆನೆಂದಾಗ ಏಕೆ ಒಪ್ಪಿದೆಯೆಂಬುದನ್ನು ಮೊದಲು ನೋಡು. ಆಮೇಲೆ ನಿನ್ನ ಪ್ರಶ್ನಕ್ಕೆ ಉತ್ತರವನ್ನು ಹೇಳುವೆನು" ಎಂದನು.

ಜಮದಗ್ನಿಯು ನೋಡಿದನು: ಶಕ್ತಿ ಮತ್ತು ಶಕ್ತಿ ಸೋದರಮಂಡಲವು ಯಾವುದೋ ತೇಜಸ್ಸಿನಿಂದ ನಿಹತವಾಗಿ ಬಿದ್ದುಹೋಗಿದೆ. ಆ ಶವರಾಶಿಯ ಮುಂದೆ ಅರುಂಧತೀ ವಸಿಷ್ಠರು ಕುಳಿತಿದ್ದಾರೆ. ಅರುಂಧತಿಯು ಅಪಾರವಾದ ಪುತ್ರಶೋಕದಿಂದ ಮೈಮೇಲೆ ಪ್ರಜ್ಞೆಯಿಲ್ಲದೆ ಬಿದ್ದಿದ್ದಾಳೆ. ವಸಿಷ್ಠರು ಇದು ದುರ್ಮರಣ. ಇನ್ನು ಮೂರು ತಿಂಗಳು ಇವರಿಗೆ ಉತ್ತರಕ್ರಿಯೆಗಳಾಗುವಂತಿಲ್ಲ: ಅದುವರೆಗೆ ಈ ಆಶೌಚವನ್ನು ಅನುಭವಿಸಬೇಕು ಎಂದು ಯೋಚಿಸುತ್ತಿದ್ದಾರೆ. ಅಷ್ಟರಲ್ಲಿಯೇ ಅದಾರೋ ಕರಿಯ ಕಂಬಳಿಯನ್ನು ಹೊದೆದ ಕೃಷ್ಣವಿಗ್ರಹವು ಆಶ್ರಮ ಪ್ರಾಂತದಲ್ಲಿ ಬಂದು ನಿಂತು ಏನೋ ಹೇಳಿ ಕಳುಹಿಸಿದೆ. ವಸಿಷ್ಠರಿಗೆ "ಸಕಾಲ" ಎಂದು ಆ ಸಂದೇಶವು ಬರುತ್ತಿದೆ. ವಸಿಷ್ಠರು "ಸರಿ. ಆಗಬಹುದು" ಎನ್ನುತ್ತಾರೆ. ಅಲ್ಲಿಯೇ ಕೂಡಲೇ ಶಕ್ತಿ ಮುಂತಾದವರಿಗೆಲ್ಲ ಚಿತಿಯಲ್ಲಿ ಶವಸಂಸ್ಕಾರವೂ ಆಗುತ್ತದೆ. ಅರುಂಧತಿಯು

---

* ಸಸರ್ಪರೀ = ಬೇಗ ಬೇಗ ಬರುವ - ಜಮದಗ್ನಿಯು ವಿಶ್ವಾಮಿತ್ರನ ಬಾಯನ್ನು ಕಟ್ಟಿದಾಗ ಸಸರ್ಪರೀ ಎಂಬ ವಾಕ್ಸೂಕ್ತದಿಂದ ಅತನ ಬಾಯಿ ಬಿಚ್ಚಿದನೆಂದು ವೇದದಲ್ಲಿ ಹೇಳಿದೆ.

ಶೋಕವನ್ನು ಸಹಿಸಲಾರದೆ ಚಿತಿಗೇ ಬೀಳುವುದಕ್ಕೆ ಹೋಗುತ್ತಾಳೆ. ವಸಿಷ್ಠರು ಆಕೆಯನ್ನು ತಡೆದು ಆಕೆಯ ಶೋಕವನ್ನು ತಾವು ವಹಿಸುತ್ತಾರೆ. ಪೂರ್ಣ ವಾಗಿ ಎರಡೂ ದಡಗಳನ್ನು ತುಂಬಿ ಹರಿಯುವ ಗಂಗಾನದಿಯು ಥಟ್ಟನೆ ಬತ್ತಿ ಹೋದ ಹಾಗೆ ಆತನಿಗೆ ಸಹಜವಾಗಿದ್ದ ಬ್ರಹ್ಮಾನಂದವು ಮಾಯವಾಗಿ ಪುತ್ರ ಶೋಕವು ತಾನೇತಾನಾಗುತ್ತದೆ. ಆ ಮಹಾನುಭಾವನ ಶೋಕವಿಹ್ವಲತೆ ಯನ್ನು ನೋಡಲಾರದೆ ಜಮದಗ್ನಿಯು "ಶಿವ ಶಿವಾ" ಎನ್ನುತ್ತಾನೆ. ದೃಶ್ಯವು ಅಲ್ಲಿಗೆ ನಿಲ್ಲುತ್ತದೆ. ತಾನು ಕಂಡುದು ಪರ್ವತಕ್ಕಿಂತ ಭಾರವಾಗಿ, ಹೃದಯವು ಆ ಪರ್ವತದ ಕೆಳಗೆ ಸಿಕ್ಕಿ ಜರ್ಜರಿತವಾಗುವಂತೆ ಆಗಿ ಆತನಿಗೆ ಮಾತೇ ನಿಂತುಹೋಗಿದೆ.

ದೇವಗುರುವು ಮತ್ತೊಮ್ಮೆ ತನ್ನ ಕಟಾಕ್ಷವನ್ನು ಪ್ರಸರಿಸಿ ಆತನನ್ನು ಪ್ರಕೃತಿಸ್ಥನನ್ನಾಗಿ ಮಾಡಿದನು: ಜಮದಗ್ನಿಯು ಪ್ರಕೃತಿಸ್ಥನಾದರೂ ಆತನು ಮುಂದೆ ಮಾತನಾಡಲಿಲ್ಲ. ಇನ್ನೂ ಆತನಿಗೆ ವಸಿಷ್ಠರದೇ ಯೋಚನೆ.

"ವಿಶ್ವಾಮಿತ್ರನು ಈಗ ಏನು ಮಾಡುವನು ?"

ವಿಶ್ವಾಮಿತ್ರನು ಎದ್ದು ನಮಸ್ಕಾರ ಮಾಡಿದನು: "ಸರ್ವ ದೇವ ಪ್ರಿಯನೂ, ಸರ್ವದೇವ ಗುರುವೂ ಆದ ಬೃಹಸ್ಪತಿಯು ಪ್ರಸನ್ನನಾಗಿ ವರ ಪ್ರದಾನಮಾಡಲಿ. ನಾವು ಮಾಡಿದ ಕಾರ್ಯಗಳು ಸಫಲವಾಗಲಿ, ನಾವು ಆಡಿದ ಮಾತು ದಿಟವಾಗಲಿ. ಸತ್ಯ ವಾಕ್ಕುಗಳೆಂಬ ಸದ್ಯಶಸ್ಸು ನಮಗೆ ದೊರೆ ಯಲಿ. ಫಲವತ್ಕರ್ಮಿಗಳೆಂಬ ಕೀರ್ತಿಯು ನಮ್ಮದಾಗಲಿ" ಎಂದು ಮತ್ತೆ ನಮಸ್ಕಾರ ಮಾಡಿದನು.

ದೇವಗುರುವು ಬಹು ಸಂತೋಷಪಟ್ಟು "ವಿಶ್ವಾಮಿತ್ರ, ನೀನು ನಿಜ ವಾಗಿಯೂ ಬ್ರಹ್ಮರ್ಷಿಯಾಗಲು ಅರ್ಹನು. ಯಾವಾಗ ಕ್ಷತ್ರಿಯ ಸಹಜ ವಾದ ಕಾಮಕ್ರೋಧಗಳು ನಿನ್ನನ್ನು ಬಿಡುವುವೋ ಅಂದು ನೀನು ಬ್ರಾಹ್ಮಣ ನಾಗುವೆ. ನಿನ್ನ ಮುದ್ದಾದ ಈ ಸ್ತೋತ್ರದಿಂದ ಪ್ರಸನ್ನನಾಗಿರುವೆನು. ವತ್ಸ, ನಿನ್ನ ಈ ನೂತನ ಸೃಷ್ಟಿ ಸಾಹಸವನ್ನು ಬಿಡು. ನಿನ್ನ ಗೃಹಸ್ಥನಾದ ತ್ರಿಶಂಕುವು ನಿನ್ನ ಕೋರಿಕೆಯಂತೆ ಇಂದ್ರನಾಗುವನು. ಆದರೆ ಅದು ಈಗಲ್ಲ. ಈ ಕಲ್ಪವು ಕಳೆಯುವವರೆಗೆ ಈಗಿರುವ ಇಂದ್ರನೇ ಇಂದ್ರನಾಗಿರಲಿ. ನಿನ್ನ ಇಂದ್ರನು ಬರುವ ಕಲ್ಪದಲ್ಲಿ ಇಂದ್ರನಾಗಲಿ. ಅದುವರೆಗೆ ನಿನ್ನ ಇಂದ್ರನು–ನಮ್ಮ ಭಾವಿ

ಇಂದ್ರನು, ಸ್ವರ್ಗದ ಭೋಗಗಳನ್ನೆಲ್ಲ ಅನುಭವಿಸುತ್ತ ತನ್ನದೇ ಆದ ಒಂದು ಸಣ್ಣ ಲೋಕವನ್ನು ಕಲ್ಪಿಸಿಕೊಂಡು ನಕ್ಷತ್ರ ಮಂಡಲ ಮಧ್ಯದಲ್ಲಿರಲಿ. ಆತನಿಗೆ ಕಾಮರೂಪ, ಕಾಮಸಂಚಾರ, ವರಪ್ರದಾನ ಎಂಬ ಮೂರು ಗುಣಗಳನ್ನೂ ಹವಿರ್ಭೋಜನ ಎಂಬ ಒಂದು ಭೋಗವನ್ನೂ ಬಿಟ್ಟು ಉಳಿದ ದೇವ ಧರ್ಮಗಳೆಲ್ಲ ಬರುವುವು. ವತ್ಸ, ಇದಕ್ಕೆ ನೀನು ಒಪ್ಪು. ನೀನು ಹಟ ಹಿಡಿಯಬೇಡ. ಅಲ್ಲದೆ ನೀನು ವಿಶ್ವಜಿದ್ಯಾಗ ಮಾಡಿರುವೆ· ಅದರ ಫಲವನ್ನೂ ಆತನಿಗೆ ಕೊಟ್ಟಿರುವೆ. ಈಗ ನೀನು ಹಟ ಮಾಡಿದರೆ, ಬ್ರಹ್ಮನೇ ಮೊದಲಾದ ಎಲ್ಲರೂ ನೀನು ಹೇಳಿದಂತೆ ಕೇಳಬೇಕಾಗುವುದು. ಆದರೂ ದೇವಾದಿದೇವರಾದ ನಮ್ಮೆಲ್ಲರ ಮಾತನ್ನು ಕೇಳು. ನಾನು ಒಂದು ರೂಪದಿಂದ ಇಲ್ಲಿಗೆ ಬಂದಿರುವೆನು: ಇನ್ನೊಂದು ರೂಪದಿಂದ ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಬ್ರಹ್ಮನೊಡನೆ ಈ ವಿಚಾರವನ್ನು ಕುರಿತು ಮಾತನಾಡಿ ಗೊತ್ತು ಮಾಡಿರುವೆನು. ಈ ಕಲ್ಪದಲ್ಲಿ ಇನ್ನೊಬ್ಬ ಇಂದ್ರನನ್ನು ಹುಟ್ಟಿಸುವೆನು: ಇಲ್ಲದಿದ್ದರೆ ಇಂದ್ರನೇ ಇಲ್ಲದಂತಾಗಲಿ ಎಂಬ ಈ ಗಂಡು ಮಾತು ಆಡಿದ ಕಲಿಯಿನ್ನಾರುಂಟು? ವಿಶ್ವಾಮಿತ್ರ. ನನ್ನ ಮಾತು ಕೇಳು. ಒಂದು ಸೃಷ್ಟಿಯಲ್ಲಿ ಒಂದು ಕಲ್ಪದಲ್ಲಿ ಇಬ್ಬರು ಇಂದ್ರರು ಅಸಂಭವ. ಒಬ್ಬ ಇಂದ್ರನಾಗಬೇಕಾದರೆ ಆತನ ಪರಿವಾರವಾಗಿ, ದೇವ, ಗಂಧರ್ವ, ಅಪ್ಸರೋಗಣಗಳೆಲ್ಲ ಹುಟ್ಟಿಬರಬೇಕು. ಕ್ರಿಮಿ ಕೀಟಗಳ ಮೊದಲಾಗಿ ಸ್ವೇದಜ, ಅಂಡಜ, ಉದ್ಭಿಜ್ಜ, ಜರಾಯುಜವೆಂಬ ಚತುರ್ವಿಧ ಸೃಷ್ಟಿಯಾಗಬೇಕು. ನೀನು ಇಷ್ಟೂ ಮಾಡಬಲ್ಲೆ. ಆಪೋದೇವಿಯರ ಅನುಗ್ರಹದಿಂದ ನಿನಗೆ ತತ್ವ ಜ್ಞಾನವಾಯಿತು. ಅಶ್ವಿನೀ ದೇವತೆಗಳ ಕೃಪೆಯಿಂದ ತನ್ಮಾತ್ರಗಳನ್ನು ಒಡೆದು ಕಟ್ಟುವುದು ಹೇಗೆ ಎಂಬುದನ್ನು ಕಂಡಿರುವೆ. ನಿನ್ನ ಜೊತೆಗೆ ಜಮದಗ್ನಿಯು ಸಿಕ್ಕಿರುವನು. ನೀವಿಬ್ಬರೂ ಸೇರಿದರೆ ನಿಜವಾಗಿಯೂ ಲೋಕ ಲೋಕಗಳನ್ನು ಸೃಷ್ಟಿಮಾಡಬಲ್ಲಿರಿ. ಆದರೂ ಅದರಲ್ಲಿ ಪ್ರವೃತ್ತರಾಗದೆ ತಡೆಯಿರಿ. ನಿಮಗೆ ಶ್ರೇಯಸ್ಸಾಗುವುದು."

ಜಮದಗ್ನಿಯು ಯಾವುದೋ ಅಂತರ್ವಾಹಿನಿಗೆ ಸಿಕ್ಕಿದವನಂತೆ "ದೇವಗುರುವಿನ ಅಪ್ಪಣೆಯನ್ನು ನಾವು ಮೀರುವುದಿಲ್ಲ" ಎಂದನು. ವಿಶ್ವಾಮಿತ್ರನು ಆತನ ವಾಕ್ಯವನ್ನು ಒಪ್ಪಿಕೊಳ್ಳುತ್ತಾ ಅಪ್ಪಣೆಯೆಂದು ಎದ್ದು ನಮಸ್ಕಾರ ಮಾಡಿದನು.

ದೇವಗುರುವು ಜಮದಗ್ನಿಯ ಕಡೆ ತಿರುಗಿ "ನಿನ್ನ ಬಾಯಿಂದ ವಾಕ್ಸೂಕ್ತವು ಹೊರಟರೂ ವಾಕ್ಪತಿಸೂಕ್ತವು ಹೊರಡದೆ ಇದ್ದುದು ಇದಕ್ಕಾಗಿ. ಮುಂದಿನ ಇಂದ್ರನು ಸಿದ್ಧನಾಗುವ ಪ್ರಕರಣವಿದು. ಇದರಲ್ಲಿ ವಾಕ್ಕಿನೊಡನೆ ವಾಕ್ಪತಿಯೂ ಬಂದಿದ್ದರೆ ತ್ರಿಶಂಕುವು ಇಂದ್ರಲೋಕದಲ್ಲೊಬ್ಬ ಗಣ್ಯನಾದ ವ್ಯಕ್ತಿಯಾಗುತ್ತಿದ್ದನೇ ಹೊರತು, ಇಂದ್ರಾಧಿಕಾರ ಯೋಗ್ಯನಾಗುತ್ತಿರಲಿಲ್ಲ. ಆದರಿಂದ ನಾನು ಬರಲಿಲ್ಲ" ಎಂದನು.

ಜಮದಗ್ನಿಯು "ಹಾಗಾದರೆ, ಎಲೈ ಬ್ರಹ್ಮಣಸ್ಪತಿಯೇ, ನಮ್ಮ ಕಾರ್ಯಗಳೆಲ್ಲ ನಿಮ್ಮಿಂದ ಪ್ರಚೋದಿತಗಳಾಗುವುವೇ?" ಎಂದು ಕೇಳಿದನು.

ದೇವಗುರುವು ನಕ್ಕು "ಚತುರ್ಮುಖ ಬ್ರಹ್ಮನ ಅಪ್ಪಣೆಯಿಲ್ಲದೆ ಭೂಮಿಯೊಳಗಿನ ಮರೆಯಲ್ಲಿ ಬೆಳೆಯುವ ಮರದ ಸಣ್ಣ ಬೇರೊಂದು ಮೂಡುವುದಿಲ್ಲ. ಭೂಗರ್ಭದ ಅಂತರಾಳದೊಳಗೆ ಒಂದು ಕಣವಾಗಿದ್ದ ಶಿಲೆಯೊಡೆದು ಎರಡು ಕಣವಾಗಬೇಕಾಗಿದ್ದರೆ, ವಿಧಿಯ ಅಪ್ಪಣೆಯಾಗಬೇಕು ಸೃಷ್ಟಿ ಸ್ಥಿತಿ ಸಂಹಾರವೆಂಬ ಈ ವಿಶ್ವದ ಮೂರು ವೃತ್ತಿಗಳು ಆ ತ್ರಿಮೂರ್ತ್ಯಾತ್ಮಕನು ಮಾಡಿಟ್ಟಿರುವ ಯಂತ್ರದ ಚಲನವಲನಗಳು. ಅಷ್ಟೇನು? ಅವನಿಲ್ಲದೆ ತೃಣವೂ ಚಲಿಸಲಾರದು. ಪರ್ವತದಿಂದ ಹಿಡಿದು ಪರಮಾಣುವಿನವರೆಗೆ ಎಲ್ಲವೂ ನಿಯಂತ್ರಿತವು" ಎಂದನು.

ವಿಶ್ವಾಮಿತ್ರನು "ಆ ನಿಯಂತೃವು ಯಾರು?" ಎಂದನು. ದೇವಗುರುವು "ಆಗಲಿ, ಅದನ್ನು ಕಾಣುವೆ ಆದರೆ ಈಗಲ್ಲ. ನೀವಿಬ್ಬರೂ ಮಹರ್ಷಿಗಳು. ಹಾಗೆಂದು ಲೋಕವು ನಿಮ್ಮನ್ನು ಗೌರವಿಸುವುದು. ಇನ್ನುಮುಂದೆ ನೀವಿಬ್ಬರೂ ಒಟ್ಟಿಗೆ ಯಾವ ಯಾಗದಲ್ಲೂ ಆರ್ತ್ವಿಜ್ಯವನ್ನು ವಹಿಸಬೇಡಿ" ಎಂದು ಹೇಳಿ ಅವರ ಅನುಜ್ಞೆಯನ್ನು ಪಡೆದು ಅವರ ಪೂಜೆಯನ್ನು ಸ್ವೀಕರಿಸಿ, ದೇವಗುರುವು ಅಂತರ್ಹಿತನಾದನು.

---

## ಇಪ್ಪತ್ತೈದನೆಯ ತರಂಗ

ವಿಶ್ವಾಮಿತ್ರನು ಅಯೋಧ್ಯೆಯನ್ನು ಬಿಟ್ಟು ಜಮದಗ್ನಿಯೊಡನೆ ಹೊರಟು ಆತನ ಆಶ್ರಮಕ್ಕೆ ಹೋದನು. ಅಯೋಧ್ಯೆಯಿಂದ ಆಶ್ರಮದ

ವರೆಗೂ ಎಲ್ಲರೂ "ಮಹರ್ಷಿಗಳು ಬಂದರು: ಅಸಾಧ್ಯವನ್ನು ಸಾಧಿಸಿದವರು ಬಂದರು" ಎಂದು ಸಂಭ್ರಮದಿಂದ ಸ್ವಾಗತವನ್ನು ನೀಡುವರು: ಎಲ್ಲರೂ ಮಧುಪರ್ಕ* ವನ್ನು ಕೊಡುವರು: "ಗುರುಶಾಪದಿಂದ ಭ್ರಷ್ಟನಾಗಿದ್ದವನನ್ನು ಕಾಪಾಡಿದವರು" ಎಂದು ಬಹುವಾಗಿ ಗೌರವಿಸುವರು. ಆಶ್ರಮ ಆಶ್ರಮದಲ್ಲೂ ನೂರಾರು ಜನರು ವಿಶ್ವಾಮಿತ್ರನನ್ನು ಅನುಸರಿಸಿ ಬಂದರು. ಜಮದಗ್ನಿಯ ಆಶ್ರಮಕ್ಕೆ ಬರುವ ವೇಳೆಗೆ ಒಂದು ಪರಿಷೆಯಾಗಿ ಹೋಗಿದೆ. ಒಂದಲ್ಲ, ಎರಡಲ್ಲ, ಸಾವಿರಾರು ಮಂದಿ.

ಜಮದಗ್ನಿಯ ಆಶ್ರಮದಲ್ಲಿ ಎಲ್ಲರಿಗೂ ಊಟ ಉಪಚಾರಗಳಾಗಬೇಕು. ಮಹರ್ಷಿಯು ಚಿಂತಿಸಿದನು: "ಇಷ್ಟು ಜನರಿಗಾಗುವ ಸಂಭಾರಗಳನ್ನು ಎಲ್ಲಿಂದ ಒದಗಿಸಬೇಕು? ಒಂದು ಗಳಿಗೆ ಯೋಚಿಸಿನೋಡಿ, ಇದಕ್ಕೆ ನಾನೇಕೆ ಯೋಚಿಸಲಿ? 'ಅಗ್ನಿರ್ಗೃಹಪತಿ:' ಮನೆಯ ಯಜಮಾನನು ಅಗ್ನಿ. ಮನೆಯ ‡ ಆಗುಹೋಗುಗಳೆಲ್ಲ ಆತನದು. ಮನೆಗೆ ಬಂದಿರುವ ಅತಿಥಿ ಅಭ್ಯಾಗತರ ಪೂಜೆಯನ್ನು ನಡೆಸಲು ನಾವು. ಎಲ್ಲವನ್ನೂ ತಂದುಕೊಟ್ಟು ಪೂಜೆಯನ್ನು ನಡೆಯಿಸಿಕೊಳ್ಳುವುದು ಆತನ ಭಾರ. 'ಅಗ್ನಿನಾರಯಿಮಶ್ನವತ್.' ದಾನಯೋಗ್ಯವಾದ ಸದ್ದ್ರವ್ಯವನ್ನೆಲ್ಲ ಕೊಡುವವನು ಅವನು. ಅತಿಥಿಸ್ವರೂಪವಾಗಿ ಬರುವವನೂ ಅಗ್ನಿಯೆ! ಅದರಿಂದ ಈ ಸಂದರ್ಭದಲ್ಲಿ ಅವನನ್ನೇ ಆಶ್ರಯಿಸಬೇಕು" ಎಂದು ಗೊತ್ತುಮಾಡಿಕೊಂಡು ಹೊರಟನು.

ಜಮದಗ್ನಿಯು ಅಗ್ನಿಯನ್ನು ವಿಧಿಪೂರ್ವಕವಾಗಿ ಪೂಜಿಸಿ, "ದೇವ, ತಿಳಿದವರು ನಿನ್ನನ್ನು ಜಾತವೇದನೆಂದು ಹೊಗಳುವರು. ಸದ್ದ್ರವ್ಯವನ್ನು ಸಂಪಾದಿಸುವ ಹಾದಿಗಳನ್ನೆಲ್ಲ ಬಲ್ಲವನೆಂದು ನೀನು ಖ್ಯಾತಿಪಡೆದಿರುವೆ. ಅತಿಥಿಸ್ವರೂಪನಾಗಿ ನೀನೇ ಬರುವೆ. ತ್ರೇತಾಗ್ನಿಯಾಗಿ ಗೃಹದಲ್ಲಿದ್ದು ಪಂಚಾಗ್ನಿಯಾದ ಅತಿಥಿಯಾಗಿ ಬರುವೆ. ದಾತೃವೂ ಭೋಕ್ತೃವೂ ನೀನೇ ಆಗಿರಲು, ನಿನಗೆ ನಾನು ಹೇಳಿಕೊಳ್ಳಬೇಕಾದುದು ಆದರೂ ಏನು? ಆದರೂ

---

* ಮಧುಪರ್ಕ, ಶ್ರೋತ್ರಿಯರು, ಬ್ರಹ್ಮನಿಷ್ಠರು, ರಾಜ್ಯಾಭಿಷೇಕ ಪಡೆದ ಕ್ಷತ್ರಿಯರು ಮನೆಗೆ ಬಂದರೆ ಸಲ್ಲಿಸಬೇಕಾದ ಪೂಜೆಗೆ ಮಧುಪರ್ಕವೆಂದು ಹೆಸರು.

‡ ಐತರೇಯ ಬ್ರಾಹ್ಮಣ.

ನಾನು ಎಂಬ ಅಭಿಮಾನವಿರುವುದರಿಂದ ನಿನ್ನಲ್ಲಿ ಹೇಳಿಕೊಳ್ಳುವೆನು. ಮನ್ನಿಸು. ಅತಿಥಿಪೂಜೆಗೆ ಅನುಕೂಲಮಾಡಿಕೊಡು" ಎಂದು ಪ್ರಾರ್ಥಿಸಿದನು.

ಅಗ್ನಿಯು ಸೌಮ್ಯನಾಗಿ ಶುದ್ಧ ಜ್ವಾಲಾಮಾಲಾ ಮನೋಹರನಾಗಿ ಕಾಣಿಸಿಕೊಂಡು, "ಜಮದಗ್ನಿ, ಭೃಗುಗಳು ಯಾವಾಗಲೂ ನನ್ನ ಮಿತ್ರರು. ನೀನಂತೂ ಭೃಗುಕುಲ ಶೇಖರನು. ನೀನು ಸಪ್ತರ್ಷಿಗಳಲ್ಲಿ ಒಬ್ಬನಾಗುವವನು. ನಿನ್ನ ಪ್ರಾರ್ಥನೆಯು ವಿಫಲವಾಗುವುದಿಲ್ಲ. ನಿನಗೆ ಈಗ ಬೇಕಾಗಿರುವುದು, ಕಾಮಧೇನುವಿನ ಸಂತತಿಯ ಒಂದು ಧೇನು. ನಾನು ಆಗಲೇ ಶಬಲೆಯೆಂಬ ಕಾಮಧೇನುವನ್ನು ನಿನಗೆಂದು ಸಂಕಲ್ಪಿಸಿರುವೆನು. ಆದರೆ ಒಂದು ಬ್ರಹ್ಮಾಂಡದಲ್ಲಿ ಇರುವ ಸಮಸ್ತಕ್ಕೂ ಒಡೆಯನು ಇಂದ್ರನು. ಆತನು ಕೊಡದಿದ್ದರೆ ಯಾವ ವಸ್ತುವೂ ಯಾರಿಗೂ ಸೇರುವುದಿಲ್ಲ. ಆದರಿಂದ, ಆತನನ್ನು ಕುರಿತು ಹೋಮಮಾಡಿ ಆತನ ಪ್ರಸಾದವನ್ನು ಸಂಪಾದಿಸಿಕೊ. ನಿನಗೆ ಶಬಲೆಯು ಸಿಕ್ಕುವಳು. ಇಂದಿನಿಂದ ನಿನ್ನ ಅತಿಥಿಪೂಜೆಯು ಸಾಂಗವಾಗಿ ನಿರ್ವಿಘ್ನವಾಗಿ ನೆರವೇರುವುದು" ಎಂದನು.

ಜಮದಗ್ನಿಯು ಕೈಮುಗಿದುಕೊಂಡು ಹೇಳಿದನು: "ದೇವಾ, ನಿನಗೆ ತಿಳಿಯದುದು ಯಾವುದುಂಟು? ಹಿಂದೆ, ಇಂದ್ರನನ್ನು ಕರೆದು ಆತನು ಬರದೆ ಇದ್ದುದರಿಂದಲೇ ಅಲ್ಲವೆ ಅಷ್ಟು ಅನರ್ಥವಾದುದು. ಈಗ ಕರೆದರೆ ಬರುವನೆ?"

ಅಗ್ನಿಯು ನಕ್ಕನು: "ಈಗ ಕರೆಯುವವನು ಜಮದಗ್ನಿ. ಆಗ ಕರೆದವನು ತ್ರಿಶಂಕು. ಅಲ್ಲದೆ, ಯಜ್ಞಗಳಲ್ಲಿ ಕರೆಯುವುದು ಬೇರೆ. ಹೋಮದಲ್ಲಿ ಕರೆಯುವುದು ಬೇರೆ. ನಿನ್ನಂಥವರು ಅಹರ್ನಿಶಿಗಳಲ್ಲಿ ಮಾಡುವ ಸತ್ಕಾರ್ಯಗಳಿಂದಲೇ ಅಲ್ಲವೆ ಜಗತ್ತು ನಿಂತಿರುವುದು? ಅದರಿಂದ ಇಂದ್ರನು ಅಗತ್ಯವಾಗಿ ಬರುವನು. ನಿನಗೆ ಇನ್ನೂ ಅನುಮಾನವಿದ್ದರೆ, ಇಂದ್ರಾಗ್ನಿ ದೇವತಾಕವಾದ ಹೋಮವನ್ನು ಮಾಡಿ ಅನಂತರ ಐಂದ್ರ* ಹೋಮವನ್ನು ಮಾಡು. ನಾನು ಅವನನ್ನು ಕರೆತರುವೆನು" ಎಂದನು.

---

* ಇಂದ್ರನಿಗೆ ಕೊಡುವ ಆಹುತಿಗೆ ಐಂದ್ರವೆಂದು ಹೆಸರು.

ಜಮದಗ್ನಿಯು ಐಂದ್ರಾಗ್ನವಾದ ಹೋಮ ಮಾಡಿ, ಅನಂತರ ಐಂದ್ರಾಹುತಿಯನ್ನಿತ್ತನು. ದೇವರಾಜನು ದೇದೀಪ್ಯಮಾನವಾಗಿ ಪ್ರಸನ್ನನಾಗಿ ಪ್ರತ್ಯಕ್ಷನಾಗಿ "ಜಮದಗ್ನಿ, ನಿನ್ನ ಅಪೇಕ್ಷೆಯು ನೆರವೇರಲಿ. ನನ್ನ ದರ್ಶನವು ವಿಫಲವಾಗದಿರಲಿ. ದೇವತೆಗಳು ನಿನಗೆ ಶಬಲೆಯನ್ನು ಅನುಗ್ರಹಿಸಿರುವರು. ಕಾಮಧೇನುವಿಗೆ ಆಹುತಿಯನ್ನು ಕೊಟ್ಟು ಆಕೆಯ ಅಪ್ಪಣೆಯನ್ನು ಪಡೆದು ಶಬಲೆಯನ್ನು ಧ್ಯಾನಿಸು. ಆಕೆಯು ನಿನ್ನ ಆಶ್ರಮಕ್ಕೆ ಬರುವಳು. ನೀನು ಭೂಲೋಕದಲ್ಲಿ ಇರುವವರೆಗೂ ಆಕೆಯು ನಿನ್ನ ಸ್ವತ್ತಾಗಿರಲಿ" ಎಂದು ನುಡಿದನು.

ಜಮದಗ್ನಿಯು ಇಂದ್ರನ ಅನುಜ್ಞೆಯನ್ನು ಪಡೆದು ಕಾಮಧೇನುವಿಗಾಗಿ ಹೋಮಮಾಡಿ ಶಬಲೆಯನ್ನು ಧ್ಯಾನಿಸಿದನು. ಆಶ್ರಮದ ಬಾಗಿಲಲ್ಲಿ ಅಂಬಾ ಎಂದು ಹಸುವಿನ ಕೂಗು ಮೊಳಗಿತು. ಜಮದಗ್ನಿಯ ಪತ್ನಿಯು ಗೋಪೂಜೆಗೆ ಹೊರಟಳು. ಜಮದಗ್ನಿಯೂ ಶಬಲೆಯನ್ನು ಸತ್ಕರಿಸಲು ಇಂದ್ರನ ಅಪ್ಪಣೆಯನ್ನು ಕೇಳಿದನು. ಇಂದ್ರನು ನಗುತ್ತಾ "ನನಗೆ ಗೊತ್ತಿದೆ. ಹೋಗಿ ಬಾ. ಅನಂತರ ಮಾತನಾಡೋಣ" ಎಂದನು.

ಜಮದಗ್ನಿಯು ಸಪತ್ನೀಕನಾಗಿ ಶಬಲೆಯನ್ನು ಸ್ವಾಗತಿಸಿ ಸತ್ಕರಿಸಿದನು. ದೇವಧೇನುವು ಎಳೆಯಮಗುವಿಗಿಂತ ಹೆಚ್ಚು ಸಾಧುವಾಗಿ, ಅವರಿಗೆ ಒಲಿದು, ತನ್ನ ಒಲುಮೆಯನ್ನು ಪ್ರಕಟವಾಗಿ ತೋರಿಸಿತು. ಆ ದಂಪತಿಗಳು "ತಾಯಿ, ನೀನು ಆಶ್ರಮದ ಸೌಭಾಗ್ಯಲಕ್ಷ್ಮಿಯಾಗಿ ಇಲ್ಲಿ ಇರುವವರನ್ನೂ ಬರುವವರನ್ನೂ ಕಾಪಾಡುವವಳಾಗು. ನಿನ್ನ ದಯೆಯಿಂದ ದೇವಾತಿಥಿ ಪೂಜೆಯು ನಿರ್ವಿಘ್ನವಾಗಿ ನಡೆಯಲಿ" ಎಂದು ಪ್ರಾರ್ಥಿಸಿದರು. ಶಬಲೆಯು ಪ್ರಾರ್ಥನೆಯನ್ನು ಅಂಗೀಕರಿಸಿ, ಆಶ್ರಮವಾಸಿನಿಯಾಗಿ ನಿಂತಳು. ಆಕೆಗಾಗಿ ಒಂದು ಕ್ಷಣದಲ್ಲಿ ಒಂದು ಪರ್ಣಶಾಲೆಯು ಏರ್ಪಟ್ಟಿತು.

ಜಮದಗ್ನಿಯು ಆಕೆಯ ಅಪ್ಪಣೆಪಡೆದು ಮತ್ತೆ ಅಗ್ನಿಗೇಹಕ್ಕೆ ಬಂದನು. ಇಂದ್ರನು ಮತ್ತೆ ದರ್ಶನಕೊಟ್ಟು, "ಅಪ್ಪಣೆಯಾಗಬೇಕು, ಮಹರ್ಷಿಗಳ ಸಂದೇಹವನ್ನು ನಿವಾರಿಸಲು ಸಿದ್ಧನಾಗಿದ್ದೇನೆ" ಎಂದನು. ಜಮದಗ್ನಿಯು ನಕ್ಕು "ದೇವರಾಜ, ಅಗ್ನಿದೇವನ ಕೃಪೆಯಿಂದ ಸಂದೇಹವು ನಿವಾರಣವಾಯಿತು. ಆದರೆ, ನನ್ನದೊಂದು ಪ್ರಾರ್ಥನೆಯುಂಟು. ನೀನು ವಿಶ್ವಾ

ಮಿತ್ರನಿಗೂ ದರ್ಶನಕೊಡಬೇಕು" ಎಂದು ಕೋರಿದನು. ಇಂದ್ರನು ಆಗ ಲೆಂದನು.

ವಿಶ್ವಾಮಿತ್ರನು ಆಶ್ರಮದಲ್ಲಿ ಹರಿಯುತ್ತಿರುವ ನದಿಯ ದಡದಲ್ಲಿ ಅಧ್ಯಯನ ಮಾಡುತ್ತ ಕುಳಿತಿದ್ದಾನೆ. ಯಾರೋ ಸುಳಿದಂತಾಯಿತು. ಮನಸ್ಸು ಅತ್ತಕಡೆಗೆ ಹೊರಳಿತು. ಯಾರೆಂದು ನೋಡಿದರೆ ತೇಜೋಮೂರ್ತಿಯೊಂದು ಎದುರಿಗೆ ನಿಂತಿದೆ. ಧರಿಸಿರುವ ಪುಷ್ಪಮಾಲಿಕೆಗಳ ಸುಗಂಧವು ಮೂಗಿನ ಸೆಲೆಯನ್ನು ಒಡೆಯುವಷ್ಟು ತೀವ್ರವಾಗಿದ್ದರೂ ಸೌಮ್ಯವಾಗಿ ಮನೋಹರವಾಗಿದೆ. ಆಭರಣಗಳ ಜೀವರತ್ನಗಳ ಕಾಂತಿಯು ಕಣ್ಣು ಕೋರೈಸುವಷ್ಟು ಘನವಾಗಿದ್ದರೂ ಪ್ರಸನ್ನವಾಗಿದೆ. ಮೂರ್ತಿಯ ರೂಪವು ತಾನೇ ಇಂಥವನೆಂದು ಹೇಳಿಕೊಳ್ಳುವಷ್ಟು ಸ್ಪಷ್ಟವಾಗಿದ್ದು ವಿಶ್ವಾಮಿತ್ರನ ಅಂತರ್ಬಾಹ್ಯೇಂದ್ರಿಯಗಳನ್ನೆಲ್ಲ ತನ್ನ ಕಡೆಗೆ ಸೆಳೆಯುತ್ತಿದೆ. ಉತ್ತರೀಯದ ಸೆರಗು ಗಾಳಿಯಲ್ಲಿ ಅಲೆಯುತ್ತ "ವಿಶ್ವಾಮಿತ್ರ, ಬಾ, ನನ್ನ ಕಡೆ ತಿರುಗು" ಎಂದು ಕರೆಯುವಂತಿದೆ. ಆ ಮೂರ್ತಿಯ ಮುಖದಲ್ಲಿ ಮೆರೆಯುತ್ತಿರುವ ಮಂದಹಾಸವು ಆತನನ್ನು ತಾನೇ ಮಾತಾಡಿಸುವಂತಿದೆ. ಇಷ್ಟಾದರೂ ವಿಶ್ವಾಮಿತ್ರನಿಗೆ ಗುರುತು ಸಿಕ್ಕಲೊಲ್ಲದು.

ವಿಶ್ವಾಮಿತ್ರನಿಗೆ ಯೋಚಿಸುವುದಕ್ಕೆ ಅವಕಾಶವಿಲ್ಲ. ಹೇಗೆಹೇಗೆ ನೋಡಿದರೂ ದೇವತೆಯೆನ್ನುವುದಕ್ಕೆ ಸಂದೇಹವಿಲ್ಲ. ಆ ಮೂರ್ತಿಯನ್ನು ಕಾಣುತ್ತಿದ್ದ ಹಾಗೆಯೇ ವಿಶ್ವಾಮಿತ್ರನ ದೇಹವೇ ತಾನಾಗಿ ಎದ್ದುನಿಂತು ಕೈಮುಗಿದು ಪೂಜೆಯನ್ನು ಸಲ್ಲಿಸಿದೆ.* ಮನೋಬುದ್ಧಿಗಳೂ ಇಂದ್ರಿಯಗಳೂ ಸಾವಧಾನವಾಗಿವೆ. ವಿಶ್ವಾಮಿತ್ರನು ಮಾನಸವಾಗಿಯೇ ಆಸನಾದಿಗಳನ್ನು ಕಲ್ಪಿಸಿದನು. ತೇಜೋಮೂರ್ತಿಯು ಆ ಮಾನಸಪೂಜೆಯನ್ನು ಸ್ವೀಕರಿಸಿ, ಪ್ರಸನ್ನನಾಗಿ, "ಮಹರ್ಷಿಗಳಿಗೆ ತಾವು ಕರೆದಾಗ ಬರಲಿಲ್ಲವೆಂದು ಕೋಪವಿರಬಹುದು. ಅಲ್ಲವೆ?" ಎಂದನು.

ವಿಶ್ವಾಮಿತ್ರನಿಗೆ ಯಾರೆನ್ನುವುದು ತಿಳಿಯಿತು. ಆದರೆ ಕೋಪವಿತ್ತೋ ಏನೋ? ಆ ಮಾತನ್ನು ಕೇಳಿದಮೇಲಂತೂ ಕೋಪವುಳಿಯಲಿಲ್ಲ: "ಬರು

---

* ಸೃಷ್ಟಿಯು ದೇವ, ಮನುಷ್ಯ, ತಿರ್ಯಕ್ ಎಂದು ಮೂರು ವಿಧವು. ತಿರ್ಯಕ್ಕಿಗಿಂತ ಮನುಷ್ಯರೂ, ಮನುಷ್ಯರಿಗಿಂತ ದೇವರೂ ಉತ್ತಮರು. ಉತ್ತಮರನ್ನು ಕಂಡರೆ ಅಧಮರು ಹೆದರುವುದು ಸ್ವಭಾವವು.

ವುದೂ ಬಿಡುವುದೂ ದೇವರಾಜನ ಚಿತ್ತ. ಕರೆಯುವುದಂತೂ ನಮ್ಮ ಕರ್ತವ್ಯ" ಎಂದನು.

"ಮಹರ್ಷಿ, ಚಿಂತಿಸದಿರು. ನಮ್ಮಂತೆ ಭವಿತವ್ಯವನ್ನು ಕಂಡು ನಡೆಯ ಬೇಕಾಗಿ ಬಂದಾಗ, ನಮ್ಮ ಕಾರ್ಯಗಳು ಹೊರಗಣಿಂದ ನೋಡುವವರಿಗೆ ಅನ ನ್ವಯವಾಗಿ ಕಾಣಬಹುದು. ಆದರೆ ಕರ್ತವ್ಯನಿಷ್ಠರು ಹೊರಗಣ ಮಾನ ದಂಡವನ್ನು ಅಷ್ಟಾಗಿ ಒಪ್ಪುವುದಿಲ್ಲ. ಅಲ್ಲವೆ?"

"ಬೃಹಸ್ಪತಿಯ ಅನುಗ್ರಹದಿಂದ ಭವಿತವ್ಯವು ಏನೋ ಇದೆಯೆಂದು ಸೂಚಿತವಾಯಿತು. ಆದರೂ ಅದರ ಸ್ವರೂಪ ತಿಳಿದುದು ಜಮದಗ್ನಿಗೆ ಮಾತ್ರ."

"ನಿನಗೂ ತಿಳಿಯುವುದು. ಈಗ ಕೃತಯುಗದ ಒಂದು ಪಾದವು ಮುಗಿ ಯಿತು. ಇನ್ನು ಮುಂದೆ ಎರಡನೆಯ ಪಾದವು ಆರಂಭವಾಗುವ ಸಂಧಿ ಕಾಲ ವಿದು. ಈಗ ಲೋಕದಲ್ಲಿ ಷೋಡಶಕಳಾತ್ಮಕವಾದ ಧರ್ಮದಲ್ಲಿ ಒಂದು ಕಳೆಯು ಕಡಿಮೆಯಾಗುವುದು. ಅದು ಕಡಿಮೆಯಾಯಿತೆಂದು ಲೋಕವು ವ್ಯಥಿಸು ವುದು. ಆ ಪಂಚ ಭೂತಗಳ ವ್ಯಥೆಯನ್ನು ಯಾವನಾದರೂ ಒಬ್ಬ ಮಹಾನು ಭಾವನು ಅನುಭವಿಸಿ ತೀರಿಸುವನು. ಈಗಿನ ಈ ವ್ಯಥೆಯನ್ನು ವಸಿಷ್ಠನು ಅನು ಭವಿಸಬೇಕಾಗಿರುವುದು. ಆತನು ವ್ಯಥೆಯನ್ನು ಅನುಭವಿಸಲೂ, ಸಿದ್ಧನಾಗಿರು ವನು. ನಿತ್ಯತೃಪ್ತನಾಗಿ ಬ್ರಹ್ಮಜ್ಞನಾದ ಆತನಿಗೆ ವ್ಯಥೆಯೆಲ್ಲಿಂದ ಬರಬೇಕು? ಅದಕ್ಕಾಗಿ, ಚಂಡಾಲರಾಜನ ಯಜ್ಞ, ಅದಕ್ಕೆ ಅಶ್ವಿನೀ ದೇವತೆಗಳ ಸಹಾಯ, ಅಲ್ಲಿಗೆ ನಾನು ಬರದಿರುವುದು, ಅದೇ ಕಾರಣವಾಗಿ ವಸಿಷ್ಠಪುತ್ರರ ವಿನಾಶ, ಅದಕ್ಕಾಗಿ ಅರುಂಧತಿಯ ಶೋಕ, ಅದನ್ನು ವಸಿಷ್ಠರು ವಹಿಸಿಕೊಳ್ಳುವುದು, ಇದಿಷ್ಟೂ ಆಗಬೇಕು. ನನಗೂ ವಸಿಷ್ಠರಿಗೂ ವಿಶೇಷವಾದ ಮೈತ್ರಿಯಿರುವು ದಕ್ಕೆ ಕಾರಣವನ್ನು ಹೇಳುವೆನು ಕೇಳು. ನಾನು ಹಿಂದೆ ವೃತ್ರವಧೆಯನ್ನು ಮಾಡಿದಾಗ ವೃತ್ರನು ರೂಪವನ್ನು ಮರೆಸಿಕೊಂಡು ಪೃಥ್ವೀಭೂತವನ್ನು ಹಿಡಿ ದನು. ಆಗ ಪೃಥ್ವೀಭೂತವಿದ್ದಲ್ಲೆಲ್ಲ ದುರ್ಗಂಧವು ಹಿಡಿದು ಹೋಯಿತು. ವಜ್ರದಿಂದ ಹೊಡೆಯಲು, ಅವನು ಅಲ್ಲಿಂದ ಓಡಿ ಇನ್ನೂ ಸೂಕ್ಷ್ಮನಾಗಿ ಅಪ್ಪೋಭೂತವನ್ನು ಹಿಡಿದನು. ಆ ಭೂತದ ವ್ಯಾಪನವಿರುವೆಡೆಯಲ್ಲೆಲ್ಲ ರಸವು ಕೆಟ್ಟುಹೋಯಿತು. ಮತ್ತೆ ಅನುಸಂಧಾನಮಾಡಿ ಹೊಡೆಯಲು ವೃತ್ರನು

ಅಗ್ನಿ ಭೂತವನ್ನು ಹಿಡಿದನು. ಆ ಭೂತದ ವ್ಯಾಪನವಿರುವೆಡೆಯಲ್ಲೆಲ್ಲ ರೂಪವು ಕೆಟ್ಟಿತು. ಅಲ್ಲೂ ಹೊಡೆಯಲು ಅವನು ವಾಯುಭೂತವನ್ನು ಹಿಡಿದನು. ಎಲ್ಲೆಲ್ಲೂ ಸ್ಪರ್ಶಗುಣವೇ ಕೆಟ್ಟು ಹೋಯಿತು. ಅಲ್ಲೂ ಹೊಡೆಯಲು ಅವನು ಆಕಾಶದಲ್ಲಿ ಸೇರಿಬಿಟ್ಟನು. ಬ್ರಹ್ಮಾಂಡದ ಶಬ್ದ ತನ್ಮಾತ್ರೆಯೇ ಕೆಟ್ಟಿತು. ಮತ್ತೆ ಅನುಸಂಧಾನಮಾಡಿ, ಸಮಯ ಸಾಧಿಸಿ, ಮಹಾ ಯತ್ನದಿಂದ ನಾನು ಹೊಡೆಯಲು ಅವನು ಅಹಂಕಾರವನ್ನು ಆಶ್ರಯಿಸಿ, ನನ್ನನ್ನೇ ಹಿಡಿದನು. ನನಗೆ ಎಲ್ಲೂ ಇಲ್ಲದ ವ್ಯಥೆಹಿಡಿದು ಚಿಂತಾಮಗ್ನನಾಗಿ ಕುಳಿತುಬಿಡುವಂತಾ ಯಿತು. ಆಗ ದೇವಗುರುವಾದ ಬೃಹಸ್ಪತಿಯು ಕಾರಣವೇನೆಂದು ಯೋಚಿಸಿ, ತಿಳಿದು, ಪರಿಹಾರವೇನೆಂದು ಚತುರ್ಮುಖನನ್ನು ಕೇಳಿದನು. ಆತನು ಇದಕ್ಕೆ ಪರಿಹಾರವನ್ನು ವಸಿಷ್ಠನೊಬ್ಬನು ಬಲ್ಲನು. ಅಹಂಕಾರಕ್ಕೆ ಹಿಡಿದ ಈ ವ್ಯಾಧಿ ಯನ್ನು ಅಹಂಕಾರವನ್ನು ಗೆದ್ದವನೊಬ್ಬನು ಮಾತ್ರ ಪರಿಹರಿಸಬಲ್ಲನು. ಅದ ರಿಂದ ದೇವತೆಗಳೆಲ್ಲರೂ ಹೋಗಿ ಆತನನ್ನು ಕೇಳಿಕೊಳ್ಳಿ ಎಂದನು. ಆಗ ದೇವತೆಗಳೆಲ್ಲ ದೇವಗುರುವನ್ನು ಮುಂದುಮಾಡಿಕೊಂಡು ವಸಿಷ್ಠನ ಬಳಿಸಾರಿ, ಕಾಮಧೇನುವನ್ನೇ ಕಾಣಿಕೆಯಾಗಿ ಕೊಟ್ಟು ನನ್ನ ವ್ಯಥೆಯನ್ನು ಪರಿಹರಿಸ ಬೇಕೆಂದು ಬೇಡಿಕೊಂಡರು. ವಸಿಷ್ಠನು ನಕ್ಕು ಇದೇನು ದೊಡ್ಡ ಕೆಲಸ! ಎಂದು ರಥಂತರ ಸಾಮವನ್ನು ಹೇಳಿ ತನ್ನ ಕಲಶೋದಕವನ್ನು ನನ್ನ ಮೇಲೆ ತಳಿದನು. ನಾನು ಕೂಡಲೇ ನಿರಹಂಕಾರನಾಗಿ ಸಾಕ್ಷಿಯಾಗಿ ನಿಂತು, ಅಹಂ ಕಾರದ ಆಶ್ರಯವನ್ನು ಪಡೆದಿದ್ದ ವೃತ್ರನನ್ನು ಸಂಹರಿಸಿದೆನು. ಆಗ ನಾನು ವಸಿಷ್ಠನನ್ನು ಕೃತಜ್ಞತೆಯಿಂದ ಏನು ಬೇಕಾದರೂ ವರವನ್ನು ಕೇಳು ಎಂದೆನು. ವಸಿಷ್ಠನು ನಕ್ಕು "ನನಗೇನೂ ಬೇಕಾಗಿಲ್ಲ. ಬೇಡವೆಂದರೆ ನೀನು ಸಿಟ್ಟಾ ಗುವೆ. ಆದರಿಂದ ನೀನು ನನಗೆ ಬೇಕಾದ ವರವನ್ನು ಕೊಡು" ಎಂದನು. ಆಗ ನಾನು, "ಇನ್ನು ಮುಂದೆ ಯಾಗಗಳಲ್ಲಿ ನೀನಾಗಲೀ ನಿನ್ನ ಗೋತ್ರದವ ರಾಗಲೀ ಕರೆದರೆ ಮಾತ್ರ ಬರುವೆನು" ಎಂದು ವರವನ್ನು ಕೊಟ್ಟೆನು.

ವಿಶ್ವಾಮಿತ್ರ, ಏನು ಹೇಳಲಿ. ನಾವು ಆತನಿಗೆ ಕೊಟ್ಟಿದ್ದ ಕಾಮಧೇನು ವನ್ನು ಆತನು ಇಟ್ಟುಕೊಳ್ಳಲಿಲ್ಲ. ಇದು ದೇವಲೋಕದಲ್ಲಿ ಇರಬೇಕಾದುದು. ಇಲ್ಲಿ ಇರಕೂಡದು. ನಿಯತಿಗೆ ಭಂಗ ಬರಕೂಡದು. ಆದರಿಂದ ಇದನ್ನು

ಕರೆದುಕೊಂಡು ಹೋಗಿ ಎಂದುಬಿಟ್ಟನು. ಆಗ ನಾವೆಲ್ಲ ಮತ್ತೆ ಬಲವಂತ ಮಾಡಿ ಆತನು ಬೇಡವೆನ್ನುತ್ತಿದ್ದರೂ ಹೋಪಮಥೇನುವಾಗಿರಲಿ ಎಂದು ನಂದಿನಿಯನ್ನು ಒಪ್ಪಿಸಿದೆವು."

"ಈಗ ನನ್ನ ವ್ಯಥೆಯನ್ನು ಬಲ್ಲೆಯಾ? ವಿಶ್ವಾಮಿತ್ರ, ನನಗೆ ಹಿಡಿದಿದ್ದ ವೃತ್ರನನ್ನು ಕಳೆಯಲು ಸಹಾಯಕನಾದ ಮಹಾನುಭಾವನಿಗೆ ಇಂದು ಬಲವಾದ ಪುತ್ರಶೋಕವು ಬಂದಿರುವುದು. ಅಂತಹ ಬ್ರಹ್ಮಜ್ಞಾನಿಯಿಂದು ಪುತ್ರಶೋಕದಿಂದ ಹತನಾಗಿ ಯಃಕಶ್ಚಿತ್ ಪಾಮರನಂತೆ ಆತ್ಮಹತ್ಯವನ್ನು ಮಾಡಿಕೊಳ್ಳಲು ಯತ್ನಿಸುತ್ತಿರುವನು. ಆತನು ಪರ್ವತದಿಂದ ಉರುಳಿದನು. ಏನೂ ಆಗಲಿಲ್ಲ. ಭೂಮಿಯು ಹೂವಿನಂತೆ ಮೃದುವಾಗಿ ಆತನನ್ನು ತನ್ನ ಮಡಲಲ್ಲಿ ಹಿಡಿದುಕೊಂಡು ಕೆಳಗಿಳಿಸಿದಳು. ಹಗ್ಗಗಳಿಂದ ತನ್ನನ್ನು ಕಟ್ಟಿಕೊಂಡು ನದಿಯಲ್ಲಿ ಬಿದ್ದನು. ಆ ಅಪೋದೇವಿಯರು ಆತನ ಹಗ್ಗಗಳನ್ನು ಬಿಚ್ಚಿ ದಡಕ್ಕೆ ತಂದುಬಿಟ್ಟರು. ಅಗ್ನಿಕುಂಡಮಾಡಿ ಅದಕ್ಕೆ ನುಗ್ಗಿದನು. ಅಗ್ನಿಯು ಶಾಂತವಾಯಿತು. ಈಗ ಆತನಿಗೆ ಅಹಂಕಾರ ಹಿಡಿದು ಮಮತೆ ಬಂದು, ತನ್ನದೇನೋ ಹೋಯಿತೆಂಬ ಭ್ರಾಂತಿಯು ಬಂದು ಆ ಭ್ರಾಂತಿಯಲ್ಲಿ ಸಿಕ್ಕಿ ಶೋಕವನ್ನು ವಹಿಸಿಕೊಂಡಿರುವನು. ಅದು ಕಳೆಯುವವರೆಗೂ ಯಾರಿಗೂ ಸುಖವಿಲ್ಲ."

---

## ಇಪ್ಪತ್ತೊಂಬತ್ತನೆಯ ತರಂಗ

ಇಂದ್ರನು ಹೇಳಿದುದನ್ನು ಕೇಳಕೇಳುತ್ತ ವಿಶ್ವಾಮಿತ್ರನಿಗೆ ಬೆಪ್ಪುಹಿಡಿದಂತಾಯಿತು. ವಸಿಷ್ಠನು ವೃತ್ರವ್ಯಥೆಯನ್ನು ರಥಂತರ ಸಾಮದಿಂದ ಕಳೆದನೆಂದರೆ, ಜಿಜ್ಞಾಸುವಾದ ಬುದ್ಧಿಯು ತಾನೂ ರಥಂತರ ಸಾಮವನ್ನು ಹೇಳಿ, ಅದರಿಂದ ಏನೇನು ವಿಚಿತ್ರಫಲಗಳಾಗುವುವು ಅದನ್ನೆಲ್ಲ ನೋಡಬೇಕೆನ್ನಿಸಿತು. ಬೀಜವಾದ ರುಕ್ಕನ್ನು ಸಾಮವಾಗಿ ಹಾಡಿ, ಅದರಲ್ಲಿ ಅಡಗಿ ಕುಳಿತಿರುವ ಅಕ್ಷರಶಕ್ತಿಗಳನ್ನೂ ಪ್ರಸ್ತಾರಮಾಡಿ, ಪರೆಯಲ್ಲಿ ಅಡಗಿರುವ ಚಿಚ್ಛಕ್ತಿಯ ಸ್ವರೂಪವನ್ನು ವೈಖರಿಗೆಳೆದು ತಂದು ಅವ್ಯಕ್ತವಾಗಿರುವ ಶಕ್ತಿಪ್ರಪಂಚವನ್ನು

ವ್ಯಕ್ತವಾಗಿ ಜಗತ್ತಿನಲ್ಲಿ ಪ್ರಕಟಿಸುವ ಹಂಬಲ ತಾನೇತಾನಾಯಿತು.* ವಸಿಷ್ಠನು ದೇವತೆಗಳು ಕೊಟ್ಟ ಕಾಮಧೇನುವನ್ನು ಬೇಡವೆಂದು ಹಿಂತಿರುಗಿಸಿ ಕೊಟ್ಟನು. ಮತ್ತೆ ದೇವತೆಗಳೇ ಹೋಮಧೇನುವಾಗಿರಲಿ ಎಂದು ನಂದಿನಿ ಯನ್ನು ಕೊಟ್ಟರು" ಎಂದುದನ್ನು ಕೇಳಿ, ಆ ಮಹಾನುಭಾವನು ದಿಟವನ್ನೇ ಹೇಳಿದರೂ ತಾನು ನಂಬದೆ ಆತನ ಮೇಲೆ ಕ್ರೋಧಹಿಡಿದುದು ನೆನೆಪಾಗಿ ತನ್ನ ಮೇಲೇ ತನಗೇ ಜುಗುಪ್ಸೆಯುಂಟಾಗಿ ಎಂಥಹ ನೀಚಸ್ವಭಾವ ತನ್ನದೆನಿಸಿತು.

---

* "ಚತ್ವಾರಿವಾಕ್ ಪದಾಪರಿಮಿತಾನಿ" ಎಂಬ ಋಕ್ಕನ್ನು ಪರಿಭಾವಿಸಿ ನೋಡಿ. ಪ್ರಾಣಾಪಾನಗಳ ಗತಿಯಿಂದ ಮೂಲಾಧಾರದಲ್ಲಿ ಅನಾಹತಶಬ್ದವು ಹುಟ್ಟುವುದು. ಇದು ಸರಸ್ವತೀವ್ಯೂಹವಾಗುವುದು. ಇದನ್ನೇ ವೇದದಲ್ಲಿ ಪ್ರಣೋ ದೇವೀ ಸರಸ್ವತಿ ಇತ್ಯಾದಿ ಮಂತ್ರಗಳಿಂಹ ಹೇಳಿರುವುದು. ಈ ಸರಸ್ವತೀವ್ಯೂಹವು ಮೂಲದಲ್ಲಿ ಆಡುತ್ತಿರುವುದರಿಂದಲೇ ದೇಹದ ನಾಡಿನಾಡಿಗಳೂ ಕೆಲಸಮಾಡು ತ್ತಿರುವುವು.

ಈ ಸರಸ್ವತಿಯು ವರ್ಣಾತ್ಮಕಳಾಗಲು ಆಕಾಶದಲ್ಲಿ ಪ್ರಸರಿಸಿದಾಗ ಅಲ್ಲಿ ಗಣಪತಿವ್ಯೂಹವಾಗುವುದು. ಪ್ರಾಣಾಪಾನಗಳ ಸಂಘರ್ಷಣದಿಂದ ಅಉಂತ್ಸಬ್ ಎಂಬ ಆಹತಶಬ್ದವಾಗಿ ನಾಭಿಯಲ್ಲಿ ಪ್ರಕಟವಾಗುವುದು. ಅದು ಯೋಗಿಗಳಿಗೆ ಮಾತ್ರ ಪ್ರತ್ಯಕ್ಷವಾಗುವುದು. ಅದನ್ನು ಬಲ್ಲವರು ಪರಾ ಎನ್ನುವರು. ಇದು ಬೀಜಸ್ಥಾನ. ಅಲ್ಲಿಂದ ಅದು ಮೇಲಕ್ಕೆದ್ದು ಹೃದಯಕ್ಕೆ ಬಂದು ಪಶ್ಯಂತಿಯಾಗು ವುದು. ಶಬ್ದತನ್ಮಾತ್ರವಾಗಿ ಸೂಕ್ಷ್ಮವಾಗಿ ಜ್ಞಾನೇಂದ್ರಿಯಕ್ಕೂ ಅಗೋಚರ ವಾದುದರಿಂದ ಪರಾ ಎನ್ನಿಸಿಕೊಂಡಿದ್ದ ವಾಕ್ಕು ಜ್ಞಾನೇಂದ್ರಿಯಗೋಚರವಾಗಿ ಪಶ್ಯಂತಿಯಾಗುವುದು, ಅಂಕುರ. ಅದು ಇನ್ನೂ ಮೇಲಕ್ಕೆದ್ದು ಕಂಠಸ್ಥಾನಕ್ಕೆ ಬಂದು ಸ್ಥೂಲವಾಗಿ ಪ್ರಕಟವಾಗಿ ಚರ್ಮೇಂದ್ರಿಯಕ್ಕೂ ಕೇಳಿಸುವಷ್ಟು ಘನವಾದಾಗ ಮಧ್ಯಮಾ ಆಗುವುದು ಅದೇ ಗಂಧರ್ವಶಬ್ದ-ಅಥವಾ ಸಂಗೀತ. ಇಲ್ಲಿ ಶಬ್ದ ಪ್ರಕಟ ವಾಗುವ ನಾಡಿಗಳು ಹದಿನಾರು ಇರುವುದರಿಂದ, ಸಂಗೀತಶಾಸ್ತ್ರದಲ್ಲಿ ಹದಿನಾರು ಶುದ್ಧ ಮಧ್ಯಮ ರಾಗಗಳು. ಸ್ಥಾನಪಲ್ಲಟಮಾಡುವುಹರಿಂದ ಈ ಮಧ್ಯಮವು ಶುದ್ಧಪ್ರತಿ ಎಂದು ಎರಡಾಗಿ ಮೂವತ್ತೆರಡಾಗುವುದು. ಈ ಶ್ರುತಿಗಳು. ಹದಿ ನಾರಾಗುವುದಕ್ಕೆ ಮುಂಚೆ ಸಪ್ತಮೂಲಗಳಾಗಿರುವುದರಿಂದ ಸಪ್ತಸ್ವರಗಳು, ಅವು ವ್ಯಕ್ತವಾಗುವ ಸ್ಥಾನಗಳು ಕಂಠವಾದರೂ ಅವು ಉತ್ಪತ್ತಿಯಾಗುವ ಸ್ಥಾನಗಳು ಮೂಲಾಧಾರದಿಂದ ಆಜ್ಞಾಚಕ್ರದವರೆಗೂ ಬೇರೆ ಬೇರೆಯಾಗಿರುವುವು. ಆದ ರಿಂದಲೇ ಅಧಾರಶ್ರುತಿ (ಆಹತಶಬ್ದ, ಅದಕ್ಕೆ ಆಧಾರವಾಗಿ ಅನಾಹತಶಬ್ದ) ಆದ

ಆತನಿಗೆ ದುಃಖವುಂಟಾಗಿರುವುದೂ ಲೋಕಕ್ಷೇಮಾರ್ಥವಾಗಿ ಎಂಬುದನ್ನು ಕೇಳಿ ಒಂದು ತೆರದ ಸಮಾಧಾನವಾದರೂ, ಆ ದುಃಖಕ್ಕೆ ತಾನು ಕಾರಣನಾದನಲ್ಲ ಎಂದು ಆತನಿಗೂ ದುಃಖವಾಗಿ, ಏನಾದರೂ ಮಾಡಿ ಅದನ್ನು ಕಳೆಯಬೇಕೆನ್ನಿಸಿತು. "ಏಕಾಗಬಾರದು? ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದುದು ತಪೋಬಲವಾದರೆ, ವಸಿಷ್ಠನ ಶೋಕವನ್ನು ಕಳೆಯುವುದಕ್ಕೂ ಅದೇ ತಪೋಬಲವಾಗಬಾರದೇಕೆ?" ಎನ್ನಿಸಿತು. ಆ ವೀರವೃತ್ತಿಯು ಬಲಿತು ತಾನೇತಾನಾಗಲು ಮುನ್ನುಗ್ಗುತ್ತಿದ್ದರೂ, ದೇವರಾಜನೆದುರಿಗೆ ಇರುವನೆಂಬುದನ್ನು ಮರೆಯದೆ ಅದನ್ನು ಅಂಕೆಯಲ್ಲಿಟ್ಟುಕೊಂಡು, ವಿನಯದಿಂದ, ಒಳಕೊರಗಿನಿಂದ ಕುಗ್ಗಿ, ಮನಸ್ಸಿನಲ್ಲಿರುವ ಕುದಿಯನ್ನು ಕನ್ನಡಿ ಹಿಡಿದು ತೋರಿಸುತ್ತಿರುವಂತೆ ಸೊರಗಿರುವ ದನಿಯಿಂದ ಕೇಳಿದನು: "ದೇವರಾಜಾ! ವಸಿಷ್ಠ ಮಹರ್ಷಿಯ ಶೋಕವನ್ನು ನಿವಾರಿಸಲು ಏನೂ ಉಪಾಯವಿಲ್ಲವೆ?"

ದೇವರಾಜನು ಹೇಳಿದನು: "ಇಲ್ಲದೆ ಇಲ್ಲ. ಅಥವಾ ಇಲ್ಲದಿದ್ದರೂ ಅದನ್ನು ಸೃಷ್ಟಿಸುವುದಕ್ಕೆ ಅವಕಾಶವಿಲ್ಲದೆ ಇಲ್ಲ. ದುಃಖಮೂಲವನ್ನು ಹಿಡಿದು, ಅದನ್ನು ಅಲ್ಲಾಡಿಸಬೇಕು. ಅದನ್ನು ಮಾಡಲು ಈ ಲೋಕದಲ್ಲಿ ಶಕ್ತರಾದವರು ಬಹುಜನರಿಲ್ಲ. ದೇವತೆಗಳಿಗೆ ಇತರರ ಸುಖದುಃಖಗಳ ವಿಚಾರದಲ್ಲಿ ಅಷ್ಟು ಆಸಕ್ತಿಯಿಲ್ಲ. ದೇವತೆಗಳು ಯಾವಾಗಲೂ ತಾವು ತಮ್ಮ ಭಕ್ತರು ಎಂಬ ಅದಷ್ಟು ಸಂಕುಚಿತ ಪ್ರಪಂಚವನ್ನು ಮಾತ್ರ ನೋಡಿಕೊಂಡು ತಮ್ಮ

---

ರಿಂದ ಸಪ್ತಸ್ವರಗಳು, ಅದರಿಂದ ಮೂವತ್ತೆರಡು ರಾಗಗಳು, ಇನ್ನೂ ಮುಂದೆ ಬಂದರೆ ಚತುರ್ವಿಂಶತಿ ಶ್ರುತಿಗಳು, ರಾಗಗಳು, ಇಡಾ ಪಿಂಗಳಾ ಸಂಯೋಗದಿಂದ ರಾಗರಾಗಿಣಿಯರು, ಸುಷುಮ್ನದಲ್ಲಿ ಮಾತ್ರ ನಿಂತಾಗ ಸಾಮಗಳು, ಇವೆಲ್ಲವೂ ಕಂಠಸ್ಥಾನದ ಮಧ್ಯಮದಿಂದ ಪ್ರಕಟವಾಗುವುವು. ಇದು ಸಂಗೀತಸ್ಥಾನ. ಇದು ಸಸಿ. ಇದೇ ಮಧ್ಯಮೆಯು ಇನ್ನು ಮುಂದೆ ಹೋಗಿ ಮುಖದಲ್ಲಿ ವರ್ಣರೂಪವಾಗಿ ಪ್ರಕಟವಾಗುವುವು. ಇದು ಅಕಾರಾದಿ ಹಕಾರಾಂತವಾದ ಪಂಚಾಶದ್ವರ್ಣ ಪುಂಜವಾಗಿ ಪಲ್ಲವಾದಿ ಪರಿಶೋಭಿತವಾಗಿರುವ ಮಹಾವೃಕ್ಷದಂತೆ ಕಾಣಿಸಿಕೊಳ್ಳುವ ವೈಖರೀಸ್ಥಾನ. ಗುರೂಪಾಸನಾಶಾಸ್ತ್ರಾಧ್ಯಯನಾದಿ ಸತ್ಸಂಸ್ಕಾರ ಬಲದಿಂದ ಈ ವಾಗ್ದೇವಿಯನ್ನು ಪ್ರಸನ್ನಮಾಡಿಕೊಂಡವನು ಕವಿ. ಗುಹೆಯಲ್ಲಿರುವ ಅವ್ಯಕ್ತಶಬ್ದವನ್ನು ಬಲ್ಲವನು ಅವನು. ಅವ್ಯಕ್ತಶಬ್ದವು ವೈಖರಿಯಲ್ಲಿ ನೇರವಾಗಿ ನುಡಿದಾಗ ಮಂತ್ರ.

ತಮ್ಮ ಕಾರ್ಯವನ್ನು ತಾವು ನಿರ್ವಹಿಸಿಕೊಂಡು ಹೋಗುವ ಸ್ವಭಾವದವರು. ಕ್ಷುದ್ರದೇವತೆಗಳು ಹಿಂಸೆಯನ್ನು ಕೊಡಬಲ್ಲರೇ ಹೊರತು ಸುಖವನ್ನು ಕೊಡ ಲಾರರು. ಅದರಲ್ಲೂ ಈಗಂತೂ, ಈ ದುಃಖವು ಕಾಲಪರ್ಯವಾಗಿ ಬಂದಿದೆ ಯೆಂದ ಮೇಲಂತೂ ದೇವತೆಗಳು ಏನೂ ಮಾಡಲಾರರು."

"ನೀನೇ ಅಪ್ಪಣೆಕೊಡಿಸಿದೆಯಲ್ಲವೆ? ಈ ದುಃಖವನ್ನು ನಿವಾರಿಸಬಲ್ಲ ವರು ಬಹುಮಂದಿ ಇಲ್ಲವಾದರೂ ಕೆಲವರಾದರೂ ಇರುವರೆಂದು. ಅವರು ಯಾರು? ಹೇಳು. ಅವರನ್ನೇ ಆಶ್ರಯಿಸೋಣ, ವಸಿಷ್ಠರ ದುಃಖವು ನಿವಾರಣವಾಗಲಿ.

ದೇವೇಂದ್ರನು ನಕ್ಕನು: "ಆಗಲಿ. ಹೇಳುವೆನು ಕೇಳು. ಮೊದಲನೆ ಯವರು ಅರುಂಧತೀದೇವಿ, ಆಕೆಯು ಪತಿದುಃಖವನ್ನು ನುಂಗಬಲ್ಲವಳು. ಆದರೆ ದುಃಖವು ಆಕೆಯದು, ಪತಿಯದಲ್ಲ. ಅರುಂಧತಿಯು ಆ ದುಃಖವನ್ನು ವಹಿಸಿಕೊಂಡರೆ ಅವರ ಹೃದಯವು ನಿರ್ಭಿನ್ನವಾಗುವುದೆಂದು ವಸಿಷ್ಠರು ಅದನ್ನು ವಹಿಸಿಕೊಂಡರು. ಆಕೆಗೆ ಸಾಧ್ಯವಾದರೆ ಆ ದುಃಖವನ್ನು ಒಂದು ದಿನ ವಹಿಸಬಲ್ಲಳಾದರೆ, ಆಕೆಯು ಆ ದುಃಖವನ್ನು ಕರಗಿಸಿ ದ್ರವಮಾಡಿ ಹೊರಕ್ಕೆ ಬಿಟ್ಟುಬಿಡಬಲ್ಲಳು. ಆದರೆ, ಆ ಪುತ್ರಶೋಕದ ದುಃಖವನ್ನು ಆ ಮಾತೃಹೃದಯವು ತಡೆಯಲಾರದು. ಎರಡನೆಯ ಮಹಾನುಭಾವನು ವಾಮ ದೇವ ಮಹರ್ಷಿಯು. ಆತನು ಉಪಾಸನಾಬಲದಿಂದ ರುದ್ರನನ್ನು ತನ್ನಲ್ಲಿ ಆವಾಹಿಸಿಕೊಂಡಿರುವ ಮಹಾಪುರುಷನು. ಆತನು ಬೇಕಾದರೆ ಈ ದುಃಖ ವನ್ನು ತಾನು ವಹಿಸಿಕೊಂಡು ತನ್ನಲ್ಲಿರುವ ರುದ್ರಪೌರುಷದಿಂದ ಅದನ್ನು ಛಿನ್ನಭಿನ್ನವಾಗಿ ಕತ್ತರಿಸಿ ಗಾಳಿಗೆ ತೂರಬಹುದು. ಮೂರನೆಯ ಮಹಾ ಪುರುಷನು ಅತ್ರಿಯು. ಆತನು ಆ ದುಃಖವನ್ನೆಲ್ಲ ಆಕರ್ಷಿಸಿ, ಒಂದು ಘನ ವನ್ನಾಗಿ ಮಾಡಿ ಒಂದು ಕಡೆ ಇಟ್ಟುಬಿಡಬಲ್ಲನು. ಆದರೆ ಆ ದುಃಖವು ಈ ಮೂರು ರೂಪದಲ್ಲಿ ಯಾವ ರೂಪದಲ್ಲಿದ್ದರೂ, ಕರಗಿ ನೀರಾಗಿ ಹರಿದರೂ, ಧೂಳಾಗಿ ಗಾಳಿಯಲ್ಲಿ ಹಾರಿದರೂ, ಘನವಾಗಿ ಪರ್ವತವಾಗಿ ಕುಳಿತರೂ ಅದು ಇದ್ದೇ ಇರುವುದು. ಲೋಕಕ್ಕೆ ಅದರಿಂದ ಆಗಬೇಕಾದ ಉಪಕಾರವು ಆಗದೆ ಹೋಗುವುದು. ಆದರಿಂದ ಈ ದುಃಖವನ್ನು ವಸಿಷ್ಠರು ಅನುಭವಿಸಿ ತೀರಿಸಿ ಬಿಡಲಿ ಎಂದು ದೇವತೆಗಳು ಸುಮ್ಮನಿರುವರು."

"ಕೂಡದು, ಮಹೇಂದ್ರಾ, ಅರುಂಧತಿ, ವಾಮದೇವ, ಅತ್ರಿಗಳಲ್ಲದೆ, ಇನ್ನು ಯಾರೂ ತಪಸ್ವಿಗಳಿಲ್ಲವೆ ? ಅವರೇಕೆ ಇದನ್ನು ವಹಿಸಿಕೊಳ್ಳಬಾರದು ?"

"ಕೌಶಿಕ, ಸೋಲನ್ನೊಪ್ಪಿಕೊಳ್ಳದ ಕ್ಷತ್ರಿಯನ ರೀತಿಯಲ್ಲಿ ಮಾತ ನಾಡುತ್ತಿರುವೆ. ಒಳ್ಳೆಯದು, ಕೇಳು. ಈಗ ಕೃತಯುಗದ ಪ್ರಥಮಪಾದದ ಅಂತ್ಯಕಾಲವಿದು. ದ್ವಿತೀಯ ಪಾದವು ಬರಲಿರುವುದು. ಈ ಬ್ರಹ್ಮಾಂಡವನ್ನು ರಚಿಸಿರುವ ಪಂಚ ಮಹಾಭೂತಗಳ ಶಕ್ತಿಯು ಈಗ ಇದುವರೆಗೆ ಪೂರ್ಣವಾಗಿ ಷೋಡಶಕಲಾ ಪೂರ್ಣವಾಗಿತ್ತು. ಈಗ ಇವುಗಳ ಶಕ್ತಿಯು ಒಂದು ಕಲೆ ಯಷ್ಟು ಕಡಿಮೆಯಾಗಬೇಕು. ಈ ಕಲೆಯು ಕಡಿಮೆಯಾಗದಂತೆ ಕಾಪಾಡು ವವರು ಸಪ್ತರ್ಷಿಗಳು. ಅವರು ಈ ಕಲಾಕ್ಷಯಕ್ಕೆ ಒಪ್ಪಿರುವರು. ಭೂತ ಗಳು ಈ ಕಲಾಕ್ಷಯವಾಗುವುದಲ್ಲ ಎಂದು ಶೋಕಿಸುವುವು. ಆ ಶೋಕವನ್ನು ಪುತ್ರಶೋಕ ರೂಪವಾಗಿ, ಅರುಂಧತಿಗೆ ಕೊಟ್ಟು, ಅವರಿಂದ ವಸಿಷ್ಠರು ವಹಿಸಿಕೊಳ್ಳುವಂತೆ ದೇವತೆಗಳು ಏರ್ಪಡಿಸಿರುವರು. ಇದಕ್ಕಾಗಿ ಕಾಲಧರ್ಮ ವನ್ನು ಕಾಪಾಡುವ ಕಲಿಪುರುಷನು ವಸಿಷ್ಠರಿಂದ ಅಪ್ಪಣೆಯನ್ನು ಪಡೆದಿರು ವನು. ಆ ಕಾಲವು ಇಷ್ಟೊಂದು ನಿಯತವಾಗಿರುವುದು. ಅದುವರೆಗೂ ಏನೂ ಮಾಡಲಾಗುವುದಿಲ್ಲ."

ವಿಶ್ವಾಮಿತ್ರನಿಗೆ ಆ ಮಾತನ್ನು ಕೇಳಿ ಕರುಳು ಕೊರೆದಂತಾಯಿತು : ಸಂಕಟವು ತಾನೇತಾನಾಯಿತು : "ದೇವರಾಜ, ಈ ವಸಿಷ್ಠಶೋಕವು ಕೊನೆ ಗಾಣಬೇಕು. ಇನ್ನು ಯಾರೂ ಇಲ್ಲದಿದ್ದರೆ, ನಾನಿರುವೆನು. ನಾನು ಈಗ ಮಾಡಿರುವ ತಪಸ್ಸು ಸಾಲದೆಂದರೆ, ನಾನು ಮುಂದೆ ಮಾಡಲಿರುವ ತಪಸ್ಸನ್ನು ಹೊಣೆಮಾಡಿಕೊಂಡಾದರೂ ಈ ಶೋಕ ನಿವಾರಣೋಪಾಯವನ್ನು ತಿಳಿಸು. ಅಂತೂ ಈ ಶೋಕವನ್ನು ಕಡೆಗಾಣಿಸು" ಎಂದು ಕೇಳಿಕೊಂಡನು.

ದೇವರಾಜನು ಯೋಚನಾಪರನಾದನು. ಆತನು ಸುಮ್ಮನಿರುವುದನ್ನು ಕಂಡು ಕೌಶಿಕನಿಗೆ ದುಃಖವಿನ್ನೂ ಹೆಚ್ಚಿತು. ಕಣ್ಣೀರು ಕರೆಯಿತು. ಉಮ್ಮ ಳವು ಹೆಚ್ಚಾಗಿ ಉಸಿರು ಅಸ್ತವ್ಯಸ್ತವಾಯಿತು. ದೇಹವೆಲ್ಲ ಶೋಕಭಾರದಿಂದ ಕಂದಿ ಕಾಂತಿಹೀನವಾದಂತೆ ತೋರಿತು. ಮುಖದ ತೇಜಸ್ಸು ಕಂದಿತು. "ಶಿವ ಶಿವಾ ಎಂತಹವರಿಗೆ ಎಂತಹ ವಿಪತ್ತು, ಅಬ್ಬಾ" ಎಂದು ಮುನೀಂದ್ರನು ಶೋಕವಿಹ್ವಲನಾದನು. ದೇಹವು ನಿಲ್ಲಲಾರದೆ ಕುಳಿತುಬಿಟ್ಟಿತು. ಕುಳಿ

ರಲ್ಲೂ ಲಾರದೆ ಇನ್ನೇನು ಬಿದ್ದು ಹೋಗಬೇಕು. ಮಣ್ಣು ಎನ್ನುವುದನ್ನು ನೋಡದೆ ಹೊರಳಬೇಕು. ಆಗ .ದೇವೇಂದ್ರನು ಇತ್ತ ತಿರುಗಿ, “ಕೌಶಿಕ, ಏನಿದು? ಮರೆತೆಯಾ? ವಸಿಷ್ಠನು ನಿನ್ನ ಪೂರ್ವಶತ್ರು. ಆತನನ್ನು ಏನಾದರೂ ಮಾಡಿ ಮುರಿಯಲೇಬೇಕೆಂದು ರುದ್ರನನ್ನು ಒಲಿಸಿಕೊಂಡು ಮಹಾಸ್ತ್ರಗಳನ್ನು ಪಡೆದು ತಂದಿದ್ದೆ. ಮರೆತೆಯಾ? ಈಗ ಆತನಾಗಿ ಆತನೇ ದುಃಖಸಂವಿಗ್ನಮಾನಸನಾಗಿ ಒದ್ದಾಡಿದರೆ ಒದ್ದಾಡಲೇಳು. ನಿನಗೇನು ನಷ್ಟ. ಇಷ್ಟಾಪತ್ತಿಯಲ್ಲವೆ?” ಎಂದನು.

ವಿಶ್ವಾಮಿತ್ರನಿಗೆ ಆ ಮಾತನ್ನು ಕೇಳಿ ಚುಚ್ಚಿದಂತಾಗಿ ಕೋಪ ಬಂತು. ಆ ಕೋಪದಲ್ಲಿ ದುಃಖವು ಒಂದಿಷ್ಟು ಪಕ್ಕಕ್ಕೆ ಸರಿಯಿತು, ಎದ್ದು ನಿಂತನು. ಭ್ರುಕುಟಿಯು ಬದ್ಧವಾಗಿ ಮೇಲಕ್ಕೆ ನೆಗೆಯಿತು. ಮೂಗಿನ ಹೊಳ್ಳೆಗಳು ಅರಳಿದುವು. ತುಟಿಗಳು ಒಂದಕ್ಕೊಂದು ಒತ್ತಿಕೊಂಡುವು. ದೇಹವು ನಿಮಿರಿಕೊಂಡು ಯೋಗವಟ್ಟದಂತೆ ದಿಟ್ಟವಾಗಿ ನಿಂತುಕೊಂಡಿತು. ಒಂದು ಗಳಿಗೆಯ ಮುಂಚೆ ನೀರು ಕಾರಿದ ಕಣ್ಣಿನ ಕೆಂಪೂ, ಆ ನೀರಿನ ಒದ್ದೆಯೂ ಸೇರಿ ವಿಚಿತ್ರವಾಗಿರುವ ಆ ನೋಟದಿಂದ ಕೌಶಿಕನು ಹೇಳಿದನು: “ಪುರಂದರ, ಹೌದು. ಅಂತಹದೊಂದು ವಿಷಮಭಾವವು ಒಮ್ಮೆ ಈ ಹೃದಯರಂಗದಲ್ಲಿ ತಾನೇ ತಾನಾಗಿ ತಾಂಡವವಾಡಿದುದುಂಟು. ಆದರೆ, ಈಗ ಅದಿಲ್ಲ. ಈಗ ನಾನು ವಿಶ್ವಾಮಿತ್ರ. ಲೋಕದಲ್ಲಿರುವ ಚರಾಚರಗಳಿಗೆಲ್ಲ ನಾನು ಮಿತ್ರ. ನನ್ನಿಂದ ಯಾರಿಗೂ ವಿಷಜಂತುಗಳಿಗೂ ಕ್ರಿಮಿಕೀಟಗಳಿಗೂ ಹಿಂಸೆಯಾಗಕೂಡದು. ಕೌಶಿಕನ ಮಾತನ್ನು ವಿಶ್ವಾಮಿತ್ರನಿಗೆ ಹೇಳುವುದು ಯಾವ ನ್ಯಾಯ? ನೀನು ಮೂರು ಲೋಕಕ್ಕೂ ಅಧಿಪತಿಯು. ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ ಇದ್ದ, ಇರುವ, ಇರಬರುವ ಎಲ್ಲವೂ ನಿನ್ನ ಅಪ್ಪಣೆಗೆ ಒಳಗಾದುದು. ಆದರಿಂದ ಯಾವುದಾದರೂ ಒಂದು ದಾರಿಯನ್ನು ಹೇಳು. “ನಿನ್ನಿಂದಲೇ ಆದುದು. ನೀನು ಹೋಗಿ ವಸಿಷ್ಠಪುತ್ರರನ್ನು ಕೆಣಕಿ, ನೀನೇ ಅವರ ವಿನಾಶಕ್ಕೆ ಕಾರಣನಾದೆ”ಯೆನ್ನುವೆಯೇನೋ? ಆದರಿಂದಲೇ ನಾನು ಈಗ ಕೇಳಿಕೊಳ್ಳುತ್ತಿರುವೆನು. ನಿನ್ನ ರಹಸ್ಯವನ್ನರಿಯದೆ, ತಿಳಿದ ಇನ್ನೊಂದು ರಹಸ್ಯವನ್ನು ಉಪಯೋಗಿಸಲು ಹೊರಟು, ಇಷ್ಟೆಲ್ಲಾ ಅನರ್ಥವಾಗಿರುವುದು. ಈ ಅನರ್ಥವನ್ನು ತಪ್ಪಿಸಲು ಸಹಾಯಮಾಡಲಾರೆಯಾ?” ಎಂದು ಕೇಳಿಕೊಂಡನು.

ಮಾತೂ, ಮನಸ್ಸೂ, ಮೈಯೂ ಎಲ್ಲವೂ ಮೃದುವಾಗಿ ಸ್ನೇಹಸುಂದರವಾಗಿ ಸುಖಮಯವಾಗಿ ಕೃತಜ್ಞನ ಸ್ತೋತ್ರದಂತೆ ಹಿತವೂ ಪ್ರಿಯವೂ ಆಗಿತ್ತು.

ಇಂದ್ರನು ಸಂತುಷ್ಟನಾಗಿ ನಕ್ಕು ಹೇಳಿದನು: "ಹೌದು ಕೌಶಿಕನು ವಿಶ್ವಾಮಿತ್ರನಾಗಿರುವನೆಂದೇ ನಾನೂ ಜಮದಗ್ನಿಯ ಮಾತಿಗೊಪ್ಪಿ ದರ್ಶನ ವನ್ನು ಕೊಟ್ಟುದು. ಇಲ್ಲದಿದ್ದರೆ ನನ್ನನ್ನೇ ಕಿತ್ತಿಸೆಯಲೂ ಸಿದ್ಧನಾಗಿದ್ದ ನಿನಗೆ ನಾನು ದರ್ಶನ ಕೊಡಲು ಸಿದ್ಧನಾಗುತ್ತಿದ್ದೆನೆ? ಆಗಲಿ. ನೀನು ಒಂದು ಕೆಲಸ ಮಾಡು. ಆತನೀಗ ಅರ್ಧ ದುಃಖವನ್ನು ಅನುಭವಿಸಿರುವನು. ದೇಹ ದೇಹ ದಲ್ಲಿಯೂ ಇರುವ ಇಂದ್ರಿಯಗಳು ನನ್ನವು. ನಾನು ವಸಿಷ್ಠ ದೇಹದಲ್ಲಿರುವ ಇಂದ್ರಿಯಗಳ ಶಕ್ತಿಯನ್ನು ಆಕರ್ಷಿಸಿ ಅವುಗಳ ಬಲವನ್ನು ಕುಗ್ಗಿಸುವೆನು. ಅದರಿಂದ ಅವು ಈ ದುಃಖವನ್ನು ಸಹಿಸಲಾರದೆ ಮೂರ್ಛೆಯನ್ನು ಪಡೆಯು ವುವು. ಈಗ ಕಳೆದಷ್ಟು ದಿವಸ ಆತನು ಮೂರ್ಛೆಯಲ್ಲಿರುವನು. ಈ ಶೋಕ ಕಾಲವೆಲ್ಲ ಕಳೆದಮೇಲೆ ಉಳಿಯುವ ದುಃಖವೆಷ್ಟು ಇರುವುದೋ ಅದನ್ನು ನೀನು ಅನುಭವಿಸು. ಸಿದ್ಧನಾಗುವೆಯಾ?"

"ವಿಶ್ವಾಮಿತ್ರನು ಒಪ್ಪಿದನು. ಇಂದ್ರನ ದಯೆಯಿಂದ ವಿಶ್ವಾಮಿತ್ರನ ಕಣ್ಣು, ಹೊರಳಿ, ವಸಿಷ್ಠನನ್ನು ಕಂಡಿತು. ಹಿಂದೆ ಭಸ್ಮೋದ್ಧೂಳಿತ ಗಾತ್ರ ನಾಗಿ, ಪರಶಿವನಂತೆ ಮೆರೆಯುತ್ತ ಬ್ರಹ್ಮಾನಂದ ಮೂರ್ತಿಯಾಗಿದ್ದ ಇಕ್ಷ್ವಾಕು ಕುಲಗುರುವು ಚಿಕಾರಿಯಾಗಿ ಬೈರಾಗಿಯಂತೆ, ಮಲಿನ ವಸ್ತ್ರಗಳನ್ನುಟ್ಟು ಮೈಯೆಲ್ಲ ಕೊಳೆಕೊಳೆಯಾಗಿ ನೋಡುವುದಕ್ಕೆ ಜುಗುಪ್ಸೆಯಾಗುವಂತೆ, ಯಾವುದೋ ಬೆಟ್ಟದ ಬುಡದಲ್ಲಿ, ಒಂಟಿಯಾಗಿ ಬೆಳೆದು ಹರಕು ಮುರುಕಾಗಿ ನಿಂತಿರುವ ಮರದ ಬುಡದಲ್ಲಿ ಕುಳಿತಿದ್ದಾರೆ. ಮೊದಲಿನ ವಸಿಷ್ಠರನ್ನು ಕಂಡ ವರು ಇವರನ್ನು ಗುರುತಿಸುವುದೂ ಕಷ್ಟ. ವಿಶ್ವಾಮಿತ್ರನು ಆ ದೃಶ್ಯವನ್ನು ಕಂಡು ಅಯ್ಯೋ ಎಂದು ಕಣ್ಣೀರು ಮಿಡಿದನು.

ಇಂದ್ರನು ಹೇಳಿದನು: "ಬಲ್ಲೆಯಾ? ವಿಶ್ವಾಮಿತ್ರ, ಈತನಿಗೆ ನಾನೀಗ ಮೂರ್ಛೆಯೊದಗಿಸಿದರೆ, ಈತನು ಅನುಭವಿಸಿದ ದುಃಖದ ತೀವ್ರತೆಯು ಕಡಿಮೆ ಯಾಗುವುದು: ಆದರೆ ಅನುಭವಕಾಲದಲ್ಲಿ ಈ ಶೋಕವು ಶೇಷವಾಗಿ ಉಳಿಯು ವುದು. ಆ ಶೋಕಶೇಷವನ್ನು ನೀನು ಅನುಭವಿಸುವುದು ಎಂದರೇನು ಬಲ್ಲೆಯಾ? ನೀನಾಗಿ ನಿನ್ನ ಐವತ್ತು ಮಕ್ಕಳನ್ನು ಬಲಿಗೊಡಬೇಕು. ಸಿದ್ಧನಾಗಿರುವೆಯಾ?"

ವಿಶ್ವಾಮಿತ್ರನು ಮೌನವಾಗಿ ತಲೆಯಲ್ಲಾಡಿಸಿ ಒಪ್ಪಿದನು. ವಸಿಷ್ಠರು ಕುಳಿತಿದ್ದೆಡೆಯೇ ಮೂರ್ಛೆಯಲ್ಲಿ ಒರಗಿದರು. ಅವರ ಸುತ್ತಲೂ ಒಂದು ಗವಿಯಾಗಿ ಅದರ ಬಾಯಿ ಮುಚ್ಚಿಹೋಯಿತು.

ಇಂದ್ರನು ವಿಶ್ವಾಮಿತ್ರನ ಕೃತಜ್ಞತೆಯ ವಂದನೆಗಳನ್ನು ಸ್ವೀಕರಿಸಿ, "ವಿಶ್ವಾಮಿತ್ರ, ನೀನು ನಿಜವಾಗಿಯೂ ವಿಶ್ವಮಿತ್ರನಾಗಲು ಯೋಗ್ಯನು. ತ್ರಿಶಂಕುವಿಗೆ ನಿನ್ನ ತಪಸ್ಸನ್ನು ಸೂರೆಗೊಟ್ಟೆ. ವೈರವನ್ನು ಸಾಧಿಸುವೆನೆಂದು ತೊಟ್ಟಿದ್ದ ಪಣವನ್ನು ಮರೆತು, ವಸಿಷ್ಠರ ಶೋಕವನ್ನು ವಹಿಸಿಕೊಂಡೆ. ನಿನಗೆ ಮಂಗಳವಾಗಲಿ. ನಾನಿನ್ನು ಹೋಗಿ ಬರಲೆ?" ಎಂದನು.

ವಿಶ್ವಾಮಿತ್ರನು "ನನ್ನ ಇಷ್ಟವು ಯಾವಾಗ ಸಿದ್ಧಿಸುವುದು? ಹೇಳುವೆಯಾ?" ಎಂದು ಕೇಳಿದನು. ಇಂದ್ರನು ನಕ್ಕು "ರುದ್ರನು ಮನಸ್ಸು ಮಾಡಿದರೆ ಈಗಲೇ ಆಗಬಹುದು. ಆದರೂ ನಾವೆಲ್ಲ ಒಂದು ನಾಟಕವನ್ನು ಹೂಡಿದ್ದೇವೆ. ಅದೆಲ್ಲ ಮುಗಿಯಬೇಕು. ಅದುವರೆಗೆ ಏನು ಅವಸರ? ಇನ್ನು ನನ್ನನ್ನು ಬಿಟ್ಟುಕೊಡು. ಇಂದಿನಿಂದ ನಾವು ನಾವು ಮಿತ್ರರು. ನನ್ನ ಮಿತ್ರನಾದ ವಸಿಷ್ಠನ ದುಃಖವನ್ನು ನೀಗಿದೆ. ಇನ್ನು ನೀನೂ ನಿನ್ನವರೂ ಕರೆದಾಗಲೂ ತಪ್ಪದೆ ಯಜ್ಞಕ್ಕೆ ಬರುವೆನು. ವಿಶ್ವಾಮಿತ್ರ ನೀನೂ ಏಕೆ ಸ್ವರ್ಗಕ್ಕೆ ಬರಬಾರದು? ಎರಡು ದಿನವಿದ್ದು ಬರುವೆಯಂತೆ ಬಾ" ಎಂದನು.

ವಿಶ್ವಾಮಿತ್ರನು ಇಂದ್ರನ ವಾಕ್ಯದಿಂದ ಅಥವಾ ವರದಿಂದ ಸಂತೃಪ್ತನಾಗಿ "ಮಹೇಂದ್ರ, ನೀನು ನನ್ನನ್ನು ಮಿತ್ರನೆಂದೆ. ಸ್ವರ್ಗಕ್ಕೂ ಕರೆದೆ. ಇನ್ನೇನಾಗಬೇಕು? ನಾವು ತಪಸ್ವಿಗಳು. ನಮಗೆ ಆ ಭೋಗಭೂಮಿಯಲ್ಲಿ ಆಗಬೇಕಾದುದೇನು? ಭೋಗದೊಡೆಯನ ಮೈತ್ರಿಯಿರಲು ಆ ಸೌಭಾಗ್ಯವೆಲ್ಲ ನಮ್ಮದೇ ಆದಂತಲ್ಲವೆ?" ಎಂದನು.

ಇಂದ್ರನು ನಗುತ್ತಾ "ಮುನೀಂದ್ರ, ಸ್ವರ್ಗಕ್ಕೆ ಬಾ ಎಂದರೆ ಬರುವುದಿಲ್ಲವೆಂದೆ! ಇರಲಿ, ಸ್ವರ್ಗವೇ ನಿನ್ನ ಬಳಿಗೆ ಬಂದರೆ ಆಗ ಏನು ಮಾಡುವೆಯೋ ನೋಡೋಣ" ಎಂದು ಮೃದುವಾಗಿ ನಕ್ಕು, ವಿಶ್ವಾಮಿತ್ರನೊಪ್ಪಿಸಿದ ಉತ್ತರಪೂಜೆಯನ್ನು ಸ್ವೀಕರಿಸಿ ಅಂತರ್ಹಿತನಾದನು.

---

## ಮೂವತ್ತನೆಯ ತರಂಗ

ವಿಶ್ವಾಮಿತ್ರನು ಆ ಮರದ ಅಡಿಯಲ್ಲಿಯೇ ಇನ್ನೂ ಅಷ್ಟುಹೊತ್ತು ಕುಳಿತಿದ್ದನು. ಇಂದ್ರನು ಹೇಳಿದ: "ಸ್ವರ್ಗಕ್ಕೆ ಕರೆದರೆ ಬರುವುದಿಲ್ಲವೆಂದೆ. ಸ್ವರ್ಗವೇ ನಿನ್ನ ಬಳಿಗೆ ಬಂದರೆ ಏನು ಮಾಡುವೆಯೋ ನೋಡೋಣ" ಎಂಬ ಮಾತು ಇನ್ನೂ ಕಿವಿಯಲ್ಲಿ ಮೊಳಗುತಿತ್ತು. "ಹೌದು, ಏನು ಮಹಾ! ನಾನು ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಬಲ್ಲೆನಾದರೆ, ಸ್ವರ್ಗವೇ ನನ್ನಬಳಿಗೆ ಬರಬಾರದೇಕೆ? ಬಂದರೇನು ಮಹಾ! ಬರಲಿ. ನೋಡೋಣ. ಆಮೇಲೆ ಆ ಯೋಚನೆ" ಎಂದುಕೊಂಡು ಅಲ್ಲಿಂದ ಹೊರಟನು.

ಇತ್ತ ಆಶ್ರಮದಲ್ಲಿ ಸಮಾರಾಧನೆಯ ಸಂಭ್ರಮ. ಜಮದಗ್ನಿ ಪತ್ನಿ ಯಾದ ರೇಣುಕೆಯೂ ಶಿಷ್ಯರೂ ಮೊದಲಾದ ಆಶ್ರಮವಾಸಿಗಳೆಲ್ಲ ಬಲು ಓಡಾಟಮಾಡುತ್ತಿದ್ದಾರೆ. ಅವರಿವರ ಮಾತಿನಿಂದ ಕೌಶಿಕನಿಗೆ ಏನೋ ಕಾಮಧೇನು ಬಂದಿದೆ ಎಂದು ಅರ್ಧಾರ್ಧವಾಗಿ ತಿಳಿದು, "ಇದು ಏನು? ಮತ್ತೆ ಕಾಮಧೇನುವಿನ ಪ್ರಸಂಗ?" ಎನ್ನಿಸಿದೆ. ಅಂತೂ ತನ್ನ ಪರ್ಣ ಶಾಲೆಗೆ ಬರುವುದರೊಳಗಾಗಿ ಎಲ್ಲವೂ ಅಷ್ಟಷ್ಟಾಗಿ ತಿಳಿಯಿತು. ದೇವತೆಗಳು ಜಮದಗ್ನಿಗೆ ಕಾಮಧೇನುವಿನ ಸಂತಾನವೊಂದನ್ನು ಹೋಮಧೇನುವಾಗಿ ಕರುಣಿಸಿದ್ದಾರೆ. ಆಕೆಯೂ ಬಂದಿದ್ದಾಳೆ. ಈ ದಿನದ ಅತಿಥಿಪೂಜೆ ಆಕೆ ಯದು.

ವಿಶ್ವಾಮಿತ್ರನಿಗೆ ಇದ್ದದ್ದು ಇದ್ದಹಾಗೆಯೇ ವಾಮದೇವನು ಹೇಳಿದ್ದುದು ನೆನೆಪಾಯಿತು. ಮತ್ತೆ ಇದೇ ಧೇನುವೇ ಕಾರಣವಾಗಿ ಬ್ರಾಹ್ಮಣ ಕ್ಷತ್ರಿಯ ಯುದ್ಧವಾಗುವುದೋ? ಮತ್ತೆ ರಾಜನೋ ರಾಜನ್ಯನೋ ಬ್ರಾಹ್ಮಣ ಧೇನು ವನ್ನು ಬಯಸಿ ಶಾಂತವಾದ ಆಶ್ರಮಪದಗಳನ್ನೆಲ್ಲ ರೌದ್ರಕರ್ಮಗಳಿಂದ ಕ್ಷೋಭಗೊಳಿಸುವನೋ? ನಗುನಗುತ್ತಿರುವ ಈ ಆಶ್ರಮಭೂಮಿಯು ರಕ್ತ ಗಂಧವನ್ನು ಬೊಳಿದುಕೊಂಡು ರಣಾಂಗಣವಾಗಿ ವಿಕಾರವಾಗುವುದೋ? ಬ್ರಹ್ಮಚಿಂತನಮಾಡುವ ತಪಸ್ವಿಗಳ ಆಶ್ರಯವಾಗಿರುವ ಈ ಭೂಮಿಯಲ್ಲಿ ಆಯುಧಗಳ ಝಣಝಣತ್ಕಾರವಾಗಿ ತಲೆಗಳು ಉರುಳಾಡುವುವೋ? ವಾಮ ದೇವನ ಮಾತು ಸುಳ್ಳೆನ್ನುವುದಕ್ಕೆ ಕಾರಣವಿಲ್ಲ. ಆತನ ಮಾತು ನಿಜವಾದರೆ, ಕ್ಷತ್ರಿಯ ಕುಲಾಂತಕನಾದ ಭಾರ್ಗವನೊಬ್ಬನು ಬರಬೇಕು. ಬಂದಾನು."

ವಿಶ್ವಾಮಿತ್ರನಿಗೆ ಇನ್ನೂ ಯೋಚನೆಯಾಯಿತು. "ಹಾಗಾದರೆ ಈ ದೇವತೆಗಳು ಇಷ್ಟು ತುಂಟರೆ? ಇವರು ಅನುಗ್ರಹವೆಂದು ಕೊಟ್ಟುದೆಲ್ಲವೂ, ತನ್ನ ಹಿಂದೆಯೇ ದುಃಖದ ಮೂಟೆಯನ್ನು ತರುವುದೇ? ಈಗ ಕೊಟ್ಟಿರುವ ಈ ಶಬಲೆಯೂ ನಂದಿನಿಯಂತೆಯೇ ಮಹಾರಣ ಕಾರಣಳಾಗುವಳೆ? ಹಾಗೆಂದರೆ, ನಾವು ದೇವತೆಗಳನ್ನೇಕೆ ಪೂಜಿಸಬೇಕು? ಅವರ ವರಗಳು ನಮ್ಮ ವಿನಾಶದ ಮೂಲಗಳಾಗುವುದಾದರೆ, ನಾವು ಆ ವರವನ್ನಾದರೂ ಏಕೆ ಕೇಳಬೇಕು? ಏಕೆ ಸಂಪಾದಿಸಬೇಕು?" ಎಂದು ಏನೇನೋ ಯೋಚನೆಗಳು ಬಂದುವು. ಏನೇನು ಯೋಚನೆ ಬಂದರೂ "ಸ್ವರ್ಗವು ನನ್ನ ಬಳಿಗೆ ಬಂದರೆ ಏನು ಮಾಡಬೇಕು? ಅದು ಯಾವ ರೂಪದಲ್ಲಿ ಬರುವುದು? ಅದು ದುಃಖದಲ್ಲಿ ಪರಿಣಮಿಸದಂತೆ ಹೇಗೆ ಮಾಡಿಕೊಳ್ಳಬೇಕು?" ಎಂಬ ಯೋಚನೆಗಳು ನಡುನಡುವೆ ಬರುವುವು. ಅಂತೂ ಆ ಮುನೀಂದ್ರನಿಗೆ ದೇವತೆಗಳು, ವರ, ಸ್ವರ್ಗ, ಸುಖ, ದುಃಖ ಈ ಯೋಚನೆಗಳನ್ನು ಬಿಟ್ಟು ಇನ್ನು ಯಾವುದೂ ತಲೆಗೆ ಬರಲೇ ಒಲ್ಲದು.

ಹೀಗೆ ಈತನಲ್ಲಿ ವಿಚಿತ್ರ ಭಾವನಾತರಂಗಗಳಲ್ಲಿ ತೇಲಿಹೋಗುತ್ತಿರುವಾಗ ಜಮದಗ್ನಿಯಿಂದ ಕರೆಬಂತು. ವಿಶ್ವಾಮಿತ್ರನು ಹೋದನು. ದಾರಿಯಲ್ಲಿ ಉದ್ದಕ್ಕೂ ಎಲೆಗಳನ್ನುಹಾಕಿ ಬಡಿಸಿದೆ. ಭಕ್ಷ್ಯಭೋಜ್ಯಗಳು, ರುಚಿರುಚಿಯಾದ ಪಾನಕಗಳು, ಪಾಯಸಗಳು, ಪಕ್ವಾನ್ನಗಳು ಮೊದಲಾದವುಗಳನ್ನು ಬೇಕಾದ ಹಾಗೆ ಬಡಿಸಿದ್ದಾರೆ. ಆ ಭೋಜನ ದ್ರವ್ಯಗಳ ಸುವಾಸನೆಗೆ ಮೂಗಿನ ಹೊರಳೆಗಳು ಅರಳುತ್ತವೆ. ಎತ್ತ ನೋಡಿದರೂ ಎಲೆ ಎಲೆಯು ತುಂಬಾ, ಸಮೃದ್ಧಿಯಾಗಿ ಬಡಿಸಿದ್ದಾರೆ. ಭೋಜ್ಯವಸ್ತುಗಳ ಸುವಾಸನೆಯು ಇದ್ದ ಕ್ಷುತ್ತನ್ನು ತಣಿಸಿ ಇಲ್ಲದ ಕ್ಷುತ್ತನ್ನು ಸಂಪಾದಿಸುತ್ತಿದೆ. ಈ ಕೊನೆಯಿಂದ ಆ ಕೊನೆಯವರೆಗೂ ಜನರು. ಎಲ್ಲರೂ ಊಟಕ್ಕೆ ಸಿದ್ಧರಾಗಿದ್ದಾರೆ. ಆಪೋಶನಕ್ಕೆ ಕಾದಿದ್ದಾರೆ. ಆಪೋಶನ ಹಾಕುವುದಕ್ಕೂ ಜನ ಸಿದ್ಧರಾಗಿದ್ದಾರೆ. ವಿಶ್ವಾಮಿತ್ರರು ಬರಬೇಕು. ಅವರಿಗಾಗಿ ಜಮದಗ್ನಿ ಕಾದಿದ್ದಾರೆ. ಜಮದಗ್ನಿಯ ಅಪ್ಪಣೆಗಾಗಿ ಇತರರು ಕಾದಿದ್ದಾರೆ.

ವಿಶ್ವಾಮಿತ್ರನು ಅವಸರ ಅವಸರವಾಗಿ ಜಮದಗ್ನಿಯ ಬಳಿಗೆ ಹೋದನು. ಜಮದಗ್ನಿಯು ಆತನಿಗೆ ಸಲ್ಲಬೇಕಾದ ಸತ್ಕಾರಗಳನ್ನೆಲ್ಲ ಸಲ್ಲಿಸಿ, ಅತಿಥಿಪೂಜೆ

ಥಿಯನ್ನೊಪ್ಪಿಸಿದನು. ಆಶ್ರಮದಲ್ಲಿ ಅತಿಥಿ ಪೂಜೆಯು ಸಾಂಗವಾಗಿ ನೆರವೇರಿತು. ವಿಶ್ವಾಮಿತ್ರನಿಗೆ ಶಬಲೆಯ ಪರಿಚಯವಾಯಿತು: ಧೇವಧೇನುವು ಜಮದಗ್ನಿಯ ಹೋಮಧೇನುವಾಯಿತೆಂಬ ಸಂತೋಷವಿದ್ದರೂ ಆತನಿಗೆ ಶಬಲೆಯು ಎಲ್ಲಿ ಅತಿ ನಂದನಿಯಾದಾಳೋ? ಎಲ್ಲಿ ಇನ್ನೊಬ್ಬ ಕೌಶಿಕನು ಹುಟ್ಟಿಕೊಳ್ಳುವನೋ ಎಂದೇ ದಿಗಿಲು.

ವಿಶ್ವಾಮಿತ್ರನಿಗೆ ದೇವೇಂದ್ರನು ಹೇಳಿದ ಮಾತು ಅರ್ಥವಾದಂತಾಯಿತು: "ಸರಿ. ಇಂದ್ರನು ತನಗೂ ಒಂದು ಹೋಮಧೇನುವನ್ನು ಕೊಟ್ಟಾನು. ವಸಿಷ್ಠರಿಗೆ ನಂದಿನಿ, ಜಮದಗ್ನಿಗೆ ಶಬಲೆ, ತನಗಿನ್ನೊಂದು ಸ್ಯಂದಿನೀ, ಆತನು ಹೇಳಿದ ಸ್ವರ್ಗವು ಇದೇ! ಆದರೆ, ತಾನು ಮಾತ್ರ ಆ ಧೇನುವನ್ನು ಸ್ವೀಕರಿಸಬಾರದು. ಒಂದು ವೇಳೆ ದೇವತೆಗಳ ವರವೆಂದು ಸ್ವೀಕರಿಸಿದರೂ ಅದನ್ನು ಆಶ್ರಮದಲ್ಲಿ ಇಟ್ಟುಕೊಳ್ಳಬಾರದು. ಅದು ದೇವತೆಗಳಲ್ಲಿಯೇ ಇರಲಿ. ಬೇಕಾದಾಗ ಪ್ರಾರ್ಥನೆಮಾಡಿ ತರಿಸಿಕೊಳ್ಳುವುದು. ಅದರಿಂದಾಗ ಬೇಕಾದ ಕಾರ್ಯವು ನೆರವೇರುತ್ತಲೂ ಅದನ್ನು ಮತ್ತೆ ಕಳುಹಿಸಿ ಕೊಟ್ಟುಬಿಡುವುದು. ವಸಿಷ್ಠರು ಹಾಗೆ ಮಾಡಿದ್ದರೆ, ಅವರ ಆಶ್ರಮದಲ್ಲಿ ರಕ್ತಪಾತವೇ ಆಗುತ್ತಿರಲಿಲ್ಲ" ಎಂದು ಮುಂತಾಗಿ ಚಿಂತಿಸಿಕೊಳ್ಳುತ್ತಿದ್ದನು.

ಹಾಗೆಯೇ ಮತ್ತೆ ಇನ್ನು ಒಂದುಸಲ ಯೋಚನಾ ಪ್ರವಾಹವು ಹೊರಳಿ ಮತ್ತೊಂದು ತರಂಗ ಮಾಲೆಯು ಬಂದಿತು. "ಆಯಿತು. ನಮ್ಮ ಆಶ್ರಮದಲ್ಲಿಯೂ ರಕ್ತಪಾತವಾಯಿತು. ಎಂದುಕೊಳ್ಳೋಣ. ಅದಕ್ಕೆ ನಾನೇಕೆ ಹೆದರಬೇಕು? ಒಬ್ಬ ಕೌಶಿಕನು ಬಂದು ಇನ್ನೊಬ್ಬ ವಿಶ್ವಾಮಿತ್ರನು ಹುಟ್ಟುವನು. ಅಡಗಿದ್ದ ತೇಜಸ್ಸು ಈಚೆಗೆ ಬರಲು ಕಾರಣವಾಗುವುದು. ತಿರಸ್ಕಾರವನ್ನು ಸಹಿಸದ ತೇಜೋವಂತನೊಬ್ಬನ ಅವತಾರವಾಗಿ ಭೂಮಿಯಲ್ಲಿ ತೇಜಸ್ವಿಗಳ ಸಂಖ್ಯೆ ಹೆಚ್ಚುವುದು. ಆಗಲಿ. ಅದರಿಂದ ಹೆದರಿ, ದೇವತೆಗಳ ವರವನ್ನು ನಿರಾಕರಿಸುವುದಕ್ಕಿಂತ ಬೇಕಾದುದಾಗಲಿ, ಅದನ್ನು ಅಂಗೀಕರಿಸಿಕೊಳ್ಳಬೇಕು, ಅನುಭವಿಸಬೇಕು. ಜೀರ್ಣಿಸಿಕೊಳ್ಳಬೇಕು ಅದೇ ಸರಿ" ಎಂಬ ಸಿದ್ಧಾಂತಕ್ಕೆ ಬಂದಿದ್ದನು.

ಆವೇಳೆಗೆ ಇಳಿಹೊತ್ತಾಗಿತ್ತು. ಜಮದಗ್ನಿಯು ಮತ್ತೆ ಸೋದರಮಾವನನ್ನು ನೋಡಲು ಬಂದನು. ಇಬ್ಬರೂ ಅಷ್ಟುಹೊತ್ತು ಮಾತನಾಡುತ್ತಿದ್ದರು.

ವಿಶ್ವಾಮಿತ್ರನು ಇಂದ್ರ ದರ್ಶನವಾದುದನ್ನೂ ಆತನು ಹೇಳಿದುದನ್ನೂ ಹೇಳಿದನು. ಜಮದಗ್ನಿಯು ತಾನು ಮಾಡಿದುದನ್ನು ಹೇಳಿದನು. ಎಲ್ಲವೂ ಆದಮೇಲೆ ವಿಶ್ವಾಮಿತ್ರನು ಹಿಂದೆ ತನಗೆ ವಾಮದೇವನು ಹೇಳಿದುದನ್ನು ಹೇಳಲು ಜಮದಗ್ನಿಯು "ಹೌದು, ಮಾವ, ಹಾಗಾಗುವ ಸಂಭವವಿದೆ. ಅಂತಹ ಕ್ರೂರ ಕರ್ಮಮಾಡುವವನೊಬ್ಬನು ನನ್ನ ಹೊಟ್ಟೆಯಲ್ಲಿಯೇ ಜನಿಸುವನಂತೆ. ಆ ಮಾತು ನಮ್ಮ ತಾಯಿ ನನಗೆ ಪದೇ ಪದೇ ಹೇಳುತ್ತಲೇ ಇದ್ದಾರೆ. ಅಲ್ಲದೆ ನಮಗೂ ಹೇಹಯರಿಗೂ ಬೇಕಾದ ಹಾಗೆ ಜಗಳಗಳಾಗುತ್ತಲೇ ಇವೆ. ಕ್ಷತ್ರಿಯರಿಗೆ ಸೇರಬೇಕಾದುದನ್ನೆಲ್ಲ ಭಾರ್ಗವರು ಸ್ವಾಯತ್ತೀಕರಿಸಿಕೊಂಡಿರುವರೆಂದು ಅವರಿಗೆ ಕೋಪ. ಒಬ್ಬರದನ್ನು ನಾವು ತೆಗೆದುಕೊಂಡಿಲ್ಲ. ನಮ್ಮ ಹತ್ತಿರ ಇರುವುದೆಲ್ಲ ನಾವು ಸ್ವಯಂ ಶ್ರಮಪಟ್ಟು ಸಂಪಾದಿಸಿದುದು ಎಂದು ನಮ್ಮ ವಾದ. ಅವರೊಮ್ಮೆ ನಮ್ಮ ಕುಲವನ್ನೇ ನಿರ್ಮೂಲ ಮಾಡಬೇಕೆಂದು ಕೂಡ ಯತ್ನಿಸಿದರು. ಆದರೆ, ಆ ಔರ್ವನ ಪ್ರಭಾವದಿಂದ ಅದು ಸಾಧ್ಯವಾಗಲಿಲ್ಲ. ಮತ್ತೊಮ್ಮೆ ಹೇಹಯರು ವಿಜೃಂಭಿಸಬಹುದು. ಆಗ ಅವರನ್ನು ನಿಗ್ರಹಿಸಲು ನಮ್ಮಲ್ಲಿ ಮತ್ತೊಬ್ಬ ವೀರನ ಉದಯವಾಗಬಹುದು. ಆಗಲೇಳು? ನೀನು ಕ್ಷತ್ರಿಯ. ಬ್ರಾಹ್ಮಣನಾಗಬೇಕು ಎಂದು ಹೊರಟಿದ್ದೀಯೆ. ನೀನು ಒಂದು ಮೆಟ್ಟಲೇರಿದರೆ, ನನ್ನ ಮಗನು ಒಂದು ಮೆಟ್ಟಲಿಳಿದು ಕ್ಷತ್ರಿಯನಾಗಬಹುದು. ಅಷ್ಟೇ ತಾನೇ? ಅವನು ಕ್ಷತ್ರಿಯನಾದರೂ ಬ್ರಾಹ್ಮಣ ಕ್ಷತ್ರಿಯ. ಹಾರಾಡಿ ಕುಣಿದು ಕುಪ್ಪಳಿಸಿದರೂ ಕೊನೆಗೆ ಆದರೂ ತಪ್ಪದೆ ತಪಸ್ಸಿಗೆ ಹೋಗುವನು ಅಷ್ಟೇ ಸಾಕು. ಎಲ್ಲದರಮೇಲೆ, ಭವಿತವ್ಯಂ ಭವತ್ಯೇವ. ಅದಕ್ಕೇಕೆ ಅಷ್ಟು ಯೋಚನೆ?" ಎಂದನು.

ವಿಶ್ವಾಮಿತ್ರನಿಗೆ ಆ ಮಾತು ಅಷ್ಟಾಗಿ ಒಪ್ಪಲಿಲ್ಲ. ಆದರೂ ಅದಕ್ಕೆ ಪ್ರತಿಯಾಡಲಿಲ್ಲ. ಮುಂದೆ ಮತ್ತೆ ಆಶ್ರಮ ಕಟ್ಟುವ ಮಾತು ಬಂತು: "ಈ ಸಲ ಮತ್ತೆ ಹಿಮಾಚಲದ ಪ್ರಾಂತಕ್ಕೇ ಹೋಗಬೇಕೆಂದು ಮನಸ್ಸಾಗುತ್ತಿದೆ. ಈ ಸಾರಿ ಹಿಮಾಚಲದ ತಪ್ಪಲಿನಲ್ಲಿ ಇರುವುದಕ್ಕೆ ಇಷ್ಟವಿಲ್ಲದಿದ್ದರೂ, ಹಿಮಾಚಲದ ಹಿಮಕಿರೀಟ ಸುಂದರ ಶೃಂಗಗಳನ್ನು ನೋಡುತ್ತಿರಬೇಕೆಂಬ ಆಸೆಯೇಕೋ ಬಲವಾಗುತ್ತಿದೆ. ಆ ಸುತ್ತಮುತ್ತಲಿನಲ್ಲಿಯೇ ಇರಬೇಕೆಂದು ಎನಿಸುತ್ತಿದೆ. ಅದರಿಂದ ಉತ್ತರದಲ್ಲಿಯೇ ಆಶ್ರಮ ಮಾಡಬೇಕು." ಎಂದನು.

ಜಮದಗ್ನಿಯು ನಕ್ಕು "ಆಗಬಹುದು. ಲೋಕೋತ್ತರವಾದ ಸಿದ್ಧಿಯನ್ನು ಪಡೆಯಬೇಕೆಂದಿರುವ ಮನಸ್ಸು ಲೋಕೋತ್ತರ ಸೌಂದರ್ಯಾತಿಶಯ ಸಂಪನ್ನವಾದ ಹಿಮವತ್ಪರ್ವತ ಶಿಖರಗಳ ದರ್ಶನವೂ ಸದಾ ಆಗುತ್ತಿರಬೇಕು ಎಂದುಕೊಂಡರೆ ತಪ್ಪೇನು? ನಾನೂ ಅದರಂತೆಯೇ ಆಗಬೇಕೆಂದು ನೋಡ ಬಯಸುವುದು ಸಹಜವಾದ ಆಸೆ. ಆಗಬಹುದು. ಆದರೆ, ಯಜ್ಞದ ಆಯಾಸ ಅಷ್ಟು ತೀರಿಸಿಕೊಂಡು ಹೊರಡುವುದಾಗಲಿ. ಈ ಅಮಾವಾಸ್ಯೆಯವರೆಗೆ ಇಲ್ಲಿದ್ದು ಪ್ರತಿಪತ್ತಿನ ಸ್ಥಾಲೀ ಪಾಕವಾದಮೇಲೆ ಮುಂದಿನ ಪ್ರಯಾಣದ ಮಾತು" ಎಂದನು.

ಕೊನೆಗೆ ಹಾಗೆ ಹೀಗೆ ಮಾತಾಗಿ, ಪ್ರತಿಪತ್ತಿನ ದಿನವೇ ಹೊರಡುವುದು ಎಂದಾಯಿತು. ಇಬ್ಬರೂ ಸಾಯಮಾಹ್ನಿಕಗಳಿಗೆ ಎದ್ದರು

ವಿಶ್ವಾಮಿತ್ರನು ಪ್ರಯಾಣಮಾಡಿದನು. ಉದ್ಧಾರವಾಗಬೇಕೆಂದು ಹಲವರು ಆತನನ್ನು ಹಿಂಬಾಲಿಸಿದರು. ಆತನು ನಕ್ಕು, "ತಾನು ದಾಟಿ ಇತರರನ್ನು ದಾಟಿಸಬೇಕು. ನಾನೇ ದಾಟಿಲ್ಲ. ಆಗಲಿ, ಅವಸರವೇನು? "ನಾನು ಕೃತಾರ್ಥನಾಗಿ ಒಂದು ಆಶ್ರಮವನ್ನು ಕಟ್ಟಿಕೊಂಡು ನಿಂತಮೇಲೆ ತಾವೆಲ್ಲರೂ ದಯಮಾಡಿಸುವಿರಂತೆ!" ಎಂದು ಸಮಾಧಾನದ ಮಾತುಗಳನ್ನು ಹೇಳಿ ಅವರನ್ನೆಲ್ಲ ಕಳುಹಿಸಿಕೊಟ್ಟು ತಾನು ಮುಂದೆ ಹೊರಟನು.

ಹಿಮಾಲಯದ ಕಡೆಗೆ ಹೋಗಬೇಕು: ವಾಮದೇವನ ಆಶ್ರಮದಲ್ಲಿ ಎರಡು ದಿನವಿದ್ದು ಮುಂದಕ್ಕೆ ಹೋಗುವುದು ಎಂದು ಒಂದು ಆಶೆ. ಇಲ್ಲಿಯೇ ಸರಸ್ವತೀ ತೀರದಲ್ಲಿ ಇದ್ದುಬಿಡೋಣ. ಆಮೇಲೆ ಹಿಮಾಲಯಕ್ಕೆ ಹೋಗುವುದು ಎಂದು ಮನಸ್ಸು. ಎಲ್ಲಿಯೇ ಇರಲಿ, ಈ ಸಲ ಏಕಾಂತವಾಗಿರಬೇಕು. ಯಾರಿಗೂ ನಾನು ಇರುವುದೇ ತಿಳಿಯಬಾರದು. ಈ ಸಲ ಸಿದ್ಧನಾಗುವವರೆಗೂ ಸಾಧ್ಯವಾದಮಟ್ಟಿಗೂ ಮೌನವನ್ನು ಅವಲಂಬಿಸುವುದು ಎಂದು ಹಲವು ಯೋಚನೆಗಳು.

ಆಯಿತು. ಈ ಸಲದ ಸಿದ್ಧಿಯೇನು? ರುದ್ರನ ಅನುಗ್ರಹವಾಯಿತು. ಅಸ್ತ್ರಸಿದ್ಧಿಯಾಯಿತು. ಆಪೋದೇವಿಯರ ಅನುಗ್ರಹವಾಯಿತು. ಸೃಷ್ಟಿಯ ರಹಸ್ಯವು ಅರ್ಥಾರ್ಥವಾಗಿ ತಿಳಿಯಿತು. ಅಶ್ವಿನೀ ದೇವತೆಗಳ ಅನುಗ್ರಹವಾಯಿತು. ದೇಹವನ್ನು ಶುದ್ಧಿಮಾಡುವುದೆಂತು ಎಂಬುದು ತಿಳಿಯಿತು.

ಇಂದ್ರನ ಅನುಗ್ರಹವಾಯಿತು. ಬೇಕೆಂದರೆ ಸ್ವರ್ಗಕ್ಕೆ ಹೋಗಿ ಬರಬಹು ದಾಯಿತು. ಅಥವಾ ಸ್ವರ್ಗವೇ ನನ್ನ ಬಳಿಗೆ ಬರುವಂತಾಯಿತು. ಆದರೂ ನನಗೆ ಬೇಕಾದುದು ಇನ್ನೂ ಬಂದಿಲ್ಲ. ಬಂದವರೆಲ್ಲ, ಬರುವುದು: ನಿನ್ನ ಆಶೆಯು ಕೈಗೂಡುವುದು ಎಂದು ನಂಬಿಕೆ ಕೊಡುತ್ತಿದ್ದಾರೆ. ಆದರೂ ಕೈಗೂಡ ಲಿಲ್ಲವಲ್ಲ! ದೇವಗುರುವು ಮಾತ್ರ ಕಾಮಕ್ರೋಧಗಳು ಬಿಟ್ಟರೆ ನೀನು ಬ್ರಾಹ್ಮಣನಾಗುವೆ ಎಂದನು. ಹಾಗಾದರೆ ಬ್ರಾಹ್ಮಣ್ಯವು ಬಿಡುವುದರಲ್ಲಿರು ವುದೆ? ಇಲ್ಲ. ಬಿಡುವುದು ಎಂದರೆ ತುಳಿಯುವುದು: ಅದಕ್ಕೆ ವಶನಾಗ ದಿರುವುದು. ಅದರಿಂದ ಕಾಮಕ್ರೋಧಗಳನ್ನು ನುಂಗಬೇಕು, ಜೀರ್ಣಿಸಿ ಕೊಳ್ಳಬೇಕು. ಅವಕ್ಕೆ ವಶನಾಗದಿರಬೇಕು. ಇಗೋ, ಈ ಎದುರಿರುವ ಮರವು ಸಸಿಯಾಗಿ, ಗಿಡವಾಗಿ, ಮರವಾಗಿ, ಈಗ ಯಾವುದಕ್ಕೂ ಜಗ್ಗದ ಹೆಮ್ಮರವಾಗಿರುವಂತೆ, ನಾನೂ ಕಾಮಕ್ರೋಧಗಳಿಗೆ ವಶನಾಗದಿರಬೇಕು. ಅಬ್ಬಾ! ಅದಷ್ಟು ಸಾಮಾನ್ಯವೇ? ಹೇಳುವಷ್ಟು ಸುಲಭವೇ? ಒಂದುವೇಳೆ ಆಯಿತು ಎನ್ನೋಣ. ಕಾಮಕ್ಕೆ ವಶನಾಗದೆ, ಕ್ರೋಧಕ್ಕೆ ಬಲಿಯಾಗದೆ, ಇರುವೆನು ಎನ್ನೋಣ. ಆಗ ಮನಸ್ಸಿನ ವ್ಯಾಪಾರಕ್ಕೆ ಕಾರಣವಾವುದು? ಯಾವುದನ್ನು ಕುರಿತು ಹಂಬಲಿಸುವುದು? ಯಾವುದರ ಹಂಬಲದಿಂದ ಮನಸ್ಸು ವ್ಯಾಪಾರದಲ್ಲಿ ತೊಡಗುವುದು?"

"ಏಕೆ ಹಾಗೆ ಯೋಚಿಸಬೇಕು? ಆಗ ಮನಸ್ಸು ರಾಜಪುರುಷನಂತಾಗು ವುದು. ರಾಜಪುರುಷನು ಕಾರ್ಯದಕ್ಷನಾಗಿ, ಕಾರ್ಯಕ್ಕೆ ಸಿದ್ಧನಾಗಿ ಕುಳಿ ತಿರುವನು. ರಾಜಾಜ್ಞೆಯು ಅವನನ್ನು ಪ್ರೇರೇಪಿಸಿ ಕಾರ್ಯರಂಗಕ್ಕೆ ಇಳಿ ಸುವುದು. ಹಾಗೆಯೇ ಕಾಮಕ್ರೋಧಗಳನ್ನು ತಿರಸ್ಕರಿಸಿದವನನ್ನು ಜಗ ತ್ಕಾರಣವಾದ ನಿಯಂತೃವಿನ ಇಚ್ಛೆಯು ವ್ಯಾಪಾರದಲ್ಲಿ ನಿಯೋಜಿಸುವುದು. ಬೃಹಸ್ಪತಿಯು ಹೇಳಲಿಲ್ಲವೆ? ಅಂತಹ ನಿಯಂತೃವೊಬ್ಬನಿರುವನೆಂದು, ಆತನ ನಿಯತಿಯಿಂದಲೇ ವಸಿಷ್ಠಪುತ್ರರ ಮರಣವಾಯಿತೆಂದು? ತ್ರಿಶಂಕುವಿನ ಕಾರ್ಯಕ್ಕೆ ವಿಘ್ನಬಂದುದೂ ಆತನಿಂದಲೇ ಅಂತಲ್ಲ? ಹೀಗಿರಲು ಆತನು ಮನಸ್ಸನ್ನು ವ್ಯಾಪಾರಮಾಡಿಸದಿರುವನೆ?"

"ಹೌದು ಹೌದು. ಆ ನಿಯಂತೃವನ್ನು ಹಿಡಿಯಬೇಕು. ಆದರೆ ನನ್ನ ಮನಸ್ಸು ಇನ್ನೂ ಅತ್ತಕಡೆ ತಿರುಗಿಲ್ಲ. ನನ್ನ ಮನಸ್ಸಿಗೆ ಕಾಮಕ್ರೋಧಗಳು

ಬೇಕಾಗಿರುವಷ್ಟು ಅದನ್ನು ತುಳಿಯುವುದು ಬೇಕಾಗಿಲ್ಲ. ನಂದಿನಿಯು ಬೇಕು ಎನ್ನಿಸಿತು. ಅದು ಸಿಕ್ಕಲಿಲ್ಲ. ಕೋಪ ಬಂತು. ಕೋಪ ಕ್ರೋಧವಾಯಿತು. ವಸಿಷ್ಠನ ಮೇಲೆ ನನ್ನದೇನೂ ನಡೆಯುವುದಿಲ್ಲ ಎಂದು ಗೊತ್ತಾದಮೇಲೆ ಈಗ ವಿಶ್ವಾಮಿತ್ರನೆಂದು ಹೆಸರಿಟ್ಟುಕೊಂಡು ಹೊರಟಿದ್ದೇನೆ. ನಾನು ಈಗ ಮಾಡುತ್ತಿರುವ ಪ್ರಯತ್ನವು ತಾನೇ ಏನು? ಕ್ರೋಧ ತನ್ನ ಹೊರರೂಪವನ್ನು ಬಿಟ್ಟು ಮತ್ತೆ ಬೀಜರೂಪಕ್ಕೆ ಹೋಗಿದೆ. ಮರವನ್ನು ಕಡಿದೆ. ಆದರೆ, ಮರದ ಬೀಜಶಕ್ತಿ ಎಲ್ಲಿ ಹೋಗಿದೆ. ಅರಳಿಯ ಮರವನ್ನು ಕಡಿದು ಬೇರೆಲ್ಲ ಶೋಧಿಸಿದರೂ, ಕೈಗೆ ಸಿಕ್ಕದೆ ಮರೆಯಲ್ಲಿದ್ದ ಯಾವುದೋ ಬೇರು ಅಲ್ಲಿಯೇ ಚಿಗುರಿಕೊಂಡು ಹೆಮ್ಮರವಾದಂತೆ ನನ್ನ ಕಾಮವು ಈಗ ಇತ್ತ ತಿರುಗಿದೆ. ಬ್ರಾಹ್ಮಣನಾಗುವ ಈ ಹಂಬಲವು ತಾನೇ ಕಾಮವಲ್ಲವೇನು? ದೇವರ ಸೃಷ್ಟಿಯಲ್ಲಿ ಎಲ್ಲಕ್ಕೂ ಒಂದೊಂದು ಸ್ಥಾನವಿದೆ ಎಂಬುದನ್ನು ಮರೆತು, ಸರ್ವರಕ್ಷಕನಾದ ಕ್ಷತ್ರಿಯನಾಗಿರುವುದೇ ಒಂದು ಅದೃಷ್ಟ ಎಂಬುದನ್ನೂ ಗಮನಿಸದೆ, ಕಾಮಕ್ರೋಧ ವಶನಾಗಿಯೇ ಸರ್ವಂಸಹನಾದ ಬ್ರಾಹ್ಮಣನಾಗಬೇಕೆಂದು ಹೊರಟಿದ್ದೇನೆ. ನಾನು ಯಾರಂತಾಗಬೇಕೆಂದು ಯತ್ನಿಸುತ್ತಿರುವೆನೋ ಅವನು ಅದೆಷ್ಟು ಮೇಲಿನ ಮಟ್ಟದವನು? ಅಬ್ಬ. ಆ ಮಟ್ಟಕ್ಕೇರುವುದು ಸಾಧ್ಯವೆ? ಪಂಚಭೂತಗಳ ಶೋಕವನ್ನು ವಹಿಸುವುದೆಂದರೆ ಸಾಮಾನ್ಯವೆ? ಇಂದ್ರನಿಗೆ ಹಿಡಿದಿದ್ದ ಭೂತವನ್ನು ಬಿಡಿಸುವುದು ಸುಲಭವೆ?"

"ಸರ್ವಂ ಸಹನಾಗುವುದು ಅಷ್ಟು ಕಷ್ಟವಿರಲಾರದು. ನನ್ನ ತಂದೆಯಾದ ಕುಶಿಕನು ಚ್ಯವನ ಮಹರ್ಷಿಯಿಂದ ಆದ ವ್ಯಥೆಯನ್ನೆಲ್ಲ ಸಹಿಸಿದನೆಂದು ಕೇಳಿಲ್ಲವೆ? ನನ್ನ ತಂದೆಗೆ ಸಾಧ್ಯವಾದುದು ನನಗೂ ಸಾಧ್ಯವಾಗಲೇಬೇಕು. ಆದರೆ ಅಹಂಕಾರವನ್ನು ತ್ಯಜಿಸುವುದೆಂತು? ವೃತ್ರ ಬಾಧೆಯನ್ನು ವಸಿಷ್ಠನು ಕಳೆದುದು ಅಹಂಕಾರವನ್ನು ಗೆದ್ದಿದ್ದುದರಿಂದ ಎಂದು ಸ್ವಯಂ ಇಂದ್ರನೇ ಹೇಳಿದನು. ಅಬ್ಬಾ! ಯಾವುದನ್ನು ಬಿಟ್ಟರೆ ನಾನು ಎನ್ನುವುದೇ ಇಲ್ಲವಾಗುವುದೋ ಅದನ್ನು ಬಿಡುವುದೇ? ಅಲ್ಲಿಗೆ ಏನು ಉಳಿದಂತಾಯಿತು? ವ್ಯಕ್ತಿತ್ವವಿಲ್ಲದ ಜೀವನವೊಂದು. ಬಹುಶಃ ಆಗ ಕಾಮ ಕ್ರೋಧಗಳು ಇಲ್ಲದಿರಬಹುದು. ದೇವಗುರುವು ಹೇಳಿದುದೂ ಇದನ್ನೇ ಏನು? ಕಾಮ ಕ್ರೋಧಗಳಿಲ್ಲದವನು ಎಂದರೆ ಅಹಂಕಾರವನ್ನು ಗೆದ್ದವನೆಂದು ಅರ್ಥವೆ?"

" ಉಹುಂ. ಸದ್ಯದಲ್ಲಿ ಸಾಧ್ಯವಿಲ್ಲ. ನನ್ನ ಮನಸ್ಸು ಇಂದು ಎಲ್ಲ ವನ್ನೂ ಬಿಡುವುದಕ್ಕೆ ಸಿದ್ಧವಾಗಿಲ್ಲ. ಮೊದಲು ಸೃಷ್ಟಿಯ ರಹಸ್ಯವನ್ನು ಭೇದಿಸುವೆನು. ಇಂದ್ರನನ್ನು ಅಲ್ಲಾಡಿಸಲು ಹೊರಟ ಮನಸ್ಸು ಲೋಕದ ಒಂದು ಮೂಲೆಯನ್ನಾದರೂ ಕಿತ್ತು ಕಟ್ಟಬೇಡವೆ ? ಬ್ರಾಹ್ಮಣನಾಗಬೇಕು. ಆದರೆ, ಆಶೋತ್ತರಗಳನ್ನೆಲ್ಲ ಕಿತ್ತಿಸೆಯುವುದಕ್ಕೆ ನನ್ನ ಮನಸ್ಸು ಸಿದ್ಧವಾಗಿಲ್ಲ ವಲ್ಲ ಏನು ಮಾಡುವುದು ? "

" ಆಯಿತು. ವಸಿಷ್ಠನು ಅಹಂಕಾರವನ್ನು ಗೆದ್ದಿರುವನು. ವಾಮ ದೇವನೋ ? ಅವನೂ ಅಹಂಕಾರವನ್ನು ಗೆದ್ದಿರಬೇಕು. ಅವನು ಯಾವಾ ಗಲೂ ಯಾವುದನ್ನೂ ಬೇಕು ಎಂದಿಲ್ಲ : ಬೇಡ ಎಂದಿಲ್ಲ. ಅವನನ್ನು ನಾನು ಬಲ್ಲೆ. ಆದರೆ ನಿಜವಾಗಿಯೂ ಬಲ್ಲೆನೆ ? ಎಷ್ಟು ನೋಡಿದರೂ ಆತನು ಕಾಮ ಕ್ರೋಧಗಳಿಂದ, ಕಾಮ ಕ್ರೋಧಗಳಿಗೆ ವಶನಾಗಿ, ಯಾವ ಕೆಲಸವನ್ನೂ ಮಾಡಿದಂತಿಲ್ಲ. ನಾವು ಒಬ್ಬರನ್ನು ಬಲ್ಲೆವು ಎನ್ನುವುದು ಏನು ? ಅವನ ಆಶೋತ್ತರಗಳು, ಅವನ ಬೇಕು, ಬೇಡಗಳು, ಇಷ್ಟೇ ನಮಗೆ ತಿಳಿದಿರುವುದು. ಅಲ್ಲಿಂದಾಚೆಗೆ ನಮಗೆ ತಿಳಿಯುವುದೇನು ? ಹಾಗಾದರೆ ಬೇಕು ಬೇಡ ಎರಡೂ ಬಿಟ್ಟರೆ, ವ್ಯಕ್ತಿಯಲ್ಲಿ ಏನೂ ಉಳಿದೇ ಇಲ್ಲವೇನು ? ಇದೆರಡೂ ಅಲ್ಲದ ಇನ್ನು ಏನೂ ವ್ಯಕ್ತಿಯಲ್ಲಿ ಇಲ್ಲವೆ ? "

" ಹೌದು, ಇನ್ನು ಏನೂ ಉಳಿದಂತಿಲ್ಲ. ನೀರಿನ ರುಚಿ, ಬಣ್ಣ, ತಂಪು, ಬಿಸಿ, ಯಾವುದೂ ನೀರಿನದಲ್ಲ. ನೀರಿಗೆ ಇದೊಂದೂ ಇಲ್ಲ. ಆದರೂ ಇದು ಯಾವುದೂ ಇಲ್ಲದ ನೀರನ್ನು ಕಂಡಿರುವವರು ಯಾರು ? ಅದರಿಂದ ಕಾಮವಿರ ಬೇಕು. ಕಾಮವನ್ನು ಸಂಪೂರ್ಣವಾಗಿ ಬಿಟ್ಟು ಬದುಕುವುದೆಂತು ? ಅದ ರಿಂದ ಕಾಮ ಕ್ರೋಧವನ್ನು ಬಿಡುವುದು ಇನ್ನೇನೋ ಒಂದು ರಹಸ್ಯವಿರ ಬೇಕು. ಆ ರಹಸ್ಯವನ್ನು ಭೇದಿಸಬೇಕು. ಸೃಷ್ಟಿಯ ಮೂಲವೇ ಕಾಮ ಎನ್ನುವಂತಿರಲು ಅದನ್ನು ತುಳಿಯುವುದು ಎಂದರೆ ಅದಕ್ಕೆ ನಮಗೆ ತಿಳಿಯದ ಅರ್ಥವಿರಬೇಕು."

ಹೀಗೆಯೇ ಇನ್ನೂ ಏನೇನೋ ಯೋಚಿಸಿಕೊಂಡು ವಿಶ್ವಾಮಿತ್ರನು ಮುಂದೆ ನಡೆದನು. ಅಂತೂ ಯಾವ ಆಶ್ರಮದಲ್ಲಿಯೂ ತಂಗಲಿಲ್ಲ. ಯಾರ

ಕಣ್ಣಿಗೂ ಬೀಳಲಿಲ್ಲ. ಕಾಡಿನಲ್ಲಿ ಮಳೆಯಾದಾಗ ಮೇಲಿನಿಂದಿಳಿದ ನೀರು ಯಾರ ಕಣ್ಣಿಗೂ ಬೀಳದೆ ಎಲ್ಲೆಲ್ಲೋ ತಲೆತಪ್ಪಿಸಿಕೊಂಡು ಓಡುವಂತೆ ಆತನೂ ಜನವಸತಿಯ ಕಡೆಗೂ ತಿರುಗದೆ ಗಂಗಾ ಯಮುನಾ ನದಿಗಳನ್ನು ದಾಟಿ ಸರಸ್ವತೀ ತೀರಕ್ಕೆ ಬಂದನು.

---

## ಮೂವತ್ತೊಂದನೆಯ ತರಂಗ

ಸರಸ್ವತೀ ತೀರದಲ್ಲಿ ಒಂದು ಪರ್ಣಶಾಲೆಯನ್ನು ಕಟ್ಟಿಕೊಂಡು ವಿಶ್ವಾಮಿತ್ರನು ಅಲ್ಲಿ ನೆಲಸಿದ್ದಾನೆ. ಒಂದು ಹುಣ್ಣಿಮೆ. ತುಂಬುತಿಂಗಳು ಅಮೃತದ ಸೋನೆಯಂತೆ ದಿಕ್ಕುವಿದಿಕ್ಕುಗಳಲ್ಲೆಲ್ಲಾ ತುಂಬಿದೆ. ಮುನೀಂದ್ರನ ಮನಸ್ಸು ಯಾವದೋ ಅನಿರ್ವಚನೀಯವಾದ ಆನಂದವನ್ನು ಅನುಭವಿಸುತ್ತಾ, ಹಿಂದೊಮ್ಮೆ ತಾನು ವಾಮದೇವನೊಡನೆ ಅಂಥದೇ ಒಂದು ಹುಣ್ಣಿಮೆಯಲ್ಲಿ ತುಂಬಿಟ್ಟಿದ್ದ ತಿಂಗಳರಾಶಿಯಂತೆ ಕಾಣುವ ಹಿಮದ ಗುಡ್ಡೆಗುಡ್ಡೆಗಳ ಹಿಮಾಲಯದಲ್ಲಿ ಮಾತನಾಡುತ್ತ ಕುಳಿತಿದ್ದುದನ್ನು ನೆನೆದುಕೊಳ್ಳುತ್ತಿದೆ. ಎತ್ತೆತ್ತ ತಿರುಗಿದರೂ ವಾಮದೇವನ ನೆನೆಪು. ಏನು ಮಾಡಿದರೂ ಮನಸ್ಸು ವಾಮದೇವನನ್ನು ಮರೆಯಲೊಲ್ಲದು.

ಸುಮಾರು ಒಂದೂವರೆ ಝಾಮವಾಗಿರಬಹುದು. ವಿಶ್ವಾಮಿತ್ರನು ಏನೋ ಯೋಚನೆಯ ಭರದಲ್ಲಿ ಎತ್ತಲೋ ಮನಸ್ಸಿದ್ದು ಅರೆ ಎಚ್ಚರದಲ್ಲಿದ್ದಾಗ ಇದ್ದಕ್ಕಿದ್ದಹಾಗೆ ಒಂದು ಪ್ರಬಲವಾದ ಗಾಳಿಯು ಪ್ರವಾಹವೊಂದು ನುಗ್ಗಿಬಂದಂತಾಗಿ ಆತನಿಗೆ ಎಚ್ಚರವಾಯಿತು. ತನ್ನನ್ನು ಹೊತ್ತುಕೊಂಡು ಹೋಗುವುದೋ ಎನ್ನುವಷ್ಟು ಬಿರುಸಾಗಿ ಬೀಸಿದ ಆ ಗಾಳಿಯಲ್ಲಿ ದೇಹವೆಲ್ಲ ಹಿಡಿದು ಕುಲುಕಿದಂತಾಗಿ ಎಚ್ಚರವಾಗಿದೆ. ಹಠಾತ್ತಾಗಿ ಒದಗಿದ ವಾತಸಂಘಾತದಿಂದ ಉಂಟಾದ ಆಶ್ಚರ್ಯವು ಕಳೆದು ಕಣ್ಣು ಎದುರಿಗಿದ್ದುದನ್ನು ನೇರವಾಗಿ ಇದೇ ಸರಿಯೆಂದು ನಿಶ್ಚಯಿಸುವುದರೊಳಗಾಗಿ ಯಾರೋ ಬಂದು ನಿಂತಿರುವುದು ಮನಸ್ಸಿಗೆ ಅರಿವಾಗಿದೆ. ಇಂದ್ರಿಯಗಳು ಪಟುವಾಗಿ ಎಚ್ಚರಗೊಂಡು ನೋಡಿದರೆ, ಅಲ್ಲಿ ವಾಮದೇವನು ಸ್ವಯಂ ಬಂದಿದ್ದಾನೆ. ವಾಮದೇವನೇ ! ಸಂದೇಹವಿಲ್ಲ.

ವಿಶ್ವಾಮಿತ್ರನು ಥಟ್ಟನೆ ಮೇಲಕ್ಕೆದ್ದನು. ಮಿತ್ರ ವಾಮದೇವನೆಂದು ಸ್ವಾಗತಿಸಲು ಕೈಹಿಡಿಯಲು ಹೋಗಿದ್ದ ಕೈ, ಥಟ್ಟನೆ ಇಂದ್ರನು ಹೇಳಿ ತೋರಿಸಿದ್ದ ವಾಮದೇವನ ನೆನೆಪು ಬಂದು, ಹಿಂದಕ್ಕೆ ಹೋಗಿ, ಇನ್ನೊಂದು ಕೈಯ್ಯ ಜೊತೆ ಸೇರಿ ಮುಗಿದು ನಿಂತಿತು. ಏನು ಹೇಳಬೇಕು? ಏನು ಮಾಡಬೇಕು? ಎಂದು ಮನಸ್ಸು ನಿರ್ಧರಿಸುವುದರೊಳಗಾಗಿ ಬಾಯಿ "ದಯಮಾಡಿಸಬೇಕು, ವಾಮದೇವ ಮಹರ್ಷಿಗಳು ದಯಮಾಡಿಸಬೇಕು. ವಸಿಷ್ಠ ಮಹರ್ಷಿಗಳ ದುಃಖವನ್ನು ಕಳೆಯಬಲ್ಲ ಮಹಾಮಹಿಮರಿತ್ತ ಬಿಜಮಾಡಬೇಕು" ಎಂದಿತು.

ವಾಮದೇವನು ಎಂದಿನಂತೆ ನಗೆಯ ಎಳೆಬೆಳಕನ್ನು ಚಿಮ್ಮುತ್ತಾ "ಹೌದು, ಹೌದು. ಅದಕ್ಕಾಗಿಯೇ ನಾನು ಬಂದುದು. ವಸಿಷ್ಠಶೋಕವನ್ನು ನಿವಾರಿಸಬೇಕೆಂದು ನಿನ್ನನ್ನು ಕೇಳಿಕೊಳ್ಳುವುದಕ್ಕಾಗಿಯೇ ನಾನೂ ಬಂದುದು" ಎಂದು ಒಂದು ಮಗ್ಗುಲಲ್ಲಿ ಬೆಳೆದಿದ್ದ ಹುಲ್ಲನ್ನು ಕಿತ್ತು ಹಾಕಿಕೊಂಡು ಕುಳಿತು ವಿಶ್ವಾಮಿತ್ರನನ್ನು ಕುಳ್ಳಿರಿಸಿಕೊಂಡನು.

ವಿಶ್ವಾಮಿತ್ರನಿಗೆ ವಾಮದೇವನ ಮಾತು ಅರ್ಥವೇ ಆಗಲಿಲ್ಲ. "ಇದೇನು ವಾಮದೇವ, ನೀನು ಆಡುತ್ತಿರುವ ಮಾತು? ನಾನು ವಸಿಷ್ಠರ ಶೋಕಕ್ಕೆ ಕಾರಣನೇನೋ ಆದೆ. ಆದರೆ, ಅದರ ನಿವಾರಣಮಾಡುವ ಶಕ್ತಿ ನನಗಿದೆಯೋ ಇಲ್ಲವೋ? ಅದು ಮಾತ್ರ ನಾನರಿಯೆ. ಆ ಶಕ್ತಿಯಿರುವ ನೀನು ಸುಮ್ಮನಿದ್ದೀಯೆ. ನನ್ನನ್ನು ಹಾಸ್ಯಮಾಡುತ್ತಿದ್ದೀಯೆ" ಎಂದು ಸಂಕೋಚದಿಂದ ಹೇಳಿದನು.

ವಾಮದೇವನು ನಕ್ಕನು. "ಹಾಗೂ ಆಗಲಿ. ನಾವು ವಿನೋದಕ್ಕಾಗಿಯೇ ಒಂದು ಮಾತನಾಡಿದೆವು ಎನ್ನೋಣ. 'ಆಗಲಿ!' ಎಂದರೆ, ನಮಗೇ ಕಷ್ಟ. ನಾವು ಅಲ್ಲಿ ತಪೋಬಲದಿಂದ ಅಂತಹದೊಂದು ಶಕ್ತಿಯನ್ನು ಕಲ್ಪಿಸಿ ಕೊಡಬೇಕಾಗುವುದು. ಅಂತಹ ಕಾಲಬಂದರೆ, ಇದುವರೆಗೆ ಮಾಡಿರುವ ತಪಸ್ಸಿನಿಂದಲೋ, ಅಥವಾ ಮುಂದೆ ಮಾಡುವ ತಪಸ್ಸಿನಿಂದಲೋ ಅಂತಹದೊಂದು ಪ್ರಭಾವವನ್ನು ಕಲ್ಪಿಸಿದರಾಯಿತು. ಅದಿರಲಿ. ನಿಜವಾಗಿಯೂ ವಸಿಷ್ಠಶೋಕವನ್ನು ಕಳೆಯಲು ನೀನು ಸಿದ್ಧವಾಗಿದ್ದೀಯೋ?"

"ಆಗಲೇ ಇಂದ್ರನೊಡನೆ ಹೇಳಿರುವೆನಲ್ಲ?"

"ಅದರಿಂದಲೇ ನಾನೂ ಬಂದುದು. ನಮಗೂ ಒಂದು ದರ್ವಿ ಬೇಕಾಗಿತ್ತು. ಈಗ ಅವರು ದುಃಖಮಗ್ನರಾಗಿ ಕುಳಿತಿರುವರು. ಆ ದುಃಖವು ಘನವಾಗಿಬಿಟ್ಟರೆ ಅದೇ ಒಂದು ಮೂರ್ತಿಯಾಗಿ ಲೋಕಲೋಕಗಳನ್ನೆಲ್ಲ ಕಾಡುವುದು. ಅದಾಗದಂತೆ ನೋಡಿಕೊಳ್ಳಬೇಕು. ಇದಕ್ಕೆ ಯಾರು ಶಕ್ತರೆಂದು ನೋಡಿದೆ. ಬ್ರಹ್ಮರ್ಷಿಯಾದ ಸಿಂಧುದ್ವೀಪನಿಂದ ಇದು ಆಗಬೇಕು. ಅಥವಾ ಆತನ ಅನುಗ್ರಹವನ್ನು ಪಡೆದವನಿಂದ ಆಗಬೇಕು. ಅದಕ್ಕಾಗಿ ನಿನ್ನ ಬಳಿಗೆ ಬಂದೆ."

"ವಾಮದೇವ, ನೀನು ಆಡಿದ ಮಾತು ನನಗೆ ಅರ್ಥವಾಗುವಂತೆ ಹೇಳು. ಸ್ವಯಂ ಇಂದ್ರನೇ ಬಂದು ಕೆಲವುಕಾಲ ಹೀಗೆ ಮೂರ್ಛಾಕ್ರಾಂತವಾಗಿರಲಿ ಎಂದು ಮಾಡಿದ ಕೆಲಸವಲ್ಲವೇ ಅದು ? "

"ನಿಜ, ವಿಶ್ವಾಮಿತ್ರ, ದೇವರಾಜನಿಗೆ ವಸಿಷ್ಠರ ಮೇಲೆ ಅಪಾರವಾದ ಸ್ನೇಹ. ಆ ಸ್ನೇಹದ ಭರದಲ್ಲಿ ತಾನು ಮಾಡುತ್ತಿರುವುದು ಏನು ಎಂಬುದನ್ನು ಯೋಚಿಸದೆ, ವಸಿಷ್ಠರ ಇಂದ್ರಿಯಗಳಲ್ಲಿದ್ದ ಸಹಿಷ್ಣುತಾಶಕ್ತಿಯನ್ನು ಸಂಕುಚಿತ ಮಾಡಿದನು. ಈಗ ಆ ದುಃಖವು ಮನಸ್ಸನ್ನು ಮೀರಿ, ದೇಹದೊಳಕ್ಕೆ ಇಳಿದು ಬಿಟ್ಟಿತು. ವಸಿಷ್ಠರಂತಹ ಬ್ರಹ್ಮಚಾರಿಯ ದೇಹದೊಳಕ್ಕೆ ಪ್ರವೇಶಿಸಿ, ಅದು ವೀರ್ಯವನ್ನು ಮುಟ್ಟಿತೆಂದರೆ, ಆ ವೀರ್ಯವು ದುಷ್ಟವಾಗಿ ಹೊರಬೀಳುವುದು. ಆ ಮಹಾನುಹಿಮನ ವೀರ್ಯವು ವ್ಯರ್ಥವಾಗುವುದಿಲ್ಲವಾಗಿ ಅದು ಕೂಡಲೇ ಸದ್ಯೋಗರ್ಭವಾಗಿ ಮೂರ್ತಿಯಾಗಿ ನಿಲ್ಲುವುದು. ದುರ್ವೀರ್ಯವಾದುದರಿಂದ ಅದು ದುಷ್ಟನಾಗಿ ಲೋಕಕಂಟಕವಾಗುವುದು. ಇಂತಹ ಅನಾಹುತವಾಗ ಬಾರದೆಂದು, ಸಿಂಧುದ್ವೀಪರ ಅನುಗ್ರಹಕ್ಕೆ ಪಾತ್ರನಾದ ನಿನ್ನ ಬಳಿಗೆ ಬಂದೆ."

"ಸಿಂಧುದ್ವೀಪರ ಬಳಿಗೇಕೆ ಹೋಗಲಿಲ್ಲ ? "

"ಅವರೀಗ ಒಂದು ದೀರ್ಘ ಸತ್ರದಲ್ಲಿ ತೊಡಗಿದ್ದಾರೆ. ಅಲ್ಲದೆ, ನೀನು ನನಗೆ ಬೇಕಾದವನು. ನಾನು ನಿನ್ನನ್ನು ಈ ಕಾರ್ಯಕ್ಕೆ ಉಪಯೋಗಿಸುವುದರಿಂದ ನಿನಗೂ ಒಂದು ಅನುಕೂಲವುಂಟು. ಅದಕ್ಕಾಗಿ ನಿನ್ನಲ್ಲಿಗೆ ಬಂದೆ. ನೀನು ಸಿದ್ಧವಷ್ಟೆ ? "

"ನಿನ್ನ ಮಾತಿಗೆ ಪ್ರತಿಯಿಲ್ಲ. ಆದರೆ, ನಾನೇನು ಮಾಡಬೇಕೋ ಅದನ್ನೇ ನೀನು ಹೇಳಲಿಲ್ಲವಲ್ಲ ! "

"ನೀನು ಮಾಡಬೇಕಾದುದಿಷ್ಟೆ ! ಈ ಸರಸ್ವತಿಯನ್ನು ಪ್ರಾರ್ಥಿಸಿ, ಈಕೆಯು ಪ್ರವಾಹವಾಗಿ ಬಂದು ವಸಿಷ್ಠಮಹರ್ಷಿಗಳನ್ನು ಕೊಚ್ಚಿಕೊಂಡು ಹೋಗುವಂತೆ ಆಜ್ಞೆ ಮಾಡು."

ವಿಶ್ವಾಮಿತ್ರನಿಗೆ ಏಕೋ ಹೆದರಿಕೆಯಾಯಿತು. ಅಂದು ಆಶ್ರಮವನ್ನೇ ಏಕಾಪೋಶನವಾಗಿ ಸ್ವಾಹಾ ಮಾಡುವೆನೆಂದು ಬಿಲ್ಲುಹಿಡಿದು ನಿಂತಿದ್ದವನು ಇಂದು ವಸಿಷ್ಠರನ್ನು ಕೊಚ್ಚಿಸು ಎಂದರೆ ನಡುಗುತ್ತಾನೆ.

ವಾಮದೇವನಿಗೆ ಅರ್ಥವಾಯಿತು. "ವಿಶ್ವಾಮಿತ್ರ, ನೀನು ಕ್ಷತ್ರಿಯ. ನಿನ್ನ ರಜೋಗುಣವು ಪ್ರವೃದ್ಧವಾಗಲಿ. ನಿನ್ನ ತಪೋಬಲದಿಂದ ಸಂಪಾದಿಸಿ ರುವ ಆಪೋದೇವಿಯರ ರಹಸ್ಯವನ್ನು ಇಂದು ಪ್ರಯೋಗಿಸು. ಸರಸ್ವತೀ ನದಿಯು ಸತ್ವಪ್ರಧಾನವಾದ ನೀರಿನವಳು. ಈಕೆಯು ನಿನ್ನ ಸ್ತುತಿಯಿಂದ ಪ್ರಸನ್ನಳಾಗಿ ತನ್ನ ಸಾತ್ವಿಕ ಜಲದಿಂದ ವಸಿಷ್ಠರಿಗೆ ಅಭಿಷೇಕ ಮಾಡಲಿ. ಆದರೆ ಬರಿಯ ಅಭಿಷೇಕದಿಂದ ಆ ಆತಂಕವು ಕಳೆಯುವುದಿಲ್ಲವಾಗಿ ಹನ್ನೆರಡು ಯೋಜನ ದೂರ ಆಕೆಯು ಆತನ ಶರೀರವನ್ನು ಹೊತ್ತುಕೊಂಡು ಹೋಗಲಿ. ಆಗ ಆ ಶರೀರದಲ್ಲಿ ಕೂಪಕೂಪಗಳಿಗೂ ವ್ಯಾಪಿಸಿರುವ ದುಃಖವು ಅಲ್ಲಿಯೇ ಜೀರ್ಣವಾಗಿ ಆ ಸರಸ್ವತಿಯ ಉದಕದಲ್ಲಿ ಲೀನವಾಗಿ ಆ ಮಹಾಪುರುಷನು ಶುದ್ಧನಾಗುವನು. ಅಷ್ಟೇ ಅಲ್ಲ. ಅದರಿಂದ ನಿನಗೂ ಪ್ರಯೋಜನವಾಗುವುದು. ನೀನು ವಸಿಷ್ಠರಮೇಲೆ ಮತ್ಸರವನ್ನು ಇಟ್ಟಿದ್ದೆ. ಈಗ ಬೇಡವೆಂದು ನೀನು ಬಿಟ್ಟಿದ್ದರೂ ಅದು ನಿನ್ನ ಹೃದಯದ ಅಂತರಾಂತರದಲ್ಲಿ ವಾಸನಾಮಯವಾಗಿ ಕುಳಿತಿದೆ. ಅದು ಈಗ ಈ ವಸಿಷ್ಠರಿಗೆ ಉಂಟಾಗುವ ಸೋಲಿನಿಂದ ಕಳೆದು ಹೋಗಿ ನಿನ್ನ ಮನಸ್ಸು ನಿರ್ಮಲವಾಗಲಿ. ಅಲ್ಲದೆ, ನೀನು ವಸಿಷ್ಠಶೋಕದಲ್ಲಿ ಅರ್ಧವನ್ನು ಅನುಭವಿಸುವುದಾಗಿ ಒಪ್ಪಿರುವೆ. ಈಗಿರುವಂತೆಯೇ ಇಷ್ಟು ಗಾಢ ವಾಗಿದ್ದರೆ ಆ ಶೋಕವನ್ನು ನೀನು ಅನುಭವಿಸಲಾರೆ. ಅದರಿಂದ ಈಗ ಈ ಸರ ಸ್ವತೀ ನದಿಯನ್ನು ಪ್ರಾರ್ಥಿಸು. ಈಕೆಯು ಮೂರ್ಛೆಯಲ್ಲಿರುವ ವಸಿಷ್ಠರ ದೇಹ ವನ್ನು ಹನ್ನೆರಡು ಯೋಜನ ದೂರ ಹೊಡೆದುಕೊಂಡು ಹೋಗಲಿ. ಮೊದಲು ಮಾಡು. ಆಗಲೇ ಅರ್ಧರಾತ್ರಿಯಾಗುತ್ತ ಬಂತು. ಇನ್ನು ದೇವತೆಗಳ ಸಂಚಾರಕಾಲವು ನಿಲ್ಲುವ ಹೊತ್ತು. ಈಗಲೇ ಪ್ರವಾಹವು ಬರಲಿ. ತಾಮಸ ವೇಳೆಯಲ್ಲಿ ತಾಮಸಿಕಕೃತ್ಯವೊಂದು ನಡೆದು ತಮೋಗುಣದ ಆವೇಗವಿಳಿಯಲಿ.

ವಿಶ್ವಾಮಿತ್ರನು ಮರುಮಾತನಾಡದೆ ಸಮಾಧಿಯಲ್ಲಿ ನಿಂತನು. ಅಪ್ಪೋ ದೇವಿಯರನ್ನು ಅನುಸಂಧಾನ ಮಾಡಿದನು. ಅವರೂ ಪ್ರಸನ್ನೆಯರಾಗಿ ಬಂದರು. ಆತನು ಅವರನ್ನು ವರವನ್ನು ಯಾಚಿಸಿದನು. ಅವರೂ ಅನು ಗ್ರಹಿಸಿದರು.

ಸರಸ್ವತಿಯು ಉಬ್ಬಿದಳು. ಅಷ್ಟು ನೀರು ಎಲ್ಲಿಂದ ಬಂತೋ? ಅಂತೂ ರೆಪ್ಪೆ ಹೊಯ್ದು ಬಿಡುವುದರೊಳಗಾಗಿ ಬೆಟ್ಟಗುಡ್ಡಗಳನ್ನು ಬೇಕಾದರೂ ಹೊಡೆದುಕೊಂಡು ಹೋಗುವಂತಹ ನೀರುಗಳು ಅಬ್ಬರಿಸಿ ಅಬ್ಬರಿಸಿ ಮೇಲೆ ಮೇಲೆ ಬಂದುವು. ಮೃದುವಾಗಿ ನಗುನಗುತ್ತ ಮಂದಹಾಸದ ಲಹರಿಗಳಂತೆ ಸರಿಯುತ್ತಿದ್ದ ಶುಭ್ರವಾದ ಚೊಕ್ಕಬೆಳ್ಳಿಯ ಪ್ರವಾಹದಂತೆ ಹರಿಯುತ್ತಿದ್ದ ಸರಸ್ವತಿಯು ರೋಷಾವೇಶಸಂಪನ್ನಳಾಗಿ ಪ್ರಲಯಕಾಲದ ಪ್ರವಾಹವೆಂಬಂತೆ ಆರ್ಭಟಿಸುತ್ತಾ ಹೊರಟಳು. ಸುಂದರವಾದ ವೇಣುನಾದವು ಪರ್ವತ ವಿಭೇದಿ ಯಾದ ಅಶನಿಗರ್ಜನವಾದಂತೆ, ಕೈಯಲ್ಲಿ ಹಿಡಿದಿದ್ದ ಹುಲ್ಲಿನಕಡ್ಡಿಯು ತೊಲೆಯ ತುಂಡಾದಂತೆ, ರಸಾಸ್ವಾದಿನಿಯಾದ ಸಭೆಯಲ್ಲಿ ಕುಳಿತು ಮಾತ ನಾಡುವ ವಾಗ್ಮಿಯ ವಚೋವೈಖರಿಯು ಪುಂಖಾನುಪುಂಖವಾಗಿ ಹೊರಡು ವಂತೆ, ಸರಸ್ವತಿಯು ಹೊರಳಿ ಹೊರಳಿ ಬರುತ್ತಿದ್ದಾಳೆ. ಆದರೆ ಒಂದು ವಿಶೇಷ. ನೀರಿನಲ್ಲಿ ಬಿಳಿದಲ್ಲದ ಬೇರೆ ಬಣ್ಣವಿಲ್ಲ. ಪ್ರವಾಹದ ಉಬ್ಬರ ದಲ್ಲಿ ಆನಂದದಿಂದ ಕುಣಿದು ಕುಪ್ಪಳಿಸುವ ಮೀನುಗಳ ಬಿಳುಪೂ ಬೇರೆಯಾಗಿ ಒಡೆದು ಕಾಣಿಸದಷ್ಟು ಶುದ್ಧವಾದ ಶುಭ್ರವರ್ಣ. ತೀರದ ಮರಗಳು ನೀರಿನ ಸೆಳೆತವನ್ನು ತಡೆಯಲಾರದೆ ಉರುಳಿಬಿದ್ದು ಕೊಚ್ಚಿಹೋಗುತ್ತಿವೆ. ಅವುಗಳ ಹಸುರುಬಣ್ಣ ನೀರಲ್ಲಿ ಪ್ರತಿಫಲಿಸಿ ಕಾಣುವಷ್ಟು ತಿಳಿಯಾಗಿದೆ ನೀರು. ಮರ ಗಳು ಉರುಳಿದಂತೆ, ಅಲ್ಲಲ್ಲಿ ದಡಗಳೂ ಉರುಳಿ ನಾನಾ ವರ್ಣದ ಮಣ್ಣೂ ಕೊಚ್ಚಿಬರುತ್ತಿದೆ. ಆದರೇನು? ಮಣ್ಣುಗಳು ತಮ್ಮ ಅಶುಭ್ರವರ್ಣವನ್ನು ಸರಸ್ವತಿಗೆ ಕೊಟ್ಟರೆ ಎಲ್ಲಿ ಅಪಚಾರವಾದೀತೋ ಎಂದು ಹೆದರಿ ತಮ್ಮತಮ್ಮ ಬಣ್ಣವನ್ನು ತಾವು ತಾವೇ ಮುದುರಿಕೊಂಡು ಮುಳುಗಿ ತಳಕ್ಕಿಳಿದು ಕುಳಿ ತುವೋ ಎಂಬಂತೆ, ಬೇರೆಬೇರೆ ಬಣ್ಣಗಳು ಕಂಡರೂ ಕೂಡಲೇ ಕದರಿಹೋಗು ತ್ತಿವೆ. ಅಬ್ಬಾ! ಆ ಆರ್ಭಟ! ಆ ಮೊರೆತ! ಆ ಅಬ್ಬರ! ಅದೆಷ್ಟು!

ವಾಮದೇವನು ಹಾಗೆ ಕಣ್ಣಿಟ್ಟು ನೋಡುತ್ತಿದ್ದ. "ಅದೋ ಅದೋ

ವಿಶ್ವಾಮಿತ್ರ, ನೋಡು ನೋಡು, ಗುರುದೇವನ ದೇಹ ಕರಿಯ ಕಂಬಳಿಯಲ್ಲಿ ಕಟ್ಟಿರುವ ಮಿಂಚಿನ ಮೂಟೆಯಂತೆ ಕೊಚ್ಚಿ ಹೋಗುತ್ತಿದೆ" ಎಂದನು.

ವಿಶ್ವಾಮಿತ್ರನೂ ಕಂಡನು. ಅವನಿಗೆ ಅದನ್ನು ನೋಡಲಾಗಲಿಲ್ಲ ನೋಡಿ ಸಹಿಸಲಾಗಲಿಲ್ಲ. ಕಣ್ಣು ಮುಚ್ಚಿಕೊಂಡಿತು. ಕಣ್ಣಿನಿಂದ ನೀರು ಹನಿಹನಿಯಾಗಿ ತೊಟ್ಟಿಕ್ಕುತ್ತಿತ್ತು. ಪ್ರವಾಹದ ಅಲೆಗಳು ಅವನು ಕುಳಿತಿದ್ದ ಬಂಡೆಯನ್ನು ಅಪ್ಪಳಿಸಿ ನೀರಿನ ತುಂತುರುಗಳನ್ನು ಚುಮುಕಿಸುತ್ತಿದ್ದರೂ ಮೈಯೆಲ್ಲ ಬೆಂಕಿಯ ಸೆಕೆಯಲ್ಲಿ ಬೆಂದಂತೆ ಆತನಿಗೆ ಭಾಸವಾಗುತ್ತಿತ್ತು.

ವಾಮದೇವನು "ಧನ್ಯ, ಧನ್ಯ, ವಿಶ್ವಾಮಿತ್ರ, ನೀನು ಧನ್ಯ. ನೀನು ಬ್ರಹ್ಮರ್ಷಿಯು ಮಾತ್ರವೇ ಅಲ್ಲ: ಸಪ್ತರ್ಷಿಗಳಲ್ಲಿಯೂ ಒಬ್ಬನಾಗುವುದಕ್ಕೆ ಯೋಗ್ಯನಾದವನು" ಎಂದು ಮುಕ್ತಕಂಠನಾಗಿ ಹೊಗಳಿದನು.

ವಿಶ್ವಾಮಿತ್ರನಿಗೆ ಅದೂ ಕೇಳಿಸಲಿಲ್ಲ. ದೇವತೆಗಳು ಹೌದು ಹೌದು ಎಂದು ಸಂತೋಷದಿಂದ ಅಭಿನಂದಿಸಿದುದು ಆನಂದ ಪರವಶನಾದ ವಾಮದೇವನಿಗೂ ಕೇಳಿಸಲಿಲ್ಲ: ದುಃಖಪರವಶನಾಗಿದ್ದ ವಿಶ್ವಾಮಿತ್ರನಿಗೂ ಕೇಳಲಿಲ್ಲ.

---

## ಮೂವತ್ತೆರಡನೆಯ ತರಂಗ

ವಿಶ್ವಾಮಿತ್ರನ ದುಃಖವು ಬಹುಕಾಲವಿರಲಿಲ್ಲ. ಸುಡುವ ಬೇಸಗೆಯ ಹಿಂದೆಯೇ ನೀರು ಕರೆಯುವ ಮಳೆಗಾಲವೂ, ಅದರ ಹಿಂದೆಯೇ, ಕೊರೆ ಕೊರೆಯುವ ಚಳಿಗಾಲವೂ ಬರುವಂತೆ, ದುಃಖವು ಕೆಲವು ಕಾಲವಿದ್ದು ಮಾಯವಾಗಿ ಇನ್ನೊಂದು ಹೊಸ ಭಾವವು ಮೂಡಿತು. ದಕ್ಷಿಣಾಯನವು ಕಳೆಯುತ್ತ ಬಂದು ಸೂರ್ಯನು ಉತ್ತರ ದಿಕ್ಕಿಗೆ ಹೋಗುವ ಕಾಲವು ಬಂದಿದೆ. ಅಲ್ಲಲ್ಲಿ ಒಂದೊಂದು ಮರ. ಎಲ್ಲೋ ಒಂದೆರಡು ಚಿಗುರಿಟ್ಟು, ಹಳೆಯ ಸೀರೆಯುಟ್ಟ ಹಳ್ಳಿಗರ ನಡುವೆ ಹೊಸ ಸೀರೆಯುಟ್ಟು ಮೆರೆಯುವ ಹೊಸ ಹೆಣ್ಣಿನ ಹಾಗೆ ನಿಂತಿದೆ.

ವಿಶ್ವಾಮಿತ್ರನು ಇದುವರೆಗೂ, ಅದೇನೋ, ಹೊರಗಿನ ಕಣ್ಣಿಂದ ಜಗತ್ತಿನ ಸೌಂದರ್ಯವನ್ನು ಅಷ್ಟಾಗಿ ಗಮನಿಸುತ್ತಿರಲಿಲ್ಲ. ಈಗ ಒಳಗೆ ಏನೋ ಒಂದು ಮಧುರಭಾವ ಬಂದಿದೆ. ಅಂತಃಪ್ರಸನ್ನತೆಯು ಬಹಿಃಪ್ರಸನ್ನತೆಯನ್ನೂ ತಂದಿತೇನೋ ಎಂಬಂತೆ, ಈಗ ಎಲ್ಲಾದರೂ ಏನಾದರೂ ಒಂದು ಹೂವು, ಹಣ್ಣು, ಚಿಗುರು, ಏನು ಕಂಡರೂ ಮನಸ್ಸು ಅಲ್ಲಿ ಒಂದು ಗಳಿಗೆ ನಿಂತು ಏನೋ ಹೊಸದು ಕಂಡಂತೆ ಉತ್ಸಾಹ ಪಡುತ್ತಿದೆ. ಹಗುರವಾದ ಮನಸ್ಸೂ ಸೃಷ್ಟಿಯಲ್ಲಿ ಏನೋ ಆತ್ಮೀಯತೆಯನ್ನು ಕಂಡು, ಸಿಕ್ಕಿದ ಸೊಗಸಿನೊಡನೆ ಒಂದು ಗಳಿಗೆ ಆಟವಾಡಬೇಕೆಂದು ನಿಂತುಕೊಂಡಂತೆ ಇದೆ.

ಮೊದಲು ವಿಶ್ವಾಮಿತ್ರನು ನದಿಗೆ ಸ್ನಾನಕ್ಕೆ ಹೋದರೆ ಆತನಿಗೆ ಬೇಕಾಗಿದ್ದುದು ಪಂಚಭೂತಮಾರ್ಜನ. ದೇಹದಲ್ಲಿರುವ ಭೂತ ಭೂತಗಳನ್ನೆಲ್ಲ ನಿರ್ಮಲ ಮಾಡುವುದೊಂದೇ ಕೆಲಸ. ಈಗ ಇನ್ನೂ ಅಷ್ಟು ಹೆಚ್ಚಿದೆ. ಒಳಗೆ ಭೂತಗಳೆಲ್ಲ ನಿರ್ಮಲವಾಗುತ್ತಿದ್ದರೆ ಹೊರಗೆ ದೇಹದ ಕಾಂತಿಯು ಹೆಚ್ಚಿತೇ ಇಲ್ಲವೇ ಎಂದು ನೋಡಿಕೊಳ್ಳುವ ಭಾವವೊಂದು ಹುಟ್ಟಿದೆ. ಯಾರೋ ತನ್ನನ್ನು ನೋಡುತ್ತಿರುವಂತೆ, ಅವರು ಮೆಚ್ಚದಿದ್ದರೆ ತನಗೇನೋ ನಷ್ಟವಾದಂತೆ, ಭಾಸವಾಗುತ್ತದೆ. ಎಲ್ಲಿ ಯಾವ ವೇಳೆಯನ್ನು ನೋಡಲಿ, ಅದರ ಹಿಂದೆ ಯಾರೋ ತನಗೆ ಬೇಕಾದವರು ಸುಳಿದಾಡುತ್ತಿರುವರು, ಹೋಗಿ ನೋಡಬೇಕು ಎನ್ನಿಸುತ್ತದೆ. ಕಾಲು ದಾರಿಯಲ್ಲಿ ಹೋಗುತ್ತಿದ್ದರೆ, ಹತ್ತಿರದಲ್ಲಿಯೇ ಯಾರೋ ಪ್ರಿಯಜನರು ಬರುತ್ತಿರುವರು ಎಂಬಂತಾಗಿ ಹಿಂತಿರುಗಿ ನೋಡುವಂತಾಗುತ್ತದೆ. ಪರ್ಣಶಾಲೆಯ ಬಾಗಿಲಲ್ಲಿ ಜಗತಿಯಮೇಲೆ ಕುಳಿತಿದ್ದರೆ ಯಾರೋ ಒಳಗೆ ಓಡಾಡುತ್ತಿರುವಂತೆ ಹೊಳೆಯುತ್ತದೆ. ಒಳಗೆ ಕುಳಿತಿದ್ದರೆ ಈಚೆ ತನ್ನನ್ನೇ ನೋಡಬೇಕೆಂದು ಯಾರೋ ಬಂದು ಸುಳಿದಾಡುತ್ತಿರುವರು ಎಂದು ಮನಸ್ಸು ತವಕಪಡುತ್ತದೆ.

ವಿಶ್ವಾಮಿತ್ರನಿಗೆ ಅದೇ ಒಂದು ಚೋದ್ಯ. ತನ್ನನ್ನು ನೋಡುವುದಕ್ಕೆ ಯಾರೂ ಬರುವುದಿಲ್ಲ: ಬರುವವರು ಯಾರೂ ಇಲ್ಲ ಎಂದು ಗೊತ್ತಿದ್ದರೂ ಆಗಾಗ ಹೊರಗೆ ಹೋಗಿ ನೋಡುತ್ತಾನೆ. ಮೊದಲು ಪರ್ಣಶಾಲೆಯಲ್ಲಿ ಏನಿದೆ ಏನಿಲ್ಲ ಎಂಬುದನ್ನು ಗಮನಿಸದೆ ಯಾವುದೋ ಗುರಿಗಾಗಿ ಹೆಣಗುತ್ತಿದ್ದ ಮನಸ್ಸು ಸುತ್ತಲೂ ನೋಡಿ, "ಏನಿದು ? ಗೆಡ್ಡೆಗೆಣಸೇ ಆಗಲಿ ಒಂದು ಪಕ್ಷ

ಕ್ಕಾಗುವಷ್ಟಾದರೂ ಇರದಿದ್ದರೆ ಹೇಗೆ ? ಎನ್ನಿಸುವುದು. ಎಲ್ಲೆಲ್ಲೂ ತುಂಬಿರ ಬೇಕು : ತುಂಬಿರಬೇಕು ಎನ್ನುವುದು. ತನಗೆ ಬೇಡದಿದ್ದ ವಸ್ತುಗಳನ್ನು ಸಂಗ್ರಹಿಸಬೇಕೆಂಬ ಬುದ್ಧಿಯು ಒಮ್ಮೊಮ್ಮೆ ತಲೆದೋರಿ ತುಂಬಿದ ರಾಜ್ಯವೇ ಬೇಡ ಎಂದವನಿಗೆ ಈಗೇಕೆ ಈ ಬುದ್ಧಿ ಎನ್ನಿಸಿ ನಗೆಯು ಬರುವುದು. ಅಂತೂ ಒಟ್ಟಿನಲ್ಲಿ ವಿಶ್ವಾಮಿತ್ರನಿಗೆ ಇಂದು ಯಾರಾದರೂ ಜೊತೆಯಲ್ಲಿದ್ದರೆ ! ಎನ್ನುವಂತಿದೆ. ಹಾಗೆಂದು ವಾಮದೇವನ ಆಶ್ರಮಕ್ಕೇ ಆಗಲಿ ಜಮದಗ್ನಿಯ ಆಶ್ರಮಕ್ಕೇ ಆಗಲಿ ಹೋಗುವುದಕ್ಕೆ ಇಷ್ಟವಿದ್ದಂತಿಲ್ಲ. ಯಾರಾದರೂ ತಮ್ಮ ಆಶ್ರಮಕ್ಕೆ ಬರಬಾರದೇ ? ಎನ್ನಿಸುತ್ತದೆ.

ಬರಬರುತ್ತ ವಿಶ್ವಾಮಿತ್ರನಿಗೆ ಸಂಗದ ಬಯಕೆ ಬಲಿಯಿತು. ಏಕಾಂತ ವನ್ನು ಬಯಸಿ ಜನಸಂಗವೇ ಬೇಡವೆಂದು ದುರ್ಗಮವಾದ ಸರಸ್ವತೀ ತೀರದಲ್ಲಿ ಬಂದು ನಿಂತವನಿಗೆ ಏಕೋ ಏನೋ ಏಕಾಂತವೇ ಬೇಡವಾಗುತ್ತಿದೆ. ಹಕ್ಕಿ ಯೊಂದು ಹಾಡುತ್ತಿದ್ದರೆ, ಅದರ ಏಕಸ್ವರಾಲಾಪವನ್ನೇ ರಾಗಾಲಾಪವೆಂದು ಕೊಂಡು ಭ್ರಾಂತಿಪಟ್ಟು, ಅದನ್ನು ಸಂಗೀತವಾಗಿ ಅಂಗೀಕರಿಸಿ, ಆ ದನಿಯಲ್ಲಿ ಇದ್ದ ಇಲ್ಲದ ಅರ್ಥವನ್ನೆಲ್ಲ ತುಂಬಿ, ತಾನು ತುಂಬಿದ ಅರ್ಥವನ್ನೇ ಪರಾಭವಿ ಸುತ್ತ ನಿಲ್ಲುತ್ತಾನೆ. ಹಾರಿಹೋಗುತ್ತಿದ್ದ ಒಂದು ಬಕವು ಎಲ್ಲೋ ಕೊಕ್ ಎಂದರೆ ತಲೆಯೆತ್ತಿ ನೋಡಿ "ಪಾಪ, ಪ್ರಿಯ ಜನವನ್ನು ಬಿಟ್ಟು ಬಂದಿದೆ ಯೇನೊ ? ತನ್ನವರಿಗೆ ಏನಾಗಿದೆಯೋ ಎಂದು ಓಡುತ್ತಿದೆ. ಅಬ್ಬಾ, ಆ ಒಂದು 'ಕೊಕ್' ನಲ್ಲಿ ಅದೆಷ್ಟು ಭಾವವಿದೆ ! ಅದೆಷ್ಟು ಅರ್ಥವಿದೆ !" ಎಂದು ಕೊಳ್ಳುತ್ತಾನೆ. ಹಾಗೆಯೇ ನದಿಯ ತೀರದಲ್ಲಿ ಸೊಂಪಾಗಿ ಬೆಳೆದ ಒಂದು ಮರದಲ್ಲಿ ಮೃದುವಾಗಿ ಚಿಗುರೊಡೆದು ಇನ್ನೂ ಅರ್ಥಸ್ಫುಟವಾಗಿ ಕಾಣಿಸುತ್ತಿ ದರೆ, "ಹೌದು, ಹೌದು. ತಾನು ಸೌಂದರ್ಯವತಿಯೆಂಬುದನ್ನು ಅರಿತ ಯೌವನವತಿಯು ತನಗೆ ಬೇಕಾದವರು ಅಲ್ಲಿ ಇದ್ದಾರೆಯೇ ಎಂದು ತುಂಬಿದ ನಾಚಿಕೆಯಿಂದ ನೋಡಲಾರದೆ ನೋಡಲಾರದೆ ಬಗ್ಗಿ ನೋಡುವಂತಿದೆ" ಎಂದು ಕೊಂಡು ಮುಸಿಮುಸಿ ನಗುತ್ತಾನೆ. ದೂರದಲ್ಲಿ ಒಂದು ಸಣ್ಣ ಕಮಲದ ಮೊಗ್ಗು ತನ್ನ ಭಾರವನ್ನೂ ತಡೆಯಲಾರದೆ ಗಾಳಿಯಲ್ಲಿ ಅಲೆಯುವ ದಂಟಿನ ಮೇಲೆ, ಅಲ್ಲಾಡುತ್ತಿದ್ದರೆ, "ಅಬ್ಬಾ ! ಎಂತಹ ನೃತ್ಯಕಲಾ ಖನಿಯಿದು, ಹಸಿರು ಸೀರೆಯುಟ್ಟು ಕೆಂಪು ರವಕೆ ತೊಟ್ಟು ಗೆಜ್ಜೆಯಿಲ್ಲದೆ ಸಣ್ಣ ಕುಣಿತ

ಕುಣಿಯುವ ಸೊಬಗಿನ ಕಳ್ಳಹೆಣ್ಣೆ ! " ಎಂದುಕೊಳ್ಳುತ್ತಾನೆ. ಕಣ್ಣಿಗೆ ಕಾಣಿಸದ ಮರೆಯಲ್ಲಿ ಅಡಗಿರುವ ಕಲ್ಲನ್ನು ಹತ್ತಿ ಕೆಳಕ್ಕೆ ಇಳಿಯುವ ನೀರಿನ ಸಣ್ಣ ದನಿ ಕೇಳಿಸಿದರೆ, ಯಾರೋ ಸಂಗೀತಕ್ಕೆ ಶ್ರುತಿ ಸಿದ್ಧಮಾಡಿಕೊಳ್ಳುತ್ತಿದ್ದಾರೆ" ಎನ್ನಿಸಿ ತಲೆಯತ್ತ ತಿರುಗುತ್ತದೆ.

ಹೀಗೆ ವಿಶ್ವಾಮಿತ್ರನು ತನ್ನ ವಿಶ್ವಮೈತ್ರಿಯಲ್ಲಿ ಮುಳುಗಿ ಸುತ್ತುಮುತ್ತಿನ ಸೃಷ್ಟಿಯಲ್ಲಿ ಅದುವರೆಗೆ ಕಾಣದಿದ್ದ ಹೊಸದೊಂದು ಸಂತೋಷತಾನವನ್ನು ಕಂಡು, ಆ ತಾನದಲ್ಲಿ ತಾನೂ ಬೆರೆತು ಒಂದು ಸ್ವರ್ಗೀಯ ಸಂಗೀತ ಮೇಳವನ್ನು ಮಾಡುತ್ತಿದ್ದಾನೆ. ಆತನ ಮನಸ್ಸು ಸಂತೋಷವನ್ನಲ್ಲದೆ ಇನ್ನು ಏನನ್ನೂ ತನ್ನಹತ್ತಿರಕ್ಕೆ ಬರದಂತೆ ಅಡ್ಡಿಮಾಡಿ, ತಾನೂ ಸಂತೋಷವೇ ಆಗಿಹೋಗಿದ್ದರೆ ಹೇಗೆ ಇರಬಹುದೋ ಹಾಗೆ ನಲಿಯುತ್ತಿದೆ. ಕೂಗುವ ಹಕ್ಕಿಯೊಡನೆ ಹಾಡಿ, ಕೂಗುವ ಬಳ್ಳಿಯೊಡನೆ ಕುಣಿದು, ಹರಿಯುವ ನೀರಿನೊಡನೆ ಓಡಿ ಲೋಕವನ್ನೆಲ್ಲ ಸುತ್ತಿಬರುವ ಮನಸ್ಸು ಬೆಟ್ಟವೇನು ಮಹಾಭಾರ ಎಂಬ ಲಘುವೃತ್ತಿಯಲ್ಲಿ ವಿಹರಿಸುತ್ತಿದೆ.

ವಿಶ್ವಾಮಿತ್ರನಿಗೆ ಈಗ ಏನೋ ಮರುಕ: ಏನೋ ಒಂದು ಕರುಣಾಮಯ ವೃತ್ತಿ. ಎಲ್ಲಿ ಏನು ಕಂಡರೂ ಚೆನ್ನಾಗಿದೆ. ಇನ್ನೂ ಕೆಲವು ದಿನವಾದರೂ ಹೀಗೆಯೇ ಇರಲಿ ಎಂಬ ಆಶೀರ್ವಾದಮಾಡುವ ಭಾವ. ಕೊರೆಯುವ ಹಿಮಂತದ ಮುಂಜಾವದಲ್ಲಿ ಸ್ನಾನಕ್ಕೆಂದು ನದಿಗೆ ಅಭ್ಯಾಸವು ಕರೆದುಕೊಂಡು ಹೋದರೆ, ಹಿಮದಗಡ್ಡೆಯಂತಿರುವ ಆ ನೀರಿನಲ್ಲಿ ಅರ್ಧದೇಹವು ಮುಳುಗಿ ಇನ್ನರ್ಧದೇಹವು ಹಿಮದ ತಂಗಾಳಿಯಲ್ಲಿ ನಿಂತಿದ್ದರೆ, ಅಭ್ಯಾಸಬಲದಿಂದ ಸಂಕಲ್ಪವನ್ನೇ ಹೇಳುತ್ತಿದ್ದರೂ ಮನಸ್ಸು ಈ ಚಳಿಕೊರೆಗಳಲ್ಲಿಯೂ ಏನೋ ಸೌಖ್ಯವಿದೆ. ಅದನ್ನು ಕಾಣದಿರುವುದರಿಂದ ಇದು ಈಗ ನಮಗೆ ಬೇಡವೆನ್ನಿಸುತ್ತದೆ. ಆ ಸೌಖ್ಯವನ್ನು ಕಂಡರೆ ಇದೂ ಪ್ರಿಯವಾಗುತ್ತದೆ. ಆ ರಹಸ್ಯವನ್ನು ಭೇದಿಸಬೇಕು ಎಂದು ಹುಡುಕುತ್ತದೆ. ಮತ್ತೆ ಹಾಗೆಯೇ ಓಡುತ್ತಿದ್ದ ಕುದುರೆಯು ಚಿಗಿದು ಹಿಂಗಾಲಮೇಲೆ ನಿಂತು ಮಗ್ಗುಲು ಹೊಡೆದು ಹಿಂತಿರುಗುವಂತೆ ತಟ್ಟನೆ ತಿರುಗಿ, "ಏನು ಮಹಾ! ಸೌಖ್ಯ ನನ್ನದು. ನಾನು ಸುಖವೆಂದರೆ ಸುಖ, ನಾನು ದುಃಖವೆಂದರೆ ದುಃಖ. ಇದನ್ನೇ ಸೌಖ್ಯಮಾಡೋಣ. ಬೇಡವೆಂದರೆ ಕಸ, ಬೇಕೆಂದರೆ ರಸ"

ಎಂದುಕೊಂಡು ಆ ತಣ್ಣೀರಿನ ತಂಪು ಬಿಡುವವರೆಗೆ ನಿಲ್ಲುತ್ತಾನೆ. ಹಾಗೆ ನಿಂತಾಗಲೂ ಏನೋ ಬೇಕು: ಯಾರೋ ಬೇಕು. ಜೊತೆಗೊಬ್ಬರು ಇರ ಬೇಕು ಎಂಬ ಸಣ್ಣ ಹಂಬಲ. ತುಂಬಿದ ರಾಗಾಲಾಪದಲ್ಲಿ ಅಲ್ಲೊಂದು ಸಲ ಇಲ್ಲೊಂದು ಸಲ ವಿವಾದಸ್ವರದ ಸಿಡಿತ ಕೇಳಿ ರಾಗದ ಸೊಂಪಿಗೆ ಬಣ್ಣವೇರು ವಂತೆ, ಆ ಸಣ್ಣ ಹಂಬಲ ತುಂಬಿದ ಸಂತೋಷದ ತುಂಬನ್ನು ಇನ್ನೂ ತುಂಬುತ್ತದೆ.

ವಿಶ್ವಾಮಿತ್ರನಿಗೆ ಈ ವಿಶ್ವಮೈತ್ರಿಯ ವೃತ್ತಿಯು ಕೇವಲ ಸ್ವಸಂತೋಷ ದಲ್ಲಿಯೇ ನಿಲ್ಲಲಿಲ್ಲ. ಆತನು ಈಗ ಎತ್ತನೋಡಿದರತ್ತ ಸುಖಮಯ ಸಂತೋಷ ವಾತಾವರಣವು ಕಾಣದಿದ್ದರೆ, ಅದರಿಂದ ತನಗೇನೋ ಹಾನಿಯಾದಂತೆ ಭಾವಿಸಿಕೊಂಡು ಅಲ್ಲಿ ಅದನ್ನು ಸರಿಮಾಡಲು ಯತ್ನಿಸುತ್ತಾನೆ. ಆ ಆಶ್ರಮದ ಸುತ್ತಲಲ್ಲಿ ಯಾವುದಾದರೂ ಒಂದು ಮರವು ಪಲ್ಲವಿಸಿ ಬೆಳೆಯದೆ ನಿಂತಿದ್ದರೆ ವಿಶ್ವಾಮಿತ್ರನು ಅದಕ್ಕೆ ಉಪಚಾರಮಾಡುತ್ತಾನೆ. ಅದರ ಮಗ್ಗುಲಲ್ಲಿ ನಿಂತು ಧ್ಯಾನಮಾಡಿ ತನ್ನ ಪ್ರಾಣಶಕ್ತಿಯನ್ನು ಪ್ರವೃದ್ಧಗೊಳಿಸಿ, ಅದನ್ನು ಆ ಮರಕ್ಕೆ ಬೇಕಾದಷ್ಟು ಕೊಟ್ಟು ಅದು ಸಹಜಸ್ಥಿತಿಗೆ ಬರುವಂತೆ ಮಾಡುತ್ತಾನೆ. ಯಾವುದಾದರೂ ಪಕ್ಷಿಯೋ ಮೃಗವೋ ಯಾವುದಾದರೂ ನ್ಯೂನಾತಿರೇಕ ದಿಂದ ಕೊರಗಿದ್ದರೆ, ಅದಕ್ಕೆ ಉಪಚಾರವು ನಡೆಯುತ್ತದೆ. ಎಲ್ಲಕ್ಕೂ ಪ್ರಾಣ ಶಕ್ತಿ ದಾನವೇ ಉಪಚಾರ. ಜೀವನದಿಯು ಹೋದಹೋದೆಲ್ಲ ಜೀವನವನ್ನು ತುಂಬಿ ತುಂಬಿಕೊಟ್ಟು ತಾನಿನ್ನೂ ಜೀವಂತವೇ ಆಗಿರುವಂತೆ, ವಿಶ್ವಾಮಿತ್ರ ನಿಂದು ಪ್ರಾಣಶಕ್ತಿಯ ಕೇಂದ್ರನಿಧಿ. ಧ್ಯಾನಮಾಡಿ ಹಾಲುಕ್ಕುವಂತೆ ಉಕ್ಕುವ ಪ್ರಾಣಶಕ್ತಿಯನ್ನು ಸರ್ವತ್ರ ಸಮನಾಗಿ, ಕರುಣದಿಂದ, ವಿಶ್ವಾಸದಿಂದ ದಾನ ಮಾಡುವುದಷ್ಟೇ ವಿಶ್ವಾಮಿತ್ರನ ತಪಸ್ಸಾಗಿದೆ. ಸುತ್ತಮುತ್ತಿನ ಪ್ರಪಂಚವೆಲ್ಲ ವಿಶ್ವಾಮಿತ್ರನ ಈ ಮೈತ್ರವನ್ನು ಕಂಡು ಅವನನ್ನು ಆರಾಧಿಸುತ್ತದೆ. ಆತನು ಹೋಗುತ್ತಿದ್ದರೆ ಗಿಡಮರಗಳು ಸುಖವಾಗಿ ಚಾಮರವನ್ನು ಬೀಸಿದಂತೆ ಮೃದು ವಾಗಿ ತಮ್ಮ ಚಿಗುರುಗಳಿಂದ ಬೀಸಿ ಇದ್ದ ಹೂವುಗಳನ್ನು ಆತನ ಮೇಲೆ ಸೂಸುತ್ತವೆ. ಆತನೀಗ ಗೆಡ್ಡೆಗೆಣಸುಗಳನ್ನೂ ಹಣ್ಣುಹೂಗಳನ್ನೂ ಕೀಳುವು ದಿಲ್ಲ. ಆತನಿಗೆ ಬೇಕೆನಿಸಿದರೆ ಹೋಗಿ ಅವು ಇರುವಕಡೆ ನಿಂತರೆ ಅವಾಗಿ ಅವೇ ತಮ್ಮ ಮೂಕಭಾಷೆಯಲ್ಲಿ ಇದೋ ನನ್ನನ್ನು ತೆಗೆದುಕೋ, ನನ್ನನ್ನು

ತೆಗೆದುಕೋ, ಎಂದು ಪ್ರಾರ್ಥಿಸಿಕೊಳ್ಳುತ್ತವೆ. ಆತನಿಗೆ ಒಂದು ಹಣ್ಣು ಕೊಟ್ಟರೆ ತನಗೆ ಇನ್ನೊಂದು ಗೊಂಚಲು ಬಿಡುವಷ್ಟು ಶಕ್ತಿಯು ಬರುವುದೆಂದು ಮರಕ್ಕೆ ಗೊತ್ತು. ಒಂದು ಗೆಡ್ಡೆಯನ್ನು ಕೊಟ್ಟರೆ ಇನ್ನೊಂದು ಗೆಡ್ಡೆಯಿಂದ ಹತ್ತು ಮರಿ ಹುಟ್ಟುವುದೆಂದು ಆ ಗೆಡ್ಡೆಗೆ ಗೊತ್ತು. ಒಂದು ಹೂ ನೀಡಿದರೆ ಇನ್ನೊಂದು ಜೊಂಪೆ ಹುಟ್ಟುವುದೆಂದು ಗಿಡವು ಬಲ್ಲುದು. ಏಕೆ ಕೊಡ ಬಾರದು?

ಇನ್ನೂ ಒಂದು ಗೆಳೆತನ. ಈಗ ಆಶ್ರಮದಲ್ಲಿ ಹಕ್ಕಿಗಳೂ ಮೃಗಗಳೂ ತಾವೇತಾವಾಗಿವೆ. ಎಲ್ಲಕ್ಕೂ ವಿಶ್ವಾಮಿತ್ರನನ್ನು ಓಲೈಸಬೇಕೆಂದು ಆಸೆ. ಮಾಂಸಜೀವಿಗಳಾದ ಮೃಗಪಕ್ಷಿಗಳೂ ವಿಶ್ವಾಮಿತ್ರನ ಬಳಿಸಾರಿ ಆತನ ಸಂಗ ದಲ್ಲಿರಲು ತಮ್ಮ ಆಹಾರವೇ ಎದುರಿಗೆ ಬಂದರೂ ಅವುಗಳನ್ನು ಗಮನಿಸದೆ ಆತನ ಮೇಲೆ ಗಮನವಿಟ್ಟು ಕುಳಿತಿರುತ್ತವೆ. ಯಾವಾಗಲೋ, ಹಸಿವು ಬಲ ವಾದಾಗ ನೀರಡಿಕೆ ತಾನೇತಾನಾದಾಗ, ಹೋಗಿ ಆ ಹಿಂಸೆಯನ್ನು ನಿವಾರಿಸಿ ಕೊಂಡು ಹಿಂತಿರುಗಿ ಬರುತ್ತವೆ. ಆದರೇನು? ಆ ತಮೋಜೀವಿಗಳಿಗೂ ಆಹಾರಾದಿಗಳಿಗಿಂತ ಆತನ ಸಾಮೀಪ್ಯದಲ್ಲಿ ಏನೋ ಸೌಖ್ಯವಿರುವಂತಿದೆ.

ವಿಶ್ವಾಮಿತ್ರನು ಆಶ್ರಮದಲ್ಲಿ ಕುಳಿತು ಪ್ರಪಂಚಚಿತ್ರವನ್ನು ಪರಿಭಾವಿಸು ತ್ತಿದ್ದಾನೆ. ಕ್ರಿಮಿಕೀಟದಿಂದ ಹಿಡಿದು ದೊಡ್ಡಕೊಂಬಿನ ಆನೆಯವರೆಗೆ ಎಲ್ಲವೂ ಪ್ರಾಣಶಕ್ತಿಮಯ. ಪ್ರಾಣವು ಎಲ್ಲವನ್ನು ಹಿಡಿದು ಆಡಿಸುತ್ತದೆ. ಪ್ರಾಣಶಕ್ತಿಯು ತುಂಬಿದರೆ ಎಲ್ಲಾ ಹಾರಾಟ, ಕುಗ್ಗಿದರೆ ಹಸಿವು, ಆರಿಕೆ, ತೂಕಡಿಕೆ. ಕುಸಿದ ಶಕ್ತಿಯನ್ನು ತುಂಬಿಕೊಳ್ಳುವುದಕ್ಕೆ ಅನ್ನ, ನೀರು, ನಿದ್ದೆ. ಹಾಗಾದರೆ ಪ್ರಾಣಶಕ್ತಿಯು ಕ್ಷಯವಾಗದಂತೆ ಕಾಪಾಡಿಕೊಳ್ಳಲು ಸಾಧ್ಯ ವಿಲ್ಲವೆ? ಹಸಿಯ ಮಡಿಕೆಯಲ್ಲಿ ತುಂಬಿಟ್ಟ ನೀರಂತೆ ದೇಹದಲ್ಲಿ ತುಂಬಿರುವ ಪ್ರಾಣಶಕ್ತಿಯು ಅದೇಕೆ ಇಳಿಯುತ್ತಲೇ ಇರಬೇಕು? ಅಗ್ನಿಕುಂಡಕ್ಕೆ ಸೌದೆ ಯನ್ನು ಒಟ್ಟಿ ಒಟ್ಟಿ ಬೆಂಕಿಯನ್ನು ಕಾಪಾಡಿಕೊಳ್ಳುವಂತೆ ಅನ್ನಪಾನಗಳಿಂದ ಅಥವಾ ಧ್ಯಾನದಿಂದ ಈ ಪ್ರಾಣಶಕ್ತಿಯನ್ನು ಮೂರು ಹೊತ್ತೂ ಪುಟಗೊಳಿ ಸುತ್ತಲೇ ಇರಬೇಕೇಕೆ?"

---

# ಮೂವತ್ತಮೂರನೆಯ ತರಂಗ

ಬರುಬರುತ್ತ ಆತನಿಗೆ ಇದೇ ಯೋಚನೆ ಹೆಚ್ಚಿತು. ಗೆಡ್ಡೆಗೆಣಸು ಹಣ್ಣುಗಳನ್ನೂ ಹೊರಗಿನಿಂದ ಸಂಗ್ರಹಿಸುವುದು ಬೇಡವಾಯಿತು. "ನನ್ನಿಂದ ಯಾರಿಗೆ ತಾನೇ ಏಕೆ ಕಷ್ಟವಾಗಬೇಕು? ಏನೂ ತಿನ್ನದೆ, ಕುಳಿತಲ್ಲಿಯೇ ಪ್ರಾಣಶಕ್ತಿಯನ್ನು ಉದ್ಬೋಧನಮಾಡಿ, ಹಸಿವನ್ನು ಹಸಿವೇ ತಿನ್ನುವಂತೆ, ಹಸಿವು ಹುಟ್ಟಿದಲ್ಲಿಯೇ ಇಂಗಿಸಬಾರದೇಕೆ?" ಎನ್ನಿಸಿತು.

ವಿಶ್ವಾಮಿತ್ರನು ಕುಳಿತನು. ಎಂದಿನಂತೆ ತನ್ನ ಧ್ಯಾನಬಲದಿಂದ ತನ್ನ ದೇಹದ ಕಣಕಣದಲ್ಲಿಯೂ ಪ್ರಾಣಶಕ್ತಿಯನ್ನು ತುಂಬಿದ್ದಾನೆ. ಮೈಯೆಲ್ಲ ಕಣ್ಣಾಗಿ ಆ ಶಕ್ತಿಯು ದೇಹದಿಂದ ಸ್ರವಿಸಿ ಹೋಗದಂತೆ ನೋಡಿಕೊಳ್ಳು ತ್ತಿದ್ದಾನೆ. ಪ್ರಾಣಶಕ್ತಿಯ ಕೇಂದ್ರವನ್ನು ಹುಡುಕುತ್ತಿದ್ದಾನೆ. ಧ್ಯಾನವೆತ್ತ ತಿರುಗಿದರೆ ಅಲ್ಲಿಯೇ ಕೇಂದ್ರವಾಗುತ್ತಿದೆಯೇ ಹೊರತು ನಿಜವಾದ ಕೇಂದ್ರವು ಯಾವುದೋ ಸಿಕ್ಕಲೇ ಒಲ್ಲದು.

ಹೀಗೆಯೇ ಒಂದು ವಾರವಾಯಿತು. ವಿಶ್ವಾಮಿತ್ರನಿಗೆ ಹಸಿವು ನೀರಡಿಕೆ ಗಳ ಸಂಕಟವು ತಾನೇತಾನಾಗುತ್ತದೆ. ಆಗ ಪ್ರಾಣವನ್ನು ಬಂಧಿಸುತ್ತಾನೆ. ಹಸಿವು ನೀರಡಿಕೆ ನಿಲ್ಲುತ್ತದೆ. ಮತ್ತೆ ಪ್ರಾಣದ ಕಟ್ಟನ್ನು ಬಿಚ್ಚಿ ಪ್ರಾಣಶಕ್ತಿ ಯನ್ನು ಉಕ್ಕಿಸಿದರೆ ಹಸಿವು ನೀರಡಿಕೆಗಳು ಕಾಣಿಸಿಕೊಳ್ಳುತ್ತವೆ. ದೀಪವನ್ನು ಮೀಟಿ ದೊಡ್ಡದು ಮಾಡಿದಷ್ಟೂ ಬೆಳಕು ಹೆಚ್ಚು. ಅದರ ಜೊತೆಯಲ್ಲಿಯೇ ಕತ್ತಲೂ ಹೆಚ್ಚುವಂತೆ, ಹರಡುವ ಪ್ರಾಣಶಕ್ತಿಯ ಜೊತೆಯಲ್ಲಿಯೇ ಹಸಿವು ನೀರಡಿಕೆಗಳೂ ಬಲವಾಗುತ್ತಿವೆ. ಪ್ರಾಣವನ್ನು ಕಟ್ಟಿ ಹಾಕಬೇಕು. ಅಥವಾ ಪ್ರಾಣಶಕ್ತಿಗೆ ಆಹಾರ ನೀರು ಒದಗಿಸಬೇಕು. ಇದು ದೊಡ್ಡ ಸಮಸ್ಯೆ ಯಾಗಿದೆ.

ಕೊನೆಗೆ ವಿಶ್ವಾಮಿತ್ರನಿಗೆ ಒಂದು ಯೋಚನೆ ಹೊಳೆಯಿತು. ಎಲ್ಲವೂ ಬೆಳೆಯುವುದು ಇರುವುದು ಪ್ರಾಣಶಕ್ತಿಯಿಂದ. ಈ ಪ್ರಾಣಶಕ್ತಿಯನ್ನು ಒಂದು ಹಣ್ಣಿಗೋ ಗೆಡ್ಡೆಗೋ ತುಂಬೋಣ. ಹಾಗೆ ಶಕ್ತಿ ಪೂರ್ಣವಾದ ಆ ಫಲಮೂಲವನ್ನು ತಿಂದು ನೋಡೋಣ. ಆಗ ಏನಾದರೂ ಹಸಿವು ನೀರಡಿಕೆ ಗಳು ಇಲ್ಲವಾಗುವುದೇನೋ ಎನ್ನಿಸಿತು. ಕೂಡಲೇ ಹೋಗಿ ನಿತ್ಯ ಕರ್ಮಾದಿ ಗಳನ್ನು ಮುಗಿಸಿಕೊಂಡು, ಬರುತ್ತಾ ದಾರಿಯಲ್ಲಿ ಆಗತಾನೇ ತನ್ನೆದುರಾಗಿ

ಉದುರಿದ ಒಂದು ಹಣ್ಣು ತಂದು, ತನ್ನ ಪ್ರಾಣಶಕ್ತಿಯನ್ನೇ ಅದಕ್ಕೆ ತುಂಬಿ, ಅದನ್ನು ಸ್ವೀಕರಿಸಿದನು. ಪ್ರಾಣಶಕ್ತಿಯ ಹಾಹಾಕಾರ ತಪ್ಪಿತು. ಹಸಿವು ಅಡಗಿತು. ಸೀರಡಿಕೆಯು ಇಂಗಿತು.

ವಿಶ್ವಾಮಿತ್ರನಿಗೆ ಯೋಚನೆ ಬಲಿಯಿತು. ಹಾಗಾದರೆ ಪ್ರಾಣಕ್ಕೆ ಪ್ರಾಣವೇ ಆಹಾರವೇ ? ಪ್ರಾಣವಲ್ಲದೆ ಇನ್ನೇನೂ ಪ್ರಾಣಕ್ಕೆ ಆಹಾರವಾಗ ಲಾರದೆ ? ಹಾಗಾದರೆ ಈ ಪ್ರಾಣದ ಸ್ವರೂಪವೇನು ? ಒಂದುಕಡೆ ಅನ್ನವಾಗಿ, ಇನ್ನೊಂದುಕಡೆ ಅನ್ನವನ್ನು ತಿನ್ನುವ ಅನ್ನಾದನಾಗಿ ಇರುವುದಾದರೆ, ಪ್ರಾಣವು ಇಲ್ಲಿ ಇದೆ ಅಲ್ಲಿ ಇಲ್ಲ ಎನ್ನುವಂತಿಲ್ಲವಲ್ಲ ? ಹಾಗಾದರೆ ಪ್ರಾಣವೊಂದೇ ಏನು ಲೋಕದಲ್ಲಿ ಎಲ್ಲಿಎಲ್ಲಿಯೂ ಇರುವುದು ? ಈ ಪ್ರಾಣದಿಂದ ಬೇರೆಯಾದುದು ಇನ್ನು ಏನೂ ಇಲ್ಲವೇ ಇಲ್ಲವೇ ? ಇದೇ ಏನು ಆಪೋದೇವಿಯರೂ ವಿಶ್ವೇ ದೇವರೂ ಹೇಳಿದ್ದ ಸೃಷ್ಟಿಯ ರಹಸ್ಯ ? ಹಾಗಾದರೆ ಪ್ರಾಣವನ್ನು ಅರಿತವನು ಪ್ರಾಣವನ್ನು ಸೃಷ್ಟಿಸಬಲ್ಲವನಾಗಬೇಕು. ಇದುವರೆಗೆ ನಾನು ಹೋದ ಪ್ರಾಣ ವನ್ನು ತಂದಿದ್ದೇನೆ. ಇದ್ದ ಪ್ರಾಣವನ್ನು ಹೆಚ್ಚಿಸಿದ್ದೇನೆ. ಮತ್ತೊಂದು ಪ್ರಾಣವನ್ನೇ ಸೃಷ್ಟಿಸಬಾರದೇಕೆ ?"

" ಹೀಗೆ ನೂತನ ಸೃಷ್ಟಿಯನ್ನು ಆರಂಭಿಸಿದರೆ ತಪ್ಪೇನು ? ವಿಶ್ವೇ ದೇವರು ಗಳು ಅಂದು ಪಂಚಭೂತಗಳನ್ನು ಕಲೆಹಾಕಿ ಶರೀರವನ್ನು ಮಾಡುವುದನ್ನು ಹೇಳಿದ್ದಾರೆ. ಇಂದು ನಾನು ಪ್ರಾಣವನ್ನು ಪ್ರತ್ಯೇಕಿಸಬಲ್ಲೆನಾದರೆ ಅದು ನಿಜವಾಗಿಯೂ ವಿನೂತನ ಸೃಷ್ಟಿಯಾಯಿತು. ಆದರೆ, ಅಂದು ಬ್ರಹ್ಮಣ ಸ್ಪತಿಯು ಹೆದರಿಸಿದನು. " ಮಹರ್ಷಿಗಳಿಬ್ಬರೂ ರೇಗಿ ಸೃಷ್ಟಿಗೆ ಹೊರಟಿ ದ್ದೀರಿ. ಸೃಷ್ಟಿಯನ್ನೂ ಮಾಡುವಿರಿ. ಆದರೆ ಅದರಿಂದ ಆಗುವ ಅನರ್ಥ ವೇನು ಎಂಬುದನ್ನು ಗಮನಿಸಿದಿರಾ ? " ಎಂದು ಕೇಳಿದನು. ಹಾಗೆ ಅನರ್ಥ ವಾದರೆ ? "

" ಏನು ಅನರ್ಥವಾದೀತು ? ಹೊಸದು ಹಳದನ್ನು ತಿಂದೀತು ಕೊಂದೀತು. ಕೆಡಸೀತು. ಇಷ್ಟುತಾನೆ, ಕೆಟ್ಟರೆ, ಕೊಂದರೆ, ತಿದ್ದಿಕೊಳ್ಳುವ, ಬದುಕಿಸಿ ಕೊಳ್ಳುವ ರೀತಿ ತಿಳಿದಿದೆ. ತಿಂದರೆ ಇನ್ನೊಂದು ಹಳೆಯದನ್ನೇ ಹಟ್ಟಿಸಿದ ರಾಯಿತು. ಇದಕ್ಕೇನು ಮಹಾ ! ಬೇಕಾದುದು ಆಗಲಿ ಸೃಷ್ಟಿಯನ್ನು ಮಾಡ ಬೇಕು."

"ಆದರೂ ಆದಷ್ಟು ಮಟ್ಟಿಗೆ ಅನರ್ಥವಾಗದಂತೆ ನೋಡಿಕೊಳ್ಳಬೇಕು. ಕೆಡುವುದಕ್ಕೆ ಅವಕಾಶ ಕೊಟ್ಟು ಆಮೇಲೆ ತಿದ್ದಿಕೊಳ್ಳುವುದೇನು ದೊಡ್ಡದು? ಕೆಡದಂತೆ ಮಾಡೋಣ. ಆಗ ರೇಗಿ ಮಾಡಬೇಕೆಂದಿದ್ದ ಕೆಲಸವನ್ನು ಈಗ ಸಮಾಧಾನವಾಗಿ ಮಾಡೋಣ. ಆದರೆ ಸಮಾಧಾನವಾಗಿ ಶಾಂತವಾಗಿ ಕುಳಿತರೆ ಯಾವ ಕೆಲಸವು ತಾನೇ ನಡೆಯುವುದು? ಪ್ರಾಣವು ವಿಜೃಂಭಿಸಬೇಕು. ಏಕಾಂಡವಾಗಿ ತಾನೇ ತಾನಾಗಿರುವ ಪ್ರಾಣವು ಒಡೆಯಬೇಕು. ಇದು ಶಾಂತವಾಗಿದ್ದರೆ ಆಗುವುದೆ? ಬಿರುಗಾಳಿಗೆ ಸಿಕ್ಕಿದ ಸಮುದ್ರದಹಾಗೆ ಪ್ರಾಣಶಕ್ತಿಯು ಅಲ್ಲೋಲಕಲ್ಲೋಲವಾಗಿ ಎದ್ದೆದ್ದು ಕುಣಿಯದಿದ್ದರೆ, ಅದೆಂತು ಬೇರೆಯಾಗುವುದು? ಪ್ರತ್ಯೇಕವಾಗುವುದು ಹೇಗೆ?"

ವಿಶ್ವಾಮಿತ್ರನಿಗೆ ದೊಡ್ಡ ಯೋಚನೆಯಾಯಿತು. ಎದ್ದೆದ್ದು ಕುಣಿಯುವುದು ಎಂದರೆ ಹೇಗೆ? ಆಗ ಅದರ ಹಿಂದಿರುವ ತನ್ನ ಅವಸ್ಥೆ ಏನು? ತಾನೂ ಪ್ರಾಣವೂ ಒಂದೇ ಅಥವಾ ಬೇರೆಬೇರೆಯೆ? ಪ್ರಾಣವೇ ತಾನೇನು? ಅಥವಾ ತಾನು ಪ್ರಾಣವನ್ನು ಕುಣಿಸುವ ಮತ್ತೊಂದು ಚೇತನವೋ?

ದೊಡ್ಡ ಸಮಸ್ಯೆಯೊಂದು ಹುಟ್ಟಿತು. ವಿಶ್ವಾಮಿತ್ರನು ಧ್ಯಾನಕ್ಕೆ ಕುಳಿತುಕೊಳ್ಳುತ್ತಾನೆ. ಪ್ರಾಣಶಕ್ತಿಯು ವಿಜೃಂಭಿಸುತ್ತದೆ. ಆಗ ತಾನು ಆ ಪ್ರಾಣದಿಂದ ಬೇರೆಯಾಗಿ ಕುಳಿತುಕೊಳ್ಳಲಾರದೆ ಆ ತಪಸ್ವಿಯು ಪ್ರಾಣವೇ ತಾನು ಎಂದುಕೊಂಡು ಬಿಡುತ್ತಾನೆ. ಈತನ ಪ್ರಾಣಶಕ್ತಿಯು ಬೀಸುವ ಗಾಳಿಯಲ್ಲಿ, ಹರಿಯುವ ನೀರಿನಲ್ಲಿ, ಇವನು ಕುಳಿತಿರುವ ನೆಲದಲ್ಲಿಯೇ ಬೆರೆತು ಹೋಗುತ್ತದೆ. ಹಾಗೆ ಚದುರುವುದನ್ನು ನಿರೋಧಿಸಿದರೆ ಕಿಡಿಯಾಗಿ ಹೊರಚೆಲ್ಲುತ್ತದೆ. ಹರಿಯ ಬಿಟ್ಟರೂ, ಹಿಡಿದು ನಿಲ್ಲಿಸಿದರೂ ಅದೂ ತಾನೂ ಒಂದೆಯೋ? ಬೇರೆಬೇರೆಯೋ ಅದು ಮಾತ್ರ ತಿಳಿಯದು.

ಹೀಗೆಯೇ ಎರಡು ಮೂರು ತಿಂಗಳು ಕಳೆದುಹೋಗಿದೆ. ವಿಶ್ವಾಮಿತ್ರನಿಗೆ ಏನಾದರೂ ಆಗಲಿ, ಹಿಡಿದು ಕುಳಿತು ಎಲ್ಲವನ್ನೂ ಸಾಧಿಸೋಣ ಎಂಬ ಮನಸ್ಸೂ ಆಗಲೊಲ್ಲದು. ಆತನಿಗೆ ಹೊರಗಿನ ಸೃಷ್ಟಿಯನ್ನು ಬಿಟ್ಟು ಕಣ್ಣು ಮುಚ್ಚಿ ಕುಳಿತುಕೊಳ್ಳಲು ಏಕೋ ಬೇಡ. ಹಾಗೆಂದು ಒಳಗಿನ ಯೋಚನೆಯನ್ನು ಬಿಟ್ಟು ಹೊರಗಿನ ಮನಸ್ಸಿನಲ್ಲಿ ಸುಖವಾಗಿ ಇದ್ದೂ ಬಿಡಲಾರ. ಹೀಗೆ ಮನಸ್ಸು ಒಳಕ್ಕೂ ಹೊರಕ್ಕೂ ತುಯ್ದಾಡುತ್ತಿದೆ. ಒಂದಷ್ಟು ಹೊತ್ತು ಅಂತ

ಮುರ್ಖಖಿಯಾಗಿ ಪ್ರಾಣದೊಡನೆ ಆಟವಾಡುತ್ತಾನೆ. ಮತ್ತೆ ಬಹಿರ್ಮುಖಿ ಯಾಗಿ ಅದರ ಫಲವೇನಾಯಿತು ಎಂದು ನೋಡಲು ಕಣ್ಣುಬಿಡುತ್ತಾನೆ.

ಕೊನೆಗೆ ಒಂದು ದಿನ ವಿಶ್ವಾಮಿತ್ರನಿಗೆ ಮನಸ್ಸಿಗೆ ಏಕೋ ಏನೋ ಒಂದು ಬಿಗಿ ಹುಟ್ಟಿದೆ. ಈ ದಿನ ಬೇಕಾದುದಾಗಲಿ, ಈ ವಿಷಯವನ್ನು ಇತ್ಯರ್ಥಮಾಡಬೇಕು. ನಾಳೆಯ ದಿನ ಹುಣ್ಣಿಮೆ. ಜಗತ್ತೆಲ್ಲವೂ ಕಲಾ ಪೂರ್ಣವಾಗಿರುವ ದಿನ. ಈ ದಿನ ಕಲೆಗಳು ಪೂರ್ಣವಾಗುವುದಕ್ಕೆ ನುಗ್ಗುವ ದಿನ. ಈ ಹೊತ್ತು ಏನಾದರೂ ಆಗಲಿ. ಇದಕ್ಕೆ ಕುಳಿತುಬಿಡಬೇಕು ಎನ್ನಿಸಿತು.

ಆದರೂ ಏನೋ ವಿಘ್ನವು ಬರುವುದು: ಕಾರ್ಯವು ಪೂರ್ಣವಾಗುವು ದಿಲ್ಲ ಎಂದು ಯಾವುದೋ ಒಳದನಿ ಅಸ್ಪಷ್ಟವಾಗಿ ನುಡಿಯುತ್ತದೆ. ಮೌನೀಂ ದ್ರನು ಅದನ್ನು ಗಮನಿಸಿಯೂ ಗಮನಿಸದಂತೆ, ವಿಘ್ನವೆಂದರೇನು? ಅದೂ ನಮಗೆ ಅನುಕೂಲವೇ ಆಗುವಂತೆ ಮಾಡಿಕೊಂಡರಾಯಿತು. ಬರಲಿ. ಯಾವ ಅಡ್ಡಿಬರುವುದೋ ಬರಲಿ. ನಾನು ವಿಶ್ವಕ್ಕೇ ಮಿತ್ರನಾಗಿರುವಾಗ, ನನಗೆ ಜಡಚೇತನಗಳಲ್ಲೆಲ್ಲಾ ಮೈತ್ರಿಯೊಂದೇ ಭಾವವಾಗಿರುವಾಗ, ಯಾವ ಅಡ್ಡಿಯು ಬಂದರೇನು? ಅದೂ ನನಗೆ ಅನುಕೂಲವೇ ಆಗುವುದು" ಎಂದು ನಂಬಿಕೆಯಿಂದ ಅದನ್ನು ಅತ್ತ ನಿವಾರಿಸುತ್ತಾನೆ.

ಕೊನೆಗೆ, ಸಂಧ್ಯೆಯನ್ನು ಪೂರಯಿಸಿಕೊಂಡು, ತನ್ನ ಗುಡಿಸಲಿನಲ್ಲಿ ಕುಳಿತಿದ್ದಾನೆ. ಮೂಡಲಕೊನೆಯಿಂದ ನೊಗದಷ್ಟು ಮೇಲೆದ್ದಿರುವ ಚಂದ್ರನು ಉದಯಕಾಲದ ಕೆಂಪು ಕೊಂಚವೂ ಉಳಿಯದಂತೆ ತೊಳೆದಿರುವ ಬೆಳ್ಳಿಯ ಬಿಳುಪಿನಿಂದ ಲೋಕಕ್ಕೆಲ್ಲ ಮಿರುಗಿಟ್ಟು ಬೆಳಗುತ್ತಿದ್ದಾನೆ. ಧ್ಯಾನಾಸಕ್ತಿಯು ಬಲಿತು, ಹಾಗೇ ಅಷ್ಟುಹೊತ್ತು ಚಂದ್ರನನ್ನೇ ಕುರಿತು ಧ್ಯಾನಿಸುತ್ತಿದ್ದು, "ನಾನು ಕೋರುತ್ತಿರುವುದೂ ಇದೇ ಸಿದ್ಧಿ. ಸೃಷ್ಟಿಕಾಲದ ಉಲ್ಬಣ ಉದ್ರೇಕ ಗಳಿಲ್ಲದೆ, ಶಾಂತವಾದ ಮನಸ್ಸಿನಿಂದ, ಶಾಂತವಾದ ಸೃಷ್ಟಿಯನ್ನು ಮಾಡ ಬೇಕು. ಅದೂ ಲೋಕಕಲ್ಯಾಣಕ್ಕೆ ಆಗಬೇಕು" ಎಂದು ಗಟ್ಟಿಯಾಗಿ ಹೇಳಿದನು.

ಆತನು ಗಟ್ಟಿಯಾಗಿ ಮಾತನಾಡಿ ಎಷ್ಟೋ ದಿನವಾಗಿತ್ತು. ತನ್ನ ಧ್ವನಿಯೇ ಆದರೂ ಅದರಲ್ಲಿ ಏನೋ ವಿಲಕ್ಷಣವಾಗಿರುವಂತೆ ತೋರಿ ಇನ್ನೂ ಒಮ್ಮೆ ಅದೇ ಮಾತು ನುಡಿದನು. ಇನ್ನೂ ಚೋದ್ಯವಾಗಿ ಇನ್ನೂ ಒಂದು

ಸಲ ನುಡಿದನು. ಒಂದು ಸಲಕ್ಕಿಂತ ಇನ್ನೊಂದು ಸಲ ಗಟ್ಟಿಯಾಗಿದ್ದು, ಶಬ್ದತರಂಗಗಳು ಗುಡಿಸಲನ್ನು ತುಂಬಿ ಹೊರಬಿದ್ದು ಸುತ್ತಮುತ್ತೆಲ್ಲ ಹರಡಲು ಓಡಿಹೋಗದೆ ಗುಡಿಸಲಿನಲ್ಲಿಯೇ ನಿಂತಿರುವಂತೆ ಭಾಸವಾಯಿತು.

ಇನ್ನೂ ಆ ಶಬ್ದತರಂಗಗಳು ಗಾಳಿಯಲ್ಲಿ ಜೀರ್ಣವಾಗುತ್ತಿದ್ದ ಹಾಗೆಯೇ, ಅದಕ್ಕಿಂತ ಮುಂಚೆಯೇ, ವೀಣಾನಾದವಾಗಿ ಪರಿಣಮಿಸಿ, ಮತ್ತೊಂದು ರೂಪು ಪಡೆದು ಹಿಂದಿರುಗಿ ಬಂದಂತೆ, ವಿಶ್ವಾಮಿತ್ರನಿಗೆ ಇನ್ನೊಂದು ಮಾನವ ಧ್ವನಿ ಕೇಳಿಸಿತು: "ಅದು ದೇವಲೋಕದಲ್ಲಿ ಮಾತ್ರ ಸಾಧ್ಯ."

ಧ್ವನಿ ಸ್ಪಷ್ಟವಾಗಿತ್ತು. ಇತರರು ಯಾರೂ ಇಲ್ಲದ ಏಕಾಂತವೆಂದು ನಂಬಿದ್ದ ಮನಸ್ಸು ಚಮಕಿತವಾಗಿ ಅತ್ತ ತಿರುಗಿತು. ಒಂದು ಹೆಣ್ಣು. ಗುಡಿಸಲಿನ ಬಾಗಿಲಿನಲ್ಲಿ ನಿಂತಿದೆ.

---

## ಮೂವತ್ತನಾಲ್ಕನೆಯ ತರಂಗ

ವಿಶ್ವಾಮಿತ್ರನು ಕೇಳಿದನು: "ಭೂಮಿಯಲ್ಲೇಕೆ ಸಾಧ್ಯವಿಲ್ಲ?" ದನಿ ಗಡುಸಾಗಿತ್ತು. ತನ್ನ ಆಜ್ಞೆಯನ್ನು ಪ್ರತಿಭಟಿಸಿದ ಆಳಿನ ಮೇಲೆ ಅರಸಾಳು ರೇಗಿ ಕೂಗುವಂತಿತ್ತು.

ಬಂದಿದ್ದವಳು ನಕ್ಕು ಹೇಳಿದಳು: "ಮುನೀಂದ್ರ, ತಾವು ಯಾವ ಅಧಿಷ್ಠಾನದಲ್ಲಿ ಇರುವಿರಿ ಎಂಬುದನ್ನು ಗಮನಿಸಿದಿರಾ? ರಜೋಗುಣದ ಕ್ಷೇತ್ರದಲ್ಲಿ ರಜೋಗುಣವಿಲ್ಲದೆ ಸೃಷ್ಟಿಯೆಂತು ಸಾಧ್ಯ? ಅಲ್ಲದೆ, ಸೃಷ್ಟಿಯೆಂದರೆ ಒಂದು ಪ್ರಾಣವು ಒಡೆದು ಎರಡಾಗುವುದು. ಭೂಮಿಯಲ್ಲಿ ಪ್ರಾಣವು ಒಡೆದು ಎರಡಾಗಲು ಕ್ಷೇತ್ರವೊಂದು ಬೇಕು. ಕ್ಷೇತ್ರವಿಲ್ಲದೆ ಪ್ರಾಣವು ಅನೇಕವಾಗುವುದು ದೇವಲೋಕದಲ್ಲಿ ಮಾತ್ರ ಸಾಧ್ಯ. ಅದರಿಂದಲೇ ಅಲ್ಲಿನವರು ಅಯೋನಿಜರು" ಮಾತಿನಲ್ಲಿ ಒಲಿಸಿಕೊಳ್ಳಬೇಕೆಂಬ ಆಸೆಯಿತ್ತು. ಉರಿಯುತ್ತಿರುವ ಬೆಂಕಿಯೂ ಸಮಾಧಾನವಾಗಿ ಪ್ರಸನ್ನವಾಗಬೇಕು: ಹಾಗೆ ಮಾಡುವ ಶಾಂತಿಯಿತ್ತು.

ಮುನಿಯ ಮನಸ್ಸು ಮಡದಿಯ ಮುಖವನ್ನು ನೋಡಿತು. ಮಾತಿನ ಶಾಂತಿಯಿಂದ ತಾನೂ ಶಾಂತವಾಗಿ, ಆಕೆಯ ಸುರೂಪದರ್ಶನದಿಂದ ಪ್ರಸನ್ನ ವಾಗಿ, ತನಗೆ ಬೇಕಾದ ವಿಷಯವನ್ನು ತಿಳಿಸಿದಳೆಂದು ಕೃತಜ್ಞವಾಗಿ, ಆಕೆ ಯನ್ನು ವಿಶ್ವಾಸದಿಂದ ಗೌರವದಿಂದ ಮಾತನಾಡಿಸಿತು. ಮುನಿಯು ಆಕೆ ಯನ್ನು ಒಳಕ್ಕೆ ಬರಬೇಕೆಂದು ಕರೆದು ಕುಳಿತುಕೊಳ್ಳುವುದಕ್ಕೆ ತಾನು ಹಾಸಿ ಕೊಂಡಿದ್ದ ಅಜಿನವನ್ನು ಕೊಟ್ಟನು. ಆಕೆಯೂ ಬಂದು ಕುಳಿತುಕೊಂಡಳು.

ವಿಶ್ವಾಮಿತ್ರನಿಗೆ ಆಕೆಯ ದಿವ್ಯರೂಪವನ್ನು ಅಷ್ಟುಕಾಲ ಕಣ್ಣಿಟ್ಟು ನೋಡಬೇಕೆಂದು ಆಸೆ. ಹಾಗೆಯೇ ಆಕೆ ಯಾರು ಎಂದು ವಿಚಾರಿಸಬೇಕೆಂದು ಕುತೂಹಲ. ಆದರೆ, ತನಗೆ ಬೇಕಾದ ವಿಷಯವು ಎಲ್ಲಿ ತಪ್ಪಿಹೋಗುವುದೋ ಎಂದು ದಿಗಿಲು. ಅದರಿಂದ ತನ್ನ ಆಸೆ ಕುತೂಹಲಗಳನ್ನು ಬದಿಗಿಟ್ಟು ವಿಷಯವನ್ನು ಮುಂದುವರಿಸಿದನು : "ತಮ್ಮ ಅಲೌಕಿಕರೂಪವೂ ಅಗಾಧ ವಾದ ಜ್ಞಾನವೂ ವಿಸ್ಮಯಜನಕವಾಗಿವೆ. ತಮಗೆ ಅತಿಥಿಗೆ ಸಲ್ಲುವ ಉಪ ಚಾರವೂ ಸಲ್ಲಬೇಕಾಗಿದೆ. ಕುಶಲಪ್ರಶ್ನೆಗಳು ನಡೆಯಬೇಕಾದುದೂ ವಿಹಿತ. ದಯವಿಟ್ಟು ಅವನ್ನೆಲ್ಲ ಇನ್ನಷ್ಟು ಹೊತ್ತಾದಮೇಲೆ ನಡೆಸಲು ಅಪ್ಪಣೆ ಕೊಟ್ಟು ತಾವು ಆಡಿದ ಮಾತನ್ನು ಬೆಳೆಸಿ. ಏಕವು ಅನೇಕವಾಗಲು ಭೂಮಿ ಯಲ್ಲಿ ಕ್ಷೇತ್ರವು ಏಕೆ ಬೇಕೇಬೇಕು? ದೇವಲೋಕದಲ್ಲಿ ಕ್ಷೇತ್ರದ ಅಗತ್ಯವಿಲ್ಲ ವೆನ್ನುವುದು ಹೇಗೆ? ಅದನ್ನಷ್ಟು ವಿವರವಾಗಿ ಹೇಳಿ."

ಬಂದವಳು ನಕ್ಕು ಹೇಳಿದಳು. "ಆಪೋದೇವಿಯರ ಅನುಗ್ರಹವನ್ನು ಸಂಪಾದಿಸಿಕೊಂಡ ಮಹರ್ಷಿಗಳಿಗೆ ನಾನು ಹೇಳಬೇಕಾದುದು ಬಹಳ ಕೊಂಚ. ಆದರೂ ಅದನ್ನು ಅಪ್ಪಣೆಯೆಂದು ಶಿರಸಾ ಗೌರವಿಸಿ ಹೇಳುವೆನು. ನನ್ನನ್ನು ಸಂಬೋಧಿಸುವಾಗ ತಾವು ತಮ್ಮನ್ನು ಎಂದು ಗೌರವದಿಂದ ಮಾತನಾಡಿಸುವುದು ಬೇಡ. ನನ್ನನ್ನು ಮಾತನಾಡಿಸುವವರೆಲ್ಲ ನೀನು ಎಂದು ಏಕವಚನದಲ್ಲಿಯೇ ಸಂಬೋಧಿಸುವುದು. ಅದರಿಂದ ನನ್ನನ್ನು ಹಾಗೆ ನುಡಿಸಿದರೆ ನನಗೆ ನೆಮ್ಮದಿ."

ಮುನೀಂದ್ರನಿಗೆ ಸಂಕೋಚವಾಯಿತು. ಆದರೂ ವಿಷಯಲೋಭ ದಿಂದ ಆ ಸಾಮೀಪ್ಯತೆಯನ್ನು ಒಪ್ಪಿಕೊಂಡು "ಆಗಲಿ. ಹೇಳು" ಎಂದನು.

"ಸೃಷ್ಟಿಯಲ್ಲಿ ಪಂಚಭೂತಗಳೇ ಆಧಾರ. ದೇಹವನ್ನು ಕಟ್ಟುವುದೆಲ್ಲ ಆ ಭೂತಗಳಿಂದ. ಈ ಭೂಮಿಯಲ್ಲಿ ಪೃಥ್ವೀಭೂತ ಪ್ರಧಾನವಾದ ದೇಹ.

ಪೃಥ್ವೀಭೂತವು ಕ್ಷೇತ್ರಾಂತರವಿಲ್ಲದೆ ಏಕವು ಅನೇಕವಾಗುವುದಕ್ಕೆ ಅವಕಾಶ ಕೊಡುವುದಿಲ್ಲ. ಅದರಿಂದ ಅಷ್ಟೇ!"

ವಿಶ್ವಾಮಿತ್ರನಿಗೆ ಆ ವಾದವೊಪ್ಪಿತು. ಸರಿ. ಪೃಥ್ವೀ ದೇವಿಯನ್ನು ಪ್ರಾರ್ಥಿಸಿ ಮುಂದಿನ ಕೆಲಸ, ಎನ್ನಿಸಿ, ಬಂದವರಕಡೆಗೆ ತಿರುಗಿತು. ಒಂದು ಗಳಿಗೆ ಆ ವಿಷಯವನ್ನು ವಿಮರ್ಶಿಸುತ್ತಿದ್ದು ಬಹಿರ್ಮುಖವಾಗಿ, "ಆಯಿತು. ತಾವು–ಅಲ್ಲ, ನೀನು ಯಾರು?" ಎಂದು ಕೇಳಿತು.

"ನಾನು ಇಂದ್ರ ದೂತಿ."

ವಿಶ್ವಾಮಿತ್ರನಿಗೆ ಥಟ್ಟನೆ ಇಂದ್ರನು ಹೇಳಿದ್ದ "ಸ್ವರ್ಗವೇ ನಿನ್ನ ಬಳಿಗೆ ಬಂದರೆ?" ಎಂಬ ಮಾತು ನೆನೆಪಾಯಿತು. ಸ್ವರ್ಗವು ಭೋಗಾಲಯ ನಿಜ. ಆದರೆ ಆ ಭೋಗಾಲಯವು ಜಡ ಭೋಗಸಾಮಗ್ರಿಯನ್ನು ಕೊಡುವ ಕಾಮ ಧೇನು ಸಂತಾನಾದಿಗಳ ರೂಪವಾಗಿ ತನ್ನ ಬಳಿಗೆ ಬರಬಹುದು ಎಂದು ಕೊಂಡಿದ್ದ ಆತನಿಗೆ ಸರ್ವೇಂದ್ರಿಯ ಸುಖಸಾಧನವಾದ ಸ್ತ್ರೀರೂಪವಾಗಿ ಬರ ಬಹುದೆಂಬ ಯೋಚನೆಯು ದೂರದಲ್ಲಿಯೂ ಸುಳಿದಿರಲಿಲ್ಲ. ಆತನ ಮನಸ್ಸು ಕಲಕಿಹೋಯಿತು. ಮನಸ್ಸಿನ ಒಳಒಳಗೆ ಅಡಗಿದ್ದ ಏನೇನೋ ಆಶಾ ವಾಸನೆಗಳೆಲ್ಲ ಅಂಕುರಿತವಾಗಿ, ಆತನಿಗೆ ಅರಿವಾಗುವುದಕ್ಕೆ ಮುಂಚೆಯೇ ಮಹಾವೃಕ್ಷಗಳಾಗಿ ಫಲಭರಿತವಾಗಿ ಹೋದವು. ಆತನು ಅದನ್ನೆಲ್ಲ ಹಾಗೆಯೇ ಸಂವರಿಸಿಕೊಂಡು, ಏನೇನೋ ಭಾವಗಳನ್ನೆಲ್ಲ ಸ್ಪಷ್ಟವಾಗಿ, ಹಾಗೂ, ಅಸ್ಪಷ್ಟ ವಾಗಿ ಸೂಚಿಸುವ ವಿಚಿತ್ರ ಧ್ವನಿಯಿಂದ, "ಹಾಗಾದರೆ........" ಎಂದನು. ಆ ವಿಚಿತ್ರದ ಹೆಣ್ಣು ಅದನ್ನೆಲ್ಲ ಅರ್ಥ ಮಾಡಿಕೊಂಡು, "ಹೌದು" ಎಂದು ನಕ್ಕು ತಲೆಬಾಗಿತು.

ನಗುವು ಸುತ್ತಮುತ್ತಲಿನ ಗುಡಿಸಿಲನ್ನು ಬೆಳಗಿ ರತ್ನದೀಪರಂಜಿತವಾದ ಸಾಮ್ರಾಟನ ಶಯ್ಯಾಗೃಹವೋ ಎನ್ನುವಂತೆ ಮಾಡಿತು. ಬಾಗಿದ ತಲೆಯೂ ಅದೇ ಭಾವವನ್ನು ಬೃಹತ್ತಾಗಿ ಮಾಡಿ ತೋರಿಸಿದ ದೇಹದ ಮುದ್ರೆಯೂ "ಒಪ್ಪಿಸಿಕೊಂಡಿದ್ದೇನೆ. ಒಪ್ಪಿಸಿಕೋ" ಎಂದು ಬಾಯಿ ಬಿಟ್ಟು ನುಡಿದಂತೆ, ನಿರ್ಮಲವಾದ ರನ್ನಗನ್ನಡಿಯಲ್ಲಿ ಪ್ರತಿಬಿಂಬಿಸುವ ಮುಖದಷ್ಟು ಸ್ಪಷ್ಟವಾಗಿ, ಹೇಳುತ್ತಿದೆ.

ವಿಶ್ವಾಮಿತ್ರನಿಗೆ ಏನು ಮಾಡಬೇಕೋ ತೋರಲಿಲ್ಲ. ಕುಳ್ಳಿರಲು ಆಗದೆ ಎದ್ದುಬಿಟ್ಟನು. ಬಹುದಿನದಿಂದ ಸಂಯಮದಲ್ಲಿದ್ದ ಮನಸ್ಸು ಸುಲಭವಾಗಿ ಪರವಶವಾಗದೆ ಸೆಡೆದು ನಿಂತಿರುವುದನ್ನು ತೋರುವುದಕ್ಕೋ ಎಂಬಂತೆ ದೇಹವೂ ನಿಡಿದಾಗಿ ನಿಂತಿದೆ. ಸ್ತ್ರೀ ಸಾನ್ನಿಧ್ಯದಿಂದ ಸಹಜವಾಗಿ ತಲೆದೋರಿದ ಚಾಂಚಲ್ಯವನ್ನು ನಿಗ್ರಹಿಸಲು ಚಿತ್ತದಲ್ಲಿ ವಿಜೃಂಭಿಸಿದ ಸಂಯಮದ ತೇಜಸ್ಸನ್ನು ಸಹಿಸಲಾರದೆ ಸಂತಪ್ತವಾದಂತೆ ದೇಹಕ್ಕೆ ಏಕೋ ಸೆಕೆಸೆಕೆಯಾಗುತ್ತಿದೆ. ಆ ಗುಡಿಸಲಿನಲ್ಲಿ ನಿಲ್ಲಲಾರದೆ ಎದ್ದು ಈಚೆಗೆ ಬಂದನು.

ಹೆಣ್ಣು ತಾನೂ ಎದ್ದು, ತಾನು ಕುಳಿತಿದ್ದ ಆಸನವನ್ನು ತೆಗೆದುಕೊಂಡು, ಅದರ ಮೇಲಿರಬಹುದಾದ ಧೂಳನ್ನು ನಯವಾಗಿ ನಾಜೋಕಾಗಿ ಒದರಿ, ಅದನ್ನು ಹಾಗೆಯೇ ಮಡಿಸಿ ಕೈಯಲ್ಲಿ ಹಿಡಿದುಕೊಂಡು ತಾನೂ ಆತನ ಹಿಂದೆಯೇ ಈಚೆಗೆ ಬಂತು.

ವಿಶ್ವಾಮಿತ್ರನಿಗೆ ಮನಸ್ಸು ಒಡೆದು ಎರಡು ಪಾಲಾಗಿದೆ. ಹಿಂದೆ ಭೋಗೈಕಸ್ಥಾನನಾಗಿ ರತ್ನಹಾರಿಯಾಗಿ ರಾಜನಾಗಿದ್ದ ಕಾಲದ ಭೋಗವಾಸನೆಗಳೆಲ್ಲವೂ ಮತ್ತೆ ಪ್ರಬುದ್ಧವಾಗಿವೆ. “ಭಲೆ ವಿಶ್ವಾಮಿತ್ರ, ಇನ್ನು ಯಾರಿಗುಂಟು ಈ ಸೌಭಾಗ್ಯ? ಯಾವ ಲೋಭಕ್ಕಾಗಿ ಎಲ್ಲರೂ ಸ್ವರ್ಗವನ್ನು ಬಯಸುವರೋ ಆ ಸ್ವರ್ಗಸೌಖ್ಯವೇ ನಿನ್ನನ್ನು ಹುಡುಕಿಕೊಂಡು ಬಂದಿದೆ. ಇನ್ನೇನಾಗಬೇಕು? ಯಾವ ಸ್ವರ್ಗಕ್ಕಾಗಿ ತ್ರಿಶಂಕುವು ಒದ್ದಾಡಿದನೋ ಆ ಸ್ವರ್ಗವೇ ಒಲಿದು ನಿನ್ನಲ್ಲಿಗೆ ಬಂದಿದೆ. ಈಗ ಏನು ಮಾಡುವೆ?” ಎಂದು ಒಂದು ಮನಸ್ಸು. ಇನ್ನೊಂದು ಬ್ರಹ್ಮತೇಜೋಮೂರ್ತಿಯಾಗಿರುವ ವಸಿಷ್ಠನನ್ನು ಕಣ್ಣುಮುಂದೆ ಇಟ್ಟು “ನೀನು ಆಗಬೇಕು ಎಂದಿರುವುದು ಇದು. ಅದಾದರೆ ಇದಿಲ್ಲ” ಎನ್ನುತ್ತದೆ.

ಹೀಗೆ ಎರಡು ಮನಸ್ಸುಗಳೂ ಹೋರಾಟ ಅಷ್ಟುಕಾಲ ನಡೆಸಿವೆ. ಎರಡು ಮಹಾಗಜಗಳು ಒಂದನೊಂದು ತಳ್ಳಿ ಆರ್ಭಟಿಸಿ, ನುಗ್ಗಿ ಹೋರಾಡುವಂತೆ ಎರಡೂ ಹೋರಾಡಿವೆ. ಕೊನೆಗೆ ಸದ್ಯದ ಸೌಖ್ಯಕಿಂತ ಭವಿಷ್ಯತ್ತಿನ ಶ್ರೇಯಸ್ಸೇ ದೊಡ್ಡದು ಎಂದಾಗಿ, ವಿಶ್ವಾಮಿತ್ರನ ಮನಸ್ಸು ಸ್ಥಿರವಾಗುತ್ತಿದೆ. ಬಿರುಗಾಳಿಯಲ್ಲಿ ಬಿದ್ದು ಬಿದ್ದೇಳುತ್ತಿದ್ದ ಕಡಲು ಬಿರುಗಾಳಿಯು ನಿಂತಮೇಲೂ ಒಂದಷ್ಟು ಹೊತ್ತು ಅಲ್ಲೋಲ ಕಲ್ಲೋಲವಾಗಿರುವಂತೆ, ಶ್ರೇಯಸ್ಸಿನ ಹಾದಿ ಹಿಡಿದರೂ

ಮನಸ್ಸಿನ ಅಸ್ಥೈರ್ಯ ಮಾಯುವುದಕ್ಕೆ ಅಷ್ಟುಹೊತ್ತು ಹಿಡಿಯಿತು. ಚಂದ್ರನು ಇನ್ನಷ್ಟು ಹೊತ್ತಾದರೆ ನೆತ್ತಿಯಮೇಲೆ ಬರುವನು. ಸಿಂಹಾಸನದ ಮೇಲಿರುವ ಶ್ವೇತಚ್ಛತ್ರದ ನೆರಳಿನಂತೆ ವಿಶ್ವಾಮಿತ್ರನು ನಿಂತಿರುವ ಮರದ ನೆರಳು ನೇರವಾಗಿ ತಲೆಯಮೇಲೆ ಬೀಳುವುದು.

ಸಂಯಮಿಯೋ ? ಸಮ್ರಾಟನೋ ? ಎಂಬ ಯುದ್ಧದಲ್ಲಿ ಸಮ್ರಾಟನಿಗೆ ಸೋಲಾಗಿದೆ. ಸಂಯಮಿಗೆ ಗೆಲುವಾಗಿದೆ. ಸಂಯಮಿಯು ದೇಹಾದ್ಯಂತವೂ ತಲೆದೋರಿದ್ದ ಕ್ಷೋಭೆಯನ್ನೆಲ್ಲ ತುಳಿದು, ಸ್ಥಿರನಾಗಿ ನಿಂತು ಏನೋ ಬಲು ಹೊತ್ತಿನಿಂದ ತನಗೂ ಅವಳಿಗೂ ನಡೆಯುತ್ತಿದ್ದ ವಾದವನ್ನು ಉಪಸಂಹಾರ ಮಾಡುವನಂತೆ ನುಡಿದನು. ಮಾತಿನಲ್ಲಿ ಮಾಧುರ್ಯವಿತ್ತು : ತೀವ್ರತೆಯಿರಲಿಲ್ಲ : ನಿಷ್ಠುರವಿರಲಿಲ್ಲ : ಸೌಜನ್ಯವಿತ್ತು. ಅಲೆಯಿರಲಿಲ್ಲ : ನೆಲೆಯಿತ್ತು : ಒಡಕು ಇರಲಿಲ್ಲ : ತುಂಬು ತಾನೇತಾನಾಗಿತ್ತು : "ಉಹುಂ. ನನಗೆ ಬೇಕಿಲ್ಲ."

ಹಾಗೆಂದು ಹೇಳುತ್ತ ಏನೋ ಅನನ್ಯ ಮನಸ್ಕನಾದಂತೆ, ತನ್ನ ದೇಹದ ಭಾರವನ್ನು ತಾನೇ ತಡೆಯಲಾರದವನಂತೆ, ಧೊಪ್ಪನೆ ಬಿದ್ದುಹೋಗುವವನಂತೆ, ವಿಶ್ವಾಮಿತ್ರನು ಥಟ್ಟನೆ ಕುಳಿತನು. ಆ ಮಾತನಾಡುವ ಪ್ರಯತ್ನದಲ್ಲಿ ದೇಹದಲ್ಲಿದ್ದ ಶಕ್ತಿಯೆಲ್ಲ ವ್ಯಯವಾಗಿ ದೇಹವು ನಿಶ್ಶಕ್ತಿಯಾದಂತೆ ಇತ್ತು. ಅಷ್ಟರೊಳಗಾಗಿ ಹೆಣ್ಣು ಮುಂದೆ ಬಂದು ಬೀಳುವ ದೇಹಕ್ಕೆ ತನ್ನ ದೇಹವನ್ನು ಒತ್ತಿಕೊಟ್ಟು ಕೈಯಲ್ಲಿದ್ದ ಆಸನವನ್ನು ಹಾಸಿ ಆತನನ್ನು ಮೆಲ್ಲಗೆ ಕುಳ್ಳಿರಿಸಿದಳು. ಅವಳು ಮಾಡಿದ ಉಪಚಾರದ ಸೊಗಸನ್ನು ಅರಿಯಲು ಆತನಿಗೆ ಮೈಮೇಲೆ ಅರಿವೇ ಇರಲಿಲ್ಲ.

---

## ಮೂವತ್ತೈದನೆಯ ತರಂಗ

ಆ ಮಧ್ಯರಾತ್ರಿಯಲ್ಲಿಯೂ ಆ ಮಹರ್ಷಿಗೆ ಮೈ ಬೆವರಿತು. ಒಂದು ಗಳಿಗೆಯಾದ ಮೇಲೆ ಕಣ್ಣುಬಿಟ್ಟು ಪ್ರಕೃತಿಸ್ಥನಾಗಿ, ಸಣ್ಣವಾದರೂ ದೃಢ

ವಾದ ಧ್ವನಿಯಿಂದ "ನಿನ್ನ ಹೆಸರೇನು?" ಎಂದು ಕೇಳಿದನು. ಆಕೆಯೂ ಮೃದುವಾಗಿ ಪ್ರಿಯವಾಗಿ "ಮೇನಕಾ" ಎಂದಳು.

ಆ ಹೆಸರಿನ ಅಕ್ಷರಗಳನ್ನು ಒಂದೊಂದಾಗಿ ಜೀರ್ಣಿಸಿಕೊಳ್ಳುತ್ತಿದ್ದವ ನಂತೆ ಆತನು ಒಂದು ಗಳಿಗೆ ಸುಮ್ಮನಿದ್ದು "ಮೇನಕಾ, ಇಂದ್ರನಿಗೆ ನಾನು ಕೃತಜ್ಞನಾಗಿದ್ದೇನೆ. ಆದರೆ ಸಾಮ್ರಾಜ್ಯವನ್ನೆಲ್ಲ ತೊರೆದು ಯಾವುದೋ ದೂರಸಿದ್ಧಿಗಾಗಿ ಒದ್ದಾಡುತ್ತಿರುವ ಅರಣ್ಯವಾಸಿಗೆ ಈ ಅನುಗ್ರಹದಿಂದ ಏನು ಫಲ? ನೀನು ಹೋಗಿ ಬಾ. ನಿನಗೆ ಮಂಗಳವಾಗಲಿ" ಎಂದನು.

ಮೇನಕೆಯು ಅಪ್ರತಿಭಳಾಗಲಿಲ್ಲ. "ದೇವಾ! ಮನ್ನಿಸಬೇಕು. ದೇವತೆ ಗಳು ಮನಃಪೂರ್ವಕವಾಗಿ ಕೊಟ್ಟ ವರವನ್ನು ನಿರಾಕರಿಸುವುದು ಅಷ್ಟು ಸುಲಭವಲ್ಲ: ಸಾಧ್ಯವೂ ಅಲ್ಲ: ಸಾಧುವೂ ಅಲ್ಲ" ಎಂದಳು. ಮಾತಿನ ದನಿ ಮಧ್ಯಸ್ಥಗಾರನ ನಿಷ್ಪಕ್ಷಪಾತವನ್ನು ಮಿಡಿಯುತ್ತಿತ್ತು.

ಮುನಿಯು ಕೇಳಿದನು: "ನಾವು ಸ್ವತಂತ್ರರು. ದೇವತೆಗಳು ಕೊಟ್ಟ ರೆಂಬ ಮಾತ್ರದಿಂದಲೇ ನಾವು ಸ್ವೀಕರಿಸಬೇಕಾಗಿಲ್ಲ."

"ಸೃಷ್ಟಿಯ ನಿಯಮ ಹಾಗಿಲ್ಲ. ದೇವತೆಗಳು ಯಾವುದನ್ನೂ ಸ್ವತಂತ್ರಿಸಿ ಕೊಡುವುದೂ ಇಲ್ಲ: ತೆಗೆದುಕೊಳ್ಳುವುದೂ ಇಲ್ಲ. ಅವರು ಧರ್ಮದರ್ಶಿಗಳ ಹಾಗೆ ಲೋಕದ ಸ್ವತ್ತನ್ನೆಲ್ಲ ಕಾಪಾಡಿಕೊಂಡಿರುವರು. ಅವರಾಗಿ ಕೊಡು ವುದು ಎಂದರೆ ಜೀವಿಗಳ ಕರ್ಮವು ಪಾಕಾಭಿಮುಖವಾಯಿತು ಎಂದರ್ಥ, ಅಷ್ಟೇ!"

ವಿಶ್ವಾಮಿತ್ರನಿಗೆ ಏಕೋ ಅಸಮಾಧಾನವಾಯಿತು. ಸಣ್ಣಗೆ ಹುಬ್ಬು ಗಂಟಿಕ್ಕಿ ವೈಮನಸ್ಯವನ್ನು ಸೂಚಿಸುವ ಸಣ್ಣದನಿಯಲ್ಲಿ "ಹಾಗೂ ನಾವು ಬೇಡವೆಂದು ಹಟಹಿಡಿದರೆ?" ಎಂದನು.

ಮೇನಕೆಯು ಸಣ್ಣ ನಗೆ ನಕ್ಕು ಕೈಮುಗಿದು "ದೇವಾ, ಮನ್ನಿಸಬೇಕು. ದೇವಯೋನಿಗಳಾದ ನಾವು ಮನುಷ್ಯರಿಗಿಂತ ಕೊಂಚ ಹೆಚ್ಚುದೂರ ಭವಿಷ್ಯ ವನ್ನು ನೋಡಬಲ್ಲೆವು. ಆದರಿಂದ, ಮುಂದೆ ಏನಾಗುವುದೆಂಬುದನ್ನು ಬಲ್ಲೆ ನಾಗಿ, ಇಂದು ವಾದಿಸಿ ಮುಂದೆ ವಿರಸಕ್ಕೆಡೆಗೊಡುವ ಸಂದರ್ಭವನ್ನು ತಂದು ಕೊಳ್ಳಲಾರೆ. ಈ ವಿಷಯವನ್ನು ಕೂಲಂಕಷವಾಗಿ ಚರ್ಚಿಸಬಲ್ಲವರನ್ನು ಕರೆಯುತ್ತೇನೆ. ಅಪ್ಪಣೆಯಾಗಬೇಕು" ಎಂದು ಪ್ರಾರ್ಥಿಸಿದಳು.

ವಿಶ್ವಾಮಿತ್ರನಿಗೆ ಮನಃಕ್ಷೋಭವಾಗಿದೆ. ಆಕೆಯ ರೂಪ ಸೌಂದರ್ಯಗಳು ಆ ಬೆಳದಿಂಗಳಿನಲ್ಲಿ ಅರ್ಧಾರ್ಧವಾಗಿ ಕಾಣುತ್ತಿದ್ದರೂ ಲೋಭದಿಂದ ಶತ್ರುವಿಗೆ ವಶನಾಗಿ ತನ್ನ ಅರಸನನ್ನು ಶತ್ರು ವಶಮಾಡಲು ಸಿದ್ಧನಾಗಿರುವ ದಳಪತಿಗಳಂತೆ ಕಣ್ಣು ಸೋತು ಮನಸ್ಸನ್ನು ಪರವಶಗೊಳಿಸಲು ಸಿದ್ಧವಾಗಿದೆ. ಸುರಮ್ಯ ಸಂಗೀತಕ್ಕಿಂತ ಹಿತವಾಗಿರುವ ಆ ದನಿಯನ್ನು ಕೇಳಿ ಕಿವಿಯು ಮನಸ್ಸನ್ನು ಒಪ್ಪಿಕೋ ಎನ್ನುವಂತಿದೆ. ಆಕೆಯ ಕಡೆಯಿಂದ ಎರಚಿದಂತೆ ತರಂಗ ತರಂಗವಾಗಿ ಬರುತ್ತಿರುವ ಆ ಅಲೌಕಿಕ ಸುಗಂಧವನ್ನು ಆಘ್ರಾಣಿಸಿದ ನಾಸಿಕವು, "ನೀನು ಒಲಿಯದಿದ್ದರೆ, ನಾನಿಲ್ಲಿಂದ ಎದ್ದು ಹೊರಟುಹೋಗುವೆನು" ಎಂದು ಮನಸ್ಸಿನೊಡನೆ ಹಟಮಾಡುವಂತಿದೆ. ದೇಹವು ಆ ದೇಹದ ಅಮೃತ ಸ್ಪರ್ಶವನ್ನು ನೆನೆದು ನೆನೆದು "ಮಾತು ಸಾಕು. ಒಣಮಾತಿನ ಜಂಭಬಿಟ್ಟು ಉಪಚಾರಕ್ಕೆ ಮುಂದೆ ನುಗ್ಗು" ಎಂದು ಮನಸ್ಸಿಗೆ ಆಜ್ಞೆಯೀಯುವಂತಿದೆ. "ಸ್ವರ್ಗಸೌಂದರ್ಯದ ಸೀಮಾಭೂಮಿಯಾದವಳು ತಾನಾಗಿ ಒಲಿದು ಬಂದಿರುವಾಗ ಬೇಡವೆನ್ನುವ ದಿಟ್ಟತನಕ್ಕಿಂತ ಅವಿವೇಕವುಂಟೆ?" ಎಂದು ಮನಸ್ಸೇ ಮೊಕ ಮುರಿಯುವಂತಿದೆ. ಬುದ್ಧಿಯೊಂದು ಮಾತ್ರ ವಸಿಷ್ಠ ವಾಮದೇವರನ್ನು ಅನುಲಕ್ಷಿಸಿ, "ನಿನ್ನ ಸಿದ್ಧಿ, ಅದು ಇದಲ್ಲ" ಎಂದು ಹಟ ಹಿಡಿದಿದೆ. ವಿಶ್ವಾಮಿತ್ರನು ಏನು ಹೇಳಬೇಕೋ ತಿಳಿಯದೆ, ಮೇನಕೆಯ ಮಾತಿಗೆ ಪ್ರತಿಯಾಡಲಾರದೆ "ಹೂಂ" ಎಂದು ಅಪ್ಪಣೆಕೊಟ್ಟಿದ್ದಾನೆ.

ಕೂಡಲೇ ಇಬ್ಬರು ಕಾಣಿಸಿಕೊಂಡು ಕೈಮುಗಿದರು. ಮುನೀಂದ್ರನು ಯಾರು ಎಂದು ವಿಚಾರಿಸಬೇಕು ಎಂದುಕೊಳ್ಳುವಷ್ಟರಲ್ಲಿ ಬಂದವರಲ್ಲಿ ಒಬ್ಬನು ಮುಂದೆ ಬಂದು "ಮಹರ್ಷಿಗಳಿಗೆ ವಂದನವು. ಈತನು ಕಾಮದೇವನು. ನಾನು ವಸಂತನು. ಈತನ ಆಜ್ಞಾಧಾರಕನು" ಎಂದು ಕೈಮುಗಿದನು. ಕಾಮದೇವನೂ ವಿನಯದಿಂದ ಕೈ ಮುಗಿದನು. ವಿಶ್ವಾಮಿತ್ರನು ಅನವಹಿತನಾಗಿ ಸಂಪ್ರದಾಯದಂತೆ, ಅರಸುಗಳಿಗೆ ಆಶೀರ್ವಾದಮಾಡಿ ಪದ್ಧತಿಯಂತೆ "ವಿಜಯೀಭವ" ಎಂದನು.

ವಸಂತನು ತುಂಟತನವೇ ಆದರೂ ವಿಪ್ರಿಯವಲ್ಲದ ರೀತಿಯಲ್ಲಿ ಸಣ್ಣನಗೆ ನಕ್ಕು "ನಮ್ಮ ಅರಸನು ದೀರ್ಘಸಮರಕ್ಕೆ ಸಿದ್ಧನಾಗಿದ್ದನು ಇಷ್ಟು ಸುಲಭವಾಗಿ ಗೆಲುವಾಗುವುದೆಂದಿರಲಿಲ್ಲ" ಎಂದನು.

ಮುನೀಂದ್ರನು ಅವಹಿತನಾದನು. ವಸಂತನ ಮಾತು ಅರ್ಥವಾಗದೆ, “ ಹಾಗೆಂದರೆ ? ” ಎಂದನು.

ವಸಂತನು “ ದೇವ, ನಾವು ಇಲ್ಲಿ ಬಂದಿರುವುದು ಇಂದ್ರನ ಅಪ್ಪಣೆಯನ್ನು ಪಾಲಿಸುವುದಕ್ಕೆ : ಮೇನಕಾದೇವಿಯನ್ನು ತಮಗೊಪ್ಪಿಸುವುದಕ್ಕೆ. ನಮ್ಮ ಅರಸನನ್ನು ತಾವು ವಿಜಯೀಭವ ಎಂದು ಆಶೀರ್ವದಿಸಿದಿರಿ. ಸ್ವಾಮಿಕಾರ್ಯ ವಲ್ಲದ ಇನ್ನೇನೂ ಬೇಕಾಗಿಲ್ಲದ ನಮಗೆ ಯಾವ ವಿಜಯವು ಅಭಿಮತವೋ ತಾವೇ ಯೋಚಿಸಿ ” ಎಂದನು.

ಮುನೀಂದ್ರನು ಅವಾಕ್ಕಾದನು. ಆ ಸೋಲಿನಿಂದ ಮನಸ್ಸಿಗೆ ಪ್ರಿಯ ವಾಯಿತು. ಬುದ್ಧಿಗೆ ಒಗರಾಯಿತು. ಇನ್ನೂ ಬುದ್ಧಿಯ ಅಧಿಕಾರವೇ ಇತ್ತಾಗಿ ಮತ್ತೆ ಮಾತನಾಡಿದನು. “ ಆಯಿತು. ನೀವು ಬಂದುದು ದೇವತೆ ಗಳು ಕೊಟ್ಟುದನ್ನು ಮಾನವರು ಸ್ವೀಕರಿಸಲೇಬೇಕು ಎಂಬ ಅರ್ಥವನ್ನು ಪ್ರತಿ ಪಾದಿಸುವುದಕ್ಕೆ, ಅಲ್ಲವೆ ? ” ಎಂದು ಕೇಳಿದನು.

ಕಾಮದೇವನು ನಕ್ಕು, “ ವಿಶ್ವಾಮಿತ್ರ, ನೀನು ವಿಶ್ವ ಮಿತ್ರನೆಂದು ಒಪ್ಪಿ ಕೊಂಡಿರುವೆ. ಇಂದ್ರನು ನಿನ್ನನ್ನು ತನ್ನ ಪ್ರಿಯಮಿತ್ರರಲ್ಲಿ ಒಬ್ಬನೆಂದು ಅಂಗೀಕರಿಸಿರುವನು. ಮಿತ್ರನಿಗೆ ಮಿತ್ರನು ಕೊಡುವ ಕಾಣಿಕೆಯನ್ನು ಸ್ವೀಕ ರಿಸದಿರುವುದು ಎಲ್ಲಿಯ ನ್ಯಾಯ ? ನೀನು ಸಿದ್ಧಿಯೊಂದನ್ನು ಲಕ್ಷ್ಯದಲ್ಲಿಟ್ಟು ಕೊಂಡು ಈಗ ತಾನಾಗಿ ಬಂದಿರುವ ಈ ಸಿದ್ಧಿಯನ್ನು ಏಕೆ ದುರ್ಲಕ್ಷಿಸುವೆ ? ನೀನು ಈಗ ಪಡೆದಿರುವ ಸಿದ್ಧಿಯು ಸಾಮಾನ್ಯವೆಂದು ಭಾವಿಸಿರುವೆಯಾ ? ಇಲ್ಲ. ಯಾವ ಸಿದ್ಧಿಗಾಗಿ ತ್ರಿಶಂಕುವು ಗುರುವಿನಿಂದ ಶಾಪವನ್ನು ಪಡೆದನೋ, ಆತನ ಯಾವ ಸಿದ್ಧಿಗಾಗಿ ನೀನೂ ಜಮದಗ್ನಿಯೂ ನಿಮ್ಮ ತಪಸ್ಸನ್ನೆಲ್ಲ ಧಾರೆ ಹೊಯ್ದಿರೊ, ಆ ಸಿದ್ಧಿಯ ಸ್ವರೂಪವೇನು ಯೋಚಿಸಿದೆಯಾ ? ಯಾಜ್ಞಿಕರು, ತಪಸ್ವಿಗಳು, ಪುಣ್ಯಕರ್ತೃಗಳು ಇವರೆಲ್ಲ ಅಪೇಕ್ಷಿಸುವುದು ಸ್ವಚ್ಛಂದಭೋಗ ವಲ್ಲದೆ ಇನ್ನೇನು ? ಆ ಸಿದ್ಧಿಗಳೆಲ್ಲವೂ ಸಮ್ಮಿಷ್ಟಿಯಾಗಿ ಮೈವೆತ್ತು ಬಂದಂತೆ ಬಂದುದಲ್ಲವೆ ಈ ಸಿದ್ಧಿ ? ಮುನೀಶ್ವರ, ನೀನು ಕೋರುವ ಸಿದ್ಧಿಯು ಈಗ ಬಂದಿ ರುವ ಸಿದ್ಧಿಯನ್ನು ನೂಕಿದಲ್ಲದೆ ಬರುವುದಿಲ್ಲವೆಂದು ಯಾರಾದರೂ ನಿನಗೆ ಅಭಿ ವಚನಕೊಟ್ಟು ಶಪಥಪೂರ್ವಕವಾಗಿ ಪ್ರತಿಜ್ಞೆಮಾಡಿರುವರೆ ? ರಾಜರ್ಷಿ ವರ್ಯನೆ, ಸೃಷ್ಟಿಯೇ ಹೆಣ್ಣಲ್ಲವೆ ? ಸೃಷ್ಟಿಯ ಮಹಾಕಾರಣವಾಗಿ, ಸೃಷ್ಟಿ

ರೂಪವೇ ತಾನಾಗಿರುವ ಹೆಣ್ಣನ್ನು ಬಿಟ್ಟು ನೀನು ಸಾಧಿಸುವುದೇನನ್ನು? ಯೋಚಿಸು. ಹೆಣ್ಣನ್ನು ನೂಕಿ ಗೆಲ್ಲುವೆನೆನ್ನುವವನಿಗಿಂತ ಕಟ್ಟಿಕೊಂಡು ಗೆಲ್ಲುವೆನೆನ್ನುವವನು ಹೆಚ್ಚು ಬಲ್ಲಿಯಾ? ಇನ್ನು ದೇವತೆಗಳ ಮಾತು - ದೇವತೆಗಳು ಎಂದರೆ ಯಾರು ಎಂದುಕೊಂಡಿರುವೆ? ಈ ಪ್ರಪಂಚ ಸೃಷ್ಟಿಯಾದಾಗ, ಇನ್ನುಮುಂದೆ ಇರಬೇಕಾದ ಸ್ಥಿತಿಯ ರಕ್ಷಣೆಗಾಗಿ ಅಧಿಕಾರ ಪಡೆದವರು ನಾವು. ನಾವು ಹೇಳಿದಂತೆ ಈ ವಿಶ್ವವೆಲ್ಲವೂ ನಡೆದೇ ತೀರಬೇಕು ಎನ್ನುವ ಸೃಷ್ಟಿಯ ಗುಟ್ಟನ್ನು ನೀನರಿಯೆಯಾ? ತ್ರಿಶಂಕುವಿನ ಯಾಗಮಾಡಿಸುವಾಗ, ಇಂದ್ರನು ಬರಲಿಲ್ಲವೆಂದು ನೀನು ಎಷ್ಟು ವ್ಯಥೆಪಟ್ಟೆ ಮರೆತೆಯಾ? ಮತ್ತೆ ಗುರುವು ಅಡ್ಡಬಂದಾಗ ಅನ್ಯಮಿಂದ್ರಂ ಕರಿಷ್ಯಾಮಿ ಎಂಬ ನಿನ್ನ ಸಂಕಲ್ಪವನ್ನು ಬಿಟ್ಟುಕೊಟ್ಟುದನ್ನು ನೀನು ನೆನಪುಮಾಡಿಕೊ. ಇಂದ್ರನು ಬರದೆ ಇದ್ದುದರಿಂದ ಆದ ಅನರ್ಥವೆಷ್ಟು ಎಂದು ಕುದಿಯುತ್ತಿದ್ದ ನಿನ್ನ ಮನಸ್ಸು ಇಂದ್ರನು ಸಾಕ್ಷಾತ್ತಾಗಿ ಬಂದಾಗ ಶಾಂತವಾಗಿ ಇಂದ್ರನಿಷ್ಟದಂತೆ ವಸಿಷ್ಠನ ಶೋಕವನ್ನು ವಹಿಸಿಕೊಳ್ಳಲು ಸಿದ್ಧವಾದುದನ್ನು ಗಮನಿಸು........"

ಕಾಮದೇವನು ಇನ್ನು ಮುಂದೆಯೂ ಏನೋ ಹೇಳಬೇಕೆಂದಿದ್ದರೂ, ವಿಶ್ವಾಮಿತ್ರನು ಥಟ್ಟನೆ ಬಾಯಿಹಾಕಿ, "ಹಾಗಲ್ಲ. ವಸಿಷ್ಠಶೋಕವು ಅಪಾರವಲ್ಲಾ ಎಂಬ ಕನಿಕರದಿಂದ ಕರಗಿ ನಾನಾಗಿ ನಾನು ವಹಿಸಿಕೊಂಡೆನಲ್ಲದೆ, ಇಂದ್ರನ ಅಪೇಕ್ಷೆಯಂತಲ್ಲ" ಎಂದು ಪ್ರತಿಭಟಿಸಿದನು.

"ದೇವಾ! ಇಲ್ಲಿಯೇ ಮನುಷ್ಯರೆಲ್ಲರೂ ಎಡಹುವುದು. ಮನುಷ್ಯರು ಮಾತ್ರವಲ್ಲ; ಸೃಷ್ಟಿಗೆ ಸೃಷ್ಟಿಯೇ ಎಡಹುವುದು ಇಲ್ಲಿ. ಈ ವಿಶ್ವದಲ್ಲಿ ಈ ಭೂಮಂಡಲದಂತಹ ಲೋಕಗಳು ಎಷ್ಟೋ ಇವೆ. ಅಲ್ಲೆಲ್ಲಾ ಇದೇ ರೀತಿಯಾದ ಶರೀರಧಾರಿಗಳೂ ಇದ್ದಾರೆ. ಪಂಚಭೂತಗಳಿಂದಾದ ಶರೀರ ಒಂದೊಂದರಲ್ಲಿ ಭೂತಭೂತದ ನ್ಯೂನಾಧಿಕತೆಗಳಿಂದ ಶರೀರವು ಒಂದೊಂದು ಗುಣ ಅಥವಾ ದುರ್ಗುಣದಿಂದ ಕೂಡಿರುವುದು. ನೀವು ಮನುಷ್ಯರು ಪಾರ್ಥಿವಾಂಶ ಅಧಿಕವಾದ ದೇಹದವರು. ನೀವು ಭೂಮಿಯನ್ನು ಬಿಟ್ಟು ನಡೆಯಲಾರಿರಿ. ದೇವತೆಗಳು ತೇಜೋವಾಯುಗಳ ಅಂಶ ಅಧಿಕರಾದವರು. ಭೂಮಿಗಿಂತ ತೇಜೋವಾಯುಗಳು ಶ್ರೇಷ್ಠವು. ಅವರು ಸಂಕಲ್ಪಮಾಡಿದ ಹೊರತು ಇನ್ನೊಬ್ಬರು ಅವರನ್ನು ಕಾಣಲಾರರು. ಅವರು ಭೂಮಿಯ ಮೇಲೆ ಕುಳಿತು

ಕೊಳ್ಳಲಾರರು. ಭೂಜಲಾಂಶಗಳನ್ನು ವಿವೃದ್ಧಿಮಾಡಿಕೊಂಡಲ್ಲದೆ, ಅವರು ಏನೂ ತಿನ್ನಲಾರರು. ಬಲ್ಲೆಯಾ ? ಹೀಗೆ ಏನನ್ನೂ ತಿನ್ನದೆ ಕೇವಲ ದರ್ಶನ ಮಾತ್ರದಿಂದಲೇ ತೃಪ್ತರಾಗುವ ದೇವತೆಗಳ ವಶದಲ್ಲಿ ಈ ಚರಾಚರವೆಲ್ಲವೂ ಇರುವುದು. ಇದನ್ನು ಮರೆತು ನೀನು 'ನನ್ನ ಸ್ವಸಂಕಲ್ಪದಿಂದ ನಾನು ಕಾರ್ಯಮಾಡಿದೆ' ಎಂದುಕೊಂಡರೆ, ಅದು ನಮ್ಮ ಪ್ರಭಾವ. ಇಲ್ಲಿ ಎದುರಿಗಿರುವ ಈ ಚಿಗುರು ಹೂಗಾಳಿ ಸುಳಿದಾಗ ಅಲ್ಲಾಡುವಂತೆ, ಈ ಮೇನಕೆಯ ಕಿವಿಯಲ್ಲಿರುವ ಚಳತುಂಬು ಅವಳ ತಲೆಯಲ್ಲಾಡಿದರೆ ತಾನೂ ಅಗತಿಕವಾಗಿ ಆಡುವಂತೆ, ನನ್ನ ಕೈಯಲ್ಲಿ ಹಿಡಿದಿರುವ ಈ ಕನ್ನೈದಿಲೆ ನಾನು ತಿರುಗಿಸಿದಂತೆ ತಿರುಗಲೇಬೇಕಾಗಿರುವಂತೆ, ಈ ಸೃಷ್ಟಿಯಲ್ಲಿರುವ ಸಮಸ್ತವೂ ದೇವತೆಗಳ ಇಷ್ಟದಂತೆ ನಡೆದೇ ತೀರಬೇಕೆಂಬ ನಿಯಮಕ್ಕೆ ಒಳಗಾಗಿರುವುದನ್ನು ಬಲ್ಲೆಯಾ ? ಆದರೆ ದೇವತೆಗಳು ಪ್ರತ್ಯಕ್ಷಪ್ರಿಯರಲ್ಲ, ಪರೋಕ್ಷಪ್ರಿಯರು. ಎದುರಿದ್ದು ಹೇಳಿ ಕೆಲಸಮಾಡಿಸುವುದು ಅವರ ಪದ್ಧತಿಯಲ್ಲ. ಮೇಲಿನಿಂದ ಬರುತ್ತಿರುವ ನದಿಗೆ ಒಂದು ಸಣ್ಣ ಅಡ್ಡಿಯನ್ನಿಟ್ಟು ನದಿಯ ಹಾದಿಯನ್ನೇ ಬದಲಿಸುವ ಶಿಲ್ಪಿಯಂತೆ, ನಿನ್ನ ಮನಸ್ಸು, ನಿನ್ನ ಬುದ್ಧಿ, ನಿನ್ನ ಅಹಂಕಾರಗಳ ಹಿಂದಿದ್ದು ನಾವು ಕೆಲಸಮಾಡಬಲ್ಲೆವು. ಆದರೂ ಎದುರು ಬಂದುದೇಕೆ ? ಎನ್ನುವಿಯಾ ? ನಿನ್ನಿಂದ ಸೃಷ್ಟಿಯ ಒಂದು ಕೆಲಸ ಆಗಬೇಕಾಗಿದೆ. ಅದಕ್ಕಾಗಿ ನಿನ್ನ ಅಹಂಕಾರ ಬೆಳೆಯಬೇಕು.

"ಅಹಂಕಾರವು ಬೆಳೆಯಲು ಭೋಗ ಬೇಕು. ಅನುಭವ ಬೇಕು. ಬೆಳೆದ ಅಹಂಕಾರವೇ ಮಹತ್ಕಾರ್ಯಗಳನ್ನು ಮಾಡಬಲ್ಲುದು. ಅದರಿಂದ ಅಹಂಕಾರವು ಬೆಳೆಯಲೆಂದು ವಿಚಿತ್ರಭೋಗಗಳನ್ನೂ ವಿಚಿತ್ರಾನುಭವಗಳನ್ನೂ ದೇವತೆಗಳು ಒದಗಿಸುವರು. ಅದನ್ನು ಅರಿಯದೆ ಲೋಕವು ದೇವತೆಗಳು ತಪೋಭಂಗ ಮಾಡಿದರು" ಎನ್ನುವುದು.

"ಹಾ ! ಹಾ ! ಹೌದು ಹೌದು. ನೀನೇನು ಯೋಚಿಸುವೆಯೆಂಬುದು ನನಗೆ ತಿಳಿಯಿತು. ನನ್ನ ಪ್ರಭಾವವು ನಿನ್ನ ಒಳಗೂ ಇದೆ ಎಂಬುದನ್ನು ತೋರಿಸುವುದಕ್ಕಾಗಿ ನಾನೀ ಮಾತನ್ನು ಹೇಳುವೆನು. ವಿಶ್ವಾಮಿತ್ರ, ಹಾಗಾದರೆ ಭೋಗಾನುಭವದಿಂದ ತಪೋಹಾನಿಯಾಗುವುದಿಲ್ಲವೇ ? ಎಂದು ಸಂಶಯ ಪಡುತ್ತಿರುವೆಯಲ್ಲವೆ ? ನೀನು ಪ್ರಾಣೋಪಾಸಕ. ಪ್ರಾಣವು ವಿಜೃಂಭಿಸಿ

ಹೊರಕ್ಕೆ ಪ್ರವಾಹವಾಗಿ ಹೊರಡುವುದನ್ನು ನೀನು ನೋಡಿರುವೆ. ಹಾಗೆ ಪ್ರಾಣವು ನಿರ್ಗಮನಮಾಡಿದುದರಿಂದ ನಿನಗೆ ನಷ್ಟವಾಯಿತೆ? ಗಿಡವು ಚಿಗುರಿದರೆ ಅದರ ಪ್ರಾಣವು, ಅದರ ರಸವು ಬೆಳೆಯಿತೋ ಕುಗ್ಗಿತೋ? ಬೆಳೆಯುವ ಗಿಡವು ಬಲಿಯುವಂತೆ, ಧರ್ಮಕ್ಕೆ ಅವಿರುದ್ಧವಾದ ಭೋಗವು ತಪಸ್ಸನ್ನು ತಿಂದಂತೆ ಕಂಡರೂ ತಪಸ್ಸನ್ನು ಬೆಳೆಸುವುದು. ಈ ಗುಟ್ಟು ನಿನಗೆ ತಿಳಿಯದೆ?

"ಬರಿಯ ಕಾಲಹರಣದ ಮಾತುಗಳಿಂದ ಫಲವೇನು? ವಿಶ್ವಾಮಿತ್ರ, ದೇವಕಾರ್ಯಕ್ಕಾಗಿ ಯಾವನು ಬೇಕೋ ಅವನ ಅಹಂಕಾರವನ್ನು ಬೆಳೆಸುವುದೇ ನನ್ನ ಕಾರ್ಯ. ದೇವಕಾರ್ಯಕ್ಕೆ ಬೇಡದವನ ಅಹಂಕಾರವು ವಿಜೃಂಭಿಸುವುದೂ ನನ್ನಿಂದಲೇ! ಆದರೆ ಅದೂ ಅವನ ವಿನಾಶಕ್ಕಾಗಿ. ಅದಿರಲಿ. ಇನ್ನೊಂದು ಮಾತು. ಅದನ್ನು ನೀನು ತಿಳಿದಿರು. ದೇವತೆಗಳೇ ಈ ಆಟವನ್ನು ಹೂಡಿರುವರು. ಒಂದೇ ಸೇನೆಯೇ ಇಬ್ಭಾಗವಾಗಿ ಕೃತ್ರಿಮ ಕದನ ನಡೆಸಿದಂತೆ, ರಸವನ್ನು ವಹಿಸಿದ್ದ ಕಬ್ಬನ್ನು ಹಿಂಡಿಕೊಂಡು, ಆ ಸಿಪ್ಪೆಯನ್ನು ತಿಪ್ಪೆಗೆಸೆದು ರಸವನ್ನು ಸಕ್ಕರೆಮಾಡಿ ತುಂಬಿಟ್ಟುಕೊಳ್ಳುವಂತೆ ನಾವು ಏನೇನೋ ಆಟ ಕಟ್ಟುವೆವು. ಪೂರ್ವಾಪರಗಳನ್ನು ಅರಿಯದ ಮಾನವರ ಕಣ್ಣಿಗೆ ನಾವು ಹುಚ್ಚರು. ನಮ್ಮ ಕಣ್ಣಿಗೆ ಮಾನವರು ಬೆಪ್ಪರು.

"ಕೊನೆಯ ಮಾತು ಕೇಳು. ಅಹಂಕಾರವನ್ನು ಅಳೆಯುವುದೊಂದು ಸಾಧನವಿದೆ. ಅದು ಆನಂದವನ್ನು ಅನುಭವಿಸಬಲ್ಲ ಯೋಗ್ಯತೆ. ಈ ಯೋಗ್ಯತೆಯು ಎಷ್ಟು ಎಂದು ಗೊತ್ತುಮಾಡುವುದಕ್ಕಾಗಿಯೇ ನಾವು ಭೋಗವನ್ನು ಕೊಡುವುದು. ಸೋಮರಸ ಪಾನದಿಂದ ಮತ್ತೇರಿದಾಗಲಲ್ಲವೇ ಇಂದ್ರನು ಮಹತ್ಕಾರ್ಯಗಳನ್ನು ಸಾಧಿಸುವುದು? ಸೋಮರಸವು ಔಷಧಿವರ್ಗದಲ್ಲಿ ಕಾಣಿಸಿಕೊಂಡಾಗ ಸೋಮಲತೆಯಾಗುವುದು. ಮಾನವದೇಹಕ್ಕೆ ಇಳಿದಾಗ ಸ್ತ್ರೀಯಾಗುವುದು. ಬೆಳೆಯುವ ಬೀಜಕ್ಕೆ ಗೊಬ್ಬರವೆಷ್ಟು ಅವಶ್ಯಕವೋ ಅಹಂಕಾರ ವಿವೃದ್ಧಿಗೆ ಸ್ತ್ರೀಯೂ ಅಷ್ಟೇ ಕಾರಣಳು. ಅಷ್ಟೇನು? ನೀನು ನಿನ್ನ ಪ್ರಾಣೋಪಾಸನೆಯನ್ನು ಕಲಿತುದು ಆಪೋದೇವಿಯರ ಅನುಗ್ರಹದಿಂದ ಅಲ್ಲವೆ? ಬ್ರಹ್ಮಾಂಡಕ್ಕೆ ಅಧಿಷ್ಠಾನವಾಗಿರುವ ಶಕ್ತಿಯು ರುದ್ರರೂಪವಾಗಿ ಪ್ರಸನ್ನವಾಯಿತು. ನೀನು ವಸಿಷ್ಠರನ್ನು ಸುಟ್ಟುರುಹುವೆನೆಂದು ಹೋದೆ. ಆಪೋ

ದೇವಿಯರ ಅನುಗ್ರಹವಾಯಿತು: ತ್ರಿಶಂಕುವನ್ನು ಉದ್ಧರಿಸುವೆನೆಂದೆ. ಇದನ್ನು ಪರ್ಯಾಲೋಚಿಸು.

ಇದೋ ನಮಗೆ ಕಾಲಾತೀತವಾಗುತ್ತ ಬಂತು. ತಿಂಗಳು ಪಡುವಲಿಗಿಳಿದು ಬೀಳುವ ಹೊತ್ತಾಗುತ್ತ ಬಂದಿದೆ. ಇದೋ ನೋಡು. ಬೆಳದಿಂಗಳನ್ನು ಹಿಡಿದು ಎರಕೆ ಹೊಯ್ದಂತೆ ನಿಂತಿರುವ ತಾನುಟ್ಟಿರುವ ಬಿಳಿಯ ಸೀರೆಗಿಂತಲೂ ಬೆಳ್ಳಗಿರುವ ಇವಳನ್ನು ಮಡದಿಯೆಂದು ಅಂಗೀಕರಿಸು. ನಿನ್ನ ಶಾಸ್ತ್ರವಾಸನೆಯು ತೃಪ್ತವಾಗುವಂತೆ ಇದೋ ನಾನು ಪ್ರದಾನಮಾಡುವೆನು. ವಸಂತನು ಪುರೋಹಿತನಾಗುವನು. ಈ ದೇವ ಮಾನವ ಸಂಬಂಧದಿಂದ ಜಗತ್ತು ಎಷ್ಟು ಉಪಕೃತವಾಗುವುದು ಎಂಬುದನ್ನು ನೀನೂ ಕಾಣುವೆ" ಎಂದನು.

ವಿಶ್ವಾಮಿತ್ರನು ಮರುಮಾತನಾಡಲಿಲ್ಲ. ಅಥವಾ ಮಾತನಾಡುವ ಪ್ರಯತ್ನವನ್ನೂ ಮಾಡಲಿಲ್ಲ.

ವಸಂತನು ಪ್ರದಾತೃ ಪ್ರತಿಗ್ರಹಿತೃ. ಇಬ್ಬರ ಅನುಜ್ಞೆಯಿಂದ ಮದುವೆಯನ್ನು ನೆರವೇರಿಸಿದನು. "ಈಕೆಯಲ್ಲಿ ಸಂತಾನವನ್ನು ಪಡೆಯುವವರೆಗೂ ಇವಳನ್ನು ಪತ್ನಿಯಾಗಿ ಇಟ್ಟುಕೊಂಡಿರು" ಎಂದು ಪ್ರದಾತೃವು ದಾನಮಾಡಿದನು. "ದೇವತಾರಹಸ್ಯಗಳು ನನಗೆ ತಿಳಿಯುವುದಕ್ಕೆ ಇವಳು ಸಹಾಯವಾಗಲಿ" ಎಂದು ವಿಶ್ವಾಮಿತ್ರನು ಪ್ರತಿಗ್ರಹಮಾಡಿದನು. "ಅಗ್ನಿಷ್ಟೋಮಾತ್ಮಕವಾದ ಜಗತ್ತಿನಲ್ಲಿ ಹವಿರ್ದಾನಾತ್ಮಕವಾದ ಯಜ್ಞದಿಂದ ದೇವತೆಗಳೂ ದೇವತಾನುಗ್ರಹದಿಂದ ಯಜ್ಞದೇಯವಾದ ಹವಿಸ್ಸೂ ವರ್ಧಿಸುವಂತೆ ನೀವಿಬ್ಬರೂ ಪರಸ್ಪರ ಸಂಭಾವನೆಯಿಂದ ಸೌಖ್ಯವಂತರಾಗಿ" ಎಂದು ಪುರೋಹಿತನು ಆಶೀರ್ವದಿಸಿದನು.

ಚತುರ್ದಶಿಯು ಮುಗಿದು ಪೂರ್ಣಿಮೆಗೆ ದಾರಿಬಿಟ್ಟು ಕೊಡುತ್ತಿರುವ ಸುವೇಳೆಯಲ್ಲಿ, ತಪಸ್ವಿಜನರೆಲ್ಲ ನಿತ್ಯಕಾರ್ಯಗಳಿಗೆಂದು ಉಪ್ಪವಡಿಸುವ ಶುಭ ಮುಹೂರ್ತದಲ್ಲಿ, ಮರಬಳ್ಳಿಗಳೆಲ್ಲವೂ ಬರುತ್ತಿರುವ ಉಷಾದೇವಿಗೆ ಸಂತೋಷದಿಂದ ಹೊಸ ಹೂಗಳ ಅಂಜಲಿಯನ್ನೆತ್ತುವ ಮಂಗಳಕಾಲದಲ್ಲಿ ಮೇನಕಾ ವಿಶ್ವಾಮಿತ್ರರ ಮದುವೆಯಾಯಿತು.

---

# ಮೂವತ್ತಾರನೆಯ ತರಂಗ

ಸಂಸಾರಚಕ್ರವೊಂದು ಆರಂಭವಾಯಿತು. ದೇವಲೋಕದ ಹೆಣ್ಣೊಂದು ಮಾನವಲೋಕದ ಗಂಡಿನೊಂದಿಗೆ ಸಂಸಾರಮಾಡಲಾರಂಭಿಸಿತು.

ಆ ವಿಚಿತ್ರಜೀವನವು ಅರಳಿದ ಹೂವಿನಹಾಗೆ ಲೋಕವಿಲಕ್ಷಣವಾದ ಕಾಮಪ್ರಪಂಚವಾಗಿದೆ. ಮಾನವಿಯರಂತೆ ಎಲ್ಲೆಲ್ಲದರಲ್ಲೂ ಮಿತವಾಗಿರದೆ, ಒಂದೊಂದರಲ್ಲಿಯೂ ತಾನು ಅನಂತ ಸಾಮರ್ಥ್ಯಸಂಪನ್ನಳೆಂದು ತೋರಿಸಿ ಕೊಳ್ಳುತ್ತಿರುವ ಹೆಣ್ಣು ಸರ್ವಪ್ರಕಾರದಿಂದಲೂ ಗಂಡಿನ ಮನಸ್ಸನ್ನು ಒಲಿಸಿ ಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ತನ್ನ ಹಾದಿಯಲ್ಲಿರುವ ಬಂಡೆಯನ್ನು ಸರ್ವಪ್ರಕಾರದಿಂದಲೂ ಆರಾಧಿಸಿ ತನ್ನದನ್ನು ಮಾಡಿಕೊಳ್ಳಲು ಸರ್ವ ಪ್ರಯತ್ನವನ್ನೂ ಮಾಡುವ ನದಿಯಂತೆ ಮೇನಕೆಯು ವಿಶ್ವಾಮಿತ್ರನನ್ನು ಒಲಿಸಿಕೊಳ್ಳಲು ಪ್ರಯತ್ನಮಾಡುತ್ತಿದ್ದಾಳೆ. ವಿಶ್ವಾಮಿತ್ರನು ಆ ಹೆಣ್ಣಿನ ಸಂಗದಲ್ಲಿ ಸರ್ವೇಂದ್ರಿಯ ಸಂತರ್ಪಣವಿದೆಯೆಂದು ಬಲ್ಲನಾದರೂ ಅವಳನ್ನು ಕಂಡಾಗ ಏಕೋ ಏನೋ ಬೆಚ್ಚುತ್ತಾನೆ.

ಆಶ್ರಮದಲ್ಲಿ ಬರುಬರುತ್ತ ಕೊಂಚಕೊಂಚವಾಗಿ ಏನೇನೋ ಬದಲಾ ವಣೆಯಾಗುತ್ತಿದೆ. ಗಿಡಮರಗಳೂ ಬಳ್ಳಿಗಳೂ ಹೊಸರೂಪವನ್ನು ತಳೆದಿರು ವಂತಿವೆ. ಬೊಂಬೆಯನ್ನೋ ಕಲ್ಲುಮಣ್ಣುಗಳನ್ನೋ ಇಟ್ಟುಕೊಂಡು ಆಟ ವಾಡುತ್ತ ಸಂತೋಷದ ಮೂರ್ತಿಯಾಗಿರುವ ಹೆಣ್ಣುಮಗುವಿನಂತೆ ಇದ್ದ ಆಶ್ರಮದ ಸ್ಥಾವರಮೂರ್ತಿಗಳಲ್ಲಿದ್ದ ಭಾವವು ಬದಲಾಗಿ, ಏನೋ ಮುಚ್ಚಿಟ್ಟು ಕೊಂಡು ತನ್ನ ರಹಸ್ಯವನ್ನು ಇತರರು ಎಲ್ಲಿ ಭೇದಿಸುವರೋ ಎಂದು ತನ್ನ ತನ್ನೊಳಗೇ ಬೆದರುತ್ತ ತನಗೆ ಬೇಕಾದ ಇಷ್ಟವಸ್ತುವು ಯಾವುದೆಂದು ತಿಳಿಯ ದಿದ್ದರೂ ಇಷ್ಟವಸ್ತುವೊಂದು ಬೇಕೆಂದು ಹುಡುಕುತ್ತ ಕಾತರಳಾಗಿರುವ ಷೋಡಶಿಯ ಭಾವವೊಂದು ಬಂದಿದೆ. ಗಿಡವನ್ನು ನೋಡಿದರೆ, ತನ್ನಲ್ಲಿಯೇ ಗೂಡು ಕಟ್ಟಿಕೊಂಡಿರುವ ಹಕ್ಕಿಯು ತಾನು ಬಿಟ್ಟಿರುವ ಹಣ್ಣನ್ನೋ ಹೂವನ್ನೋ ಬೆದಕುತ್ತಿದ್ದರೆ, ಇದೇಕೆ ನನ್ನ ರಹಸ್ಯವನ್ನು ಭೇದಿಸುತ್ತಿದೆ ಎನ್ನುವಂತಿದೆ. ಆ ಗಿಡವನ್ನು ಆಶ್ರಯಿಸಿರುವ ಲತೆಯು ಗಾಳಿಯು ತನ್ನನ್ನು ಹಿಡಿದು ಕುಲುಕಿದರೆ, ಯಾರು ನೋಡಿದರೋ ಎಂದು ಬೆಚ್ಚಿ ತನಗೆ ಇಷ್ಟ ವಾಗಿದ್ದರೂ, ಏಕೆ ಸೆರಗೆಳದೆ? ಎಂದು ಪ್ರಿಯನನ್ನು ಗದರುವ ಕಾಮಿನಿ

ಯಂತೆ ಕಾಣುತ್ತದೆ. ಪಕ್ಕಿಗಳು ಹಣ್ಣುಹಂಪಲು ತಿಂದು ಗಂಡುಹೆಣ್ಣುಗಳು ಜೊತೆಜೊತೆಯಲ್ಲಿಯೇ ಅಲೆಯುತ್ತಿದ್ದರೂ ಅವಚನೀಯವಾದ ಇನ್ನೇನೋ ಒಂದು ಬೇಕೆಂದು ಗಂಡನ್ನು ಹೆಣ್ಣೂ ಹೆಣ್ಣನ್ನು ಗಂಡೂ ಕೇಳುವಂತೆ ಕಾತರ ವಾಗಿವೆ. ಇದುವರೆಗೂ ವೈರಭಾವವನ್ನು ಕಾಣದೆ ಸಜೀವವಾದ ಮಣ್ಣಿನ ಬೊಂಬೆಗಳೋ ಎನ್ನುವಷ್ಟು ಸಾಧುವಾಗಿ ವರ್ತಿಸುತ್ತಿದ್ದ ಮೃಗಗಳು ಇಂದು ಗಂಡುಹೆಣ್ಣುಗಳು ಜೊತೆಜೊತೆಯಾಗಿ ತಮತಮಗೆ ಪ್ರತ್ಯೇಕವಾಗಿ ಒಂದೊಂದು ಇಕ್ಕೆಯನ್ನು ಹುಡುಕಿಕೊಳ್ಳುತ್ತ ತಮ್ಮನ್ನು ಯಾರೂ ಮಾತ ನಾಡಿಸದಿರಲೆಂದು ಮುಖವನ್ನು ಸಿಂಡರಿಸಿಕೊಳ್ಳುವರಂತೆ ಸಿಡಿದು ಬೇರೆ ಯಾಗುವ ಮನೋಭಾವವನ್ನು ಪ್ರಕಟವಾಗಿ ತೋರುತ್ತಿವೆ. ಅಷ್ಟೇನು? ಆಶ್ರಮದ ಬಳಿ ಹರಿಯುತ್ತಿರುವ ನದಿಯೂ ಕೂಡ ಹಿಂತಿರುಗಿ ನೋಡಿ ನೋಡುತ್ತ ಅವಸರವಸರವಾಗಿ ಹೋಗುತ್ತಿರುವ ಹೆಣ್ಣಿನಂತೆ ಇದೆ.

ವಿಶ್ವಾಮಿತ್ರನಿಗೆ ಈಗ ಧ್ಯಾನವು ಕೂರುವುದಿಲ್ಲ. ಈಜು ಬರದಿದ್ದವನು ನೀರಲ್ಲಿ ಬಿದ್ದರೆ ಗಾಬರಿಯಿಂದ ನೀರು ಕುಡಿದು ಕಣ್ಣುಮುಚ್ಚಿದರೂ ಬಿಟ್ಟರೂ ಸುತ್ತಮುತ್ತಲೂ ನೀರೇ ನೀರು ಕಂಡು ತಾನು ಉಳಿಯುವೆನೇ ಎಂದುಕೊಂಡು ಒದ್ದಾಡುವಂತೆ, ಕಣ್ಣು ಮುಚ್ಚಿ ಧ್ಯಾನಕ್ಕೆ ಕುಳಿತರೂ, ಕಣ್ಣು ತೆರೆದು ಹೊರಗೆ ನೋಡಿದರೂ ಎಲ್ಲಲ್ಲಿಯೂ ಮುದ್ದಿನ ಮುದ್ದೆಯಂತಿರುವ ಲಲ್ಲೆಗಂಗಳ ಚೆಲುವೆಯು ಚೆಲುವು ನಲುವುಗಳ ಹಿರಿಯ ಹೊನಲು ತಾನೇತಾನಾಗಿ ತನ್ನನ್ನೇ ಹೊಡೆದುಕೊಂಡು ಹೋಗುತ್ತಿರುವಂತೆ ಭಾಸವಾಗುತ್ತದೆ. ಮನಸ್ಸನ್ನು ಪ್ರತ್ಯೇಕಿಸಿ ಧ್ಯಾನದಲ್ಲಿ ಲೀನನಾಗಬೇಕೆಂದರೆ, ಕೈಯ್ಯಿಂದ ಜಾರಿ ಕೆಳಕ್ಕೆ ಬಿದ್ದ ಪಾದರಸವು ಚೆಲ್ಲಾಪಿಲ್ಲಿಯಾಗಿ ಹರಡಿ ಹೋಗುವಂತೆ, ಮನಸ್ಸನ್ನು ಏಕಾಗ್ರ ಮಾಡಬೇಕೆಂದು ಮಾಡಿದ ಪ್ರಯತ್ನವೆಲ್ಲ ವಿಫಲವಾಗಿ ವೃತ್ತಿಯು ನಾನಾಮುಖ ವಾಗಿ ಎಲ್ಲೆಲ್ಲಿಯೂ ದೇವಾಂಗನೆಯರನ್ನೇ ಕಾಣುತ್ತದೆ. ನಿರ್ವಿಷಯ ಮಾಡಿ ಕೊಂಡು ಮನಸ್ಸನ್ನು ಮತ್ತೆ ಹಿಡಿತಕ್ಕೆ ತಂದುಕೊಳ್ಳಬೇಕೆಂದು ಹಠಮಾಡಿ ಕುಳಿತಷ್ಟೂ, ಆ ಮನಸ್ಸು ಅಷ್ಟೇ ಸುಲಭವಾಗಿ ಕೈತಪ್ಪಿಸಿಕೊಂಡು ಓಡಿಹೋಗಿ ಮೇನಕೆಯ ಮಡಿಲಲ್ಲಿ ಬೀಳುತ್ತದೆ. ಇಷ್ಟೆಲ್ಲಾ ಆಗಿ, ಮಾಡಿಮಾಡಿದ ಪ್ರಯತ್ನ ಪ್ರಯತ್ನವೂ ವಿಫಲವಾಗುತ್ತಿದ್ದರೂ ವಿಶ್ವಾಮಿತ್ರನಿಗೆ ಏಕೋ ಕೋಪವು ಬರಲೊಲ್ಲದು. ಬೇಡವೆಂದು ಕುಳಿತುಕೊಳ್ಳುವ ಹಠವೇ ಏಕೋ

ಹುಟ್ಟಲೊಲ್ಲದು. ಆದರೆ, ಒಂದು ಯೋಚನೆ ಮಾತ್ರ ಆಗಾಗ ಬರುತ್ತದೆ. "ಈ ದೇವತೆಗಳು ನಮಗಿಂತ ಬಲ್ಲವರು: ಸೃಷ್ಟಿಯಲ್ಲಿ ನಮಗಿಂತ ಒಂದು ಮೆಟ್ಟಲು ಮೇಲಿನವರು. ನಮಗೆ ತಿಳಿಯದ ಎಷ್ಟೋ ವಿಷಯಗಳು ಇವರಿಗೆ ಸಹಜವಾಗಿ ತಿಳಿದಿರುವುವು. ಅವನ್ನೆಲ್ಲ ತಿಳಿಯಬೇಕು" ಎಂದು ಒಂದು ಸಣ್ಣ ಯೋಚನೆ ಮೇಘಗರ್ಭದಲ್ಲಿ ಅವ್ಯಕ್ತವಾಗಿ ಸುಳಿಯುವ ವಿದ್ಯುಲ್ಲತೆಯಂತೆ ಒಮ್ಮೊಮ್ಮೆ ಮಿಂಚಿ ಮಾಯವಾಗುತ್ತದೆ.

ಮೇನಕೆಯು ಇಂದು ಆಶ್ರಮದ ರಾಣಿ. ಅವಳು ಅಮೃತ ಪಾನ ಮಾಡಿದವಳು. ಅವಳಿಗೆ ಊಟ ಬೇಕಿಲ್ಲ. ಪ್ರಾಣಾರಾಧನ ತತ್ಪರನಾದ ಮುನಿಗೆ ಊಟ ಬೇಕೆಂದರೆ ಬೇಕು: ಇಲ್ಲವಾದರೆ ಬೇಡ. ಆದರೂ ಮೇನಕೆಯು ಮಾನವಿಯಂತೆ ವ್ಯವಹಾರ ಮಾಡುತ್ತಿದ್ದಾಳೆ. ಸಂಕಲ್ಪ ಮಾತ್ರದಿಂದ ಭೋಜನವನ್ನು ಸೃಷ್ಟಿಮಾಡಬಲ್ಲವಳಾದರೂ ಪ್ರಯತ್ನಪೂರ್ವಕವಾಗಿ ಪಾಕ ಮಾಡುತ್ತಾಳೆ. ವಿಶ್ವಾಮಿತ್ರನಿಗೆ ಅದನ್ನು ಕಂಡು ಚೋದ್ಯ. ಸ್ವರ್ಗಲೋಕ ದಲ್ಲಿ ದೇವೇಂದ್ರನ ಮೆಚ್ಚಿನ ಸೂಳೆಯಾಗಿದ್ದವಳು ಇಂದು ತನಗಾಗಿ ಪಾಕ ಮಾಡಲು ಹೊರಟು ಒಲೆಯನ್ನು ಊದಿ ಕಣ್ಣು ಕೆಂಪಗೆ ಮಾಡಿಕೊಂಡು, ತುಟಿ ಒಣಗಿಸಿಕೊಂಡು ಬಳಲಿ ಬತ್ತಿ ಬಾಳಕವಾಗುವುದನ್ನು ನೋಡಿ. "ಇದೇನು ಇವಳಿಗೆ ಈ ವನವಾಸ?" ಎನ್ನಿಸುತ್ತದೆ. ಎಷ್ಟೋ ಸಲ ಅಡ್ಡಬಂದು "ಬೇಡ ಈ ಕೆಲಸ ಸಾಕು" ಎಂದರೆ, ಅವಳೊಮ್ಮೆ ಸಣ್ಣಗೆ ತೆರೆದ ತುಟಿಯಿಂದ ಸೋರೆಯ ಹೂವಿನಂತಿರುವ ಸುಳಿಪಲ್ಲುಗಳು ಇಣಿಕಿನೋಡುವಂತೆ ನಕ್ಕು "ಮೈಗೆ ಕಷ್ಟವಾದರೂ ಮನಕ್ಕೆ ಮೆಚ್ಚಿದ ಕೆಲಸವಿದು" ಎನ್ನುತ್ತಾಳೆ. ಸಲ ಸಲವೂ ಅವಳಿಗೆ ಗೆಲುವು. ಇವನಿಗೇ ಸೋಲು.

ಕೊನೆಗೆ ಇಬ್ಬರೂ ಸೇರಿ ಒಂದು ಒಪ್ಪಂದಕ್ಕೆ ಬಂದರು. ಹೋಮ ಕಾಲದಲ್ಲಿ ಯಜ್ಞೇಶ್ವರನನ್ನು ಪ್ರಾರ್ಥಿಸಿ ಒಂದು ಉಪಾಯವನ್ನು ಕಲ್ಪಿಸಿ ಕೊಳ್ಳಬೇಕು ಎಂದು ಗೊತ್ತಾಯಿತು. ಆಗಲೇ ಯಜ್ಞೇಶ್ವರನು ಮೇನಕೆಗೆ ದರ್ಶನವಿತ್ತು "ಮೇನಕಾ, ಚೆನ್ನಾಯಿತು. ಮಾನವನ ಕೈಹಿಡಿದು ನೀನೂ ಮಾನವಿಯಾದೆ. ಜಂತು ಜಂತುವೂ ಹುಟ್ಟುವಾಗಲೇ ತನ್ನ ಭೋಗ ಸಾಧನ ಗಳನ್ನೆಲ್ಲ ತನ್ನ ಜೊತೆಯಲ್ಲಿಯೇ ತರುವುದು ಎಂಬ ತತ್ವವನ್ನೇ ಮರೆತು, ಮಾನವರಂತೆಯೇ ಅನ್ನಕ್ಕಾಗಿ ಶ್ರಮಿಸುತ್ತಿರುವೆಯಲ್ಲಾ! ಕಲ್ಪವೃಕ್ಷವನ್ನು

ಪ್ರಾರ್ಥಿಸು. ನೀನು ಇರುವವರೆಗೂ ಇಲ್ಲಿ ಇರುವ ಒಂದು ಚೈತ್ಯವೃಕ್ಷದಲ್ಲಿ ಕಲ್ಪವೃಕ್ಷವು ಅಂಶತಃ ವಾಸವಾಗಿದ್ದು ನಿನಗೆ ಬೇಕಾದುದನ್ನೆಲ್ಲ ಕೊಡುವುದು" ಎಂದನು.

ಮೇನಕೆಯು "ದೇವಾ, ಮನ್ನಿಸು. ಕೆರೆಯಲ್ಲಿ ನೀರು ತುಂಬಿದ್ದರೂ, ತೂಬಿನಲ್ಲಿ ಹೊರಟಮೇಲೆ ನೀರಿಗೆ ಸ್ವಾತಂತ್ರ್ಯವೆಲ್ಲಿಂದ ಬಂತು? ಹಾಗೆ ನಾನು ದೇವಲೋಕದ ವಾಸವನ್ನು ಬಿಟ್ಟು ಇಲ್ಲಿ ಬಂದಿರುವಾಗ ನಾನೂ ಈ ಕ್ಷೇತ್ರಕ್ಕೆ ತಕ್ಕಂತೆ ಆದರೆ ವಿಚಿತ್ರವೇನು?" ಎಂದಳು.

ಅಗ್ನಿಯು ಮತ್ತೆ ಮುಗುಳುನಗೆ ನಕ್ಕು "ಇಲ್ಲ, ನೀನು ದೇವತ್ವವನ್ನು ಬಿಟ್ಟು ಮಾನವಿಯಾಗಬೇಡ. ದೇವಕಾರ್ಯಕ್ಕಾಗಿ ದೇವತ್ವವನ್ನು ಇಟ್ಟುಕೊಂಡಿರು. ಹಾಗೆಂದು ಅತಿಮಾನವಳಾಗಿದ್ದು ಪತಿಘಾತಿನಿಯಾಗಬೇಡ. ಮಾನವಿಯಾಗಿ ಅಲ್ಪಮತಿಯಾದರೂ ದೇವಕಾರ್ಯವು ಕೆಟ್ಟಿತು. ಹಾಗೆಂದು ದೇವಿಯಾಗಿದ್ದು ನಿನ್ನ ಅತಿಪ್ರಜ್ಞೆಯಿಂದ ಕಾಲ ದೇಶ ಧರ್ಮಗಳನ್ನು ಅತಿಕ್ರಮಿಸಿದರೂ ದೇವಕಾರ್ಯವು ಆಗುವುದಿಲ್ಲ. ಅದರಿಂದ ಫಲಭಾರ ನಮ್ರವಾದ ಲತೆಯಂತೆ, ನೀನೇ ಪ್ರಜ್ಞಾವಂತಳಾಗಿ ನಡೆಯುತ್ತ ಕಾಯಿ ಬಲಿತು ಹಣ್ಣಾಗುವಂತೆ ಮಾಡು" ಎಂದು ನುಡಿದು ಅಂತರ್ಧಾನನಾದನು.

ಮೇನಕೆಯು ಎದ್ದು ಗಂಡನಿಗೆ ನಮಸ್ಕಾರಮಾಡಿ "ದೇವಾ, ನನಗೆ ಜನ್ಮತಃ ಪ್ರಾಪ್ತವಾದ ಕೆಲವು ಪ್ರಭಾವಗಳುಂಟು. ಅಪ್ಪಣೆಯಾದರೆ ಅವುಗಳಲ್ಲಿ ಒಂದನ್ನು ಪ್ರಯೋಗಿಸಿ, ಈ ಮರಗಳಲ್ಲಿ ಒಂದರಲ್ಲಿ ಕಲ್ಪವೃಕ್ಷದ ಅಂಶವನ್ನು ಆರೋಪಿಸುವೆನು. ಸಂಕಲ್ಪಮಾತ್ರದಿಂದಲೇ ಸರ್ವವನ್ನೂ ಕೊಡುವ ಸ್ವರ್ಗಮಹೀರುಹದಂತೆ ಇದೂ ನಮಗೆ ಬೇಕಾದುದನ್ನೆಲ್ಲ ಕೊಡುವುದು" ಎಂದು ವಿಜ್ಞಾಪನ ಮಾಡಿದಳು.

ವಿಶ್ವಾಮಿತ್ರನು ಅದನ್ನುಕೇಳಿ ನಕ್ಕನು. "ದೇವಿ, ನಿಜ, ನೀನು ಜನ್ಮದಿಂದ ನನಗಿಂತ ಉತ್ತಮಳು. ನಾನು ಮಾನವ, ನೀನು ದೇವಿ. ಆದರೂ ನೀನು ನನ್ನ ಮಡದಿ. ಎಷ್ಟಾದರೂ ನೀನು ನನ್ನ ಪೋಷ್ಯವರ್ಗಕ್ಕೆ ಸೇರಿದವಳು. ನಾನು ಚಕ್ರವರ್ತಿಯಾಗಿದ್ದವನು. ಈಗ ಬ್ರಾಹ್ಮಣನಾಗಬೇಕೆಂದಿರುವವನು. ಸ್ತ್ರೀವಿತ್ತದಿಂದ ಜೀವನಮಾಡುವುದು ಪಾಪವೃತ್ತಿ. ಧರ್ಮವಲ್ಲ. ನಾನೆಂತು ಅದನ್ನು ಒಪ್ಪಿಕೊಳ್ಳುವುದು?" ಎಂದನು.

ಮೇನಕೆಯು ಒಂದು ಗಳಿಗೆ ಅವಾಕ್ಕಾದಳು. ತಾನು ದೇವತೆಯಾದರೂ, ತನ್ನ ಪ್ರಭಾವದಿಂದ ಆತನ ಮನಸ್ಸನ್ನು ದಾರದಂತೆ ಮಾಡಿ ತನ್ನ ಸಂಕಲ್ಪಕ್ಕೆ ಅನುಗುಣವಾಗಿ ವರ್ತಿಸುವಂತೆ ಮಾಡಬಲ್ಲವಳಾದರೂ ಧರ್ಮ-ಅಧರ್ಮಗಳ ಸಂಗತಿಯೆಂದು ಹೆದರಿ ಹಿಂತೆಗೆದಳು. ಏನು ಮಾಡಬೇಕು ಎನ್ನಿಸಿತು. ತನ್ನ ಪ್ರಜ್ಞಾಬಲದಿಂದ ನೋಡಿದಳು. ಹೇಳಿದಳು: "ದೇವ, ಮರುಮಾತನಾಡಿ ಆಯಾಸಪಡಿಸಬೇಕಲ್ಲ ಎಂದು ಹೆದರುವೆನು. ಅಪ್ಪಣೆಯಾದರೆ, ಧರ್ಮವನ್ನು ಕುರಿತು ಎರಡು ಮಾತು ಹೇಳುವೆನು."

ವಿಶ್ವಾಮಿತ್ರನಿಗೆ ಆಶ್ಚರ್ಯವಾಯಿತು. ಆದರೂ ಅಪ್ಸರೆಯರಿಗೆ ವಿಚಿತ್ರವಾದ ಒಂದು ಮೇಧಾಶಕ್ತಿಯಿರುವುದು ಎಂಬುದನ್ನು ಅರಿತ ಮನಸ್ಸು 'ಆಗಲಿ, ಅವಳು ಏನು ಹೇಳುವಳೋ ಕೇಳೋಣ' ಎಂದು ಆಕೆಯ ಮಾತನ್ನು ಕೇಳಲು ಸಿದ್ಧವಾಗಿ "ಆಗಬಹುದು" ಎಂದನು.

ಮೇನಕೆಯು ಹೇಳಿದಳು: "ದೇವಾ, ಮಡದಿಯು ಮಾನವನ ಪೋಷ್ಯವರ್ಗವೆಂಬುದು ನಿಜವಾದರೂ ಅವಳು ಅವನ ಆಸ್ತಿಯೆಂಬುದನ್ನು ಮರೆಯಬಾರದು. ಗರ್ಭವತಿಯಾದವಳನ್ನು ಮದುವೆಯಾದವನು ಗರ್ಭದಲ್ಲಿರುವ ಮಗನನ್ನು ತನ್ನ ಮಗನೆಂದು ಒಪ್ಪಿ ಅವನನ್ನು ಸಹೋಢಪುತ್ರನೆಂದು ಪರಿಗ್ರಹಿಸುವಂತೆ, ಪ್ರಭಾವಸಂಪನ್ನಳಾದವಳನ್ನು ಮದುವೆಯಾದವನು ಅವಳಿಗೆ ಪತಿಯಾಗುವಂತೆ, ಅವಳ ಪ್ರಭಾವಗಳಿಗೂ ಪತಿಯಾಗುವನಲ್ಲವೆ? ಹಸುವನ್ನು ಕೊಂಡುಕೊಂಡವನು ಹಗ್ಗವನ್ನು ಹಿಂದಕ್ಕೆ ಕೊಡುವಂತೆ, ನೀನು ನನ್ನನ್ನು ಮದುವೆಯಾದಂದು ನನ್ನಲ್ಲಿದ್ದ ಪ್ರಭಾವಗಳನ್ನೆಲ್ಲ ಹಿಂದಕ್ಕೆ ಕೊಟ್ಟು ಬಿಡಲಿಲ್ಲ. ಅಲ್ಲದೆ, ನಾನು ನಿಮ್ಮನ್ನು ವರಿಸಿರುವುದೂ ಇಂದ್ರನ ಅಪ್ಪಣೆಯಿಂದ. ಶಾಪಗ್ರಸ್ತಳಾಗಿ ಮಾನವಲೋಕಕ್ಕೆ ನಾನು ಬರಲಿಲ್ಲವಾಗಿ ನನ್ನ ಪ್ರಭಾವಗಳನ್ನು ನಾನೂ ಬಿಟ್ಟುಬಂದಿಲ್ಲ. ಇಷ್ಟುದಿನವೂ ನಾನಾಗಿ ಅವುಗಳನ್ನು ಉಪಯೋಗಿಸಬಾರದೆಂದು ಸುಮ್ಮನಿದ್ದೆ. ಈ ದಿನ ನೀನೇ ಯಜ್ಞೇಶ್ವರನನ್ನು ಪ್ರಾರ್ಥಿಸಿ ಸಾಧನವೊಂದನ್ನು ಪಡೆಯಬೇಕೆಂದುಕೊಂಡೆ. ಯಜ್ಞೇಶ್ವರನಂತೆಯೇ ದೇವತೆಯಾದ ನನ್ನನ್ನು ನಿನ್ನವಳನ್ನಾಗಿ ಮಾಡಿಕೊಂಡ ಮೇಲೆ, ನನ್ನ ಪ್ರಭಾವಗಳೆಲ್ಲವೂ ನಿನ್ನವಾಗಲಿಲ್ಲವೆ? ರುದ್ರಪ್ರಸಾದವನ್ನು

ಸ್ವೀಕರಿಸಿದಂತೆ, ಆಪೋದೇವಿಯರ ಅನುಗ್ರಹವನ್ನು ಅಂಗೀಕರಿಸಿದಂತೆ, ನನ್ನ ಪ್ರಭಾವಗಳನ್ನೂ ಒಪ್ಪಿಸಿಕೊ.

ವಿಶ್ವಾಮಿತ್ರನಿಗೆ ಅವಳ ವಿಚಾರಸರಣಿಯು ಶುದ್ಧವಾಗಿರುವುದೆಂದು ಮನಸ್ಸಿಗೆ ಅರಿಕೆಯಾಯಿತು: ಆತನು ಹೇಳಿದನು:—"ಮೇನಕಾ, ನೀನು ಹೇಳುವುದು ಧರ್ಮಸಮ್ಮತವಾಗಿದೆ. ಧರ್ಮವು ಹೇಗೆ ಹೇಗೆ ಆದರೂ ಅಜ್ಞೇಯವಾಗಿಯೇ ಉಳಿಯುವುದು. ಬುದ್ಧಿಗೆ ಎಂದೂ ಗೋಚರವಾಗುವುದಿಲ್ಲ. ಅದರಿಂದ ತನಗೆ ತಿಳಿದಮಟ್ಟಿಗೆ ಸಕಾರಣವಾಗಿ ವಿಚಾರಮಾಡಿ ಸಿದ್ಧಾಂತಕ್ಕೆ ಬರಬೇಕೆಂಬ ಸಾಧು ಸಂಪ್ರದಾಯಕ್ಕೆ ಅನುಗುಣವಾಗಿ ನೀನೂ ಸಕಾರಣವಾಗಿ ನಿನ್ನ ಸಿದ್ಧಾಂತವನ್ನು ಮಂಡಿಸಿರುವಿ. ಅದನ್ನು ಒಪ್ಪದಿರಲು ನನಗೆ ಯಾವ ಕಾರಣಗಳೂ ಸ್ಫುರಿಸಿಲ್ಲವಾದ್ದರಿಂದ, ಅದಕ್ಕೆ ಪ್ರತಿಯಾಡಲು ನನಗೆ ಮಾತಿಲ್ಲ. ಆದರೂ ಹಿಂದಿನ ಹಿರಿಯರು ಯಾರೂ ಈ ಕಾರ್ಯವನ್ನು ಮಾಡಿಲ್ಲವೆಂಬುದೊಂದು, ಈ ಸಿದ್ಧಾಂತವನ್ನು ಅಂಗೀಕರಿಸಿದರೆ ಫಲವು ನನಗೇ ಬರುವುದರಿಂದ, ಇದನ್ನು ಧರ್ಮವೆಂದು ಅಂಗೀಕರಿಸುವಲ್ಲಿ, ನನಗೆ ಅರಿಕೆಯಿಲ್ಲದೆಯೇ ಮಾನವಸಹಜವಾದ ಲೋಭವು ಪ್ರವರ್ತಿಸೀತು ಎಂಬ ಭೀತಿಯೊಂದು, ಇದನ್ನು ಅಂಗೀಕರಿಸುವುದರಲ್ಲಿ ನನಗೆ ಆತ್ಮತೃಪ್ತಿಯಿಲ್ಲವೆಂಬುದೊಂದು ಹೀಗೆ ಮೂರು ಕಾರಣಗಳಿಂದ ಸದ್ಯದಲ್ಲಿ ನಿನ್ನ ಸಿದ್ಧಾಂತವನ್ನು ಅಂಗೀಕರಿಸದಿದ್ದರೆ ಕೋಪ ಮಾಡಿಕೊಳ್ಳಬೇಡ. ನಿನ್ನ ಪ್ರಭಾವದಿಂದ ನನ್ನ ಮನಸ್ಸನ್ನು ಜಡಮಾಡಿ ನಿನ್ನ ಮಾತಿಗೆ ಒಪ್ಪುವಂತೆ ಮಾಡಬೇಡ. ಇಂದ್ರನೂ 'ಸ್ವರ್ಗಕ್ಕೆ ಬರುವುದಿಲ್ಲವೆಂದೆ. ಸ್ವರ್ಗವೇ ನಿನ್ನ ಬಳಿಗೆ ಬಂದರೆ ಏನು ಮಾಡುವೆಯೋ ನೋಡೋಣ' ಎಂದಿದ್ದುದು ನೆನೆಪಿನಲ್ಲಿದೆ. ಸ್ವರ್ಗವಾಸಿನಿಯೊಬ್ಬಳು ಬಂದರೆ ಸ್ವರ್ಗವು ಬಂದಂತಾಯಿತೆ? ಆದರೂ ತಡೆ. ಹಾಗೆ ಬೇಕೆಂದರೆ, ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದ ಪ್ರಭಾವ ನನ್ನಲ್ಲಿ ಇನ್ನೂ ಅಷ್ಟು ಇರಬೇಕಲ್ಲ! ಅದನ್ನು ಉಪಯೋಗಿಸಿಕೊಳ್ಳೋಣ. ಕೊನೆಗೆ ಯತ್ನವಿಲ್ಲದೆ ಬಂದರೆ, ಆಗ ನಿನ್ನದನ್ನು ತೆಗೆದುಕೊಳ್ಳೋಣವಂತೆ!" ಎಂದನು.

ಮಾತು ಮೃದುವಾಗಿ ಹೃದಯಂಗಮವಾಗಿ, ವಿಶ್ವಾಸದಿಂದ ಹಕ್ಕಿಯನ್ನು ಹಿಡಿದುಕೊಂಡವನು; ಅದಕ್ಕೆ ನೋವಾಗದಂತೆ ಹಿಡಿದಿದ್ದರೂ ಹಿಡಿತವು

ಮಾತ್ರ ಬಿಗಿಯೇ ಆಗಿರುವಂತೆ, ಕೇಳುವುದಕ್ಕೆ ಪ್ರಿಯವಾಗಿದ್ದರೂ ಕಪಿಮುಷ್ಟಿಯಂತೆ ದೃಢವೇ ಆಗಿತ್ತು.

ಮೇನಕೆಯು ಆ ಮಾತುಗಳನ್ನು ಕೇಳಿ ಗಳಗಳನೆ ಅತ್ತುಬಿಟ್ಟಳು. ದೇವತೆಯಾಗಿ ಸಂತೋಷ ಸಾಗರದಲ್ಲಿ ಈಜುತ್ತಿದ್ದವಳು, ಅಳುವುದನ್ನು ಕಂಡವಳೂ ಅಲ್ಲ ಕೇಳಿದವಳೂ ಅಲ್ಲದವಳು, ಮನೋಭಂಗವೇನೆಂಬುದನ್ನೇ ಅರಿಯದವಳು, ತನ್ನ ಜೀವಿತದಲ್ಲಿ ತಾನು ಮಾಡಬೇಕೆಂದ ಕೆಲಸ ಆಗಲಿಲ್ಲ ಎಂಬುದನ್ನೇ ಅದುವರೆಗೂ ತಿಳಿಯದವಳು, ತನ್ನ ಮೊದಲನೆಯ ಆಶಾಭಂಗದಲ್ಲಿ ಮಗುವಿನಂತೆ ಅತ್ತುಬಿಟ್ಟರೆ ಏನು ವಿಶೇಷ ? ಮಾನವಲೋಕಕ್ಕೆ ಬಂದಮೇಲೆ, ಮಾನವನ ಹುಟ್ಟುಗುಣವಾದ ಅಳುವನ್ನು ನಿವಾರಿಸುವುದೆಂತು ? ಅಳುವುದಕ್ಕೆ ಬರದಿದ್ದರೂ ಆ ಹೆಣ್ಣು ಸ್ವಭಾವವೇ ಅವಳನ್ನು ಅಳಿಸಿತು.

---

## ಮೂವತ್ತೇಳನೆಯ ತರಂಗ

ವಿಶ್ವಾಮಿತ್ರನು ಗಾಬರಿಯಾಗಿ ಹೋದನು. ಆತನಿಗೆ ತಾನು ಮಾಡಬಾರದ ಅಕಾರ್ಯವನ್ನು, ಮಹಾಪಾಪವನ್ನು, ಮಾಡುತ್ತಿರುವಂತೆ ಬೋಧೆಯಾಯಿತು. ದೇವೇಂದ್ರನ ಪರಮಪ್ರಿಯ ವಿಲಾಸಿನಿಯನ್ನು ಕಣ್ಣೀರು ಕರೆಯುವ ದುಸ್ಥಿತಿಗೆ ಈಡುಮಾಡಿದೆನೆಂದು ಮನವು ಬೆದರಿತು. ತಾನು ದಿವ್ಯಸ್ತ್ರೀ ಎಂಬ ಜನ್ಮಸಿದ್ಧವಾದ ಅಹಂಕಾರವನ್ನು ಬಿಟ್ಟು ಮಾನವನೊಂದಿಗೆ ಮಾನವಿಯಂತೆಯೇ ಸರಳವಾಗಿ ಸಂಸಾರ ಮಾಡುತ್ತಿರುವ ಸಾಧುಸ್ವಭಾವದವಳನ್ನು, ಪಾಮರನಂತೆ, ಶುದ್ಧ ರೂಕ್ಷಸ್ವಭಾವದವನಂತೆ ವ್ಯಥೆಪಡಿಸುವ ತನ್ನ ವಿಶ್ವಮೈತ್ರಿಯು ನಿಜವೇ ? ಎಂದು ಹೃದಯವು ಭಾರಿಯ ಗೊಂದಲವೆಬ್ಬಿಸಿತು.

ಏನಾದರೂ ಮಾಡಿ ಆಕೆಯ ದುಃಖವನ್ನು ನಿಲ್ಲಿಸಬೇಕು. ಅವಳ ಕಣ್ಣಿನ ನೀರು ನಿಂತು ಆ ಕಣ್ಣುಗಳು ಮೊದಲಿನಂತೆ ಸಂತೋಷದಿಂದ ಥಳಥಳಿಸುವ ಹಾಗೆ ಮಾಡಬೇಕು ಎಂದು ದೃಢನಿಶ್ಚಯವು ಬುದ್ಧಿಗೆ ತಾನಾಗಿಯೇ ಬಂತು. ಕೂಡಲೇ ಅಂಗೋಪಾಂಗಗಳೆಲ್ಲವೂ ಆ ನಿಶ್ಚಯವನ್ನು ಕಾರ್ಯರೂಪಕ್ಕೆ ತರಲು ಹೊರಟುವು. ಆತನಿಗೆ ಅರಿವಾಗುವುದಕ್ಕೆ ಮುಂಚೆ ಕೈ ಕಣ್ಣಿನ

ನೀರನ್ನು ವರಿಸಿತು. ಮುಖವು ಮುಖಾರವಿಂದದಲ್ಲಿ ಮುಳುಗಿ ತುಟಿಯು ತುಟಿಯನ್ನು ಸಂಧಿಸಿ, ಮೋಹರಸವನ್ನೆರೆದು ದುಃಖವನ್ನು ಕೊಚ್ಚಿಸುವುದಕ್ಕೆ ನಾಗಾಲೋಟದಿಂದ ಮುಂದುವರೆಯುತ್ತಿರಲು, ದೇಹವು ದೇಹವನ್ನು ಹಿಡಿದು ದೃಢಾಲಿಂಗನದಿಂದ ತನ್ನ ಸರ್ವಸ್ವವನ್ನೂ ಒಪ್ಪಿಸಲೋ ಎಂಬಂತೆ ಆಲಿಂಗಿಸಿತು. ಸೃಷ್ಟಿಯಲ್ಲಿರುವ ಗಂಡುತನ ಹೆಣ್ಣುತನಗಳೆರಡೂ ರೂಪಾಂತು ಬಂದು ಮತ್ತೆ ಐಕ್ಯವನ್ನು ಪಡೆಯಲು ಒಂದನ್ನೊಂದು ಆಲಿಂಗಿಸಿವೆಯೋ ಎಂಬಷ್ಟು ದೃಢವಾದ ಆ ಆಲಿಂಗನದಲ್ಲಿ ಹೆಣ್ಣು ತನ್ನ ದುಃಖವನ್ನು ಮರೆಯಿತೋ ಅಥವಾ ಗಂಡಿಗೆ ದಾನಕೊಟ್ಟಿತೋ, ಅಥವಾ ಹಾದಿತಪ್ಪಿ ಸ್ವತಂತ್ರನಾಗಿ ತನ್ನ ಹಿಡಿತವನ್ನು ಮೀರುವ ಗಂಡನ್ನು ಹಿಡಿದಮುಕುವ ಅಂಕುಶವಾಗಿ ಇರಲಿ ಎಂದು ಎಲ್ಲಾದರೂ ಮುಚ್ಚಿಟ್ಟಿತೋ, ಅಂತೂ ಕಾರ್ಮೋಡಕವಿದು ಗುಡುಗು ಮಿಂಚುಗಳಿಂದ ಆರ್ಭಟಿಸುತ್ತ ಮಳೆಯು ಕುಂಭದ್ರೋಣ ಕರೆವಾಗ ಹಠಾತ್ತಾಗಿ ತೋರುವ ಉತ್ತರಾಯಣದ ಬಿಸಿಲಿನಂತೆ, ಹೆಣ್ಣಿನ ಮುಖದ ಬಿಗಿತಪ್ಪಿ ಸಡಿಲವಾಗಿ ಸಣ್ಣ ನಗೆ ತೋರಿತು. ಬಲವಾಗಿ ಮೀಟುಹಾಕಿ ಹಿಡಿದು ಒತ್ತಿ ಎಳೆದಾಗ ನೋವಾದರೂ ಹಿತವಾಗಿ ಬೇಕಾದುದನ್ನೇ ನುಡಿಯುವ ವೀಣೆಯ ತಂತಿಯಂತೆ, ಆ ವಿಶ್ವಾಮಿತ್ರನ ಗಾಢಾಲಿಂಗನದ ಕ್ಲೇಶದಿಂದಲೂ ಸುಖಿಯಾಗಿ ಸರಭಸ ಚುಂಬನದಿಂದ ಸಂತೋಷಪಟ್ಟು, ತನ್ನ ಆಸೆ ಸಂಪೂರ್ಣವಾಗಿ ಕೈಗೂಡಿತೆಂಬ ಆನಂದದಿಂದ ಆ ಹೆಣ್ಣು ಗಂಡನ್ನು ಆಲಿಂಗಿಸಿ, ಬಡ್ಡಿಯನ್ನು ಸೇರಿಸಿಕೊಡುವ ಸಾಲಗಾರನಂತೆ, ತನ್ನ ದೃಢಾಲಿಂಗನದಿಂದ ಅವನನ್ನು ಬಿಗಿದು ತನ್ನ ಸೌಖ್ಯ ಸಂತೋಷಗಳನ್ನು ಆತನಿಗೂ ಹಿಂತಿರುಗಿ ಕೊಟ್ಟಳು. ನಿಜವಾಗಿ ಹೇಳಬೇಕೆಂದರೆ ಇಬ್ಬರಿಗೂ ಮೈಮೇಲೆ ಅರಿವಿಲ್ಲ. ದೇಹ ಯಂತ್ರಗಳು ತಾವಾಗಿ ಸ್ವತಂತ್ರಿಸಿ ಕೆಲಸಮಾಡಿ ಆನಂದಪಡುವಂತೆ ತೋರುತ್ತದೆ.

ಹೀಗೆ ಇಬ್ಬರೂ ಎಷ್ಟುಹೊತ್ತು ಒಬ್ಬರ ತೆಕ್ಕೆಯಲ್ಲಿ ಒಬ್ಬರಿದ್ದರೋ ? ಕೊನೆಗೆ ಸಣ್ಣದಾದ ಬೆವರಿನ ಸುಳಿವೊಂದು ಹುಟ್ಟಿ ದೇಹಾದ್ಯಂತವೂ ವ್ಯಾಪಿಸಿ ಸಣ್ಣ ತನುವನ್ನು ಕೊಟ್ಟು ಆ ಗಾಢಾಲಿಂಗನದ ಬಿಸಿಯನ್ನು ಆರಾಧಿಸಿ ಶಾಂತ ಮಾಡಿದೆ. ಆಗ ಏನೋ ಬಲವಂತದಿಂದ, ಬೇಡವಾಗಿದ್ದರೂ ಯತ್ನವಿಲ್ಲದೆ ಹೊರಕ್ಕೆ ತಳ್ಳಿಸಿಕೊಂಡೋ, ಎಳೆಸಿಕೊಂಡೋ ಬಂದವರಂತೆ, ಇಬ್ಬರೂ ಬಹಿರ್ಮುಖರಾಗಿದ್ದಾರೆ. ಹಣ್ಣಾದ ತಾಳೆಯ ಹೂವು ಸುವಾಸನೆಯನ್ನೂ ಪರಾಗ

ವನ್ನೂ ಚೆಲ್ಲುತ್ತಾ ಗಾಳಿಯಲ್ಲಿ ಒಲೆಯುವ ಹಾಗೆ ಸಣ್ಣಗೆ ತಲೆಯಲ್ಲಾಡಿಸುತ್ತಾ ತನ್ನ ಅಂತರಂಗದ ಸುಖ ಸಂತೋಷಗಳನ್ನು ಚೆಲ್ಲುತ್ತಾ ಮೇನಕೆಯು ಕೇಳಿದಳು: "ದೇವಾ! ಇಂದೇಕೆ ಇಷ್ಟು ನಿಷ್ಠುರನಾಗಿದ್ದೆ?"

ವಿಶ್ವಾಮಿತ್ರನು ಮೇನಕೆಯ ಎದೆಯಮೇಲೆ ಒರಗಿದ್ದಾನೆ. ಆ ಸ್ಪರ್ಶ ಸುಖವು ದೇಹೇಂದ್ರಿಯ ಮನೋಬುದ್ಧಿಗಳನ್ನೆಲ್ಲ ವ್ಯಾಪಿಸಿ, ಸುಖೋನ್ಮತ್ತವಾಗುವಂತೆ ಮಾಡಿದೆ. ಆ ಸಣ್ಣ ಅಮಲಿನಲ್ಲಿ ಹೇಳಿದನು: "ದೇವಿ, ಅಹಂಕಾರವು ತಾನೇ ತಾನಾಗಿ, ತಾನು ಮಾಡುವುದೇ ಸರಿಯೆಂಬ ಭ್ರಾಂತಿಯಿರುವಾಗ, ಧರ್ಮದ ಸ್ವರೂಪವರಿಯದೆ, ಮಾನ ಮೋಹಗಳಿಂದ ಮನಸ್ಸು ಸೆಡೆದುಕೊಂಡಿರುವಾಗ ಆಗುವುದೇ ಹೀಗೆ! ಗೃಹಸ್ಥನಾಗಿರುವಾಗ ಕೊಟ್ಟು ತೆಗೆದುಕೊಳ್ಳುವುದೂ ಧರ್ಮದ ಒಂದು ಅಂಗ ಎಂಬುದನ್ನು ಮರೆತೆ. ಅಲ್ಲದೆ ವಿಶ್ವಕ್ಕೇ ಮಿತ್ರನಾದವನು ಒಲಿದುಬಂದ ಹೆಣ್ಣಿಗೆ ಮಿತ್ರನಾಗದಿರುವುದೆಂತು? ಅದೂ ಇರಲಿ ಎಂದರೆ, ನೀನು ಈಗ ನನ್ನ ಧರ್ಮಪತ್ನಿ. ನೀನು ಧರ್ಮಸೂಕ್ಷ್ಮವನ್ನು ಹೇಳಿದೆಯಾದರೂ ನನ್ನ ಮನಸ್ಸು ಆಗ ಅದನ್ನು ಹಿಡಿಯಲಿಲ್ಲ. ಇದೋ, ಇಂದಿಗೆ ಮುಗಿಯಿತು. ಇನ್ನುಮುಂದೆ ನಿನ್ನ ಮಾತಿಗೆ ಅಡ್ಡಿ ಬರುವುದಿಲ್ಲ. ನಿನಗೆ ತೋರಿದಂತೆ ಮಾಡು. ಇನ್ನುಮುಂದೆ, ನಾವಿಬ್ಬರೂ ಒಂದು ಜೊತೆ ಹಕ್ಕಿಗಳಂತೆ ಇದ್ದುಬಿಡೋಣ. ಭೋಗವು ಹಿತವೂ ಪ್ರಿಯವೂ ಆಗ ಬೇಕಾದರೆ ಗಂಡು ತನ್ನನ್ನು ಹೆಣ್ಣಿಗೆ ಒಪ್ಪಿಸಿಕೊಳ್ಳಬೇಕು."

ಮೇನಕೆಯು ಅದನ್ನು ಕೇಳಿ ಸಂತೋಷಪಟ್ಟಳು. ತಿಳಿನೀರಿನ ಆಳವಾದ ನೀರು ಪ್ರಸನ್ನವಾಗಿರುವಂತೆ ಪ್ರಸನ್ನಳಾಗಿ, "ದೇವಾ, ನಿಜ, ಭೋಗದೇವಿಯೇ ಹೆಣ್ಣು. ಆದರೂ ಭೋಗಪಡುವವನು ಗಂಡು. ಗಂಡಿನ ಸುಖಕ್ಕಾಗಿ ತನ್ನ ಸರ್ವಸ್ವವನ್ನೂ ಅರ್ಪಿಸಿ, ಅವನ ಸುಖದಲ್ಲಿ ತನ್ನ ಸುಖವನ್ನು ಕಾಣುವುದಲ್ಲವೇ ಹೆಣ್ಣುತನ? ತನ್ನ ಮುಖವನ್ನು ಕನ್ನಡಿಯಲ್ಲಿ ಕಂಡಾಗ ಸಂತೋಷವಾಗುವ ಹಾಗೆ, ಗಂಡಿನ ಸುಖ ತನ್ನಲ್ಲಿ ಪ್ರತಿಫಲಿಸಿದಾಗ ಸಂತೋಷಪಡುವುದು ಈ ಹೆಣ್ಣುಜಾತಿ. ನಾನು ಉಯ್ಯಾಲೆಯಾಗಿ ತೂಗುವೆನು. ನೀನು ಅಲ್ಲಿ ಕುಳಿತು ತೂಗಿಕೊ. ತೂಗಿಕೊಂಡು ನೀನು ಸಂತೋಷಪಟ್ಟರೆ ತಾನೂ ಸಂತೋಷಪಡುವೆನು. ನಾನು ಹಣ್ಣಾಗಿ, ಹೂವಾಗಿ, ಹಾಡಾಗಿ, ನಿನ್ನನ್ನು ಆರಾಧಿಸುವೆನು. ನನ್ನ ಆರಾಧನದಿಂದ ನೀನು

ಪ್ರಸನ್ನನಾದರೆ, ನನ್ನ ಪೂಜೆಯು ಫಲಿಸಿತು, ನನ್ನ ದೈವವು ಒಲಿಯಿತು ಎಂದು ನಾನೂ ಸುಖಿಯಾಗುವೆನು. ಇಂದಿನಿಂದ ನಮ್ಮ ದೇವತೆಗಳ ವ್ಯವಹಾರ ನಡೆಯಲಿ. ಅಪಾರ ತಪಃಪ್ರಭಾವವುಳ್ಳ ನೀನೂ ಕರ್ಮಜದೇವತೆಯಂತೆ ನನ್ನೊಡನೆ ವಿಹರಿಸು. ಸುಖದುಃಖಗಳೆಂಬ ಬೆಳಕು ನೆರಳಿನ ಮಾನವ ಜೀವನವನ್ನು ಮೀರಿ ಸದಾ ಸುಖಿಯೆಂಬ ದೇವಜೀವನವನ್ನಷ್ಟು ದಿನ ನಡೆಸೋಣ. ನಿನಗೆ ಇಂದ್ರದೇವನು ಮಾತುಕೊಟ್ಟಂತೆ ಈ ಆಶ್ರಮಭೂಮಿಯಿಂದಿನಿಂದ ಅಷ್ಟುಕಾಲ ಒಂದು ಸಣ್ಣ ಸ್ವರ್ಗವಾಗಿರಲಿ" ಎಂದಳು. ಮಾತು ವೀಣೆಯ ಮಂಜುಳನಾದದಂತೆ ಹಿತವೂ ಪ್ರಿಯವೂ ಮೃದುವೂ ಆಗಿ ಮನೋಹಾರಿಯಾಗಿತ್ತು.

ವಿಶ್ವಾಮಿತ್ರನು ಒಪ್ಪಿದನು.

---

## ಮೂವತ್ತೆಂಟನೆಯ ತರಂಗ

ಮೇನಕೆಯು ಆಶ್ರಮಭೂಮಿಯನ್ನು ಸ್ವರ್ಗಮಾಡಲು ಹೊರಟಳು. ಸರಸ್ವತೀ ನದಿಯ ತೀರದ ತಪೋವನದಲ್ಲಿಯೇ ಇರಲು ಅವಳಿಗೇಕೋ ದಿಗಿಲು. ಅದರಿಂದ ಅಲ್ಲಿಂದ ಕೊಂಚ ಉತ್ತರದಲ್ಲಿ ಹರಿಯುವ ಮಾಲಿನಿಯ ತೀರದಲ್ಲಿ, ಒಂದು ತೋಪಿನಲ್ಲಿ ಸ್ವರ್ಗಖಂಡವೊಂದು ರಚಿತವಾಯಿತು. ಆ ಸ್ವರ್ಗದ ಸುತ್ತಲೂ ಯಾವಾಗಲೂ ಮೋಡವೊಂದು ಮುಚ್ಚಿಕೊಂಡಿರುವುದು. ಆ ಮೋಡದ ಹಿಂದೆ ಹಸಿರುಗಿಡಗಳು ಬಳ್ಳಿಗಳು ಇವುಗಳಿಂದ ತೂಗುಮಂಟಪವೊಂದು ಆಗಿದೆ. ಆ ಮಂಟಪದಲ್ಲಿ ಒಂದು ಸೊಗಸಾದ ಶಯ್ಯಾಮಂದಿರ. ಅದರ ಸುತ್ತಲೂ ಇರುವ ಬಳ್ಳಿಗಿಡಗಳಲ್ಲೆಲ್ಲ ಹಣ್ಣುಹೂವುಗಳು ತುಂಬಿವೆ.

ಮೇನಕೆಯು ತನ್ನ ಪ್ರಭಾವದಿಂದ ಒಂದು ವೀಣೆಯನ್ನು ಮಾಡಿದ್ದಾಳೆ. ಆ ವೀಣೆಯು ದಶವಿಧ ನಾದಗಳನ್ನೂ ನುಡಿಯುತ್ತದೆ. ಸಂಗೀತವಿದುಷಿಯಂತೆ ಬೇಕಾದ ರಾಗವನ್ನು ಹಾಡುತ್ತದೆ. ಮೇನಕೆಯು ನರ್ತನ ಮಾಡಬೇಕೆಂದರೆ ಮುದ್ದಾಗಿ ಮದ್ದಲೆಯಂತೆ ತಾಳವನ್ನು ಬಾರಿಸುತ್ತದೆ. ಯಾವಾಗಲೂ ಸಂಗೀತ ನರ್ತನಗಳ ತರಂಗಗಳು ಲಹರಿಗಳು ಸುಖವಾಗಿ, ಮನೋಹರವಾಗಿ,

ಅಲ್ಲಿ ಯಾವಾಗಲೂ ಸುಳಿಯುತ್ತಿರುವ ತಂಗಾಳಿಯ ಮೇಲೆ ತೇಲಿಬರುತ್ತ ಮನಸ್ಸನ್ನು ಅರೆನಿದ್ದೆಯ ಕಡೆಗೊಯ್ಯುತ್ತವೆ. ಹಾಗೆನ್ನುವುದಕ್ಕಿಂತ ಮನಸ್ಸಿಗೆ ಅರೆನಿದ್ದೆಯ ಕಾಣಿಕೆಯನ್ನು ಒಪ್ಪಿಸುತ್ತವೆ.

ಆ ಶಯ್ಯಾಮಂದಿರದಲ್ಲಿ ದೀಪವಿಲ್ಲ: ಎಣ್ಣೆ ಮುಗಿಯಿತು: ಬತ್ತಿ ಉರಿದುಹೋಯಿತು ಎಂದು ಒದ್ದಾಡುವಂತಿಲ್ಲ. ಜ್ಯೋತಿರ್ಲತೆಗಳು ಸಣ್ಣ ಸಣ್ಣ ಸೂರ್ಯಚಂದ್ರರಂತೆ ಅಲ್ಲಲ್ಲಿ ಹಬ್ಬಿಕೊಂಡು ಕೊಂಚ ಗಾಳಿ ಸುಳಿದರೆ ಸಾಕು: ಉಸ್ಸೆಂದರೆ ಭುಸ್ಸೆಂದು ಹೆಡೆಯೆತ್ತುವ ಹಾವುಗಳಂತೆ, ಗಾಳಿಯ ಸೋಂಕನ್ನು ಸಹಿಸಲಾರದೆ ಪ್ರಜ್ವಲಿಸುವಂತೆ, ಸೋಕಿದ ಗಾಳಿಯನ್ನೇ ಹಿಡಿದು ಉರಿಮಾಡುವಂತೆ, ಸಣ್ಣಗೆ ಸೊಗಸಾದ ದೀಪದ ಕುಡಿಗಳನ್ನು ಮೆರೆದು ಕತ್ತಲನ್ನು ನೀಗುತ್ತವೆ. ಅಷ್ಟೇನು? ಗಾಳಿಯು ಬೀಸಿದಾಗಲೆಲ್ಲ ಸಾವಿರಾರು ದೀಪದ ಕುಡಿಗಳು ಕಂಡು, ಮಂದಿರವೆಲ್ಲ ಬೆಳಕಾಗಿ, ಮಂದಿರವನ್ನು ಮುಚ್ಚಿದ ಮೋಡವು ಬೆಳಕಿನ ಮೋಡವಾಗುತ್ತದೆ.

ಹೀಗೆ ಬೆಳಕಿನ ಮೋಡದ ನಡುವೆ ತೂಗುವ ಹಸಿರುಮನೆಯಲ್ಲಿ ಮೇನಕೆಯು ತನ್ನ ಪೂಜಾಮಂದಿರವನ್ನು ಕಟ್ಟಿದ್ದಾಳೆ. ಅವಳಿಗೆ ಅದನ್ನು ಭೋಗ ಮಂದಿರವೆನ್ನಲು ಇಷ್ಟವಿಲ್ಲ. ಸ್ವರ್ಗದಲ್ಲಿರುವ ತನ್ನ ಅರಮನೆ ಭೋಗ ಮಂದಿರ. ಇದು ನಿಜವಾಗಿಯೂ ತಾನು ತನ್ನ ದೇವರಪೂಜೆಗಾಗಿ ಕಟ್ಟಿಕೊಂಡಿರುವ ಪೂಜಾಮಂಟಪ.

ಇಂದಿನ ದಿನ ಮಂಟಪದಲ್ಲಿ ವಿಶೇಷಪೂಜೆಯೊಂದು ನಡೆಯುವುದಕ್ಕೆ ಎಲ್ಲವೂ ಸಿದ್ಧವಾಗಿದೆ. ಇಂದು ಬಹುಳ ಚೌತಿ. ಚಂದ್ರೋದಯಕ್ಕೆ ಸರಿಯಾಗಿ ಅವಳ ಪೂಜೆ. ಮಾನಸಸೃಷ್ಟಿಯಿಂದ ಬೇಕಾದವುಗಳನ್ನೆಲ್ಲ ತಂದಿಟ್ಟಿದ್ದಾಳೆ. ಆದರೆ ಒಂದೂ ಬರಿಯ ಕಣ್ಣಿಗೆ ಕಾಣಿಸದು. ತನ್ನ ದೇವರಿಗೆಂದು ಒಂದು ಉನ್ನತಾಸನವನ್ನು ಕಲ್ಪಿಸಿದ್ದಾಳೆ. ವಿದ್ಯುನ್ಮಯವಾದ ಮೇಘದ ಖಂಡವೊಂದು ಶಿಲ್ಪಿಯ ಕೈವಾಡದಿಂದ ಹೊಳಪಿನ ಮಾಲೆಗಳನ್ನುಗುಳುವ ದಿವ್ಯರತ್ನದಂತಾಗಿ ಮೆರೆಯುತ್ತ ನಿಂತಿದೆ. ಏನೋ ಒಂದು ಅಸಾಧಾರಣ ದಿವ್ಯಸುವಾಸನೆಯು ಆ ಪ್ರದೇಶವನ್ನೆಲ್ಲ ಹರಡಿ ಮೂಗಿಗೆ ಮಾತ್ರವಿರಲಿ, ಸರ್ವೇಂದ್ರಿಯಗಳಿಗೂ, ಸರ್ವಾಂಗಗಳಿಗೂ ಸೊಗಸಿನ ಔತಣವನ್ನು ನೀಡು

ತ್ತಿದೆ. ಆದರೆ ಆ ಸುರಭಿಯು ಎಲ್ಲಿಂದ ಬರುತ್ತಿದೆಯೆಂಬುದು ಯಾರಿಗೂ ಅರಿವಾಗುವಂತಿಲ್ಲ.

ಎಲ್ಲವೂ ಸರ್ವಥಾ ಸರ್ವತಃ ಏನೂ ಇಲ್ಲದೆ ಇರುವಂತೆಯೂ ಇದ್ದರೂ, ಏನೇನೋ ಭಾರಿಯ ಕೆಲಸಗಳು ನಡೆಯುತ್ತಿರುವಂತೆ ಮನಸ್ಸಿಗೆ ಮಾತ್ರ ಅರಿವಾಗುವ ಯಾವುದೋ ಒಂದು ವಿಚಿತ್ರ ಉತ್ಸಾಹ ತೋರುತ್ತಿದೆ. ಆದರೂ ಕೆಲಸಗಾರರು ಯಾರೂ ಕಣ್ಣಿಗೆ ಕಾಣಿಸುತ್ತಿಲ್ಲ. ಮಾಡುತ್ತಿರುವ ಕೆಲಸವೇನು ಎಂಬುದು ಕಾಣುತ್ತಿಲ್ಲ. ಆದರೆ ಅದೃಶ್ಯ ಹಸ್ತಗಳು ಅತ್ಯಂತೋತ್ಸಾಹದಿಂದ, ಅನಂತ ಸಂಭ್ರಮದಿಂದ, ಏನೋ ದೊಡ್ಡ ಕೆಲಸ ಮಾಡುತ್ತಿರುವಂತೆ ಬೋಧೆಯಾಗುತ್ತಿದೆ.

ಹಠಾತ್ತಾಗಿ ಆ ಬಿಳುಮೋಡದಲ್ಲಿ ಒಂದು ಚಲನವಾಯಿತು. ತೆಳುವಾಗಿ ಹೂಗಾಳಿಯಲ್ಲಿ ಹಾರುತ್ತಿರುವ ಮೋಡವು ಯಾವುದೋ ಜ್ಞಾನದಲ್ಲಿ ಇನ್ನೊಂದು ತನ್ನಂತಹ ಮೋಡವನ್ನು ಎಡವಿದರೆ ಆಗುವಂತೆ, ಗಿಡದಲ್ಲಿ ತನ್ನ ಆನಂದದಲ್ಲಿ ತಾನಾಗಿ ಓಲಾಡುತ್ತಿರುವ ಹೂವು ಅರಿವಿಲ್ಲದೆ, ಮತ್ತೊಂದು ಹೂವನ್ನು ತಟ್ಟಿದರೆ ಆಗುವಂತೆ, ಆ ಶೃಂಗಾರ ಮೇಘದಲ್ಲಿ ಒಂದು ಸಣ್ಣ ಅಪಘಾತ. ಅಪ್ಪಣೆಯಿಲ್ಲದೆ ದೀಪಗಳು ಹತ್ತಿವೆ. ತಾವಾಗಿ ವಾದ್ಯಗಳೆಲ್ಲ ನುಡಿದಿವೆ. ಹೂವಿನ ಮಾಲೆಗಳು ಅಲ್ಲಾಡಿವೆ. ಮಂಟಪವು ತಲೆಯಲ್ಲಾಡಿಸಿದಂತೆ ಆಗಿದೆ.

ಇದುವರೆಗೆ ಮರೆಯಾಗಿ ಕೆಲಸಮಾಡುತ್ತಿದ್ದ ಒಡೆತಿಯು ಅದಷ್ಟು ಮಾತ್ರದಿಂದಲೇ, ಆ ಅಲ್ಪಾಂದೋಳನದಿಂದಲೇ ಕ್ಷುಬ್ಧಳಾಗಿ, ಕ್ರುದ್ಧಳಾಗಿ, ಸಿಡುಕಿನಿಂದ ಯಾರದು ಎಂದು ಗದ್ದರಿಸುತ್ತಾಳೆ. ಅವಳಿಗೆ ಗಾಬರಿ. ಸ್ವರ್ಗದಲ್ಲಿ ಇಂದ್ರನ ಪರಮ ಸೌಭಾಗ್ಯಗಳಲ್ಲಿ ಒಂದು ಎನ್ನಿಸಿಕೊಂಡವಳು, ಕುಸುಮಾಸ್ತ್ರನ ಲಲಿತ ಪ್ರಹರಣಗಳಲ್ಲಿ ಬಹು ತೀವ್ರವಾದ ಅಸ್ತ್ರರತ್ನವೆನ್ನಿಸಿಕೊಂಡವಳು, ತಾನು ಕೊಂಚ ಮೈಮರೆತರೆ ತನ್ನನ್ನು ಹೊತ್ತುಕೊಂಡು ಹೋಗಲು ಸಿದ್ಧರಾಗಿರುವ ರಾಕ್ಷಸರ ಪಡೆಗೆ ಪಡೆಯೇ ಇದೆ ಎಂಬುದನ್ನು ಬಲ್ಲವಳು, ಅನಿರೀಕ್ಷಿತವಾದ ಆಂದೋಳನದಿಂದ ಕ್ಷುಬ್ಧಳಾದರೆ ಆಶ್ಚರ್ಯವೆ? ಕ್ರುದ್ಧಳಾದರೆ ಅತಿಶಯವೆ? ಏಕಾಂತವನ್ನು ಬಯಸಿ ಮರೆಯಲ್ಲಿ ತನ್ನ ಮನದಾಸೆಯಿಂದ ದುಡಿಯುವ ಹೆಣ್ಣುಹೃದಯ ಅಡ್ಡಿಬಂತೆಂದು ಸಿಡಿಮಿಡಿಗೊಂಡರೆ ಅದೊಂದು ವಿಚಿತ್ರವೆ?

ಕಾವಲಿನ ಗಂಧರ್ವನು ಪೊದರಿನಿಂದ ಬಗ್ಗಿನೋಡುವ ಹೂವಿನಂತೆ, ಇಲ್ಲದಿದ್ದ ತೆರೆಯ ಮರೆಯಿಂದ ತಗ್ಗಿ ಬಗ್ಗಿ ನೋಡುವಂತೆ ಕಾಣಿಸಿಕೊಂಡು, ಕೈಮುಗಿದು, "ಮಂಗಲವು, ದೇವಿ, ಸಖಿಯರು ಬಂದಿದ್ದಾರೆ" ಎಂದನು. ಅವನ ಮಾತು ಮುಗಿಯುತ್ತಿದ್ದಹಾಗೆಯೇ ರಂಭಾ ಘೃತಾಚಿಯರು ಬಂದಿದ್ದಾರೆ.

ಮೇನಕೆಗೆ 'ಅಯ್ಯೋ ಇವರೇಕೆ ಬಂದರು?' ಎಂದು ಮನಸ್ಸಿಗೆ ಏನೋ ಆತಂಕವಾಯಿತು. ಆದರೂ ಸಖಿಯರು. ಆದರಿಂದ ಯಾವುದೊಂದು ಶಂಕೆಯೂ ತೋರದ ಸಂತೋಷದ ಭಾವದಿಂದ ಮುಂದೆ ಬಂದು ಆಲಿಂಗಿಸಿ, ಕೈಕುಲುಕಿ ಕರೆದುಕೊಂಡು ಹೋಗಿ ಸಂಕಲ್ಪಸಿದ್ಧವಾದ ಮಂಚದ ಮೇಲೆ ಕುಳ್ಳಿರಿಸಿದಳು. ಅದು ಘೃತಾಚಿಗೆ ವಕ್ರವಾಗಿ ತೋರದಿದ್ದರೂ ಸಹಜವಾಗಿ ಕೊಂಚ ದುರುಳತನದ ರಂಭೆಯು 'ಇದೇನು, ಇಲ್ಲಿ ಕಾಣುವ ಈ ಶೃಂಗಾರ ಮಂಟಪವು ಯಾರಿಗೆ ಮೀಸಲು?' ಎಂದಳು.

ಮೇನಕೆಯು ಬೆಚ್ಚಿದಳು. ಅಧಿಕಾರಿಯ ಎದುರಿಗೆ ನಿಂತು ತನ್ನ ಸೌಜನ್ಯವನ್ನು ಬಣ್ಣಿಸಿಕೊಳ್ಳುತ್ತಿದ್ದ ಕಳ್ಳನ ಕಂಕುಳಿಂದ ಕದ್ದ ಪದಾರ್ಥವು ಕೆಳಗೆ ಬಿದ್ದರೆ ಬೆಚ್ಚುವ ಕಳ್ಳನಂತೆ ಬೆಚ್ಚಿ, ಅಲ್ಲಿದ್ದ ಹೂಗೊಂಚಲಿಂದ ಅವಳನ್ನು ಹಾಗೆಂದು "ನೀನೋ? ನಿನ್ನ ತುಂಟತನವೋ? ಯಾರಿಗಂತೆ? ನಿಮ್ಮ ಯಜಮಾನರಿಗೆ!" ಎಂದಳು. ರಂಭೆಯು ಕಿಲಕಿಲ ನಕ್ಕು, "ನಿಮ್ಮ ಭಾಗ್ಯ ನಮಗೂ ಇರಲಿ ಎಂದು ಅನುಗ್ರಹವೇನೋ? ತಮ್ಮ ಭಾಗ್ಯ ತಮಗಿರಲಿ. ಬೇಕಾದರೆ ತಮ್ಮ ಪ್ರಿಯಸಖಿ, ಇವರಿಗೂ ಹಂಚಿಕೊಡಿ. ನಾವು ಬಡವರು. ಏನೋ ಸ್ವರ್ಗದಲ್ಲಿ ಇದ್ದುಕೊಂಡು ಇಂದ್ರಸಭೆಯಲ್ಲಿ ಕುಣಿದುಕೊಂಡು, ನಂದನವನದಲ್ಲಿ ಅಲೆದುಕೊಂಡು, ದೇವಗಂಧರ್ವರೊಡನೆ ಆಡಿಕೊಂಡು ಮೂಲೆಗುಂಪಾಗಿ ಬಿದ್ದಿರುವ ನಮಗೇಕೆ ಈ ಮನುಷ್ಯಲೋಕದ ಬಾಳಿನ ಭಾಗ್ಯ? ಎಲ್ಲ ತಮಗಿರಲಿ" ಎಂದಳು.

ಮೇನಕೆಯು ಚಪಲಳಾಗಿದ್ದವಳು ಸ್ಥಿರಳಾದಳು. ಹಾಗೆಯೇ ಅಲ್ಲಿಯೇ ಒಂದು ಸುಖಾಸನದಲ್ಲಿ ಕುಳಿತಳು. ಒಂದು ಗಳಿಗೆ ಅನ್ಯಮನಸ್ಕಳಾಗಿದ್ದವಳಂತೆ, ಗಂಭೀರವಾಗಿ, ಸ್ಥಿರದೃಷ್ಟಿಯಾಗಿ, ಏನೋ ಲಕ್ಷಿಸುವಳಂತೆ ತಲೆಯನ್ನು ತಿರುಗಿಸಿಕೊಂಡಿದ್ದು ಹೇಳಿದಳು: "ರಂಭೆ, ನಿಜ, ನಾನೂ ನಿನ್ನಂತೆಯೇ

ದೇವಲೋಕದ ಭಾಗ್ಯದ ಮುಂದೆ ಇನ್ನುಂಟೆ ಎಂದಿದ್ದವಳು. ಅದನ್ನು ಮರೆಯ ಬೇಡ. ದೇವೇಂದ್ರನು ತಾನಾಗಿ ಹೇಳಿಕಳುಹಿಸಿ ಕರೆಯಿಸಿಕೊಂಡು ಮೋಹದ ಮುದ್ದಿನಿಂದ ಆರಾಧಿಸಿ, ಅಟ್ಟಕ್ಕೇರಿಸಿ, 'ನೀನು ನನಗಾಗಿ ಒಂದು ಕೆಲಸವನ್ನು ಮಾಡಬೇಕು. ಭೂಮಿಗೆ ಹೋಗಿ ನನ್ನ ಮಿತ್ರನನ್ನು ಆರಾಧಿಸಿ ಬರಬೇಕು' ಎಂದಾಗ, ದೇವೇಂದ್ರನ ಮೂತಿಯನ್ನು ತಿವಿದು 'ನಿನಗೆ ಇನ್ನೇನೂ ತೋರ ಲಿಲ್ಲವೋ?' ಎಂದು ತಿರಸ್ಕಾರಮಾಡಿದವಳು. ಕೊನೆಗೆ ಎಷ್ಟೋ ಬಲವಂತದ ಮೇಲೆ, ದಾಕ್ಷಿಣ್ಯಬದ್ಧಳಾಗಿ, ದೇವರಾಜನ ಅಪ್ಪಣೆಯನ್ನು ಮೀರಲಾರದೆ ಇಲ್ಲಿ ಬಂದವಳು. ಅದೆಲ್ಲ ನೀನು ಬಲ್ಲೆ. ಈಗ ಹೇಗಿದೆ ಬಲ್ಲೆಯಾ? ದೇವ ಲೋಕವು ನನ್ನನ್ನು ಮರೆತುಬಿಟ್ಟರೆ ಸಾಕು ಎನ್ನುವಂತಿದೆ. ರಂಭೆ, ನಿಜ ವಾಗಿಯೂ ಮನುಷ್ಯರು ಸುಖಿಗಳು. ತಿನ್ನುವುದಿಲ್ಲ, ಕುಡಿಯುವುದಿಲ್ಲ, ಮಾಡು ವುದಕ್ಕೆ ಕೆಲಸವಿಲ್ಲದೆ ಅಲೆದುಕೊಂಡಿರುವ ದೇವಲೋಕಕ್ಕಿಂತಲೂ, ಮಾಡು ವುದಕ್ಕೆ ಕೈತುಂಬ ಕೆಲಸವಿದ್ದು, ಮಾಡದಿದ್ದರೆ ನಷ್ಟವಾಯಿತು ಎಂಬ ಮನುಷ್ಯ ಲೋಕವೇ ನನಗೆ ಚೆನ್ನಾಗಿದೆ. ನೋಡು. ಯಾವೊತ್ತಾದರೂ ನಾನು ನನ್ನ ಮನೆಯಲ್ಲಿ ಯಾವ ಪ್ರಭುವೇ ಬರಲಿ, ಇಷ್ಟು ಅಲಂಕಾರ ಮಾಡುತ್ತಿದ್ದೆನೆ? ನೋಡು. ನನ್ನದಿರಲಿ. ನೀನೇ ಹೇಳು. ದೇವರಾಜನೇ ನಿನ್ನ ಮನೆಗೆ ಬಂದರೆ ತಾನೇ ನೀನು ಇಷ್ಟು ಸಂಭ್ರಮಪಡುವೆಯಾ? ನೀನೇ ಎಷ್ಟೋಸಲ ಏನೋ ಬಂದಿದ್ದ ಎಂದು ಲಾಘವವಾಗಿ ಆಡಿರುವುದನ್ನು ಮರೆತೆಯಾ? ನೋಡು, ಘೃತಾಚಿ, ಇವಳು ಆ ಕುಬೇರನ ಮಗನನ್ನು ಒಲಿದಾಗ ಒದ್ದಾಡಿ ದಳು ನೋಡೆ, ಈಗ ನನ್ನ ಪಾಡು ಹಾಗಾಗಿದೆ. ಆದರೆ, ಇದು ಅನುಕೂಲ ದಾಂಪತ್ಯ – ಅಷ್ಟೇ ವ್ಯತ್ಯಾಸ."

ಘೃತಾಚಿಯು ನಕ್ಕಳು. ರಂಭೆಯು ಮೇನಕೆಯ ಮಾತನ್ನು ಅಷ್ಟಾಗಿ ಗಮನಿಸದವಳಂತೆ, ನಂಬದವಳಂತೆ ನಕ್ಕಳು. ಘೃತಾಚಿಯು "ಹಾಗಾದರೆ ದಾಂಪತ್ಯವೋ?" ಎಂದಳು. ಮೇನಕೆಯು ಆ ಮಾತಿನ ಸಂಪೂರ್ಣಾರ್ಥ ವನ್ನು ಸಂಪೂರ್ಣವಾಗಿ ಮನಸಾರೆ ಒಪ್ಪಿಕೊಳ್ಳುವಳಂತೆ 'ಹೌದು' ಎಂದಳು. ಗೆಳತಿಯರಿಬ್ಬರಿಗೂ ಆಶ್ಚರ್ಯವಾಯಿತು. ಅವರ ಬಾಯಿಂದ ಮಾತು ಹೊರಡುವುದೂ ಕಷ್ಟವಾಯಿತು. ಸಹಜವಾಗಿ ಸರಳಳಾದ ಘೃತಾಚಿಯಿರಲಿ,

ತುಂಟಿಯಾದ ರಂಭೆಗೂ ನುಡಿಯುವುದಕ್ಕೆ ಮಾತು ಸಿಕ್ಕದಷ್ಟು, ಬಾಯಿಂದ ಸದ್ದು ಹೊರಡದಷ್ಟು ಆಶ್ಚರ್ಯವಾಯಿತು.

ಮೇನಕೆಯೇ ಹೇಳಿದಳು : "ನೋಡಿ, ದೇವಲೋಕದಲ್ಲಿ ಎಲ್ಲರೂ ನಮ್ಮನ್ನು ಆರಾಧಿಸುತ್ತಿದ್ದರು. ಬಂದವರೆಲ್ಲ ಮೇನಕೆಯು ಒಲಿದಾಳೇ ಎಂದು ಮೇನಕೆಯ ಒಲಿವಿನ ಭಿಕ್ಷುಕರಾಗಿ, ತಿರುಪದವರಾಗಿ ಬರುತ್ತಿದ್ದರು. ಅವರ ಮೋಹ, ಅವರ ಚೇಷ್ಟೆ, ಅವರ ಮಾತು, ಎಲ್ಲವೂ ನನಗೆ ಕಪಿಗಳಾಟದ ಹಾಗೆ ಕಾಣುತಿತ್ತು. ಅಯ್ಯೋ ಪಾಪ! ತಲೆಯೆತ್ತಿ ನೋಡಬೇಕಾದ ತೆಂಗಿನ ಮರದ ಮೇಲಿನ ಕಾಯನ್ನು ಕಂಡು ಬಾಯಿಬಿಡುವವರಂತೆ ಒದ್ದಾಡುವ ಆ ಪ್ರಾಣಿಗಳನ್ನು ಕಂಡರೆ ನಮಗೆ ಕನಿಕರವಲ್ಲದೆ ಪ್ರೇಮವೆಂತು ಬಂದೀತು? ಈಗ ಏನಾಗಿದೆ ಬಲ್ಲೆಯಾ? ಒಲ್ಲೆನೆಂದು ಮೊಕ ತಿರುಗಿಕೊಂಡಿದ್ದವನನ್ನು ಜಾಣಿಂದ ಒಲಿಸಿಕೊಂಡು, ಕೈಗೆ ಸಿಕ್ಕಿದ ಒಲವು ಮತ್ತೆಲ್ಲಿ ಜಾರಿಹೋದೀತೋ ಎಂದು ಅದನ್ನು ಕಾಪಾಡಿಕೊಳ್ಳಲು ಮೈಯೆಲ್ಲ ಕಣ್ಣಾಗಿ, ಹಗಲಿರುಳೆನ್ನದೆ ಕಾದು ಕುಳಿತಿರುವ ಭಾಗ್ಯ ಈಗ ನನಗೆ ದೊರೆತಿದೆ. ಗೆಳತಿಯರೆ, ಇಂದು ನೀವು ಬಂದಿರುವುದು ಆ ಒಲವಿನ ಪಣವೇನು? ಆ ಪ್ರೇಮದ ಬೆಲೆಯೇನು? ಎಂಬುದನ್ನು ನಾನು ತೋರಿಸಬೇಕೆಂದಿರುವ ಶುಭಮುಹೂರ್ತದಲ್ಲಿ. ಶ್ರೀಮಂತ ನಾಗಿ, ಬಂದವರಿಗೆ ಬೇಕೆಂದುದನ್ನು ನೀಡುವ ಯಯಾತಿಯಂತಹವನು ಭಿಕ್ಷೆ ಗಾಗಿ ಕೈನೀಡಿದಂತೆ, ಸ್ವರ್ಗದಲ್ಲಿ ಎಲ್ಲರಿಗಿಂತ ಮಿಗಿಲಾಗಿ, ಅಪ್ಸರೋಗಣದ ಶಿರೋಮಣಿಯಾಗಿದ್ದವಳು ಇಂದು ವಿಶ್ವಾಮಿತ್ರನ, ಒಬ್ಬ ಮನುಷ್ಯನ, ನಿಮ್ಮ ದೃಷ್ಟಿಯಲ್ಲಿ ನಮಗಿಂತ ಕೀಳಾದವನಾದರೂ ನನ್ನ ದೃಷ್ಟಿಯಲ್ಲಿ ಅಜಾನಜ ಕರ್ಮಜ * ದೇವತೆಗಳೆಲ್ಲರಿಗಿಂತ ಮೇಲಿನವನಾದ ಪ್ರಿಯತಮನ ಮೋಹಭಿಕ್ಷೆ ಯನ್ನು ಯಾಚಿಸುವುದಕ್ಕಾಗಿ ಈ ದೊಡ್ಡ ಆಟವನ್ನು ಕಟ್ಟಬೇಕಾಗಿದೆ. ಕಟ್ಟಿ ದ್ದೇನೆ. ಬಂದವರು ನೀವೂ ಈ ಆಟವನ್ನು ನೋಡಿಯಾದರೂ ಕೃತಾರ್ಥ ರಾಗಿ. ಯಾವ ಜನ್ಮದ ಪುಣ್ಯವೋ ನನಗೆ ಈಗ 'ಗಂಡನೊಲವನ್ನು ಪಡೆಯ ಬೇಕು : ಆ ಒಲವು ಪಡೆಯಬೇಕಾದ ಭಾಗ್ಯ' ಎನ್ನಿಸಿದೆ. ರಂಭೆ, ನೀನು ತುಂಟುತನದಿಂದ ಅಯ್ಯೋ! ಹುಚ್ಚಿ, ಚಾಪಲ್ಯವೇ ಹುಟ್ಟುಗುಣವಾದ ನಿನಗೆ ಈ ಏಕಾಗ್ರತೆಯು ನಿಜವೇ ಎಂದು ಹಾಸ್ಯಮಾಡುತ್ತಿರುವೆ. ನಿಜ,

* ವಿವೇಕಚಿಂತಾಮಣಿ, ೨೦೮.

ತಪಸ್ವಿಯ ಸನ್ನಿಧಾನದಿಂದ ನನ್ನ ಚಿತ್ತಕ್ಕೆ ಸಹಜ ಚಾಂಚಲ್ಯ ತಪ್ಪಿ, ಹಿಮಾಲಯದಲ್ಲಿ ನೀರು ಗಡ್ಡೆಕಟ್ಟುವಂತೆ ಆಗಿ ನಿಶ್ಚಲತೆಯು ಲಭಿಸಿದೆ. ಇನ್ನು ನನಗೆ ಹೊತ್ತಾಗುತ್ತ ಬಂತು. ನೀವು ಸ್ವರ್ಗವಾಸಿಗಳು. ನಿಮಗೆ ಕಾಲದರಿವಿಲ್ಲ. ನಾನೀಗ ಮರ್ತ್ಯಲೋಕದವಳು. ನನಗೆ ಕಾಲವು ಮುಖ್ಯ. ಇಗೋ ಆಗಲೇ ಸಂಜೆಯಾಯಿತು. ನನ್ನ ಪತಿದೇವನು ಬರುವ ಹೊತ್ತು. ಆತನ ಆಹ್ನಿಕಾದಿಗಳು ಮುಗಿಯುವ ವೇಳೆಗೆ ಚಂದ್ರೋದಯವಾಗುವುದು. ಆವೇಳೆಗೆ ನನ್ನ ಪೂಜೆಯು ಆರಂಭಿಸುವುದು. ಇಂದು ನಾನು ಗೆಲ್ಲದಿದ್ದರೆ, ಇನ್ನೂ ಒಂದು ವರ್ಷ ಕಾಯಬೇಕು. ನೀವಿಬ್ಬರೂ ಇಲ್ಲಿಯೇ ಒಂದು ಗಳಿಗೆ ಇರಿ. ಎಲ್ಲವನ್ನೂ ನೋಡಿಕೊಂಡು ಹೋಗುವಿರಂತೆ ಎಂದಳು. ಇಬ್ಬರೂ ಒಪ್ಪಿದರು. ಮೋಡದಲ್ಲಿ ಮೋಡವು ಸೇರುವಂತೆ, ಒಂದು ಸುವಾಸನೆಯಲ್ಲಿ ಇನ್ನೊಂದು ಸುವಾಸನೆಯು ಬೆರೆಯುವಂತೆ, ಒಂದು ಬೆಳಕಿನಲ್ಲಿ ಇನ್ನೊಂದು ಬೆಳಕು ಅಡಗುವಂತೆ, ಅವರಿಬ್ಬರೂ ಅಲ್ಲಿಯೇ ಮರೆಯಾಗಿ ನಿಂತರು.

---

## ಮೂವತ್ತೊಂಬತ್ತನೆಯ ತರಂಗ

ವಿಶ್ವಾಮಿತ್ರನಿಂದು ಏಕೋ ಕಾಲಕ್ಕೆ ಬಂದಿಲ್ಲ. ಈಗ ಆತನು ಮೇನಕೆಯಿಂದ ಆಕಾಶಗಮನವನ್ನು ಕಲಿತಿದ್ದಾನೆ. ಎಲ್ಲಿಗೆ ಬೇಕೆಂದರಲ್ಲಿಗೆ ಆಕಾಶದಲ್ಲಿ ಹೋಗಿ ಬರುತ್ತಾನೆ. ಈಗ ಸ್ತಂಭನ ವಿದ್ಯೆಯೂ ಚೆನ್ನಾಗಿ ಅಭ್ಯಾಸವಾಗಿದೆ. ಭೂತಜಯವನ್ನು ಪಡೆದ ಆತನು ದೇಹದಲ್ಲಿರುವ ಪೃಥ್ವೀ ಭೂತವನ್ನೂ ಆಪೋ ಭೂತವನ್ನು ಸ್ತಂಭನಮಾಡಿ, ಸಂಕಲ್ಪಮಾತ್ರದಿಂದ ಎಲ್ಲಿಗೆಂದರಲ್ಲಿಗೆ ಹೋಗಬಲ್ಲನು. ಇಂದು ಜಮದಗ್ನಿಯ ಆಶ್ರಮಕ್ಕೆ ಹೋಗಿದ್ದಾನೆ. ಅಲ್ಲಿ. ಆ ಕಾಮಧೇನುವನ್ನು ಕಂಡಾಗಲೆಲ್ಲ ಇನ್ನು ಯಾವ ಕೌಶಿಕನು ಬಂದು ಈ ಆಶ್ರಮವನ್ನು ಧ್ವಂಸಮಾಡುವನೋ ಎಂದು ಒಂದು ಚಿಂತೆ. ಹೇಹಯರಿಗೂ ಭಾರ್ಗವರಿಗೂ ಮೊದಲಿನಿಂದಲೂ ಎಣ್ಣೆ ಶೀಗೇಕಾಯಿ. ಅವರಲ್ಲಿಯೇ ಯಾವನಾದರೂ ಹುಟ್ಟುವನೇನೋ? ಅವರಲ್ಲದೆ ಇನ್ನು ಯಾರೂ ಭಾರ್ಗವರ ಎದುರು ಬೀಳುವವರಿಲ್ಲ. ಅದರಿಂದ ಮೃತ್ಯುವಲ್ಲಿಂದ ಬರಬೇಕು ಎಂದು ಒಂದು

ಊಹೆ. ಆ ಮಾತನ್ನು ಜಮದಗ್ನಿಯೊಡನೆ ಹೇಳಿದರೆ, "ಬಿಡು ಮಾವ, ಕ್ಷಾತ್ರವು ಬ್ರಾಹ್ಮವನ್ನು ಎದುರಿಸಿದರೆ ತಾನು ನಷ್ಟವಾಗಿ ಆಮೇಲಲ್ಲವೆ ನಮ್ಮ ಹಾನಿಯನ್ನುಮಾಡುವುದು ! ಹಾಗೆ ಹೇಹಯರು ದುಷ್ಟರಾದರೆ ಅವರ ಕುಲವೇ ಧ್ವಂಸವಾಗಿ ಹೋಗುವುದು ಒಟ್ಟಿನಲ್ಲಿ ಕ್ಷತ್ರಿಯರು ದುಷ್ಟರಾಗುವ ಸೂಚನೆ ಗಳಿವೆ. ಆಗಲೇಳು ಭವಿತವ್ಯವನ್ನು ತಪ್ಪಿಸುವ ಯೋಚನೆ ನನಗಿಲ್ಲ. ಆಗು ಹೋಗುಗಳು ದೈವದ್ದು." ಎನ್ನುತ್ತಾನೆ. ಏನು ಮಾಡಿದರೂ ಆತನಿಗೆ ವಿಶ್ವಾ ಮಿತ್ರನ ಹಟ ಬರಲೊಲ್ಲದು. ಆಗಿಯೇ ತೀರಬೇಕು ಎಂದು ಆತನಿಗೆ ಎನ್ನಿ ಸಲೇ ಒಲ್ಲುದು. "ಆದರೇನು ? ಹೋದರೇನು ? ಇರುವವರೆಗೆ ನೇರವಾಗಿದ್ದ ರಾಯಿತು. ಅಗ್ನಿಯು ನಮ್ಮ ಕುಲದೈವ. ಯೋಗಕ್ಷೇಮಗಳು ಆತನಿಗೆ ಸೇರಿದವು." ಎನ್ನುತ್ತಾನೆ.

ವಿಶ್ವಾಮಿತ್ರನಿಗೆ ಈಚೆಗೆ ಮನೋಭಾವವು ಕೊಂಚ ಹೊರಳಿದೆ. ಬರು ಬರುತ್ತ ಪೋಲೀ ತಿರುಗಿ ಮೇಯುವ ಹಸು ಕಟ್ಟಿಹಾಕಿದರೆ ಒದ್ದಾಡುವಂತೆ, ಮೇನಕೆಯ ಸಹವಾಸದಲ್ಲಿ ಭೋಗಗಳನ್ನು ಅನುಭವಿಸುತ್ತ, ಸಮಾಧಿಯು ಕೊಂಚ ಶಿಥಿಲವಾಗಿದೆ. ಉದಯಾಸ್ತಮಯ ಸಮಯಗಳಲ್ಲದೆ, ಮಧ್ಯಾಹ್ನ ದಲ್ಲಲ್ಲದೆ ಮಿಕ್ಕ ಸಮಯಗಳಲ್ಲಿಯೂ ಸಹಜವಾಗಿ ಬರುತ್ತಿದ್ದ ಸಮಾಧಿ ವೃತ್ತಿಯು ಇಂದು ಕೊಂಚ ಕಷ್ಟಪಟ್ಟು ಪ್ರಾಣಾಯಾಮ ಮುಖವಾಗಿ ಸಾಧಿಸ ಬೇಕಾಗಿದೆ. ಸಂಕಲ್ಪವಿಲ್ಲದೆಯೂ ದೇಹದಿಂದ ಹೊರಚೆಲ್ಲುತ್ತಿದ್ದ ಪ್ರಾಣಶಕ್ತಿ ಯಿಂದು ಶರದೃತುವಿನ ನದಿಯಂತೆ ಅಲ್ಪವಾಹಿನಿಯಾಗಿದೆ. ವಿಶ್ವಾಮಿತ್ರನು ಅದು ಧ್ಯಾನಕ್ಕೆ ಬಂದಾಗ ಬೇಕೆಂದರೆ ಇದು ಹುಚ್ಚು ಹೊಳೆಯಾಗಲಾರದೇನು ಎಂದು ಸಮಾಧಾನಪಟ್ಟುಕೊಳ್ಳುತ್ತಾನೆ.

ವಿಶ್ವಾಮಿತ್ರ ಜಮದಗ್ನಿಗಳಿಬ್ಬರೂ ಏನೇನೋ ಯೋಚಿಸುತ್ತಿದ್ದರು. ಆ ಮಾತು ಈ ಮಾತು ಆಡುತ್ತ ಜಮದಗ್ನಿಯು "ಮಾವ, ಇಂದ್ರನ ಸಾಲ ತೀರಿತೇನು ? ಅಥವಾ ತೀರಿಸುವ ಯೋಚನೆಯನ್ನಾದರೂ ಮಾಡಿದೆಯೇನು ?" ಎಂದನು. ಅದುವರೆಗೆ ವಿಶ್ವಾಮಿತ್ರನು ಇಂದ್ರನು ಕಳುಹಿಸಿದ ಸ್ವರ್ಗದ ವಿಚಾರವನ್ನು ಆತನಿಗೆ ಹೇಳಿರಲಿಲ್ಲ. ಹೇಳೋಣವೇ ಎನ್ನಿಸಿ ಏಕೋ ಬೇಡ ಎಂದು ಸಿದ್ಧಾಂತ ಮಾಡಿಕೊಂಡು, "ಇನ್ನೂ ಇಲ್ಲ. ಅಂತೂ ಅವಸರಪಟ್ಟು ತೀರಿಸಬೇಕು. ಅದಕ್ಕೆ ಮುಂಚೆ ಋಷಿಪುತ್ರನನ್ನು ಪಡೆಯುವ ವಿಧಾನವನ್ನು

ಅರಿಯಬೇಕು. ಇಲ್ಲದಿದ್ದರೆ ಇಂದ್ರನ ಸಾಲ ತೀರುವುದೆಂತು ಎಂದು ಯೋಚಿಸುತ್ತಿದ್ದೇನೆ" ಎಂದನು. ಜಮದಗ್ನಿಯು "ನೀನು ಆ ಸಾಲ ಇಟ್ಟುಕೊಂಡಿರಬೇಡ. ಮಾವ. ಯಾವುದಾದರೂ ದೇವತೆಯನ್ನು ಅನುಸಂಧಾನಮಾಡಿಯೋ, ಒಂದು ಯಜ್ಞವನ್ನಾದರೂ ಮಾಡಿಯೋ ಮೊದಲು ಆ ಸಾಲವನ್ನು ತೀರಿಸುವ ಯೋಚನೆ ಮಾಡು" ಎಂದನು. ವಿಶ್ವಾಮಿತ್ರನು ನಕ್ಕು "ಜಮದಗ್ನಿ, ಐವತ್ತು ಮಕ್ಕಳನ್ನು ಬಲಿಕೊಡಬೇಕು. ಐವತ್ತು ಮಕ್ಕಳನ್ನು ಪಡೆಯುವುದೆಂತು?" ಎಂದು ಯೋಚನೆ. ಯಾವ ಪುಣ್ಯವಂತೆ ಐವತ್ತು ಮಕ್ಕಳನ್ನು ಪಡೆಯುವವಳು? ಪಡೆದರೂ ಯಾವ ತಾಯಿ ತನ್ನ ಮಕ್ಕಳನ್ನು ನನಗಾಗಿ ಬಲಿಕೊಡುವಳು? ಮಕ್ಕಳೆಂದರೆ ತಾಯಿತಂದೆಗಳು ಇಬ್ಬರಿಗೂ ಸಮಾನವಾಗಿ ಸೇರಿದವರಲ್ಲಾ! ಆಯಿತು. ಆ ಬಲಿಯನ್ನು ತಾನೇ ನಾನಾಗಿ ಅದೆಂತು ಕೊಡುವುದು? ಕಾರಣವಿಲ್ಲದೆ ಹೇಗೆ? "ಇದೇ ಯೋಚನೆ" ಎಂದನು.

ಜಮದಗ್ನಿಯು ತನ್ನ ವಯಸ್ಸಿಗೆ ತಕ್ಕಂತೆ ಆ ಮಹಾ ವಿಚಾರವನ್ನು ಲಘುವಾಗಿ ಬಗೆದು, "ಮಾವ, ಇದೆಲ್ಲ ತ್ರಿಶಂಕುವನ್ನು ಸ್ವರ್ಗಕ್ಕೆ ಕಳುಹಿಸಿದುದಕ್ಕಿಂತ ಹೆಚ್ಚೆ? ಮತ್ತೊಮ್ಮೆ ಅಶ್ವಿನೀ ದೇವತೆಗಳನ್ನು ಕರೆಸಿ ಕೇಳಿದರೆ ಆಯಿತು. ಇಲ್ಲ, ಪ್ರಾಣಿಗರ್ಭಗಳಿಗೆ ಕಾರಣ ಸವಿತೃದೇವನನ್ನೇ ಅನುಸಂಧಾನ ಮಾಡಿ ಅಸಂಖ್ಯಾಕರಾದ ಮಕ್ಕಳನ್ನು ಪಡೆಯುವುದು ಹೇಗೆ ಎಂದು ಕೇಳಿದರಾಯಿತು. ಇದಕ್ಕೇನು ಮಹಾ!" ಎಂದು ನಗುನಗುತ್ತಾ ಹೇಳಿದನು.

ವಿಶ್ವಾಮಿತ್ರನಿಗೆ ಹೌದು ಹೌದು ಎನ್ನಿಸಿತು. ಒಂದುವೇಳೆ ಮೇನಕೆಗೇ ಈ ರಹಸ್ಯ ಗೊತ್ತಿರಬಹುದೋ ಏನೋ ವಿಚಾರಿಸಬೇಕು ಎಂದುಕೊಂಡನು. ಆದರೂ ಜಮದಗ್ನಿಗೆ ಆ ವಿಚಾರವೇನೂ ಹೇಳದೆ, "ಆಗಲಿ, ಏನಾದರೂ ಮಾಡೋಣ. ಮಾಡಬೇಕು" ಎಂದು ಹೇಳಿ, "ಇನ್ನು ಸಂಜೆಯಾಗುತ್ತಾ ಬಂದಿತು. ನಾನು ಹೊರಡುವೆನು" ಎಂದು ಹೊರಟನು.

ಅದುವರೆಗೆ ಅಳಿಯನು ಮಾವನು ಹೇಗೆ ಬರುವನು ಹೇಗೆ ಹೋಗುವನು ಎಂಬುದನ್ನು ನೋಡಿರಲಿಲ್ಲ. ಅಂದು ಮಾವನು ಹೋದಮೇಲೆ "ಈ ರಹಸ್ಯ ಕಶ್ಯಪನಿಗೆ ಗೊತ್ತಿರಬೇಕು. ಕ್ಷೇತ್ರಾನುಗುಣವಾಗಿ ಫಲವಾಗುವಂತೆ ಬೀಜ ಕೊಡುವ ಆತನಿಗೆ ಏಕವು ಅನೇಕವಾಗುವಂತೆ ಮಾಡುವ ವಿಧಾನವೂ ಗೊತ್ತಿರಬೇಕಲ್ಲವೆ?" ಎನ್ನಿಸಿತು. ಅದನ್ನು ಹೇಳಬೇಕೆಂದುಕೊಂಡು ಹೊರಗೆ ಅವ

ಸರ ಅವಸರವಾಗಿ ಬಂದನು. ಮಾವನು ಇರಲಿಲ್ಲ. ಮಾವನ ಆಶ್ರಮದ ದಾರಿಯಲ್ಲಿ ಒಂದು ಯೋಜನದವರೆಗೂ ಓಡೋಡಿಬಂದನು. ಸಿಕ್ಕಲಿಲ್ಲ. ದಾರಿಯಲ್ಲಿ ಹಜ್ಜೆಯ ಗುರುತೂ ಇರಲಿಲ್ಲ. 'ಹಾಗಾದರೆ ಆತನು ಬೇರೆ ದಾರಿ ಹಿಡಿದು ಹೋಗಿರಬಹುದೋ?' 'ಇರಲಾರದು' 'ಹಾಗಾದರೆ, ಆತನು ಆಕಾಶಗಮನ ಮಾಡಿರಬಹುದೋ?' 'ಇದ್ದೀತು. ಈಚೆಗೆ ಈತನಿಗೆ ಕೆಲವು ಸಿದ್ಧಿಗಳ ವಿಚಾರದಲ್ಲಿ ಅಭಿಮಾನ ಬಂದಿದೆ. ಮಾತುಕಥೆಗಳಲ್ಲೂ ಕರ್ಮಜ ದೇವತೆಯಂತೆ ಆಡುತ್ತಾನೆ. ಈ ಬದಲಾವಣೆಗೆ ಕಾರಣವೇನು?' ಎಂದು ಯೋಚಿಸುತ್ತ ಹಿಂತಿರುಗಿ ಹೊರಟುಹೋದನು.

---

# ನಲವತ್ತನೆಯ ತರಂಗ

ವಿಶ್ವಾಮಿತ್ರನ ಹಾದಿ ಕಾಯುತ್ತಿದ್ದ ಮೇನಕೆಯು ಒದ್ದಾಡುತ್ತಿದ್ದಾಳೆ. 'ಆ ಮಹರ್ಷಿಯೇನಾದರೂ ತನ್ನ ದಿವ್ಯಜ್ಞಾನದಿಂದ ಅಂದು ತನಗೆ ಸೋಲಾಗುವುದೆಂದು ತಿಳಿದು ತಪ್ಪಿಸಿಕೊಂಡನೋ?' ಎಂದು ದಿಗಿಲು. ತನ್ನ ಜ್ಞಾನ ಬಲದಿಂದ ಇನ್ನೊಂದು ಝಾಮದೊಳಗಾಗಿ ಏನಾಗುವುದು ಎಂಬುದನ್ನು ನೋಡಲು ಅವಳಿಗೆ ಕುತೂಹಲ. ಏನಾಗುವುದೋ ಅದು ತನಗೆ ಬೇಡದುದಾದರೆ, ಎಂದು ನೋಡುವುದಕ್ಕೂ ದಿಗಿಲು. ಮುನೀಂದ್ರನೆಲ್ಲಿರುವನೋ ನೋಡೋಣ ಎಂದು ಒಂದು ಮನಸ್ಸು. ಆದರೆ ನೋಡುವುದಕ್ಕೆ ಬೇಕಾದ ಸ್ಥೈರ್ಯವಿಲ್ಲ. ಅವಳು ತನ್ನ ಮನಶ್ಶೈಥಿಲ್ಯವನ್ನು ಪ್ರಕಟಿಸುವಂತೆಯೂ ಇಲ್ಲ. ಸಖಿಯರಿದ್ದಾರೆ. ಬಹು ಕಷ್ಟದಿಂದ ನಗುನಗುತ್ತ ಓಡಾಡುತ್ತಿದ್ದಾಳೆ. ಅವಳು ಎಲ್ಲಿದ್ದರೂ ಅವಳ ಮನಸ್ಸು ಮಾತ್ರ ಕಿವಿಗಳಲ್ಲಿ. ಏನು ಸದ್ದಾದರೂ ವಿಶ್ವಾಮಿತ್ರನು ಬಂದನೋ ಎಂದು ಹಿಂತಿರುಗಿ ನೋಡುತ್ತಾಳೆ.

ಕೊನೆಗೆ ವಿಶ್ವಾಮಿತ್ರನು ಬಂದನು. ಕೊಂಚ ಹೊತ್ತಾಗಿತ್ತು. ಬರುತ್ತಿದ್ದಹಾಗೆಯೇ, "ಮೇನಾ, ಹೊತ್ತಾಯಿತೇನು?" ಎನ್ನುತ್ತಲೇ ಬಂದನು. ಆ ಎರಡಕ್ಷರಗಳನ್ನು ಕೇಳಿ, ಆತನ ರೂಪವನ್ನು ಕಂಡು ಆ ಮಡದಿಯ ಹೃದಯ

ತಣಿಯಿತು. ನೋಡುವವರಿದ್ದಾರೆ ಎಂಬುದನ್ನು ಮರೆತು ಗಂಡನನ್ನು ಆಲಿಂಗಿಸಿದಳು.

ಮರೆಯಲ್ಲಿದ್ದ ಗೆಳತಿಯರಿಬ್ಬರೂ ಅದನ್ನು ಕಂಡು ಆಶ್ಚರ್ಯಪಟ್ಟರು. ಅವರ ಜನ್ಮದಲ್ಲಿ ಹೆಣ್ಣು ಅಷ್ಟು ಮೋಹವನ್ನು ಪಡೆಯುವಳೆಂಬುದನ್ನೂ, ಪಡೆಯಬಲ್ಲಳೆಂಬುದನ್ನೂ ಅರಿತಿರಲಿಲ್ಲ. ರಂಭೆಗೆ ಆಶ್ಚರ್ಯವು ಬೆಳೆದು ಅಸೂಯೆಯಾಯಿತು. ಘೃತಾಚಿಗೆ ಈ ಮುನೀಂದ್ರನ ಮಹಿಮೆಯಿನ್ನೆಂಥದಿರಬೇಕು. ಎಂದು ಆಶ್ಚರ್ಯವಾಗಿ ಸಾಧ್ಯವಾದರೆ ತಾನೂ ಈ ಸುಖವನ್ನು ಒಮ್ಮೆಯಾದರೂ ಸವಿಯಬೇಕು ಎನ್ನಿಸಿತು.

ಮೇನಕೆಯ ಮನಸ್ಸು ಪ್ರಸನ್ನವಾಗುತ್ತಲೂ ಪೂಜಾ ಮಂಟಪವೆಲ್ಲ ಪ್ರಸನ್ನವಾಗಿ ನಗುವಿನ ಹೊರಳಿಯಾಯಿತು. ಮುನೀಂದ್ರನು ವಿಶ್ವಾಸದಿಂದ ನೀಡಿದ ಗಾಢಾಲಿಂಗನದಿಂದ ತೃಪ್ತಳಾಗಿ ಆತನನ್ನು ಕರೆದೊಯ್ದು ಮಂಟಪದ ಮಧ್ಯದಲ್ಲಿ ಮಾಡಿದ್ದ ಮಂದಾಸನದಮೇಲೆ ಕೂರಿಸಿದಳು. ನೋಡಿದವರಿಗೆ ಮೇನಕೆಯು ಆತನನ್ನು ಕೈಹಿಡಿದಲ್ಲ, ಕೈಹಿಡಿದಿರುವ ನೆವದಿಂದ ಎತ್ತಿಕೊಂಡು ಹೋಗಿ ಕೂರಸಿದಂತೆ ಕಾಣುತ್ತಿತ್ತು.

ಮಡದಿಯು ತಾನೆಸೆಯಬೇಕೆಂದಿರುವ ಕೂರಂಬು ಬೇಗ ನಾಟಲೆಂದು ತನ್ನ ಬೇಟೆಗೆ ಎಣ್ಣೆಯನ್ನು ಬೋಳೆವಂತೆ ಆತನಿಗೆ ಎಣ್ಣೆಯೊತ್ತಿದಳು. ಆ ಶರಗು ನಡುವಿಗೆ ಸುತ್ತಿ, ನೆರಿಯನ್ನು ಎತ್ತಿಕಟ್ಟಿ, ಬಳೆಗಳನ್ನು ಮೇಲಕ್ಕೆ ಸವರಿಸಿಕೊಂಡು, ಎಣ್ಣೆಯನ್ನೊತ್ತುತ್ತಿದ್ದರೆ, ಮೃದಂಗದ ತಾಳಗಳಂತೆ ಹಿತವಾಗಿ ಸದ್ದಾಗಿ, ತನ್ನ ಮೋಹವನ್ನಿವಳು ತಲೆಗೆ ಮೆತ್ತುತ್ತಿರುವಂತೆ ತೋರುತ್ತದೆ. ಅಂಗಾಂಗಗಳನ್ನು ಹಿಡಿದು ಹಿಡಿದು ಎಣ್ಣೆಹಚ್ಚಿ ನೀವುತ್ತಿದ್ದರೆ, ತನ್ನ ಬಾಣವನ್ನು ಪ್ರಯೋಗಿಸಲು ಮರ್ಮಸ್ಥಾನವಾವುದು ಎಂದು ಹುಡುಕುವಂತಿದೆ. ಅಂತೂ ಎಣ್ಣೆಯೊತ್ತಿಯಾಯಿತು. ಅಲ್ಲಿಯೇ ಬಿಸಿನೀರೂ ಬಂತು. ಎಣ್ಣೆಯೊತ್ತಿದ ಶ್ರಮದಿಂದಲೇ ಮೋಹನೆಯ ಮುಖವೂ ಮೈಯೂ ಕೆಂಪಾಗಿದೆ. ಆದರೆ ಉತ್ಸಾಹವು ಕುಗ್ಗಿಲ್ಲ. ತಾನೇ ನೀರು ಹುಯ್ಯಬೇಕೆಂದು ಕುಣಿಯುತ್ತಿದ್ದಾಳೆ. ಬಟ್ಟೆಗೆ ರಂಗು ಕಟ್ಟುವ ರಂಗಾರೆಯವನು ಬಟ್ಟೆಯನ್ನು ಒಗೆಯುವಷ್ಟು ವಿಶ್ವಾಸದಿಂದ, ಯಜ್ಞಮಾಡುವವನ ಶ್ರದ್ಧೆಯಿಂದ, ನೀರೆರೆದು

ಮುಗಿಸಿದ್ದಾಳೆ. "ದೇವ, ನಿನ್ನ ನಿತ್ಯಕರ್ಮ ಮುಗಿಯುವ ವೇಳೆಗೆ ನಾನು ಬಂದುಬಿಡುತ್ತೇನೆ" ಎಂದು ತಾನು ಮೀಣಕ್ಕಿಳಿದಿದ್ದಾಳೆ.

ಆ ಸೇವೆಯನ್ನು ಕಂಡು ತೃಪ್ತಳಾದ ಘೃತಾಚಿಯು ತಟ್ಟನೆ ಮುಂದೆ ಬಂದು ಮೇನಕೆಗೆ ಮೀಣವನ್ನು ಮಾಡಿಸಿದಳು. ರಂಭೆಗೆ 'ನಿಜವಾಗಿಯೂ ಮೇನಕೆ ಭಾಗ್ಯವಂತೆ' ಎನ್ನಿಸಿತು.

ಮತ್ತೊಂದು ಗಳಿಗೆಯೊಳಗಾಗಿ ಮೇನಕೆಯು ಮಡಿಯುಟ್ಟು ಬಂದಳು. ಮತ್ತೊಂದು ಪೂಜಾ ಪೀಠವು ಸಿದ್ಧವಾಯಿತು. ಮನೋಹರವಾಗಿ ಮರು ನಿದ್ದೆಯ ಝೊಂಪಿನಂತೆ ಸೊಕ್ಕಿದ ಸೊಂಪಿನ ಸಮುದ್ರವಾಗಿರುವ ಆ ಪೂಜಾ ಮಂಟಪದಲ್ಲಿ ನಾಥನನ್ನು ಕುಳ್ಳಿರಿಸಿ ಅವಳು ಪೂಜೆಗಾರಂಭಿಸಿದಳು. ಪೂರ್ವ ದಿಶೆಯಲ್ಲಿ ತೋರಿದ ಬಿಳುಪು ಕೆಂಪಾಗಿ, ಕೆಂಪು ಒಟ್ಟುಗೂಡಿ ಬಂದಂತೆ ಚಂದ್ರ ಬಿಂಬವು ಮೇಲೆ ಕಾಣುವವರೆಗೂ ಪೂಜೆಯಾಯಿತು.

ಆ ಪೂಜೆಯ ವೈಖರಿಯನ್ನಾರು ಬಣ್ಣಿಸಬಲ್ಲರು ? ತೊಡೆದ ಆ ಗಂಧವು ಪಂಚೇಂದ್ರಿಯಗಳಿಗೂ ಸಂತರ್ಪಣವಾಗಿದೆ. ಅರ್ಚಿಸಿದ ಕುಸುಮಗಳಲ್ಲಿ ಕೇವಲ ರೂಪ ಗಂಧಗಳು ಮಾತ್ರವಲ್ಲದೆ ಅಲೌಕಿಕವಾದ ಇನ್ನೂ ಏನೋ ಒಂದಿದ್ದು ಸುಮಸುಮವೂ ನವಚೈತನ್ಯವನ್ನು ತಂದುಕೊಡುವಂತಿದೆ. ಅಥವಾ ಇನ್ನೂ ಸರಿಯಾಗಿ ಹೇಳಬೇಕೆಂದರೆ, ಜೇಡನು ತನ್ನ ಆಹಾರವಾದ ನೊಣವನ್ನು ಹಿಡಿದು ಅದು ಅಲ್ಲಾಡದಂತೆ ಸೂಕ್ಷ್ಮವಾದ ತನ್ನ ಎಳೆಗಳನ್ನು ಅದರ ಸುತ್ತಲೂ ಕಟ್ಟುವಂತೆ, ಮೋಹನೆಯು ತನ್ನ ಮೋಹಾಮಂತ್ರದ ಬೀಜಾಕ್ಷರಗಳನ್ನು ಆ ಮಾನವೇಂದ್ರನ ಮನಸ್ಸು ಮುಗ್ಧವಾಗಲೆಂದು ಮನಸ್ಸಿನಿಂದಲೇ ಪ್ರಯೋಗಿ ಸುತ್ತ, ಆ ಪ್ರಯೋಗದ ಕ್ರೌರ್ಯವನ್ನು ಮರೆಮಾಚಲು ಪೂಜೆಯ ನೆಪದಿಂದ ಹೂವುಗಳನ್ನು ಒಪ್ಪಿಸುತ್ತಿರುವಂತಿದೆ. ನೈವೇದ್ಯವನ್ನು ಸಲ್ಲಿಸಿದಾಗಲಂತೂ ಆ ವೈಖರಿಯೇ ವೈಖರಿ. ಬಳಕುವ ದಿವ್ಯಜ್ಯೋತಿರ್ಲತೆಯು ತನ್ನ ಜೀವನ ಸಾರವನ್ನು ಸಂಗ್ರಹಿಸಿರುವ ಪ್ರೇಮಕೋಶಗಳಂತಿರುವ ಹಣ್ಣುಗಳನ್ನು ತನ್ನ ಜೀವನ ಸಾರ್ಥಕತೆಗೋಸ್ಕರ ಇಷ್ಟ ದೈವದಲ್ಲಿ ಸಮರ್ಪಿಸುತ್ತಿರುವುದೋ ಎಂಬಂತೆ, ಹಣ್ಣಾದ ಬಳ್ಳಿಯೊಂದು ಆಶ್ರಯದಾತನಾದ ಮಹಾವೃಕ್ಷಕ್ಕೆ ತನ್ನ ಸರ್ವಸ್ವವನ್ನು ಕಾಣಿಕೆಯಾಗಿ ಕೊಡುತ್ತಿರುವಂತೆ, ಅತಿ ಮಾನುಷವಾದ

ಯಾವುದೋ ಭಕ್ಷ್ಯಭೋಜ್ಯಗಳ ರಸಕವಳಗಳನ್ನು ಒಪ್ಪಿಸಿದ್ದಾಳೆ. ದೇವತೆಗಳ ಆಹಾರವಾದ ಅಮೃತವಲ್ಲದಿದ್ದರೂ ತತ್ತುಲ್ಯವಾದ ದಿವ್ಯೌದನದ ಭೋಜನದಿಂದ ನಾಲಗೆಯಿರಲಿ, ಹೊಟ್ಟೆಯಿರಲಿ, ಮೈಯಿರಲಿ, ಪಂಚಪ್ರಾಣಗಳೂ ತೃಪ್ತಿಯಾಗಿವೆ.

ಮಂತ್ರಪುಷ್ಪವನ್ನು ಒಪ್ಪಿಸಿ ಪುನಃ ಪೂಜೆಯನ್ನೂ ಮುಗಿಸಿ ಪೂಜಾಂತ್ಯಕ್ಕೆ ಬರುವುದರೊಳಗಾಗಿ ವಿಶ್ವಾಮಿತ್ರನಾಗಿ ತಾನು ನಿಜವಾಗಿ ಯಾವುದೋ ಒಂದು ದೇವತೆ, ಈ ಭಕ್ತಳಿಗೆ ಏನು ಬೇಕಾದರೂ, ಕೇಳಿದ ವರವು ಎಂಥದೇ ಆಗಿರಲಿ, ನಿಶ್ಯಂಕೆಯಿಂದ, ನಿರ್ಲೋಭದಿಂದ, ಪೂರ್ಣಮನಸ್ಸಿನಿಂದ ಕೊಡಬೇಕು ಎನ್ನಿಸಿದೆ. ಆ ಭಾವವನ್ನು ಕಣ್ಣು, ಮುಖ, ಮೈಗಳು ಮನಸ್ಸಿಗಿಂತ ಮುಂಚೆ, ಭಾವವು ನುಡಿಗೊಂಡು ಹೊರಹೊರಡುವುದಕ್ಕಿಂತ ಮುಂಚೆ ಸೂಚಿಸಿ ಆಶ್ವಾಸನವನ್ನು ನೀಡುತ್ತಿವೆ. ನಾಲಗೆಯು ಆ ಸೌಖ್ಯಸಾಗರದಲ್ಲಿ ಎಲ್ಲಿಯೋ ಕರಗಿಹೋಗಿರಬೇಕು. ಇಲ್ಲದಿದ್ದರೆ ನುಡಿಯು ಹೊರಬೀಳುವುದಕ್ಕೆ ಇಷ್ಟು ತಡವಾಗಬೇಕೆ ? ಮನಸ್ಸು ಆ ಸುಖ ತರಂಗಿಣಿಯಲ್ಲಿ ಎಲ್ಲಿಯೋ ಕೊಚ್ಚಿಹೋಗಿರಬೇಕು. ಇಲ್ಲವಾದರೆ ಮಾತು ನುಡಿಯದಿರುತ್ತಿತ್ತೆ ?

ಅಂತೂ ಮೇನಕೆಯೂ ಪೂಜೆಯನ್ನು ಮುಗಿಸಿದ್ದಾಳೆ. ಮೊದಲೇ ಓಡಾಡುತ್ತಿದ್ದ ಬೆಳಕಿನ ಬೊಂಬೆಯಂತಿದ್ದವಳು ಈಗ ಶೃಂಗಾರದ ಸೊಗಸು, ಸೌಖ್ಯದ ಓಜಸ್ಸು, ಶ್ರದ್ಧೆಯ ತೇಜಸ್ಸು ಸೇರಿ ಅಲೌಕಿಕ ಮನಮೋಹನ ಮೂರ್ತಿಯಾಗಿದ್ದಾಳೆ. ಪೂಜೆಯನ್ನೆಲ್ಲ ಒಪ್ಪಿಸಿ ಪೂಜಾಸಾದ್ಗುಣ್ಯಕ್ಕಾಗಿ ಫಲವನ್ನು ತಂದು ಒಪ್ಪಿಸಿದಳು.

ವಿಶ್ವಾಮಿತ್ರನು ಮೇನಕೆಯನ್ನು ಬರಸೆಳೆದು ದೃಢಾಲಿಂಗನಪೂರ್ವಕವಾಗಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಗಲ್ಲವನ್ನು ಹಿಡಿದು ಅಲುಗಿಸಿ, ನಲಿಸಿ, ಚುಂಬಿಸಿ, ಚೆದುರಿದ ಕುರುಳು ನೇವರಿಸಿ, ಮೂಡಿದ್ದ ಮೂಡುತ್ತಿರುವ ಬೆವರು ವರೆಸಿ, ಮೊಗದಲ್ಲಿ ಮೊಗವಿಟ್ಟು "ಇದೇನೇ ಸಂಭ್ರಮ ! ಇದೇನೇ ಉಪಚಾರ ! ನಾನು ಸಕ್ಕರೆಯ ಗಡ್ಡೆಯಾಗಿ ನೀರಲ್ಲಿ ಬಿದ್ದಂತಾದೆ ನಲ್ಲ !" ಎಂದು ಮೃದುವಾಗಿ ಕೇಳಿದನು.

ಮೇನಕೆಯು ಮೌನವಾಗಿ ಆ ಉಪಚಾರಗಳನ್ನೆಲ್ಲ ಸ್ವೀಕರಿಸಿ, ಹೇಳಲೋ ಬೇಡವೋ ಎಂದು ತೂಗುತ್ತಾ ಇನ್ನೂ ಮೌನದಲ್ಲಿಯೇ ಇರು

ವಾಗ ಗಂಡು ತನಗೊಪ್ಪಿಸಿಕೊಂಡ ಹೆಣ್ಣಿಗೆ ತಾನೂ ತನ್ನನ್ನು ಒಪ್ಪಿಸಿ ಕೊಳ್ಳುತ್ತ "ಮೇನಾ, ಮೌನವೇಕೆ? ಈ ಉಪಚಾರದ ಗೋಪುರಕ್ಕೆ ಮಾತಿನ ಕಲಶವಿಕ್ಕು. ಚಿತ್ರವು ಪೂರ್ಣವಾಗಲಿ" ಎಂದನು.

ಮೇನಕೆಯು ಮೃದುವಾಗಿ ನಕ್ಕಳು. ಮೊದಲೇ ಗೊತ್ತುಮಾಡಿ ಕೊಂಡಿದ್ದರೋ ಎಂಬಂತೆ, ಎಲ್ಲೋ ಮರೆಯಲ್ಲಿದ್ದ ವೀಣೆಗಳು ಮೋಹನದಲ್ಲಿ ಧೈವತದಿಂದ ಒಂದು ತಾನವನ್ನು ಆರೋಹಣದಲ್ಲಿ ಮೃದುವಾಗಿ ನುಡಿದು ಷಡ್ಜದಲ್ಲಿ ನಿಂತುವು. ಅಲ್ಲಿದ್ದ ಕಿರುಸೊಡರುಗಳೆಲ್ಲ ಒಬ್ಬರನ್ನೊಬ್ಬರು ನೋಡಿ ನಕ್ಕಂತೆ ಅಲ್ಲಾಡಿ ಮೇನಕೆಯ ಚಳತುಂಬುಗಳೋ ಎಂಬಂತೆ ಮೆರೆದುವು.

ಮೇನಕೆಯು "ದೇವಾ" ಎಂದಳು. ಮುಂದೆ ಅವಳ ಬಾಯಿಂದ ಏನೋ ಹೊರಬೀಳಲಿಲ್ಲ. ಮುನಿಯು ತುಟಿಗಳೆರಡೂ ಒಂದಕ್ಕೊಂದು ಭದ್ರವಾಗಿ ಸೇರಿ ಕೊಂಡು ವಿರಚಿಸಿದ್ದ ಮೌನಮುದ್ರೆಯನ್ನು ಒಡೆಯುವುದಕ್ಕೋ ಎಂಬಂತೆ ಅಧರವನ್ನು ಸಸೀತ್ಕಾರವಾಗಿ ಚುಂಬಿಸಿ, "ಹೇಳು, ಹೇಳು, ಏನು ಬೇಕಾ ದರೂ ಮಾಡೋಣ. ಹೇಳು" ಎಂದನು.

ದಿವ್ಯಾಂಗನೆಯು ಮಾನವನನ್ನು ಯಮೀಂದ್ರನನ್ನು ಬಿರಿಯುತ್ತಿರುವ ಮುಗುಳಿನಿಂದ ಹೊರಸೂಸುತ್ತಿರುವ ಪರಿಮಳದ ತರಂಗಗಳಂತೆ ಅರೆಅರೆ ಯಾಗಿ ನುಡಿಯುತ್ತಿರುವ ಮುದ್ದುಮಾತುಗಳನ್ನು ತನ್ನ ಕಣ್ಣಿನ ನೋಟ ದಿಂದ ಪೂರ್ಣಮಾಡುತ್ತ "ದೇವಾ, ನನಗೆ ಮೋಹಭಿಕ್ಷೆ – ಬೇಕು" ಎಂದಳು. ಸಮ್ರಾಜನು ತಿರುಪಕ್ಕೆ ಹೋದಾಗ ಕಾಣುವ ನಾಚಿಕೆ ನರನರಗಳಲ್ಲೂ ತುಂಬಿತ್ತು.

ಮುನಿಯು ಎಚ್ಚರವಾದನು. ಒಂದು ಗಳಿಗೆ ಅವಾಕ್ಕಾದನು. ರೆಪ್ಪೆ ಹೊಡೆಯುವಷ್ಟು ಸ್ಥಿರನಾದನು. ಮತ್ತೆ ಆ ಭಾವ ಕಿತ್ತೆಸೆದವನಂತೆ, ಬೇಡ ವೆಂದು ಬಿಸಾಡಿದವನಂತೆ, ತಾನಾಗಿಯೇ ಬೇಕೆಂದು ಗಂಟು ಸಡಲಿಸಿಕೊಂಡು ಮಹಾಪ್ರವಾಹದೊಳಗೆ ಧುಮುಕುವ ಉಪ್ಪಿನಮೂಟೆಯಂತೆ, ಆ ಮೋಹಿನಿಗೆ ಒಲಿದು ವಶನಾದ ಮಹಾದೇವನಂತೆ, ಒಲಿಯುತ್ತ "ಆಗಲಿ, ದೇವಿ, ಇಂದಿ ನಿಂದ ಇನ್ನೊಂದು ಅಧ್ಯಾಯ. ಇಂದಿನಿಂದ ನಾನಿನ್ನು ನಿನ್ನ ಸೇವಕ. ಬೇಕೆಂದು ಸೇವಿಸುವ ದಾಸ. ಆಯಿತೆ? ಇನ್ನೇನಾಗಬೇಕು?" ಎಂದನು.

ಮೇನಕೆಯು ಸಂತೃಪ್ತಿಯ ಅತಿರೇಕದಿಂದ ಕಣ್ಣೆತ್ತಿ ಕಾಂತನನ್ನು

ನ್ನೋಡಿದಳು. ಆ ನೋಟದಲ್ಲಿ ಅದೇನಿತ್ತೋ ? ಯಾವ ಕರೆಯಿತ್ತೋ ? ಏನು ಮೋಹನವಿತ್ತೋ ? ಏನು ಉದ್ದೀಪನವಿತ್ತೋ ? ಯಾವ ಉಪ ಬೃಂಹಣ ಶಕ್ತಿಯಿತ್ತೋ ? ಮುನೀಂದ್ರನು ಮೇಲೆಬಿದ್ದು ತನಗೂ ವೈಯರಿವು ಇಲ್ಲವೆಂಬಂತಾಗುತ್ತಿರಲು, ಆ ಮೋಹನೆಯು ಮೇಲೆಬಿದ್ದು ಅವಳಿಗೂ ವೈ ಯರಿವು ಉಳಿಯದಂತೆ ತಬ್ಬಿದನು.

ಪೂರ್ಣಾಹುತಿಗೊಂಡು ವಿಜೃಂಭಿಸಿ ಶಾಂತನಾಗುವ ಯಜ್ಞೇಶ್ವರನಂತೆ, ಸುತ್ತಮುತ್ತಲೆಲ್ಲ ಏನೋ ಶಾಂತಿ ತಲೆದೋರಿತು. ರಂಭೆ ಘೃತಾಚಿಯರು ಒಬ್ಬರನ್ನೊಬ್ಬರು ನೋಡಿ ನಕ್ಕು ನಿಜವಾಗಿಯೂ ಇವಳು ಭಾಗ್ಯವಂತೆ ಎಂದು ತಲೆಯಾಡಿಸುತ್ತ ತಿರಸ್ಕರಿಣಿಯನ್ನು ಎಳೆದಂತೆ ಕಣ್ಣುಮುಚ್ಚಿ, ಮೆತ್ತಗೆ ಅಲ್ಲಿಂದ ಜಾರಿದರು.

ಮರೆಯಲ್ಲಿದ್ದ ಗಂಧರ್ವರು ಶ್ರಾವ್ಯವಾಗಿ ಮೃದುವಾಗಿ ಮೋಹಕ ವಾದ ಗಾನವನ್ನು ವಾದ್ಯಸಮೇತವಾಗಿ ಬಾರಿಸಿದರು. ಶೃಂಗಾರಮಂಟಪವು ಮತ್ತೊಮ್ಮೆ ಸುಗಂಧವನ್ನು ಚೆಲ್ಲಿ ದೀಪಗಳ ಕಾಂತಿಯನ್ನು ಅಪಹರಿಸಿ ಅವು ಗಳನ್ನು ಸೂರ್ಯೋದಯ ಕಾಲದ ನಕ್ಷತ್ರಗಳಂತೆ ಮಾಡಿತು.

---

## ನಲವತ್ತೊಂದನೆಯ ತರಂಗ

ದಂಪತಿಗಳು ನಿರ್ವಿಷಯಾನಂದವನ್ನು ಪಡೆದವರಂತೆ ಕಾಲದೇಶಗಳನ್ನು ಮರೆತು ಎಲ್ಲಿಯೋ ಯಾವುದರಲ್ಲೋ ಲೀನವಾಗಿ ಹೋಗಿದ್ದರೂ ಜಗತ್ತು ಕಾಲವನ್ನು ಮರೆಯಲಿಲ್ಲ. ಭಗವಾನ್ ಸೂರ್ಯದೇವನು ಎಂದಿನಂತೆ ಅಹಸ್ಕರ ನಾಗಿ ಪೂರ್ವದಿಶೆಯನ್ನು ಅಲಂಕರಿಸುವ ಸುವೇಳೆಯು ಬಂತೆಂದು ಕೋಳಿಯು ಜಗತ್ತನ್ನು ಎಚ್ಚರಿಸಿತು. ಯೋಗಿ ಭೋಗಿಗಳಿಬ್ಬರಿಗೂ ಏಕಸಮವಾಗಿ ಪ್ರಿಯವಾದ ಆ ಕಾಲದಲ್ಲಿ ಎಚ್ಚೆತ್ತ ವಿಶ್ವಾಮಿತ್ರನು ಕಾಂತಾದೇಹದ ಗಾಢಾ ಲಿಂಗನವು ಇನ್ನೂ ಸಡಿಲವಾಗದಿರಲು, ಅದನ್ನು ಹಾಗೆಯೇ ಅನುಭವಿಸುತ್ತಾ, ಎಚ್ಚರವಾಗಿದ್ದರೂ ಕಣ್ಣುಬಿಡಲಾರದೆ, 'ದಿನದಿನವೂ ಇಷ್ಟಾಪೂರ್ತ ಕರ್ಮಗಳ ನ್ನೆಲ್ಲ ಮಾಡುವುದು ಇದಿಷ್ಟಕ್ಕೆ ತಾನೇ ? ಸ್ವರ್ಗದ ವೇಶ್ಯಾಂಗನೆಯರ ಭೋಗ

ಕ್ಕಾಗಿ ತಾನೇ ? ಅದೇ ಇಲ್ಲಿ ಬಂದಿರಲು ಈ ಕರ್ಮಗಳ ಕಷ್ಟ ನಿಷ್ಠೂರವೇಕೆ ?' ಎಂದು ಮುಂತಾಗಿ ಯೋಚಿಸುತ್ತಿದ್ದಾನೆ. ಆತನ ಮತ್ತೊಂದು ಮನಸ್ಸು 'ನಿನಗೆ ಕರ್ಮಗಳು ಬೇಕಾಗಿಲ್ಲ. ಆದರೆ ಲೋಕರಕ್ಷಣ ಭಾರವನ್ನು ಹೊತ್ತಿರುವವರಿಗೆ ಬೇಕಲ್ಲ ! ನಿಮ್ಮಂಥಾವರೇ ಕರ್ಮ ಸನ್ಯಾಸ ಮಾಡಿದರೆ ಅವರ ಗತಿಯೇನು ? ' ಎನ್ನುತ್ತದೆ. ಕೊನೆಗೆ ಸಿದ್ಧಾಂತವಾಗಿ ಹೋಯಿತು : 'ಇವಳಿಗೆ ವರ ಕೊಟ್ಟದ್ದೇನೆ. ಇವಳ ಸಹವಾಸವು ನನಗೂ ಬೇಕೆನ್ನಿಸುತ್ತಿದೆ. ನಮ್ಮ ಮಿತ್ರರಾದ ದೇವತೆಗಳಿಗೆ ಬೇಕಾದ ಬಲಿ ಮೊದಲಾದವುಗಳು ಸಕಾಲಕ್ಕೆ ಇಲ್ಲದೆ ಹೋದರೆ ಅವರಿಗೆ ತೊಂದರೆಯಾಗುತ್ತದೆ. ಅದಾಗದಂತೆ ನನ್ನ ತಪಸ್ಸಿನಿಂದ ಹವಿರ್ಭಾಗಗಳು ಅವರಿಗೆ ಸಕಾಲಕ್ಕೆ ಸಲ್ಲುವಂತಾಗಲಿ. ಯಾರಿಗೂ ತೊಂದರೆಯಿಲ್ಲದೆ, ಇನ್ನಷ್ಟುಕಾಲ, ನಿರಾತಂಕವಾಗಿ, ದಾಂಪತ್ಯ ಸೌಖ್ಯವನ್ನು ಅನುಭವಿಸಲು ಅನುಕೂಲವಾಗಲಿ.' ಆ ಸಿದ್ಧಾಂತವು ರೂಪಗೊಳ್ಳುತ್ತಿದ್ದ ಹಾಗೆಯೇ ಮುಗಿದಿದ್ದ ಕಣ್ಣಿಗೆ ಮತ್ತೆ ನಿದ್ದೆ ಬಂತು . ಅಥವಾ ಬಂದ ಹಾಗಾಯಿತು. ಅಲ್ಲಿ ಒಂದು ಸಣ್ಣ ಕನಸು.

ಆ ಕನಸಿನಲ್ಲಿ ಮತ್ತೆ ಮೋಹನೆಯಾದ ಮೇನಕೆಯು ಮೋಹ ಪ್ರಸಾದವನ್ನು ಬೇಡುವುದಕ್ಕಾಗಿ ವ್ರತ ಮಾಡಿದ್ದಾಳೆ. ಪ್ರಸನ್ನನಾಗಿ ವಿಶ್ವಾಮಿತ್ರನು ಆ ವರವನ್ನು ಕೊಡಲು ಕೈನೀಡಿದ್ದಾನೆ. ದೇವತೆಗಳೆಲ್ಲ ವಿಷಣ್ಣರಾಗಿ, ದೀನರಾಗಿ, ತಮಗೆ ನ್ಯಾಯವಾಗಿ ಸಲ್ಲಬೇಕಾದ ಏನೋ ತಪ್ಪಿ ಹೋದವರಂತೆ ಸಪ್ಪೆ ಮೊಕ ಹಾಕಿಕೊಂಡು ನಿಂತಿದ್ದಾರೆ. ಆಗ ಕೌಶಿಕನು, ಇಲ್ಲಿಲ್ಲ. ಇಗೋ ನಿಮ್ಮದು ನಿಮಗೆ ಇವಳದು ಇವಳಿಗೆ ಎಂದು ಏನೋ ಭಾಗಮಾಡುತ್ತಾನೆ. ದೇವತೆಗಳು ಸಂತೋಷಪಟ್ಟು ನಿನ್ನ ತಪಸ್ಸು ಅಕ್ಷಯವಾಗಲಿ ಎಂದು ಹರಸುತ್ತಾರೆ. ಮೇನಕೆಯು ಸಂತೋಷದಿಂದ ಸೊಕ್ಕುವಹಾಗೆ ಆಗುತ್ತಿದ್ದಾಳೆ. ಹಿಂದಿನಿಂದ ಯಾರೋ ಮುದುಕರು, ಹಿಂದಿನ ಯಾವುದೋ ಕಲ್ಪದವರು ಕಲ್ಪಕಲ್ಪಗಳ ತೆರೆಗಳನ್ನು ಹಾರಿಸಿಕೊಂಡು ಬಂದವರಂತೆ ಎದುರುಬಂದು " ಸಿದ್ಧಂ ಸಾಧ್ಯಾಯಕಲ್ಪ್ಯತೇ " ಎಂದು ಗುಡುಗುತ್ತಾರೆ. ದೇವತೆಗಳು ಆ ಭವ್ಯ ಮೂರ್ತಿಯ ಎದುರಿನಲ್ಲಿ ವಿನೀತರಾಗಿ ನಿಂತು ನಮ್ಮ ರಹಸ್ಯವನ್ನು ನೀನೊಬ್ಬನು ಭೇದಿಸಿದುದು ಸಾಲದೆ ? ಎಂದು ಕೇಳಿಕೊಳ್ಳುತ್ತಾರೆ. ಆ ಮಹಾಪುರುಷನ ಗರ್ಜನೆ, ದೇವತೆಗಳ ಪ್ರಾರ್ಥನೆಯಲ್ಲಿ ಹವಿಸ್ಸನ್ನೆತ್ತಿ ಅಗ್ನಿಯಲ್ಲಿ ವಿನಿ

ಯೋಗಿಸುವ ದೀಕ್ಷಿತನಂತೆ ವಿಶ್ವಾಮಿತ್ರನು ಮೇನಕೆಯನ್ನು ವಿಸರ್ಜನ ಮಾಡಿದ್ದಾನೆ.

ಕನಸಿನಲ್ಲಿ ಹಾಗೆಂದುದೇ ನಿಜವಾಗಿ ಮೇನಕೆಯನ್ನು ಅತ್ತ ಣಕಿದ ಕೈ. ಏನೋ ಆಗಿ ಆತನಿಗೆ ಎಚ್ಚರವಾಗಿದೆ. ಮೇನಕೆಗೂ ಏನೋ ಕನಸು: ಕನವರಿಸುತ್ತಿದ್ದಾಳೆ. ಸ್ಪಷ್ಟಾಸ್ಪಷ್ಟವಾಗಿರುವ ಮಾತುಗಳು ಕೌಶಿಕನ ಕುತೂಹಲವನ್ನು ಕೆರಳಿಸಿವೆ. 'ಊಹು. ಒಂದು ವರ್ಷ.' 'ಇಲ್ಲ. ಇಲ್ಲ. ಹಾಗಾದರೆ ನನಗೆ ನಿಮ್ಮ ಸ್ವರ್ಗವೇ ಬೇಡ.' ಮೇನಕೆಗೆ ಎಚ್ಚರವಾಗಿಹೋಯಿತು. ತನಗಿಂತ ಮುಂಚೆ ಗಂಡನೆದ್ದಿರುವುದನ್ನು ಕಂಡು ಅವನನ್ನು ತಬ್ಬಿಕೊಂಡು ಗಳಗಳನೆ ಅತ್ತುಬಿಟ್ಟಳು.

ಆತನಿಗೆ ಕುತೂಹಲವಾಗಿ "ಏನಿದು ? ಏನಿದು ?" ಎಂದು ಸಮಾಧಾನ ಪಡಿಸಿದನು. ಅವಳು ಪೂರ್ಣವಾಗಿ ಎಚ್ಚರಗೊಂಡು "ದೇವಾ ! ನಾನು ದುಡುಕಿದೆ" ಎಂದಳು.

"ಏನು ದುಡುಕು ?"

"ನಾನು ನಿನ್ನ ಮೋಹ ಪ್ರಸಾದವನ್ನು ಬೇಡಿ, ಅದನ್ನು ಪಡೆದುದು ಮಾನವ ಧರ್ಮವಾಯಿತು. ಈ ಧರ್ಮವನ್ನು ಆಶ್ರಯಿಸಿ ಮಾನವಿಯಾದೆನೆಂದು ದೇವತೆಗಳು ನನ್ನಮೇಲೆ ಕೋಪಗೊಂಡಿದ್ದಾರೆ."

"ಅದರ ಫಲ ?"

"ಸ್ವರ್ಗವಾಸವನ್ನು ತಪ್ಪಿಸಬಹುದು. ಅದಕ್ಕಿಂತ ಕೋಪ ಬಂದರೆ ಸಂತೋಷಪಡುವ ಶಕ್ತಿಯನ್ನು ಕಿತ್ತುಕೊಂಡು ನಿತ್ಯದುಃಖಿಯನ್ನಾಗಿ ಮಾಡಬಹುದು."

"ಹಾಗಾದರೆ ಈಗ ಅವರ ಕೋಪ ಯಾವ ಫಲವನ್ನು ಕೊಟ್ಟಿದೆ ?"

ಈ ಮಾನವ ಧರ್ಮವನ್ನು ಬಿಟ್ಟು ಈಗಲೇ ಹಿಂತಿರುಗಿ ಬರಬೇಕು ಎಂದು ಅವರು. ಬರುವುದಿಲ್ಲ ಎಂದು ನಾನು. ಕೊನೆಗೆ ಒಂದು ತಿಂಗಳು, ಒಂದು ಋತು, ಒಂದು ಅಯನ, ಎಂದು ಹೆಚ್ಚಿಸಿಕೊಂಡು ಬಂದು ಕೊಟ್ಟ ಕೊನೆಯಾಗಿ ಒಂದು ವರ್ಷಕಾಲ ಇಲ್ಲಿದ್ದು ಪ್ರೇಮ ಫಲವನ್ನು ನಿನಗೊಪ್ಪಿಸಿ ಹಿಂತಿರುಗಬೇಕು ಎಂದು ಗೊತ್ತುಮಾಡಿದ್ದಾರೆ."

"ಹಾಗಾದರೆ ನನಗೆ ನಿಮ್ಮ ಸ್ವರ್ಗವೇ ಬೇಡ ಎಂದೆಯಲ್ಲ ? ಅದೇನು ?"

ಮೇನಕೆಯು ಮಳೆಯಿಂದ ಕೂಡಿದ ಬಿಸಿಲಿನಂತೆ, ಕಣ್ಣೀರು ಮಿಡಿಯುವ ನಗುವಿನೊಡನೆ ಹೇಳಿದಳು. ಆ ಮುದ್ದು, ಆ ಮೋಹ, ಆ ಚೆಲ್ಲು, ಆ ಸುಖ, ಎಲ್ಲವನ್ನೂ ಹೇಳುವ ಒಂದು ಮುತ್ತು ಕೌಶಿಕನ ದೇಹ, ಮನಸ್ಸೂ, ಬುದ್ಧಿಗಳಲ್ಲಿ ಆನಂದದ ತರಂಗಗಳನ್ನು ಎಬ್ಬಿಸುತ್ತಿರಲು "ಹೇಳಲೇಬೇಕೇ ?" ಎಂದಳು. ಬಲವಂತ ಮಾಡಿದರೇನೇ ಹೇಳುವುದು ಎಂಬ ಅರ್ಥ ಧ್ವನಿಯಲ್ಲಿ ಮುಖಮುದ್ರೆಯಲ್ಲಿ, ಅಂಗಭಂಗಿಯಲ್ಲಿ ಸ್ಪಷ್ಟವಾಗಿ ಕಂಡುಬರುತ್ತಿತ್ತು.

ಕೌಶಿಕನು ರಸಿಕತನದ ತುಂಟಾಟವನ್ನು ಮೆರೆದು ಬಂದುದನ್ನು ಹಿಂತಿರುಗಿಸಿಕೊಟ್ಟು, "ನಿನಗೆ ಮನಸ್ಸಿಲ್ಲದಿದ್ದರೆ ಬೇಡ. ಕಷ್ಟವಾದರೆ ಕೂಡದು. ಆಯಾಸವಾದರೆ ಅದು ಹಾಗಿರಲಿ" ಎಂದು ಎಳೆದನು. ಮಾತಿನಲ್ಲಿ ಬೇಡ ಎನ್ನುತ್ತಿದ್ದರೂ 'ಕಿವಿಗಳು ಅಂಗೈಯಗಲ ಮಾಡಿಕೊಂಡು ಹೇಳುತ್ತೇನೆ: ಹೇಳದಿದ್ದರೆ ಪೀಡಿಸುತ್ತೇನೆ : ಬೇಕಾದದ್ದು ಆಗಲಿ ಹೇಳಿಯೇ ತೀರಬೇಕು' ಎಂದು ನಡುವನ್ನು ಸೆಳೆದು ಹಿಡಿದುಕೊಂಡಿರುವ ಬಲಗೈಯ್ಯೊಂದೇ ಹೇಳುತ್ತಿತ್ತು.

ಮೇಲೆ ಬೇಡವೆಂದರೂ ಬೇಕು ಬೇಡೆನ್ನುತ್ತಿರುವ ಮನೋಭಾವವನ್ನು ಕಂಡು ಮೇನಕೆಯು ಸಂಪ್ರೀತಳಾಗಿ, ಪ್ರಿಯನ ಮುಂಗುರುಳನ್ನು ನೇವರಿಸುತ್ತಾ, "ಸ್ವರ್ಗದಲ್ಲಿ ಸಿಕ್ಕದ ವಸ್ತುವೊಂದು ಸಿಕ್ಕಿದೆ. ಅದನ್ನು ಬಿಟ್ಟು ಬಂದುಬಿಡು ಎಂದರು. ಬರುವುದಿಲ್ಲ ಎಂದೆ. ಸ್ವರ್ಗವಾಸವನ್ನು ತಪ್ಪಿಸುತ್ತೇವೆ ಎಂದರು. ನಿಮ್ಮ ಸ್ವರ್ಗವೇ ಬೇಡ ಎಂದೆ. ಅಷ್ಟೇ !" ಎಂದಳು.

ಕೌಶಿಕನಿಗೆ ಸಂತೋಷಸಾಗರದಲ್ಲಿ ತಾನೊಂದು ಕಲ್ಲುಸಕ್ಕರೆಯ ತುಂಡಾಗಿರುವಂತೆ ಭಾಸವಾಯಿತು. ಏನೂ ಹೇಳುವುದಕ್ಕೆ ತೋರದೆ "ಪ್ರೇಮಫಲವೆಂದರೇನು ?" ಎಂದು ಕೇಳಿದನು. ಮೇನಕೆಯು ಸ್ತ್ರೀಸಹಜವಾದ ನಾಚಿಕೆಯನ್ನು ಅತ್ತಿಟ್ಟು "ಒಂದು ಮಗು" ಎಂದಳು.

"ಎಂತಹ ಮಗು ?"

"ಹೆಣ್ಣು."

"ಅದೇನು ಹೆಣ್ಣು ?"

"ಹೆಣ್ಣಿನ ಮೋಹ ಹೆಚ್ಚಾದರೆ ಹೆಣ್ಣು. ಗಂಡಿನ ಮೋಹ ಹೆಚ್ಚಾದರೆ ಗಂಡು."

ಕೌಶಿಕನು ಏನೂ ಹೇಳಲಾರದೆ ಭಾವಾಂತರ ಶೂನ್ಯವಾಗಿ ಮೋಹ ಪೂರ್ಣವಾದ ಮನಸ್ಸಿನಿಂದ ಮಡದಿಯ ಮಗ್ಗುಲಲ್ಲಿ ಸೇರಿಕೊಂಡನು. ಅವಳು ಅದನ್ನು ಬೇಡವೆನ್ನಲಿಲ್ಲ.

---

## ನಲವತ್ತೆರಡನೆಯ ತರಂಗ

ಹಗಲು ಹೋಗಿ ರಾತ್ರಿಯಾಗಿ, ರಾತ್ರಿ ಹಗಲು ಎರಡೂ ಕಳೆದು ವಾರವಾಗಿ, ವಾರಗಳು ಕಳೆದು ಪಕ್ಷವಾಗಿ, ಶುಕ್ಲಪಕ್ಷ ಕೃಷ್ಣಪಕ್ಷಗಳು ಒಂದರ ಹಿಂದೊಂದು ಓಡಿ ಮಾಸಗಳಾಗಿ, ಋತುಗಳಾಗಿ, ಅಯನಗಳಾಗಿ ವರ್ಷವು ಪೂರೈಸುತ್ತಾ ಬಂದಿದೆ, ಅಥವಾ ಪೂರೈಸಿದೆ. ಇನ್ನೊಂದು ದಿನವಾದರೆ ವರ್ಷವು ಮುಗಿಯಿತು. ದೇವತೆಗಳು ಕೊಟ್ಟಿದ್ದ ಗಡುವು ಮುಗಿಯುವುದು.

ಇಂದು ಹುಣ್ಣಿಮೆ. ಸಂಜೆಯು ಸಮೀಪಿಸುತ್ತಿದೆಯೆಂದು ಉದ್ದವಾಗುತ್ತಿರುವ ನೆರಳುಗಳು ಹೇಳುತ್ತಿವೆ. ಕೆಟ್ಟವರು ಒಳ್ಳೆಯವರಾದಾಗ ಜನರಿಗೆ ಪ್ರಿಯರಾಗುವಂತೆ, ಹೊಡೆಯುವಷ್ಟು ತೀಕ್ಷ್ಣವಾಗಿದ್ದ ಸೂರ್ಯಕಿರಣಗಳು ತಮ್ಮ ತೀವ್ರತೆಯನ್ನು ಬಿಟ್ಟು ಜನಪ್ರಿಯವಾಗಿ, ಒಳಗಿದ್ದವರನ್ನೂ ಹೊರಕ್ಕೆ ಕರೆಯುತ್ತಿವೆ. ಆಶ್ರಮದಲ್ಲಿ ಮೃಗಪಕ್ಷಿಗಳು ಮಧ್ಯಾಹ್ನದ ಆಯಾಸವನ್ನು ಮರೆತಂತೆ ಎದ್ದು ಓಡಾಡುತ್ತಿವೆ. ವಿಶ್ವಾಮಿತ್ರನು ಪಾರಿಜಾತದ ಬುಡದಲ್ಲಿ ಬಂಡೆಯ ಮೇಲೆ ಕುಳಿತು ಯೋಚಿಸುತ್ತಿದ್ದಾನೆ.

ಏಕೆ ಅನ್ನುವುದು ಅರಿಯದೆ, ಆತನ ಮನಸ್ಸು ಅಂದು ಮೇನಕೆಯ ಮದುವೆಯ ದಿನ ಮದನನಾಡಿದ ಮಾತುಗಳನ್ನು ನೆನೆದಿದೆ. 'ಅಹಂಕಾರವು ಬೆಳೆಯಲೆಂದು ವಿಚಿತ್ರ ಭೋಗಗಳನ್ನೂ ವಿಚಿತ್ರಾನುಭವಗಳನ್ನೂ ದೇವತೆಗಳು ಒದಗಿಸುವರು.' 'ಅಹಂಕಾರವನ್ನು ಬೆಳೆಸುವುದೇ ನನ್ನ ಕಾರ್ಯ.' 'ಅಹಂಕಾರವನ್ನು ಅಳಿಯುವುದೊಂದು ಸಾಧನವಿದೆ.'

ಆತನಿಗೆ ಯೋಚನೆಯಾಯಿತು. 'ಹಾಗಾದರೆ ನನ್ನ ಅಹಂಕಾರವು ಬೆಳೆದಿದೆಯೇನು ? ಮೇನಕೆ ಲಭಿಸಿದಳೆಂದು ನನ್ನ ಮನಸ್ಸು ಮೋದಗೊಂಡಿರುವುದು ನಿಜ. ಅವಳನ್ನು ಹಗಲು ರಾತ್ರಿಯೆನ್ನದೆ ಬಯಸುತ್ತಿರುವುದು

ನಿಜ. ಅವಳಿಲ್ಲದಿದ್ದರೆ ಒಂದು ಗಳಿಗೆಯೂ ಬದುಕಲಾರೆನೆನ್ನಿಸುವುದೂ ನಿಜ. ಅವಳು ಜೊತೆಯಲ್ಲಿರುವಾಗ ಮಿಕ್ಕೆಲ್ಲವನ್ನು ಮರೆಯುವುದೂ ನಿಜ. ಆದರೆ, ಇದೇನೇನು ಅಹಂಕಾರ? ಭೋಗವಸ್ತುವನ್ನು ಬಯಸಿ ಅದಕ್ಕಾಗಿ ಹಂಬಲ ಪಡುತ್ತಿರುವುದೇ ಏನು ಅಹಂಕಾರ? ಅಥವಾ ಅದಕ್ಕಿಂತ ವಿಚಿತ್ರವಾದುದು ಇನ್ನು ಏನಾದರೂ ಉಂಟೋ?

'ಮೇನಾ ಬರುವುದಕ್ಕಿಂತ ಮುಂಚೆ ಅಲಂಕಾರದ ಆಸೆಯಿರಲಿಲ್ಲ. ಈಗ ಅದು ತಾನೇತಾನಾಗಿದೆ. ಅದಕ್ಕೆ ಮುಂಚೆ ಇನ್ನೊಬ್ಬರನ್ನು ಮೆಚ್ಚಿಸಬೇಕೆಂದು ತೋರುತ್ತಿರಲಿಲ್ಲ. ಈಗ ಅದು ಹೆಚ್ಚಿದೆ. ಹೀಗೆ ಬಾಹ್ಯವೃತ್ತಿಯಾಗಿರುವುದೋ ಅಹಂಕಾರವೋ?'

ವಿಶ್ವಾಮಿತ್ರನು ಹೀಗೆ ಏಕಾಂತವಾಗಿ ಕುಳಿತು ಯೋಚನೆಮಾಡಿ ಬಹಳ ದಿನವಾಗಿತ್ತು. ಸಂಜೆಯ ಹೊಂಬಿಸಿಲಿನಲ್ಲಿ ಏನೋ ಒಂದು ವಿಚಿತ್ರವಾದ ಶಕ್ತಿಯಿರುವಂತೆಯೂ ಅದು ತನ್ನೊಳಗೆ ಪ್ರವೇಶವಾದಂತೆಯೂ ಭಾಸವಾಗುತ್ತಿದೆ. ಏನೋ ತನ್ನನ್ನು ಆವರಿಸಿದ್ದಂತೆ ಇದ್ದ ಕಟ್ಟುಗಳು ಸಡಿಲವಾಗುತ್ತಿರುವಂತೆ ತೋರುತ್ತಿದೆ. ಇದ್ದುದು ಏನೋ ಜಾರಿಜಾರಿ ಬಿದ್ದುಹೋಗುತ್ತಿರುವಂತಿದೆ. ಮನಸ್ಸು ಹೋಗುತ್ತಿರುವುದನ್ನು ತಡೆಯಲಾರದು: ಬರುತ್ತಿರುವುದನ್ನು ಬೇಡ ಎನ್ನಲಾರದು. ಅಸಮರ್ಥನಾದ ಯಜಮಾನನು ಮನೆಯವರ ಚೆಲ್ಲಾಟಗಳನ್ನು ಕಂಡರೂ ನಿರೋಧಿಸಲಾರದೆ, ಸುಮ್ಮನಿರುವಂತೆ ಮನಸ್ಸು ಸುಮ್ಮನಿದೆ.

ಮೇನಕೆಯು ಎಂದಿನಂತೆ, ಆದರೆ ಕೌಶಿಕನ ಬಳಿಯಲ್ಲಿ ಕುಳಿತು ಲಲ್ಲೆ ಹೊಡೆಯುತ್ತಿರಬೇಕು. ಎರಡು ಮೂರು ದಿನದಿಂದ ಅವಳು ಬೇರೆಯಾಗಿದ್ದಾಳೆ. ಆ ವ್ಯತ್ಯಾಸವೂ ಬಹಳ. ನದಿಯು ಸಮುದ್ರವನ್ನು ಸೇರುವಾಗ ತನ್ನ ನೀರಿನ ಒತ್ತಡವೇ ತನಗೆ ಹೆಚ್ಚಾಗಿ ಮುಂದಕ್ಕೆ ಹರಿಯಲಾರದೆ ನಿಂತುಕೊಳ್ಳುವಂತೆ ಮೇನಕೆಯು ಈಗ ಅರ್ಧತೂಷ್ಣೀಂ ಇದ್ದಾಳೆ. ಕಿಬ್ಬರಿಯ ಸರೋವರದಲ್ಲಿ ಒಳಗೇ ತೂತುಬಿದ್ದಾಗ ನೀರು ಇಳಿದುಹೋಗುವಂತೆ ಅವಳ ಮೋಹವು ಮೊಂಕಾಗುತ್ತಿದೆ. ಅಗ್ನಿಗರ್ಭವಾದ ಶಮಿಯಂತೆ ತೇಜೋಧಾರಿಣಿಯಾಗಿ ತನ್ನಲ್ಲಿ ತೇಜಸ್ಸಿಟ್ಟವನಕಡೆಗೆ ಮನಸ್ಸು ಧಾವಿಸುತ್ತಿದ್ದರೂ ದೇಹವೃತ್ತಿಯು ಮಾತ್ರ ಆಯಾಸಪಟ್ಟು ದೂರವಾಗಿರಬೇಕು ಎನ್ನಿಸುತ್ತಿದೆ.

ಅವಳು ತನ್ನ ದೇವತಾತ್ವವನ್ನು ವಹಿಸಿ ಏಕೆ ಹೀಗಾಗಿದೆ ಎಂಬುದನ್ನು ನೋಡ ಬಲ್ಲಳು. ಆದರೆ ಅಲ್ಲಿಯೂ ಅವಳಿಗೆ ಏಕೋ ಬೇಸರ. ಬಹುಶಃ ಪಕ್ವವಾಗಿ ರುವ ಹಣ್ಣಿನ ತೊಟ್ಟು ಹೀಗೆ ಆಯಾಸಪಡುವುದೇನೋ ?

ಮಾನವ ಧರ್ಮವನ್ನಂಗೀಕರಿಸಿ ಗರ್ಭಧಾರಣ ಮಾಡಿರುವ ಮೇನಕೆಗೆ ವಿಶ್ವಾಮಿತ್ರನು ಉಪಚಾರ ಮಾಡುತ್ತಾನೆ. ಆತನ ತಪೋಬಲದಿಂದ ಸಂಪಾದಿ ಸಿದ ದ್ರವ್ಯಗಳಿಂದ ಆಕೆಗೆ ಉಪಚಾರವು ನಡೆಯುತ್ತಿದೆ. ಆಶ್ರಮವೃಕ್ಷವೊಂದು ಕ್ಷೀರಪ್ರಸವಿಯಾಗಿದೆ. ಮತ್ತೊಂದು ಮಧುಸ್ಯಂದಿಯಾಗಿದೆ. ಇನ್ನೊಂದು ಅಮೃತದಷ್ಟು ರುಚಿಯಾಗಿರುವ ಹಣ್ಣುಗಳನ್ನು ಕೊಡುತ್ತಿದೆ. ದಿನದಿನವೂ ಹಣ್ಣು, ಹಾಲು, ಜೇನು, ಬೇಕೆಂದಾಗ ಅಷ್ಟು ಗೆಣಸು, ಅಂತೂ ಊಟ ಉಪಚಾರಗಳಿಗೆ ಕೊರತೆಯಿಲ್ಲ.

ರಾತ್ರಿಯಾಯಿತು. ಸುಮಾರು ಒಂದು ಝಾಮವಿರಬಹುದು. ಮೇನಕೆಗೆ ಪ್ರಸವವೇದನೆಗಾರಂಭವಾಯಿತು. ಎಷ್ಟಾದರೂ ದೇವತೆಯಲ್ಲವೆ ? ಆಕೆಯ ಸಖಿಯರು ಬಂದರು. ಯಥಾಕಾಲದಲ್ಲಿ ಸುಖಪ್ರಸವವಾಯಿತು. ಆ ಆಯಾಸ ದಲ್ಲಿ ಕಣ್ಣುಮುಚ್ಚಿದ್ದವಳನ್ನು ಸಖಿಯರು ಬೇಕೆಂದು ಆಸವಪ್ರಾಶನಮಾಡಿಸಿ ಇನ್ನಷ್ಟು ಮಲಗಿಸಿದರು. ಮೇನಕೆಗೆ ಮಗುವನ್ನು ತನಗೆ ತೋರಿಸದೆ ಬಚ್ಚಿ ಟ್ಟಿರಬೇಕೆಂದು ಹೇಳಬೇಕು ಎಂದೆನ್ನಿಸಿತ್ತು. ಇನ್ನೆರಡು ದಿನ ಪತಿಯೊಡನೆ ಸುಖವಾಗಿದ್ದು ಅನಂತರ ಸ್ವರ್ಗಕ್ಕೆ ಹೋಗುವಾಗ ಮಗುವನ್ನು ಕೊಟ್ಟು ಹೋಗಬೇಕೆಂದು ಆಸೆ. ಏಕೋ ಆ ಮಾತು ಅವಳು ಹೇಳಲಿಲ್ಲ. ಸಖಿಯರು ಸ್ವತಂತ್ರಿಸಲಿಲ್ಲ.

ಮಗುವು ಅತ್ತಿತು. ಮೇನಕೆಯು ಮಲಗಿದ್ದರೆ, ಮಾತೃಭಾವವೂ ಮಲಗೀತೆ? ಅವಳಿಗೆ ಎಚ್ಚರವಾಯಿತು. ಚಿನ್ನದ ಬೊಂಬೆಯಂತಿದ್ದ ಮಗು ವನ್ನು ಅಪ್ಪಿಕೊಂಡು ಯಥಾ ಯೋಗ್ಯವಾಗಿ ಅದನ್ನು ಉಪಚರಿಸಿದಳು. ಮತ್ತೊಮ್ಮೆ ಪತಿ ಪ್ರಣಯದ ಮೂರ್ತಿಯೆಂಬಂತೆ ಮಗ್ಗುಲಲ್ಲಿ ಹಾಲು ಕುಡಿ ಯುತ್ತಾ ಮಲಗಿರುವ ಮಗುವನ್ನು ನೋಡಿದಳು. ಮನಸ್ಸು ಬದಲಾಯಿಸಿ ಹೋಯಿತು.

ಮೇನಕೆಗೆ ಅರಿಯದಂತೆಯೇ ಮಾನವ ಧರ್ಮ ಬಿಟ್ಟುಹೋಯಿತು. ಆ ಮಾನವ ಶಿಶುವು ತನ್ನ ಮೈ ಮುಟ್ಟುವುದನ್ನು ಸಹಿಸಲಾರದೆ ಹಿಂತೆಗೆದಳು.

ಪ್ರಸವದ ಆಯಾಸ ಮಾಯವಾಯಿತು. ದೇಹದಲ್ಲಿ ಎಂದಿನಂತೆ ಶಕ್ತಿಯು ತೋರಿತು. ಅವಳನ್ನು ಕೇಳದೆಯೇ ದೇಹವು ಭೂಮಿಯನ್ನು ಬಿಟ್ಟು ಮೇಲಕ್ಕೆ ಎದ್ದಿತು. ಕಂಠವನ್ನು ದಿವ್ಯ ಕುಸುಮಮಾಲೆಯು ಅಲಂಕರಿಸಿತು. ವಸ್ತ್ರ ಭೂಷಣಗಳು ಬೇರೆಯಾದುವು.

ಮೇನಕೆಗೆ ಸುತ್ತಮುತ್ತಲಿನ ಪದಾರ್ಥಗಳು ಮಗು ಎಲ್ಲವನ್ನೂ ಕಂಡು ಮತ್ತೊಮ್ಮೆ ಗತವೈಭವವೆಲ್ಲ ನೆನೆಪಾಯಿತು. ಅದೆಲ್ಲವನ್ನೂ ನೆನೆದು, ಸುಖ ಸ್ವಪ್ನವನ್ನು ಸ್ಮರಿಸಿಕೊಂಡವಳಂತೆ ಸಣ್ಣಗೆ ತನ್ನೊಳಗೇ ನಗುನಗುತ್ತ ಎದ್ದು ಗಾಳಿಯಲ್ಲಿ ತೇಲುವವಳಂತೆ ನೆಲವನ್ನು ಮುಟ್ಟದೆಯೇ ಬಂದು ವಿಶ್ವಾಮಿತ್ರನ ಮುಂದೆ ನಿಂತಳು. ಸಾಲವನ್ನು ಕೊಟ್ಟು ಕೃತಾರ್ಥನೆಂದು ಕೈ ಮುಗಿದು ಬೀಳ್ಕೊಳ್ಳುವ ಭಾವದಿಂದ “ ಮುನೀಂದ್ರ, ನಾನು ಸ್ವರ್ಗಕ್ಕೆ ಹೊರಡಬಹುದಷ್ಟೆ ? ” ಎಂದಳು.

ದನಿಯಲ್ಲಿ ಮೊದಲಿನ ಮೋಹಾವೇಶವಿರಲಿಲ್ಲ: ನಿಶ್ಚಲವಾದ ಸ್ಥೈರ್ಯವಿತ್ತು. ಅದು ಎಲ್ಲಿಯೋ ಹೋಗಿದ್ದ ಮುನೀಂದ್ರನ ಮನಸ್ಸನ್ನು ಮಂತ್ರದಿಂದ ಆಕರ್ಷಿಸಿದಂತೆ ಆಕರ್ಷಿಸಿತು. ಆತನೂ ಎಂದಿನಂತೆ ಎದ್ದರೂ ಏಕೋ ಏನೋ ಆಕೆಯನ್ನು ಸಂಭಾವಿಸಲಾರದೆ, ದೂರದ ನೆಂಟರನ್ನು ಕಂಡಂತೆ ಆಗಿರಲು, ಕನಸು ಕಾಣುತ್ತಿದ್ದವನು ಕಣ್ಣುಬಿಟ್ಟಂತೆ ಏನೋ ಭಾವದಲ್ಲಿ “ ಆಂ ” ಎಂದನು.

ಮೇನಕೆಗೆ ಅದನ್ನು ಕಂಡು ಮನಸ್ಸು ಮರುಗಿತು. ದೇವತೆಗಳು ತಮ್ಮ ಆಟ ಚೆನ್ನಾಗಿಯೆ ಆಡಿರುವುದನ್ನು ಕಂಡು, ಹಿಂದಿನ ಪ್ರಣಯವನ್ನು ವಹಿಸಿಕೊಂಡು ಪ್ರಯತ್ನಪುರಸ್ಸರವಾಗಿ ಬಳಿಸಾರಿ, “ ದೇವ, ಎಚ್ಚರವಾಗು. ನಿನ್ನ ಮಗುವನ್ನು ಒಪ್ಪಿಸಿಕೊ. ಕಾಲವು ಸನ್ನಿಹಿತವಾಯಿತು. ಬೀಳ್ಕೊಡು. ನಿನ್ನ ಅಪ್ಪಣೆಯಿಲ್ಲದೆ ನಾನು ಹೋಗುವುದಿಲ್ಲ ” ಎಂದು ಯಥಾಯೋಗ್ಯವಾಗಿ ಉಪಚರಿಸಿದಳು.

ಮುನೀಂದ್ರನಿಗೆ ಎಚ್ಚರವಾಯಿತು. ಇಂದ್ರಿಯಗಳು ತಮ್ಮ ಪ್ರಾಣದ ಪ್ರಾಣವಾಗಿದ್ದವಳು ಹೊರಟು ಹೋಗುವಳೆಂದು ಗಾಬರಿಗೊಂಡು ದುಃಖ ಮೂರ್ತಿಗಳಾಗಿ ದುಃಖಾಗ್ನಿಯಲ್ಲಿ ಕರಗಲಾರದೆ ಅಳುವಂತೆ ಗೋಳಿಟ್ಟುವು. ಆತನು ದೇಹೇಂದ್ರಿಯ ಮನೋವೃತ್ತಿಗಳನ್ನು ಬಹು ಕಷ್ಟದಿಂದ ಸಂವರಣ

ಮಾಡಿಕೊಂಡು "ಹಾಗಾದರೆ ಹೊರಟೇ ಬಿಡಬೇಕು ?" ಎಂದನು. ಮೇನಾ ಎನ್ನುವುದಕ್ಕೆ ಹೋಗಿದ್ದ ಬಾಯಿ ನುಡಿಯದೆ ನಿಯಮಬದ್ಧನಾದ ಪ್ರಹರಿಯಂತೆ ನಿಂತುದು ಆವಳಿಗೂ ತಿಳಿಯಿತು. ಅವಳು "ದೇವಾ! ಮನ್ನಿಸು. ನಾವು ಸ್ವತಂತ್ರರಲ್ಲ! ನೀನು ಎಲ್ಲವನ್ನೂ ಬಲ್ಲೆ. ನಾನು ಬಂದಾಗ ಒಲ್ಲೆನೆಂದ ದಿಟ್ಟತನದಿಂದ ಈಗ ನನ್ನನ್ನು ಬಿಟ್ಟುಕೊಡು. ನೀನು ನನ್ನ ಮೇಲೆ ಇಟ್ಟಿರುವ ಪ್ರೇಮದ ಸವಿನೆನಪು ಹೃದಯದಲ್ಲಿ ಇದ್ದೇ ಇರುವುದು. ಏಳು – ಇದೋ ಆ ನಿನ್ನ ಮಗುವಿನ ಸಂರಕ್ಷಣೆಯ ಭಾರವನ್ನು ವಹಿಸಿಕೊ. ಸ್ವರ್ಗದ ಸೂಳೆಯೊಬ್ಬಳು ಬಂದು ನನ್ನಲ್ಲಿ ಸ್ವರ್ಗವನ್ನು ಮರೆತು ಸುಖವಾಗಿದ್ದಳು ಎಂದು ಹೆಮ್ಮೆಪಟ್ಟುಕೊಳ್ಳಬೇಕಾದವನಲ್ಲವೆ ನೀನು ?" ಎಂದು ಸಂಬೋಧಿಸಿದಳು. ಮುನೀಂದ್ರನ ಮನಸ್ಸು ಸಮಾಹಿತವಾಯಿತು. ಮುಂಗಾರಿನ ಮಳೆ ಹನಿಗಳಂತೆ ಎರಡು ದಪ್ಪ ಹನಿ ಕಣ್ಣಿಂದ ಉದುರಿದರೂ ವಿವೇಕವು ಆತನಿಗೆ ಸಹಜವಾದ ಸ್ಥೈರ್ಯವನ್ನು ಮೆರೆಯಿಸಿತು. ಸಂಯಮಿಯು ಸ್ಥಿರನಾಗಿ, ತಲೆಯಲ್ಲಾಡಿಸಿ, ಆಕೆಯ ಗೌರವದ ಕಾಣಿಕೆಯನ್ನು ಸಸ್ಮಿತನಾಗಿ ಸ್ವೀಕರಿಸುತ್ತ "ಹೋಗುವಾಗ ಹೇಳುವೆನೆಂದಿದ್ದೆಯಲ್ಲ" ಎಂದನು.

ಮೇನೆಯು ನಗುತ್ತಾ "ಪ್ರಭು, ಈಗ ಆಗಿರುವುದು ಹೆಣ್ಣು. ಅದು ಬೆಳೆದು ಯೌವ್ವನವತಿಯಾಗುವವರೆಗೂ ತಡೆ. ಅವಳು ಯಾರನ್ನು ಒಲಿಯುವಳು ಎಂಬುದು ನಿನ್ನ ಪ್ರಶ್ನೆಗೆ ಉತ್ತರ. ಅವಳು ಕ್ಷತ್ರಿಯನನ್ನು ಒಲಿಯುವಳೋ ಬ್ರಾಹ್ಮಣನನ್ನು ವರಿಸುವಳೋ ನೋಡಿಕೋ. ನಿನ್ನ ಅಳಿಯನು ಕ್ಷತ್ರಿಯನಾದರೆ ನೀನೂ ಕ್ಷತ್ರಿಯ. ಬ್ರಾಹ್ಮಣನಾದರೆ ನೀನೂ ಬ್ರಾಹ್ಮಣ" ಎಂದಳು.

ವಿಶ್ವಾಮಿತ್ರನು ಇನ್ನೂ ಏನೋ ಕೇಳಬೇಕು ಎನ್ನಿಸುತ್ತಿದ್ದರೂ ಅದಷ್ಟನ್ನೂ ಸಂವರಣಮಾಡಿಕೊಂಡು, ಕೇವಲ ಸಂಯಮೀಂದ್ರರಿಗೆ ಮಾತ್ರ ಸಾಧ್ಯವಾದ ಸಮಾಧಾನದಿಂದ ಮೇನಕೆಯನ್ನು ಬೀಳ್ಕೊಟ್ಟನು. ಮೋಡವಿಲ್ಲದ ಆಕಾಶದ ಕಡೆಗೆ ನೆಲದಿಂದ ಒಂದು ಮಿಂಚಿನಬಳ್ಳಿ ಹಬ್ಬಿ ಆಕಾಶದ ನೀಲಿಮೆಯಲ್ಲಿ ಸೇರಿಹೋಯಿತು. ಆತನು ತಿರುಗಿನೋಡುವ ವೇಳೆಗೆ ಮಾಯವಾದ ಮಿಂಚಿನ ಚಿನ್ನ ಮೂಡಲಲ್ಲೆಲ್ಲಾ ಹರಡಿದ್ದಂತೆ ಅರುಣೋದಯದ ಕೆಂಪು

ಕಾಣಿಸಿತು. ಒಡೆತಿಯಿಲ್ಲಿ ಎಂದು ಹಕ್ಕಿಗಳೆಲ್ಲಾ ಕೇಳುತ್ತಿವೆಯೋ ಎಂಬಂತೆ ಚಿಲಿಪಿಲಿಗುಟ್ಟಿದುವು.

ವಿಶ್ವಾಮಿತ್ರನು ಆಗಬೇಕಾಗಿದ್ದುದು ಆಯಿತು ಎಂಬ ನಿಶ್ಚಯದಿಂದ ಇದ್ದರೂ ದೇಹದ ಯಾವುದೋ ಒಂದು ಪ್ರಾಣವೇ ಹೊರಗೆ ಹೋದಂತಾಗಿತ್ತು. ಆ ಹೊತ್ತಿನಲ್ಲಿ ತಾನು ಎದ್ದು ಸ್ನಾನಾದಿಗಳನ್ನು ಮುಗಿಸಿ ಕರ್ತವ್ಯ ಕರ್ಮಗಳನ್ನು ಮಾಡಿ ಬಹಳ ದಿನವಾಗಿದ್ದುದು ನೆನಪಾಗಿ ನಗೆ ಬಂತು. ಇವೊತ್ತು ಅಡ್ಡಿಯಿಲ್ಲ. ಸೂರ್ಯೋದಯಕ್ಕಾದರೂ ಸ್ನಾನವಾಗಲಿ ಎಂದು ಎದ್ದನು. ಮಗುವಿನ ಅಳು ಕೇಳಿಸಿತು. ನಕ್ಕು, ಅಲ್ಲಿ ಆ ವೇಳೆಗೆ ಸುಳಿದ ನವಿಲನ್ನು ಕರೆದು ಮಗುವನ್ನು ನೋಡಿಕೋ ಎಂದು ಹೇಳಿ ನದಿಗೆ ಹೋದನು.

---

# ನಲವತ್ತಮೂರನೆಯ ತರಂಗ

'ಮಗುವಿನ ಪೋಷಣೆಯಲ್ಲಿ ತಾನು ನಿಲ್ಲುವುದೇ? ಮತ್ತೆ ತಪಸ್ಸಿಗೆ ತೆರಳುವುದೇ ಎಂಬ ಯೋಚನೆ ವಿಶ್ವಾಮಿತ್ರನಿಗೆ. ತಪಸ್ಸುಮಾಡಿ ಏನು ಫಲ? ದೇಹಶುದ್ಧಿಯಾಯಿತು. ಪಂಚಭೂತ ಶುದ್ಧಿಯಾಯಿತು. ಪ್ರಾಣ ಸಾಕ್ಷಾತ್ಕಾರವಾಯಿತು. ಇಷ್ಟಾದರೂ ಸಿಕ್ಕದ ಆ ಬ್ರಾಹ್ಮಣ್ಯವಾದರೂ ಏನು? ಹಾಗೆ ಗೊತ್ತುಗುರಿಯಿಲ್ಲದಿದ್ದರೂ ಹೋಗಲಿ, ತಪಸ್ಸು ಮಾಡೋಣವೆಂದರೆ, ಈ ದೇವತೆಗಳ ತೊಂದರೆ ಬೇರೆ? ನಮಗೆ ತಿಳಿಯದೆಯೇ ನಮ್ಮ ದೇಹದೊಳಕ್ಕೆ ಪ್ರವೇಶಿಸಿ ವ್ಯಾಪಾರಮಾಡುವುದಾದರೆ, ನಾವು ಮಡಕೆ ಕುಡಿಕೆಗಳಿಗಿಂತ ಕಡೆಯಾದೆವಲ್ಲ! ನೊಣಗಳು ಕೂಡಿಟ್ಟ ಜೇನನ್ನು ಯಾರೋ ಹೊತ್ತುಕೊಂಡು ಹೋದಂತೆ ನಾನು ಮಾಡಿಟ್ಟ ತಪಸ್ಸೆಲ್ಲವನ್ನೂ ಸ್ವರ್ಗವನ್ನು ಕೊಡುವ ನೆವದಿಂದ ಈ ದೇವತೆಗಳು ಕೊಂಡುಹೋದರೇ? ನಾನು ತಪಸ್ಸು ಮಾಡಿ ಫಲವೇನು?' ಎಂದು ಆತನು ದೀರ್ಘವಾಗಿ ಯೋಚಿಸುತ್ತಾನೆ.

'ಒಂದು ವೇಳೆ ತಪಸ್ಸು ಬೇಡವೆನ್ನೋಣ. ಮಾಡುವುದೇನು? ಮತ್ತೆ ರಾಜ್ಯವನ್ನು ಕಟ್ಟಿಕೊಳ್ಳುವುದೇ? ಅಥವಾ ಆಶ್ರಮವನ್ನು ಮಾಡಿಕೊಂಡು ಪಾಠಪ್ರವಚನ ಹೇಳಿಕೊಂಡು ಯಥಾಯಥಾ ಇದ್ದುಬಿಡುವುದೇ? ಉಹುಂ.

ಕೂಡದು. ಅದು ಗುರಿಯಿಲ್ಲದ ಜೀವನ. ಆ ಕುರುಡು ಬಾಳಿಗಿಂತಲೂ ಈ ದೇಹವನ್ನು ಇಲ್ಲಿಯೇ ಬಿಟ್ಟು ಲೋಕಾಂತರಗಳಿಗೆ ಹೋಗಬಾರದೇಕೆ? ಅಂತಹ ಆಸೆಯಿದ್ದರೆ, ಇಂದ್ರನನ್ನು ಬರಮಾಡಿಕೊಂಡು ಮತ್ತೊಂದು ಸ್ವರ್ಗ ವನ್ನು ಕಳುಹಿಸಿಕೊಡು ಎಂದರಾಯಿತು. ಆದರೆ ಉಂಡು ತಿಂದು ಭೋಗ ಪಡುವುದು ಮಾತ್ರದಲ್ಲಿ ಸುಖವೇನಿದೆ? ಅದಷ್ಟೇ ಜೀವನವೆಂದರೆ, ನಮ್ಮ ಆಶ್ರಮದ ಮೃಗಗಳಿಗೂ ತನಗೂ ಏನು ವ್ಯತ್ಯಾಸ?' ಎಂದು ಯೋಚನಾ ತರಂಗಗಳು ಆತನನ್ನು ಸುತ್ತಲೂ ಆಕ್ರಮಿಸಿದುವು.

ಆತನು ಹೀಗೆ ಯೋಚನಾ ಮಗ್ನನಾಗಿರುವಾಗ ಮತ್ತೆ ಮಗುವು ಅತ್ತು ತಾನಿರುವುದನ್ನು ಹೇಳಿಕೊಂಡಿತು. ಆತನು ಧ್ಯಾನಮಾಡಿ ಪ್ರಾಣಮಯನಾಗಿ ತನ್ನ ಹೆಬ್ಬೆಟ್ಟನ್ನು ಅದರ ಬಾಯಲ್ಲಿಟ್ಟನು. ಮಗುವು ಚೊರಚೊರನೆ ಚೀಪಿಕೊಂಡು ತೃಪ್ತವಾಗಿ ಹಾಗೆಯೇ ಮಲಗಿತು.* ಎರಡು ನವಿಲುಗಳು ಬಂದು ತಮ್ಮ ರೆಕ್ಕೆಗಳನ್ನು ಬಿಚ್ಚಿ ಅದಕ್ಕೆ ಹೊದಿಸಿದುವು. ಇನ್ನೊಂದು ಗಂಡು ನವಿಲು ತನ್ನ ಬಾಲವನ್ನು ಹೊಚ್ಚಿತು.

ಆತನಿಗೆ ಅದನ್ನು ಕಂಡು ಆಶ್ಚರ್ಯವಾಯಿತು. 'ಮಗುವಿನ ತಾಯಿ ಎದ್ದುಹೋದಳು. ತಂದೆಯಾದ ತಾನು ಏನು ಮಾಡಬೇಕೆಂದು ಇನ್ನೂ ಗೊತ್ತುಮಾಡಿಕೊಂಡಿಲ್ಲ. ಇಂಥದುದರಲ್ಲಿ ಈ ಹಕ್ಕಿಗಳು ಈ ಮಗುವಿಗೆ ಉಪಚಾರ ಮಾಡುತ್ತಿವೆ. ಇವಕ್ಕೆ ಮಾಡಿಯೆಂದು ಹೇಳಿದವರಾರು? ಹೌದು. ನಾನು ಮೊನ್ನೆಯದಿನ ಸ್ನಾನಕ್ಕೆ ಹೋಗುವಾಗ ಈ ನವಿಲಿಗೆ ಹೇಳಿ ಹೋದೆ. ಅದರಿಂದ ಇವು ನನ್ನ ಕೆಲಸ ಮಾಡುತ್ತಿವೆಯೇ? ನನಗೂ ಇವಕ್ಕೂ ಸಂಬಂಧ ವೇನು? ಬಂದಾಗ ಇವಕ್ಕೆ ಆದರದಿಂದ ಏನಾದರೂ ಉಪಚಾರ ಮಾಡುವುದು ಅಷ್ಟೇ? ಅದಕ್ಕೇ ಇವಿಷ್ಟು ಪ್ರತ್ಯುಪಕಾರ ಮಾಡುತ್ತಿವೆಯೇನು? ಹಾಗಾದರೆ, ದೇವತೆಗಳು ಮಾತ್ರ ನಿಷ್ಠುರರೇ? ಅವರಿಗೆ ನಾವು ಹಗಲು ಇರುಳೂ ಹವಿ

---

* ಮೈಸೂರಿನ ಈಡಿಗದಲ್ಲಿ ದೊಡ್ ಪೀರ್ ಮಾರ್ಕಾ ಎಂಬುದೊಂದು ಕಟ್ಟಡವಿದೆ. ಅಲ್ಲಿ ಒಬ್ಬ ಪೀರರ ಸಮಾಧಿಯಿದೆ. ಆ ಪೀರ್ ಮಹಾಶಯನು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿದ್ದವನು. ತಾಯಿಯಿಲ್ಲದ ಮಕ್ಕಳನ್ನು ಆತನ ಬಳಿಗೆ ಕರೆದುಕೊಂಡು ಹೋದರೆ, ಆತನು ತನ್ನ ಹೆಬ್ಬೆರಳನ್ನು ಮಕ್ಕಳ ಬಾಯಲ್ಲಿಡುವನು. ಮಗುವು ಚೀಪಿಕೊಂಡು ಹೊಟ್ಟೆ ತುಂಬಿಸಿಕೊಳ್ಳುವುದು.

ಸ್ಸನ್ನು ಕೊಡುತ್ತಿದ್ದರೂ ಅವರೇಕೆ ನಮಗೆ ಉಪಕಾರ ಮಾಡುವುದಿಲ್ಲ? ನಮ್ಮ ತಪಸ್ಸನ್ನೇಕೆ ಅಪಹಾರ ಮಾಡುವರು ?"

ಹೀಗೆಯೇ ಈ ಯೋಚನೆಯಲ್ಲಿರುವಾಗ ಬಾಗಿಲಲ್ಲಿ "ಮಾವಾ!" ಎಂಬ ಕೂಗು ಕೇಳಿಸಿತು. ದನಿಯು ಭಾರವಾಗಿ, ಗೋಡೆಗಳನ್ನೂ ಭೇದಿಸಿ ಕೊಂಡು ಬರುವಷ್ಟು ಗಡುಸಾಗಿದೆ. ಜಮದಗ್ನಿಯ ಕಂಠವಿದ್ದಂತೆ ಇದ್ದರೂ ಅಲ್ಲ. ತಟ್ಟನೆ ಗುರುತು ಸಿಕ್ಕದಿದ್ದರೂ ವಿಶ್ವಾಮಿತ್ರನು ಆದರದಿಂದ "ಒಳಕ್ಕೆ ಬಾಪ್ಪಾ!" ಎಂದನು. ಪರಶುರಾಮನು ಬಂದನು. ಉಕ್ಕಿನ ಬೊಂಬೆಯೊಂದು ನಡೆದುಬಂತು. ದೇಹದಲ್ಲಿ ಅಂಗಾಂಗವೂ ಒಂದೊಂದು ಪರ್ವತವಾಗಿದ್ದರೆ ಆ ಮೂರ್ತಿಯು ಹೇಗೆ ಗಂಭೀರವಾಗಿ ನಡೆಯಬೇಕೋ ಹಾಗೆ ನಡೆದುಬಂತು. ಕೈಯಲ್ಲಿ ಹಿಡಿದಿರುವ ಗಂಡು ಗೊಡಲಿಯು ಮಿಂಚಿನ ಮರದಹಾಗೆ ಹೊಳೆ ಯುತ್ತಿರಲು, ಮೂಟೆಯನ್ನು ಕಟ್ಟಿದ ಕರಿಯ ಮೋಡದಹಾಗೆ ಬಂದು ನಮ ಸ್ಕಾರ ಮಾಡಿದನು. ಅಲ್ಲಿಯೇ ಒಂದಿಷ್ಟು ದರ್ಭೆಯನ್ನು ಹಾಕಿ, ಆದರದಿಂದ ಕುಳ್ಳಿರಿಸಿ, ಮುನೀಂದ್ರನು ವಿಶ್ವಾಸದಿಂದ ಕುಶಲ ಪ್ರಶ್ನೆಗಳನ್ನು ಕೇಳಿದನು. ರಾಮನು "ಮಾವಾ! ಎಲ್ಲ ಹಾಳಾಗಿ ಹೋಯಿತು." ಎಂದು ಆರಂಭಿಸಿ, ತನ್ನ ಒತ್ತುವ ದುಃಖವನ್ನು ಕಷ್ಟದಿಂದ ಅತ್ತ ನೂಕುತ್ತಾ ನಿಟ್ಟುಸಿರುಗಳ ತಡೆಯನ್ನು ದಾಟುತ್ತ ತಮ್ಮ ಆಶ್ರಮದ ಕರುಣ ಕಥೆಯನ್ನು ಹೇಳಿದನು: "ಹೇಹಯರ ಕಾರ್ತ ವೀರ್ಯನು ಶಬಲೆಯನ್ನು ಬಯಸಿದುದು. ಶಬಲೆಯು ಹೋಗದೆ ಹಟ ಮಾಡಿದುದು. ಅದಕ್ಕಾಗಿ ಅವನು ರೇಗಿ ಜಮದಗ್ನಿಯನ್ನು ಕೊಂದು ಆಶ್ರಮ ವನ್ನೆಲ್ಲ ಧ್ವಂಸಮಾಡಿದುದು. ಇಷ್ಟಾದರೂ ಶಬಲೆಯು ಸಿಕ್ಕದೆ ತಪ್ಪಿಸಿ ಕೊಂಡು ಸ್ವರ್ಗಕ್ಕೆ ಹೊರಟುಹೋದುದು" ಎಲ್ಲವನ್ನೂ ತಡೆತಡೆದು ಹೇಳಿ ದನು.

ಅದನ್ನು ಕೇಳಿ ವಿಶ್ವಾಮಿತ್ರನಿಗೆ ದುಃಖವಾಯಿತು. "ಎಂತಹ ಕೆಲಸ ಮಾಡಿದಿರಿ? ನನಗೇಕೆ ಹೇಳಿ ಕಳುಹಿಸಲಿಲ್ಲ. ಜಮದಗ್ನಿಯ ದೇಹದ ತುಂಡು ಗಳನ್ನು ಜೋಡಿಸಿ, ಅಗ್ನಿಯನ್ನು ಧ್ಯಾನಮಾಡಿದ್ದರೆ, ಅದನ್ನು ಆತನು ಕೂಡಿಸಿ ಕೊಡುತ್ತಿದ್ದ. ನಾನೂ ಇಲ್ಲಿ ಏನೋ ಕೆಲಸವಿತ್ತು ವರ್ಷದಿಂದ ಅತ್ತಕಡೆ ಬರಲಿಲ್ಲ. ಈಗಲೂ ದೇಹವಿದೆಯೋ? ಸಂಸ್ಕಾರವಾಗಿ ಹೋಯಿತೋ?" ಎಂದು ಕೇಳಿದನು.

"ಸಂಸ್ಕಾರವಾಗಿ ಹೋಯಿತು. ಆದರೆ ಚಿತಿಗೆ ಅಗ್ನಿಯನ್ನಿಟ್ಟು ಅದು ಹೊತ್ತಿಕೊಳ್ಳುತ್ತಲೂ ಒಂದು ತೇಜೋಮಂಡಲವೆದ್ದು, ಇನ್ನೆರಡು ಸಣ್ಣ ಸಣ್ಣ ತೇಜೋಮಂಡಲಗಳು ತೋರಿಸಿದ ಹಾದಿಯಲ್ಲಿ ಆಕಾಶಕ್ಕೆ ಹೋದುವು. ನಾನು ಅವುಗಳನ್ನು ಬೆನ್ನಟ್ಟಿಹೋಗುವೆನೆಂದೆ. ಮಿಕ್ಕವರು ಬಿಡಲಿಲ್ಲ. ಅಪರ ಕರ್ಮಗಳೆಲ್ಲ ಮುಗಿದು ಮೂರು ದಿನಗಳಾದುವು."

"ಹೂಂ."

"ಈಗ ನಿನ್ನನ್ನು ಕೇಳಬೇಕೆಂದು ಬಂದಿದ್ದೇನೆ. ನನಗೆ ತಂದೆಯ ಮೇಲೆ ಎಂತಹ ಅಮೋಘವಾದ ಪ್ರೀತಿಯಿತ್ತು ನೀನು ಬಲ್ಲೆ. ಅಂತಹ ತಂದೆಯನ್ನು ಕಳೆದುಕೊಂಡು ಸುಮ್ಮನಿರುವುದೂ ಸಾಧ್ಯವಿಲ್ಲ. ತಂದೆಯನ್ನು ಕೊಲೆಮಾಡಿದ ಪಾತಕಿಯನ್ನು ಬಿಡುವುದೂ ಸಾಧ್ಯವಿಲ್ಲ. ಆದರಿಂದ, ಅವನ ಮೇಲೆ ಯುದ್ಧ ವನ್ನು ಹೂಡುವೆನು. ಹೇಹಯ ಕುಲವನ್ನೇ ನಿರ್ಮೂಲಮಾಡುವೆನು. ಅಷ್ಟೇ ಅಲ್ಲ. ದುಷ್ಟಕ್ಷತ್ರಿಯರು ಯಾರೇ ಆಗಲಿ, ಎಲ್ಲಿಯೇ ಇರಲಿ, ಅವರನ್ನು ಧ್ವಂಸಮಾಡುವೆನು. ಇಪ್ಪತ್ತೊಂದು ಸಲ ಮಾವ, ತಂದೆಯು ಅರ್ಚಿಸುತ್ತಿದ್ದ ಅಗ್ನಿಯು ಸಪ್ತಾರ್ಚಿಯು, ತ್ರಿರೂಪನು. ಆದರಿಂದ ಏಳು ಮೂರುಸಲ, ಈ ಭೂಮಂಡಲವನ್ನೆಲ್ಲಾ ಸುತ್ತುವೆನು. ಕಿರೀಟಪತಿಗಳಾದವರ ತಲೆಕಡಿದು, ಸುರಿಯುವ ಬಿಸಿರಕ್ತದಲ್ಲಿ ಪಿತೃತರ್ಪಣಮಾಡುವೆನು. ಬಹು ದಿನದಿಂದ ನಮಗೂ ಹೇಹಯರಿಗೂ ಇದ್ದ ದ್ವೇಷವು ನನ್ನ ತಲೆಗೆ ನಂದಿಹೋಗಲಿ. ಭೂಮಿಯು ನಿಃಕ್ಷತ್ರಿಯವಾಗಲಿ."

ಪರಶುರಾಮನ ಆವೇಶದ ಬಿಸಿಗೆ ಆಶ್ರಮವು ಬೆಂದುಹೋಗುವುದೋ ಎನ್ನಿಸಿತು. ನವಿಲುಗಳು ಬೆಚ್ಚಿದುವು. ಮಗುವು ಏಳದಿದ್ದರೂ ಹೊರಳಾ ಡಿತು. ವಿಶ್ವಾಮಿತ್ರನು ಆ ತೇಜೋಮೂರ್ತಿಯ ವಿಜೃಂಭಣದಿಂದ ಮೆಚ್ಚಿ ಕೊಂಡು, ಹಾಗೆಯೇ ಎದ್ದು ಬಾ ಎಂದು ಅಗ್ನಿಗೃಹದ ಕಡೆ ನಡೆದನು. ಪರಶು ರಾಮನು ಬಾಗಿಲವರೆಗೂ ಬಂದು, "ಇಲ್ಲ ಮಾವ, ಇಪ್ಪತ್ತೊಂದು ಸಲ ಭೂಪ್ರದಕ್ಷಿಣ ಮಾಡುವೆನು. ಸಿಕ್ಕಿಸಿಕ್ಕಿದಲ್ಲಿ ಮಕುಟಧಾರಿಗಳ ಕಂಠರಕ್ತ ದಿಂದ ಪಿತೃತರ್ಪಣಮಾಡುವೆನು. ಒಂದೊಂದು ಸಲವೂ ಭೂಪ್ರದಕ್ಷಿಣ ಮಾಡಿ ಬಂದು ಕುರುಕ್ಷೇತ್ರದಲ್ಲಿ ತರ್ಪಣಕೊಡುವೆನು. ಹಾಗೆ ಇಪ್ಪತ್ತೊಂದು ಸಲ

ಆಗುವವರೆಗೂ ನನಗೆ ಪಿತೃಸೂತಕವು ಕಳೆಯುವುದಿಲ್ಲ. ಅದುವರೆಗೂ ನಾನು ಅಗ್ನಿಗೃಹವನ್ನು ಮೆಟ್ಟುವುದಿಲ್ಲ" ಎಂದು ಹೊರಗೇ ನಿಂತನು.

---

## ನಲವತ್ತನಾಲ್ಕನೆಯ ತರಂಗ

ವಿಶ್ವಾಮಿತ್ರನು ಒಂದು ಗಳಿಗೆ ಧ್ಯಾನದಲ್ಲಿದ್ದು, ಪರಶುರಾಮನ ಮಾತಿಗೆ ಪ್ರತಿಹೇಳದೆ ಹೊರಗೆ ಬಂದು ಪಾರಿಜಾತದ ನೆರಳಿನಲ್ಲಿದ್ದ ಹಾಸುಗಲ್ಲಿನ ಮೇಲೆ ಕುಳಿತನು. ಸಮಾಹಿತನಾಗಿ ಸ್ತಬ್ಧವಾದ ಮಹಾಸಮುದ್ರದಂತೆ ಇರುವ ಆತನ ಪಾದಮೂಲದಲ್ಲಿ ಜಂಝಾಮಾರುತಗಳು ಹಲವು ಏಕಕಾಲದಲ್ಲಿ ಬೀಸುತ್ತಿರಲು ಕ್ಷುಬ್ಧವಾಗಿ, ಬಹುಕಾಲದಿಂದ ತನ್ನ ಜೀವನವನ್ನೆಲ್ಲಾ ಹೊತ್ತುಕೊಂಡು ಹೋಗುತ್ತಿರುವ ಮೇಘಗಳನ್ನು ಹಿಡಿದುಕೊಳ್ಳಲು ಮೇಲಕ್ಕೆ ಕೈನೀಡುತ್ತಿರುವನೋ ಎಂಬಂತೆ, ಆಕಾಶದೆತ್ತರಕ್ಕೆ ಹಾರುತ್ತಿರುವ ಅಲೆಗಳನ್ನು ಎಸೆಯುವ ಸಮುದ್ರನಂತೆ ರೋಷಭೀಷಣನಾಗಿ, ಜಗತ್ತಿನ ಪ್ರತೀಕಾರ ಬುದ್ಧಿಯೇ ಮೂರ್ತಿವೆತ್ತು ಬಂದಿದೆಯೋ ಎಂಬಂತಿರುವ ರಾಮನು ಕುಳಿತನು.

ವಿಶ್ವಾಮಿತ್ರನು ಕೇಳಿದನು: "ರಾಮ, ನೀನು ನನ್ನ ಅಪ್ಪಣೆಯನ್ನು ಕೇಳಬೇಕು, ಏಕೆ?"

"ನಮ್ಮ ಕುಲದವರೆಲ್ಲರೂ ಒಂದೇ ಗಂಟಲಿನಿಂದ ಆಗಬಹುದು ಎಂದಿದ್ದಾರೆ. ಆದರೂ ನಾವೆಲ್ಲ ಮೂಗಿನ ತುದಿಯಲ್ಲಿ ಕೋಪ ಕಟ್ಟಿಕೊಂಡಿರುವವರು. ಸಾಲದೆ ಅಗ್ನಿಭಕ್ತರು. ಭಾರ್ಗವರೆಂದರೆ ಕಾರಣವಿಲ್ಲದೆ ಕೋಪಗೊಳ್ಳುವವರು ಎಂದು ನಮಗೆ ಅಪಖ್ಯಾತಿ ಬಂದಿದೆ. ನೀನಾದರೆ ಆಪೋದೇವಿಯರ ಭಕ್ತ. ನಿನ್ನ ಶಾಂತಿ ನಮಗೆಲ್ಲಿಯದು ಎಂದು ಎಲ್ಲರೂ ನಿನಗೆ ಹೇಳಿ ಈ ಕಾರ್ಯಮಾಡುವುದು ಎಂದು ಒಪ್ಪಿದ್ದಾರೆ. ನಮ್ಮ ಕುಲವೆಲ್ಲ ತನ್ನ ತೇಜಸ್ಸನ್ನೂ, ತನ್ನ ತಪಸ್ಸನ್ನೂ, ತನ್ನ ವರ್ಚಸ್ಸನ್ನೂ ನನಗೆ ಕೊಟ್ಟಿದೆ. ಅಸ್ತ್ರಾಸ್ತ್ರಸಂಪನ್ನರಾದ ಈ ದುಷ್ಟಕ್ಷತ್ರಿಯರಿಂದ ನನಗೆ ಹೆದರಿಕೆಯಿಲ್ಲ. ಅವರವರ ಅಕಾರ್ಯಗಳೇ ಅವರನ್ನು ಕೊಂದಿರಲು, ನಾನು ನಿಮಿತ್ತ

ಮಾತ್ರ, ಮಾವ, ನನ್ನನ್ನು ಕಂಡರೆ ಸಾಕು, ನನ್ನ ಹುಂಕಾರವನ್ನು ಕೇಳಿದರೆ ಸಾಕು, ನಾನು ಈ ಗಂಡುಗೊಡಲಿಯನ್ನು ಎತ್ತಿದರೆ ಸಾಕು, ಅವರು ಸತ್ತು ಬೀಳುವರು. ಹೀಗೆ ಆಗಲೇ ಮೃತ್ಯುವಶರಾಗಿರುವ ಆ ಖಳರನ್ನು ಅವರ ಕಂಠದ ಬಿಸಿರಕ್ತಕ್ಕಾಗಿ ನಾನು ಕೊಲ್ಲಬೇಕು. ಅಷ್ಟೆ. ಭಾರ್ಗವರ ತೇಜಸ್ಸೆಂದರೆ ಸಾಮಾನ್ಯವೆಂದುಕೊಂಡೆಯಾ? ಸಂಕಲ್ಪಮಾಡುತ್ತಿದ್ದ ಹಾಗೆಯೇ ಲೋಕ ಲೋಕಗಳನ್ನು ದಹಿಸಿಬಿಡುವುದು. ಅದರಿಂದ, ಹಿರಿಯರ ಮಾತಿನಂತೆ ನಿನಗೆ ವರದಿಯೊಪ್ಪಿಸಿ ನಿನ್ನನ್ನೊಪ್ಪಿಸಲು ಬಂದಿದ್ದೇನೆ. ಈ ಕಳ್ಳರು, ಈ ಸುಳ್ಳರು, ಈ ಪರದ್ರವ್ಯಾಪಹಾರಿಗಳಾದ ಚೋರರರು ಬ್ರಾಹ್ಮಣನ ತೇಜಸ್ಸನ್ನು ಅಷ್ಟು ನೋಡಲಿ" ಎಂದು ಹಲ್ಲುಕಡಿದು ಮೆರೆದನು.

ಆ ತೇಜೋವಿಜೃಂಭಣವನ್ನು ಕಂಡು ವಿಶ್ವಾಮಿತ್ರನಿಗೆ ಸೊಗಸಿತು. ತನ್ನ ಹಿಂದಿನ ರೂಪವು ನೆನೆಪಾಯಿತು. ಇವನು ನಿಜವಾಗಿಯೂ ಬ್ರಾಹ್ಮಣನೇ ಎನ್ನಿಸಿತು. ಜಮದಗ್ನಿಯು ಹೇಳಿದುದೆಲ್ಲ ನೆನಪಾಯಿತು. ಅದರ ಜೊತೆಯಲ್ಲಿಯೇ ಅಂದು ವಾಮದೇವನು ಹಿಮವತ್ಪರ್ವತದ ತಪ್ಪಲಲ್ಲಿ ಹೇಳಿದ್ದ ಭವಿಷ್ಯವೂ ಜ್ಞಾಪಕಕ್ಕೆ ಬಂತು. 'ಸರಿ, ಕಾಲವು ಬಂದಿದೆ. ನಡೆಯಬೇಕಾಗಿರುವ ಕಾರ್ಯ ನಾನು ತಡೆದರೆ ತಾನೇ ನಿಂತೀತೆ?' ಎಂದುಕೊಂಡು, "ಹೂಂ. ಆಗಲಪ್ಪಾ! ಆದರೆ ಜಾತಿ ಕ್ಷತ್ರಿಯರಿಲ್ಲದಿದ್ದರೆ ಭೂಮಿಯು ದಸ್ಯುಗಳ ಪಾಲಾಗುವುದು. ಅದರಿಂದ ಅವರನ್ನು ಬಿಟ್ಟು ದುಷ್ಟರನ್ನು ಸಂಹಾರ ಮಾಡು" ಎಂದನು.

"ಕ್ಷತ್ರಿಯನೆಂದು ಎದುರು ನಿಂತಮೇಲೆ ಅವನು ಶಿಷ್ಟನೇ ದುಷ್ಟನೇ ಎಂದು ಹೇಗೆ ಮಾವ, ಕಂಡುಕೊಳ್ಳುವುದು?"

"ಕಷ್ಟವಿಲ್ಲ. ಶಿಷ್ಟರು ಯಾವಾಗಲೂ ಸಂಪ್ರದಾಯ ಶರಣರು. ನಿನ್ನನ್ನು ಕಂಡು ಮಧುಪರ್ಕವನ್ನು ಕೊಟ್ಟವನು ಶಿಷ್ಟ."

"ನಾನು ಸೂತಕದಲ್ಲಿರುವೆನಲ್ಲ! ಮಧುಪರ್ಕವನ್ನು ಗ್ರಹಿಸುವುದೆಂತು?"

"ನಿನ್ನದು ಸ್ವೇಚ್ಛಾಪ್ರಾರಬ್ಧ. ವಿಧಿವಿಹಿತವಲ್ಲ. ಅದರಿಂದ ತಾನಾಗಿ ಬಂದ ಮಧುಪರ್ಕವನ್ನು ಗ್ರಹಿಸಬಹುದು."

"ಸರಿ. ಮಾವ. ನಿನ್ನಪ್ಪಣೆ ದೊರೆಯಿತು. ನಾನಿನ್ನು ಹೊರಟೆ. ನೀನು ಆತಿಥ್ಯ ಕೊಡಲಿಲ್ಲ ಎಂದುಕೊಳ್ಳಬೇಡ. ನನಗೆ ಇನ್ನು ಯಾವುದೋ

ಉರಿಯು ಉರಿಯುತ್ತಿದೆಯಾಗಿ ಈಗ ಹಸಿವಿಲ್ಲ. ಆಯಿತು. ಮಾವ, ಅಲ್ಲಿ ನಿನ್ನ ಮಗ್ಗುಲಲಿದ್ದ ಮಗುವು ಯಾವುದು ? ”

“ ದೇವತೆಗಳು ಕೊಟ್ಟದ್ದು.”

“ ಹೆಣ್ಣೋ ? ಗಂಡೋ ? ”

“ ಹೆಣ್ಣು.”

“ ಮಾವ, ಕೋಪ ಮಾಡಿಕೊಳ್ಳಬೇಡ. ಆ ಹೆಣ್ಣನ್ನು ಮಾತ್ರ ಕ್ಷತ್ರಿಯನಿಗೆ ಕೊಡಬೇಡ. ಸದ್ಬ್ರಾಹ್ಮಣನನ್ನು ನೋಡಿಕೊಡು. ಇಲ್ಲದಿದ್ದರೆ ನನಗೆ ಹೇಳು. ಭೂ ಪ್ರದಕ್ಷಿಣದಲ್ಲಿ ನಿನಗೆ ಸರಿಯಾದ ಅಳಿಯನನ್ನು ಹುಡುಕಿ ಕೊಂಡು ಬರುತ್ತೇನೆ. ವಿಶ್ವಾಮಿತ್ರನು ನಕ್ಕನು. “ಹೂವು ಹುಟ್ಟುವಾಗಲೇ ಅದರ ಗರ್ಭದಲ್ಲಿ ಕಾಯಿರುವುದಿಲ್ಲವೆ ? ಹಾಗೆಯೇ ಹುಟ್ಟಿಬಂದ ಪ್ರತಿಯೊಂದರ ಜೊತೆಯಲ್ಲಿಯೂ ಒಂದು ಕಾಣದ ಕೈಯಿದೆ ರಾಮ. ಅದು ದೋಣಿಯನ್ನೂ ನಡೆಸಿಕೊಂಡು ಹೋಗುವ ಅಂಬಿಗನಹಾಗೆ ನಡೆಸಿಕೊಂಡು ಹೋಗುತ್ತದೆ. ಆದರಿಂದ, ಆ ಹೆಣ್ಣಿನ ಯೋಚನೆ ಈಗೇಕೆ? ಅಲ್ಲದೆ ನೀನು ಹೊರಟಿರು ವುದು ಮೃತ್ಯುದೂತನಾಗಿ ಅಲ್ಲವೆ ? ” ಎಂದನು.

ರಾಮನಿಗೂ ನಗುವು ಬಂತು : “ ಹೌದು. ಹೌದು. ಮೃತ್ಯುದೂತ ನಾಗಲು ಮಹರ್ಷಿಯ ಅಪ್ಪಣೆಯನ್ನು ಕೇಳಲು ಬಂದಿದ್ದೇನೆ.”

“ ನೀನು ಹುಟ್ಟುವುದಕ್ಕೆ ಮುಂಚೆಯೇ ನಿಮ್ಮ ತಂದೆಗೆ ಗೊತ್ತಿತ್ತು : ಅವರ ತಾಯಿಗೆ ಗೊತ್ತಿತ್ತು : ನನಗೂ ಗೊತ್ತಿತ್ತು : ಇನ್ನೂ ಕೆಲವರಿಗೆ ಗೊತ್ತಿತ್ತು : ಕ್ಷತ್ರಿಯ ಕುಲಾಂತಕನಾದ ಭಾರ್ಗವನೊಬ್ಬನು ಹುಟ್ಟುವನೆಂದು. ಹುಟ್ಟಿದ್ದೀಯೆ. ನಿನ್ನ ಕೆಲಸವನ್ನು ನೀನು ಮಾಡಲು ದೈವವು ಪ್ರೇರಿಸುತ್ತಿದೆ. ಆಗಲಿ. ಹೋಗಿಬಾ. ಮಂಗಳವಾಗಲಿ. ಆದರೆ ಪಾಪಕಾರ್ಯ, ಆದಷ್ಟು ಕಡಿಮೆಮಾಡು.”

“ ಮಾವ, ಕೊನೆಯಲ್ಲಿ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ಆದರೆ ಕೊನೆಯಾಗುವವರೆಗೂ ಬೇರೆ ಯೋಚನೆಯಿಲ್ಲ. ಮೊದಲು ಹೈಹಯ ಮಾರಣಯಜ್ಞ. ಅದರ ಅವಭೃತವಾದಮೇಲೆ, ಅದರ ಪ್ರಾಯಶ್ಚಿತ್ತಕ್ಕಾಗಿ ಮತ್ತೊಂದು ಯಜ್ಞ ” ಎಂದು, ವಿಶ್ವಾಮಿತ್ರನಿಗೆ ನಮಸ್ಕರಿಸಿ ಬೀಳ್ಕೊಂಡು ಹೊರಟುಹೋದನು.

---

## ನಲವತ್ತೈದನೆಯ ತರಂಗ

ವಿಶ್ವಾಮಿತ್ರನಿಗೆ ಆಶ್ಚರ್ಯವಾಯಿತು. ಆತನಿದುವರೆಗೆ ಕಾಣದ ಕೈಯನ್ನು ಕುರಿತು ಯೋಚಿಸಿರಲಿಲ್ಲ. ಮೇನಕೆಯನ್ನು ಬೇಕೆಂದರೆ ಇಂದ್ರನ ಪ್ರೀತಿಯನ್ನು ಸಂಪಾದಿಸಿಕೊಂಡು ತಾನು ಜೀವಾಂತ್ಯದವರೆಗೂ ಇಟ್ಟುಕೊಳ್ಳ ಬಹುದಾಗಿತ್ತು. ಅಥವಾ ತಪೋಧನವನ್ನು ಕೊಟ್ಟು ಅವಳನ್ನು ಕೊಂಡು ಕೊಳ್ಳಬಹುದಾಗಿತ್ತು. ಆದರೂ ತಾನು ತೂಷ್ಣೀಂ ಇದ್ದು ಅವಳನ್ನು ಬಿಟ್ಟು ಕೊಟ್ಟಿದ್ದಾನೆ. ಅದೂ ಪಕ್ವವಾದ ಫಲವನ್ನು ಬಿಟ್ಟು ತನ್ನ ಪಾಡಿಗೆ ತಾನು ತೆಪ್ಪಗಿರುವ ಮರದಂತೆ, ಇದಿಷ್ಟೂ ಆ ಕಾಣದ ಕೈಯ ಪ್ರಭಾವವೇ? ಅದು ತನ್ನನ್ನು ನಡೆಸುತ್ತಿರುವುದೇ? ಹಾಗಾದರೆ ಏಕೆ ಇದುವರೆಗೆ ನನಗೆ ತೋರಿರ ಲಿಲ್ಲ? ಇದೇಯೇನೋ ಮದನನು ಹೇಳಿದ ಅಹಂಕಾರದ ಬೆಳವಳಿಕೆ? ಎಂದು ಏನೇನೋ ಯೋಚನೆಗಳು ಬಂದುವು.

ಆ ಯೋಚನೆಗಳಲ್ಲಿ ಎಷ್ಟೋ ಹೊತ್ತು ಕಳೆದುಹೋಯಿತು. ಹೊತ್ತು ನೆತ್ತಿಗೇರಿ ಪಡುವಲತ್ತ ಇಳಿಯಿತು. ಪಡುವಲಲ್ಲಿದ್ದ ನೆರಳು ಮೂಡಲಿಗೆ ಬಂತು. ವಿಶ್ವಾಮಿತ್ರನು ಸುಖಾಸನದಲ್ಲಿ ಕುಳಿತಿದ್ದಾನೆ. ಮಗ್ಗುಲಲ್ಲಿ ಬಂದು ನಿಂತ ಜಿಂಕೆಯು ತನ್ನನ್ನು ತುರಿಸಬೇಕೆಂದು ಸನ್ನೆಮಾಡಿತು. ಕೊಂಬಿನಿಂದ ಕೆರೆದು ತೋರಿಸಿತು. ಆತನು ಅಚಲನಾಗಿ ಕುಳಿತಿರಲು, ಹೊರಟು ಹೋಯಿತು. ಹಕ್ಕಿಯೊಂದು ಬಂದು ಏನೋ ಅಳಲನ್ನೋ ನಗುವನ್ನೋ ಹೇಳಿಕೊಳ್ಳಬೇಕೆಂದೋ ಏನೋ ತೊಡೆಯ ಮೇಲೆ ಕುಳಿತು ಮುಖವನ್ನು ನೋಡಿ ಚಿಪ್, ಚಿಪ್ ಎಂದಿತು. ಶಿಲಾಪ್ರತಿಮೆಯಂತಿದ್ದ ಆತನ ಮುಖದಲ್ಲಿ ತನಗೆ ಸರಿಯಾದ ಉತ್ತರವು ದೊರೆಯಲಿಲ್ಲವೆಂದೋ ಏನೋ, ಅಷ್ಟು ಹೊತ್ತಿದ್ದು ಸರಿಯಾದ ಉಪಚಾರವು ದೊರೆಯಲಿಲ್ಲವೆಂದು ಕೋಪಗೊಂಡು ಹೊರಟುಹೋಗುವ ಅತಿಥಿಯಂತೆ ಎದ್ದು ಹಾರಿಹೋಯಿತು.

'ಹೌದು. ಈ ಕಾಣದ ಕೈಯನ್ನು ಕಾಣಬೇಕು. ಅದು ಇನ್ನು ಮುಂದೆ ನನ್ನ ತಪಸ್ಸಿನ ಗುರಿ. ದೇವತೆಗಳನ್ನು ಕಂಡುದಾಯಿತು. ದೇವತೆಗಳು ಕೊಡುವ ಭಾಗ್ಯದ ಪರಮಾವಧಿಯನ್ನು ಕಂಡಾಯಿತು. ಇನ್ನು ಆಗಬೇಕಾದು ದೇನು? ಕಾಣದ ಕೈ ಕಾಣುವುದೊಂದೇ ಕೆಲಸ. ಅದಕ್ಕಾಗಿ ಮತ್ತೆ ಹಿಮಾ

ಲಯದ ಪರ್ವತದ ಕಂದರದಲ್ಲಿ, ಗಿರಿ ನದಿಯೊಂದರ ಪಕ್ಕದ ಗುಹೆಯಲ್ಲಿ ಇದ್ದು ಬಿಡುವುದು.'

ಅಷ್ಟರೊಳಗಾಗಿ ಬಹಿರ್ಮುಖವಾಯಿತು. ಮತ್ತೆ ಮಗುವಿನ ಯೋಚನೆ ಬಂತು. 'ಈ ಮಗುವಿಗೆ ಅನ್ನಪಾನದ ಯೋಚನೆಯಿಲ್ಲದಿದ್ದರೂ ಉಪಚಾರ ಬೇಕು. ಆ ಉಪಚಾರಕ್ಕೆ ನಾನು ನಿಂತರೆ ನನ್ನ ತಪಸ್ಸು ನಡೆಯುವುದಿಲ್ಲ. ಏನು ಮಾಡುವುದು? ಮೇನಕೆಯು ನನಗೆ ಒಪ್ಪಿಸಿದಂತೆ ನಾನೂ ಇದನ್ನು ಇನ್ನು ಯಾರಿಗಾದರೂ ಒಪ್ಪಿಸಿ ಹೋಗಬಾರದೇಕೆ?

'ಹೌದು. ಇದೇ ಮಾಲಿನಿಯ ತೀರದಲ್ಲಿ ಎಷ್ಟೋ ಆಶ್ರಮಗಳಿವೆ. ಅಲ್ಲಿರುವ ಮಹರ್ಷಿಗಳಲ್ಲಿ ಯಾರಾದರೊಬ್ಬರಿಗೆ ಇದನ್ನು ಒಪ್ಪಿಸುವುದು. ಆದರೆ ಯಾರಿಗೆ ಒಪ್ಪಿಸಬೇಕು? ಕಾಶ್ಯಪರ ಆಶ್ರಮದಲ್ಲಿ ಕ್ಷತ್ರಿಯ ಕುಮಾರರು ಇರುತ್ತಾರೆ. ಅದು ಬೇಡ. ಅತ್ರೇಯರ ಆಶ್ರಮದಲ್ಲಿ ಅವಧೂತ ಸಂಪ್ರದಾಯ. ಅವರು ಜಾತಿಯನ್ನು ಗೌರವಿಸುವವರಲ್ಲ. ಮಾರೀಚರು ತಪಸ್ವಿಗಳಾದರೂ ಕಟ್ಟುಕಿತ್ತವರು. ಜಾಬಾಲಿಗಳು ನಾಸ್ತಿಕರು. ಇನ್ನು ಕೊನೆಯ ಆ ಕಣ್ವರದು. ಅವರು ಬ್ರಹ್ಮಚಾರಿಗಳು. ಆದರೂ ವರ್ಣಾಶ್ರಮ ಧರ್ಮದಲ್ಲಿ ಶ್ರದ್ಧೆಯುಳ್ಳವರು. ಅವರು ಅಧಿಭೂತಕ್ಕಿಂತ ಅಧ್ಯಾತ್ಮವನ್ನು ಹಿಡಿದವರು. ಅಲ್ಲಿರಲಿ. ಅದೇ ಸರಿಯಾದ ಸ್ಥಳ. ಅಲ್ಲದೆ ಆ ತಪೋವನವು ನಗರಗಳ ಬಾಧೆಗೊಳಪಡದಷ್ಟು ದೂರವಾಗಿದೆ. ಆ ಮಹರ್ಷಿಯೂ ನಮಗೆ ಬೇಕಾದವರು.'

ಈ ವೇಳೆಗೆ ಸಂಜೆಯಾಗಿದೆ. ಮೇನಕೆಯಿರುವಾಗ ಹೊತ್ತು ಹೊತ್ತಿಗೆ ಸರಿಯಾಗಿ ಅನ್ನ ಪಾನಗಳನ್ನು ಕೇಳುತ್ತಿದ್ದ ದೇಹ ಇಂದು ತನಗೆ ಹಸಿವಾಗಿದೆ ಬಾಯಾರಿಕೆಯಾಗಿದೆ ಎಂದು ಕೂಡ ಹೇಳಿಲ್ಲ. ಕಾರಣವೇನು ಎಂದು ಯೋಚಿಸಿ ನೋಡಿದರೆ ತಿಳಿಯಿತು. ಆಗ ಭೋಗಿನಿಯ ಸನ್ನಿಧಾನದಿಂದ ದೇಹವೂ ಭೋಗವನ್ನು ಬಯಸಿತು. ಕೇಳಿದರೆ ಪ್ರಾರ್ಥನೆಯು ಅವಂಧ್ಯವಾಗುವುದೆಂದು ತಿಳಿದು ಕೇಳುತ್ತಿತ್ತು. ಇಂದು ಆ ಭೋಗಿನಿಯ ಸನ್ನಿಧಿಯು ತಪ್ಪಿದೆ. ಮಹರ್ಷಿಯ ಮನಸ್ಸು ತಪಸ್ಸಿಗಭಿಮುಖವಾಗಿದೆ. ಇನ್ನು ತನ್ನನ್ನು ಕೇಳುವವರಾರು? ತನ್ನ ಪ್ರಾರ್ಥನೆಯು ವಂಧ್ಯವಾಗದಿರುವುದೆಂತು? ಎಂದು ಸುಮ್ಮನಿದ್ದೆ. ಅಲ್ಲದೆ ಮಗುವಿಗಾಗಿ ವಿಜೃಂಭಿತವಾಗಿ ಅಲ್ಲಿ ಸೋಮ ಶಕ್ತಿಯಾಗಿ

ಇಳಿದು ಆ ಮಗುವಿಗೆ ಆಹಾರವಾದ ಪ್ರಾಣವು ತನ್ನ ಆಹಾರವನ್ನು ಹೊತ್ತು ಹುಟ್ಟುವ ಮೊಳಕೆಯಂತಾಗಿ ತನ್ನ ಆಹಾರವನ್ನೂ ಅಲ್ಲಿಯೇ ಕಂಡಿದೆ. ಮುನೀಂದ್ರನಿಂದು ಹವಿಸ್ಸಿಲ್ಲದಿದ್ದರೂ ಜ್ವಲಿಸುತ್ತಿರುವ ಹವ್ಯವಾಹನನಂತೆ, ಪ್ರಾಣವು ತನ್ನ ಒಂದು ಭಾಗವನ್ನೇ ತಿಂದುಕೊಂಡು ಸೌಮ್ಯವಾಗಿ ಬೆಳಗುತ್ತಿರುವ ಪ್ರಾಣವನ್ನು ಕಂಡು ಆಶ್ಚರ್ಯಪಡುತ್ತಾನೆ.

ಆ ಆಶ್ಚರ್ಯದಲ್ಲಿ ಪ್ರಾಣಾರ್ಚಿಯನ್ನು ಕಂಡು ಅಲ್ಲಿಯೇ ಒಂದು ಸಣ್ಣ ಪೂಜೆಯನ್ನು ಮಾಡಿ "ಈ ನಿನ್ನ ರಹಸ್ಯವನ್ನು ತೋರಿಸಿಕೊಡು. ಉಪಕಾರ ಮಾಡು. ಕಾಪಾಡು" ಎಂದು ಪ್ರಾರ್ಥಿಸಿದ್ದಾನೆ.

ಪ್ರಾಣಾಗ್ನಿಯು ಅಭಿಮುಖವಾಯಿತು: "ಮುನೀಂದ್ರ. ನಾನು ಹಗಲಿರುಳೂ ನಿನ್ನಲ್ಲಿರುವೆನು. ನೀನು ಇದುವರೆಗೆ ನನ್ನನ್ನು ಕಾಣಲಿಲ್ಲ. ನೀನು ಉಂಡ ಊಟವನ್ನೆಲ್ಲ ಉಂಡು, ನೀನು ಕುಡಿದ ಪಾನೀಯಗಳನ್ನೆಲ್ಲ ಕುಡಿದು, ನೀನು ಪಟ್ಟ ಭೋಗಗಳನ್ನೆಲ್ಲ ಪಡೆದು ಒಳಗೆ ಕುಳಿತಿರುವ ನನ್ನನ್ನು ನೀನು ಇಂದು ಕಂಡುದು ನಿನಗೆ ದೇವತೆಗಳ ಅನುಗ್ರಹವಾದ ಫಲ. ಮೇನಕೆಯು ನಿನ್ನಲ್ಲಿ ಇದ್ದುದರ ಫಲವಾಗಿ, ದೇವತೆಯ ಸಂಸರ್ಗದಿಂದ ನೀನೂ ದೇವತೆಯಾದೆ. ನಿನ್ನ ದೇಹವಿಂದು ಮಾನವ್ಯವಾಗಿದ್ದರೂ ನೀನು ದೇವತೆಯಾಗಿರುವೆ. ಅದರಿಂದಲೇ ನಾನು ನಿನಗೆ ದರ್ಶನ ಕೊಟ್ಟುದು. ನಾನು ನಿನ್ನಲ್ಲಿ ಪ್ರಸನ್ನನಾಗಿರುವೆನೆಂದೇ, ನಾನು ನಿನಗೆ ಇಂದು ದರ್ಶನ ಕೊಡುವೆನೆಂದೇ, ದೇಹವು ನಿನ್ನೊಡನೆ ಮಾತನಾಡಿದುದು. ಮೇನಕೆಯನ್ನು ಬಿಟ್ಟೆಯೆಂದೇ ನಾನು ನಿನಗೆ ದರ್ಶನವಿತ್ತುದು. ಆದರೆ ನಾನೇ ಕೊನೆಯೆಂದುಕೊಳ್ಳಬೇಡ. ಅನ್ನವೂ ನಾನೇ! ಅನ್ನಾದನೂ ನಾನೇ! ಆದರೂ ನನ್ನ ಹಿಂದೆ ಯಾರಿರುವರೋ ಅದನ್ನು ನೋಡು. ನಿನ್ನ ಮೇಲಿನ ಅಭಿಮಾನದಿಂದ ಹೇಳುವೆನು. ನೀನು ಭೂಸುರನಾದೆ. ಈಗ ನಿನ್ನ ಮೇಲಿನ ಭಾರ ಹೆಚ್ಚಾಯಿತು. ಅದನ್ನು ಮರೆಯಬೇಡ ಮದನನು ಹೇಳಿದು ಇದುದು."

ವಿಶ್ವಾಮಿತ್ರನು "ಭೂಸುರನಾದರೆ ಬ್ರಾಹ್ಮಣನಾದಂತಾಯಿತಲ್ಲವೆ?" ಎಂದು ಕೇಳಿದನು.

"ಹುಚ್ಚ. ಬ್ರಾಹ್ಮಣ್ಯವೆಂದರೆ ಅಷ್ಟು ಸುಲಭವೆ? ಭೂಸುರನಾಗುವುದೇನು ಮಹಾ! ನನ್ನನ್ನು ಕಂಡವರೆಲ್ಲರೂ ಭೂಸುರರಾಗುವರು. ಯಾರು

ಬೇಕಾದರೂ ಕಾಣಬಹುದು. ನಿನ್ನ ಪ್ರಶ್ನೆಯ ಉತ್ತರವನ್ನು ನನ್ನನ್ನು ಕೇಳ ಬೇಡ. ನೀನೇ ಹುಡುಕಿಕೋ." ವಿಶ್ವಾಮಿತ್ರನಿಗೂ ಮುಂದಕ್ಕೆ ಕೇಳಲು ಮನಸ್ಸು ಬರಲಿಲ್ಲ.

ಆ ವೇಳೆಗೆ ಸಂಜೆಯಾಗುತ್ತ ಬಂದಿತ್ತು. ವಿಶ್ವಾಮಿತ್ರನು ಮಗುವನ್ನು ಕರೆದುಕೊಂಡು ಹೋಗಿ ಕಣ್ವರಲ್ಲಿ ಒಪ್ಪಿಸಿದನು. ಅವರು "ಹೌದು ಹೌದು ಈ ಮಗುವು ನಮಗೆ ಬೇಕಾಗಿತ್ತು" ಎಂದು ವಿಶ್ವಾಸದಿಂದ ವಿಶ್ವಾಮಿತ್ರ ಪುತ್ರಿಯನ್ನು ದತ್ತು ಪುತ್ರಿಯನ್ನಾಗಿ ಸ್ವೀಕರಿಸಿದರು. ತ್ರಿಕಾಲಜ್ಞರಾದ ಅವರೂ ವಿಶ್ವಾಮಿತ್ರನು ಬ್ರಾಹ್ಮಣನಾದನೇ ಎಂಬ ಪ್ರಶ್ನೆಗೆ ಉತ್ತರ ಹೇಳಲಿಲ್ಲ. ಆತನೂ ಅವರನ್ನು ಬಲವಂತ ಮಾಡಲಿಲ್ಲ.

---

## ನಲವತ್ತಾರನೆಯ ತರಂಗ

ವಿಶ್ವಾಮಿತ್ರನು ಮತ್ತೆ ಹಿಮಾಲಯಕ್ಕೆ ಹೋದನು. ಭಗೀರಥನ ತಪಸ್ಸು ಲೋಕ ಸಂರಕ್ಷಣಾರ್ಥವಾಗಿ ಕೆಳಕ್ಕೆ ಇಳಿಯುತ್ತಿದೆಯೋ ಎಂಬಂತೆ ಕೆಳಗಿಳಿಯುತ್ತಿರುವ ಭಾಗೀರಥಿಯ ತುಂತುರುಗಳಿಂದ ಪವಿತ್ರವಾಗಿ, ದೇವದಾರು ಮರಗಳ ಸುವಾಸನೆಯಿಂದ ಮನೋಹರವಾಗಿ, ನಿರ್ಜನವಾಗಿ, ಏಕಾಂತವಾಗಿರುವ ಗುಹೆಯೊಂದರಲ್ಲಿ ಆತನು ಮತ್ತೆ ತಪಸ್ಸಿಗೆ ನಿಂತಿದ್ದಾನೆ. ತಪಸ್ಸು ಆರಂಭಮಾಡುವುದಕ್ಕೆ ಮುಂಚೆಯೇ ಒಮ್ಮೆ ಹೋಗಿ ವಾಮದೇವನನ್ನು ನೋಡಿ ಬರಬೇಕೆಂದು ಆಸೆ. ಅಲ್ಲದೆ, ಈಗೇನು? ಎಲ್ಲಿ ಹೋಗಿ ಬರುವುದಕ್ಕೂ ಅಡ್ಡಿಯಿಲ್ಲ. ಆಕಾಶಗಮನವನ್ನು ಮೇನಕೆಯು ಕಲಿಸಿದ್ದಾಳೆ. ಮನಸ್ಸು ಮಾಡಿದರೆ ಹೋಗಿ ಬರಬಹುದು. ಆದರಿನ್ನೂ ಹೋಗುವ ಮನಸ್ಸಾಗಿಲ್ಲ.

ಮನಸ್ಸು ಆಗಾಗ ಮೇನಕೆಯನ್ನು ನೆನೆಯುತ್ತದೆ. ಆದುದು ಯಾವುದಕ್ಕೂ ಪಶ್ಚಾತ್ತಾಪ ಪಡುವಂತಿಲ್ಲ: ಪಡಬೇಕಾಗಿಲ್ಲ. ಅಲ್ಲದೆ 'ಅವಳು ಇದ್ದಿದ್ದರೆ ಪ್ರಾಣಾಗ್ನಿದೇವನ ಸಂದರ್ಶನವಾಗುತ್ತಿರಲಿಲ್ಲ. ಅದರಿಂದ ಅವಳು ಹೊರಟುಹೋದುದೇ ಒಳ್ಳೆಯದಾಯಿತು. ಆದರೆ ಅವಳು ಇರುವಾಗ ಇಂದ್ರನ ಸಾಲ ತೀರಿಸುವ ಯೋಚನೆ ಮಾಡಿದ್ದರೆ ಚೆನ್ನಾಗಿತ್ತು. ಅದು ಬರಲಿಲ್ಲ.

'ಈಗಲೂ ಏನಾದರೂ ಮಾಡಿ, ಆ ಸಾಲ ತೀರಿಸಿ ಆಮೇಲೆ ಏಕೆ ನಿಶ್ಚಿಂತೆಯಾಗಿ ತಪಸ್ಸಿಗೆ ಕುಳಿತುಕೊಳ್ಳಬಾರದು? ಹಾಗೆಂದರೆ ಇನ್ನೊಂದು ಕನ್ನೆಯನ್ನು ಹುಡುಕಿ ಮದುವೆಯಾಗಿ ಅವಳಲ್ಲಿ ಐವತ್ತು ಮಕ್ಕಳು ಪಡೆದು ಅವನ್ನು ಬಲಿಗೊಡಬೇಕು. ಅದು ಸಾಮಾನ್ಯದ ಕೆಲಸವಲ್ಲ. ಜೊತೆಗೆ ಮಕ್ಕಳೆಂದರೇನು ಜೊಂಡಿನ ತುಂಡುಗಳೇ? ತಂದೆ ತಾಯಿಗಳಿಬ್ಬರಿಗೂ ಸೇರಿದವರು. ತಾಯಿಯ ಅಪ್ಪಣೆಯಿಲ್ಲದೆ, ಅವಳು ಪಡೆದ ಮಕ್ಕಳನ್ನು ಬಲಿ ಮಾಡುವುದೆಂತು?'

ಈ ಯೋಚನೆಯು ಬಲವಾಗಿದೆ. ಯೋಚನೆಯು ಅಪಾರವಾಗಿ ತಲೆ ನೋಯುವಷ್ಟು ಬಲವಾದಾಗ 'ಛೆ, ನಾನು ಚಿಂತೆಮಾಡಿ ಪ್ರಯೋಜನವಿಲ್ಲ. ಕಾಣದ ಕೈಯಿದೆಯಲ್ಲ! ಅದಕ್ಕೆ ಬೇಕಾದಾಗ ಮಾಡಿಸಿಕೊಳ್ಳುತ್ತದೆ' ಎಂದು ಆ ಯೋಚನೆಯನ್ನು ಅಟ್ಟುತ್ತಾನೆ. ಕೊಳದ ನೀರಿನ ಮೇಲಿನ ಪಾಚಿಯು ಕೈಯೇಟು ತಿಂದು ಹಿಂದಕ್ಕೆ ಹೋದರೂ ಮತ್ತೆ ಹಿಂತಿರುಗಿ ಬಂದು ಕವಿದುಕೊಳ್ಳುವಂತೆ, ಬಹಿರ್ಮುಖನಾದಾಗ ಆ ಯೋಚನೆ ಕಾದಿದ್ದು ಬಂದು ಹಿಡಿದುಕೊಳ್ಳುವಂತೆ, ಮಾವಿನಹಣ್ಣಿನ ಕಾಲದ ಸಣ್ಣಸೊಳ್ಳೆಯಂತೆ ಬಂದು ಮುತ್ತಿಕೊಳ್ಳುತ್ತದೆ.

ಈಗ ಆತನ ತಪಸ್ಸೂ ಅಷ್ಟೇ ಗಭೀರವಾಗಿದೆ. ಹಿಂದಿನಂತೆ ಈಗ ಆತನು ಅಶನಾರ್ಥಿಯಾಗಿ ಗೆಡ್ಡೆಗೆಣಸುಗಳನ್ನು ಹುಡುಕಿಕೊಂಡು ಹೋಗುವುದಿಲ್ಲ. ಹಸಿವಾದಾಗ, ಬಾಯಾರಿಕೆಯಾದಾಗ, ಪ್ರಾಣಧ್ಯಾನಮಾಡಿ ಅನುಸಂಧಾನ ಮಾಡಿ ಆ ಕ್ಷುತ್ಪಿಪಾಸೆಗಳನ್ನು ಕಟ್ಟಿಹಾಕುತ್ತಾನೆ. ಮತ್ತೆ ಗಂಗಾತೀರಕ್ಕೆ ಹೋದಾಗ ನೀರು ತೆಗೆದುಕೊಂಡು ಅಭಿಮಂತ್ರಿಸಿ ಕುಡಿದರೆ ಅದು ಪ್ರಾಣಕ್ಕೆ ಅನ್ನವಾಗಿ ಪಾನವಾಗಿ ತರ್ಪಣಮಾಡುತ್ತದೆ.

ಅವನ ತಪಸ್ಸಿಂದು ಧ್ಯಾನಯೋಗ. ಹಿಂದಿನಂತೆ ಮಂತ್ರಯೋಗವಲ್ಲ. ಅಂದಿನಂತೆ ದೇವತಾಸಾಕ್ಷಾತ್ಕಾರ ಮಾಡಿಕೊಳ್ಳುವ ಯೋಚನೆಯಿಲ್ಲ. ನಿತ್ಯ ನಿತ್ಯದ ಕರ್ಮವಾದ ಬ್ರಹ್ಮಯಜ್ಞವನ್ನು ಮಾಡುತ್ತಾನೆ. ಸೂರ್ಯದರ್ಶನವಾದ ದಿನ ಹೋಗಿ ಸ್ನಾನಮಾಡಿ ಬರುತ್ತಾನೆ. ಉಳಿದ ಹೊತ್ತು ದೇಹದಲ್ಲಿ ಯಾವುದು ಕೆಲಸಮಾಡುತ್ತಿದ್ದರೆ, ಅದೇಕೆ ಹಾಗೆ? ಎಂದು ಧ್ಯಾನದಿಂದ ನೋಡುತ್ತಾನೆ: ಮನಸ್ಸು ಯಾವುದಾದರೊಂದು ಹಂಬಲವನ್ನು ಅಪ್ಪಿ

ಕೊಂಡರೆ ಬೇಡ, ಕೂಡದು ಎನ್ನದೆ, ನೀನೇಕೆ ಈ ಹಂಬಲವನ್ನು ಹಿಡಿದೆ? ಎಂದು ಅದರ ಹಿಂದೆ ಬಗ್ಗಿನೋಡಲು ಯತ್ನಿಸುತ್ತಿದ್ದಾನೆ. ಮನಸ್ಸು ಅವನೊಡನೆ ಕಣ್ಣಾಮುಚ್ಚಾಲೆಯಾಡುವಂತೆ ಒಂದು ಗಳಿಗೆ ಅವಿತುಕೊಂಡಿದ್ದು, ಮತ್ತೊಂದು ಗಳಿಗೆ ಪ್ರಕಟವಾಗಿ, ಕಾಡಿನ ಹಳ್ಳದಂತೆ ಅಲ್ಲಿಷ್ಟು ಇಲ್ಲಿಷ್ಟು ಕಾಣುತ್ತದೆ. ವೃತ್ತಿಯು ಗೋಚರವಾದೀತೆ? ಕೈಗೆ ಸಿಕ್ಕೀತೆ? ಅದೇಕೆ ಹೀಗೆ ಹೊರಟಿತು? ಎಂದು ಅದನ್ನು ಹಿಡಿದು ವಿಚಾರಿಸಿ ಅದರ ಹಿಂದು ಮುಂದು ನೋಡುವ ಕೆಲಸದಲ್ಲಿ ಕುಳಿತಿದ್ದಾನೆ.

ಸಾಲದ ಯೋಚನೆಯ ಜೊತೆಗೆ ಬ್ರಾಹ್ಮಣ್ಯದ ಯೋಚನೆ. 'ಸ್ವರ್ಗದ ಸೌಖ್ಯವನ್ನನುಭವಿಸಿಯಾಯಿತು, ಪ್ರಾಣದರ್ಶನಮಾಡಿ ಭೂಸುರನಾದುದಾಯಿತು, ಆದರೆ ಬ್ರಾಹ್ಮಣನಾದೆನೋ ಇಲ್ಲವೋ ತಿಳಿಯಲಿಲ್ಲವಲ್ಲ! ಅದನ್ನು ತಿಳಿದುಕೊಳ್ಳುವುದು ಹೇಗೆ? ಅಥವಾ ತಿಳಿಯದಿದ್ದರೇನು ನಷ್ಟ? ಆಗುವ ಕಾಲಕ್ಕೆ ಆಗುತ್ತದೆ. ನಾನಿನ್ನುಮೇಲೆ ಒದ್ದಾಡುವುದಿಲ್ಲ. ಪ್ರಾಣದರ್ಶನದ ಹಾಗೇ ಯಾವೊತ್ತೋ ಒಂದು ದಿನ ಆ ಬ್ರಾಹ್ಮಣ್ಯವೂ ಎದುರಿಗೆ ಬಂದು ನಿಲ್ಲುತ್ತದೆ. ಈಗ ಮಾಡುತ್ತಿರುವ ಕೆಲಸಮಾಡೋಣ. ಈ ಮನಸ್ಸು ಮಾಡುತ್ತಿರುವ ಕೆಲಸವನ್ನು ಮಾಡದೆ ಓಡಿಹೋಗುವುದಕ್ಕೆ ಒಂದು ನೆಪವನ್ನು ಹುಡುಕುತ್ತದೆ. ಭೂತಾರ್ಥಕ್ಕೊ ಭವಿಷ್ಯದರ್ಥಕ್ಕೋ ಹೋಗಿ ಆಶ್ರಯವನ್ನು ಪಡೆದು ವರ್ತಮಾನವನ್ನು ಮುಚ್ಚಿಡುತ್ತಿದೆ. ಇದನ್ನು ನಿಲ್ಲಿಸಬೇಕು. ಮನಸ್ಸನ್ನು ಮುಂದೆ ಎದುರಿಗಿರುವ ಅರ್ಥವನ್ನು ಚಿಂತಿಸಬೇಕಲ್ಲದೆ ಭೂತಭವ್ಯಗಳನ್ನು ವಿಭಾವಿಸುತ್ತಾ ವರ್ತಮಾನಾರ್ಥವನ್ನು ಬಿಡುವುದನ್ನು ಅಡ್ಡಿಗಟ್ಟಬೇಕು. ಈಗ ಇಲ್ಲಿ ನಾನು ಕುಳಿತಿರುವುದು ತಪಸ್ಸಿಗೆ. ಅದಷ್ಟು ಮಾಡೋಣ. ಯಾವುದೋ ಒಂದು ಪ್ರವಾಹವಿದೆ. ಅದು ಯಾವುದೋ ಕಾಣೆ. ಅಂತೂ ಅದು ಹೊತ್ತುಕೊಂಡು ಹೋಗುತ್ತಿದೆ. ನಾವು ಬೇಡವೆಂದರೂ ನಮ್ಮನ್ನು ಸಾಣೆಗೆ ಹಿಡಿಯುತ್ತಿದೆ. ಸಾಣೆಯೂ ನಮ್ಮ ಕಷ್ಟನಷ್ಟಗಳನ್ನು ಗಮನಿಸದೆ ಉಜ್ಜುತ್ತಿದೆ. ಉಜ್ಜಲಿ. ನಾವು ಕ್ರಿಯೆಯಾದ ಮೇಲೆ ತಿಳಿಯಬಲ್ಲೆವಲ್ಲದೆ, ಅದಕ್ಕಿಂತ ಮುಂಚೆ ತಿಳಿಯಲಾರೆವಲ್ಲ!

'ಛೀ! ಛೀ! ತಡೆಯಬೇಕು. ಈಗ ತಾನೇ ಭವಿಷ್ಯದರ್ಥದ ಚಿಂತನವು ಬೇಡವೆಂದೆ. ಮತ್ತೆ ಅದಕ್ಕೇ ಹೋಗುತ್ತಿದ್ದೇನೆ. ಹಾಗಾದರೆ, ವರ್ತ

ಮಾನದಲ್ಲಿ ನಿಲ್ಲುವುದಕ್ಕೆ ಸಾಧ್ಯವಿಲ್ಲವೇನು ? ಹೌದು. ನಿಲ್ಲುವುದಕ್ಕೆ ಸಾಧ್ಯ ವಿಲ್ಲ. ಅಬ್ಬಾ ! ವರ್ತಮಾನಕ್ಷಣವೇ ಇಲ್ಲ. ಬರುತ್ತಿರುವುದನ್ನು ಆಗಿ ಹೋದುದು ನುಂಗಿಬಿಡುತ್ತಿದೆ. ಮೇಲಿನಿಂದ ಹರಿದುಬಂದು ನದಿಯು ಕೆಳ ಕ್ಕುರುಳುತ್ತಿದೆ. ಆ ಉರುಳುವುದಕ್ಕೆ ಸಿದ್ಧವಾಗುವುದೊಂದು ಕಡೆ. ಉರುಳಿ ಧುಮುಕುವುದು ಮತ್ತೊಂದು ಕಡೆ. ಈ ಕಡೆಯಿಂದ ನೋಡಿದರೆ, ನುಗ್ಗುತ್ತಿ ರುವ ನೀರು. ಆ ಕಡೆಯಿಂದ ನೋಡಿದರೆ ಧುಮುಕಿರುವ ನೀರು. ಈ ನಡುವೆ ಧುಮುಕುತ್ತಿದೆಯೆಂದು ಯಾವುದನ್ನು ಹೇಳಬೇಕು ?

'ಹಾಗಾದರೆ ಜೀವನದಲ್ಲಿ ವರ್ತಮಾನಕ್ಷಣವೇ ಇಲ್ಲವೇ ? ಭೂತಕಾಲದ ಈಚಿನ ಕೊನೆ, ಭವಿಷ್ಯತ್ತಿನ ಆರಂಭ, ಇವೆರಡೂ ಸೇರಿ ಆಗುವ ನಿಮೇಷಕಾಲ ವೊಂದು ವರ್ತಮಾನ. ಅಬ್ಬಾ ! ಈ ವರ್ತಮಾನದಲ್ಲಿ ಬದುಕುವುದು ಹೇಗೆ ? ಭೂತವಾಗಿ ಹೋಗುತ್ತಿರುವ ಕ್ಷಣವನ್ನು ಭವಿಷ್ಯತ್ತಿನಿಂದ ಕಿತ್ತು ಕೊಂಡು ಅದಕ್ಕೆ ವರ್ತಮಾನವೆಂದು ಹೆಸರಿಟ್ಟು, ಒಂದು ಕನಸು ಕಾಣು ತ್ತಿರುವೆವಲ್ಲವೆ ? ಇದು ನಿಜವೆ ?'

ವಿಶ್ವಾಮಿತ್ರನಿಗೆ ಇಂತಹ ಆಲೋಚನಾತರಂಗಗಳು ಹೊಸತಲ್ಲ. ಎಷ್ಟೋಸಲ ಒಂದೊಂದು ದಿನವೆಲ್ಲ ಹೀಗೆ ಯೋಚನೆ ಮಾಡುತ್ತ ಕುಳಿತು ಬಿಟ್ಟಿದು ಉಂಟು. ಆದರೆ ಇವೊತ್ತು, ವರ್ತಮಾನ ಕ್ಷಣವಿಲ್ಲ ಎಂಬುದು ಮನಸ್ಸಿಗೆ ಅರಿವಾಗಿ ಭಯಂಕರವಾಗಿದೆ. ಏನೋ ತನ್ನ ಸರ್ವಸ್ವವೂ ಹೋದಂ ತಾಗಿದೆ. ಭಯಂಕರವಾದ ಪ್ರವಾಹದಲ್ಲಿ ತಾನು ನಿಲ್ಲಲು ಬಹು ಕಷ್ಟಪಟ್ಟು ಸಂಪಾದಿಸಿದ ಏಕಾಶ್ರಯವಾಗಿದ್ದ ಗುಂಡು ಜಾರಿ ಮುಂದಕ್ಕೆ ಕೊಚ್ಚಿಹೋಗಲು ಉರುಳಿಕೊಂಡು ಸರ್ವನಾಶವಾಯಿತೆಂದು ಗಾಬರಿಗೊಂಡವನಂತೆ, ಅನ್ಯ ಮನಸ್ಕನಾಗಿ ನಡೆದುಕೊಂಡು ಹೋಗುತ್ತಿದ್ದು ಅರಿವಿಲ್ಲದೆಯೇ ಜಾರಿ ಕಮರಿಗೆ ಬಿದ್ದವನಂತೆ, ಆಗಿ ಬಹು ಆಯಾಸಪಟ್ಟಿದ್ದಾನೆ. ಕಣ್ಣುಕೂಡ ತೆರೆದುಕೊಂಡಿ ರಲು ಆಗಲಾರದಷ್ಟು ಶ್ರಾಂತನಾಗಿ, ಅಂಗಯಷ್ಟಿಯು ನಿಂತಿರಲಾರದಷ್ಟು ಬಳಲಿ, ಹಾಗೆಯೇ ಗುಹೆಯ ಗೋಡೆಗೆ ಒರಗಿಕೊಂಡಿದ್ದಾನೆ. ಸೋತ ಇಂದ್ರಿಯಗಳು ವಿಶ್ರಾಂತಿಯನ್ನು ಬಯಸಿ, ಜೀವನಿಗೆ ಕನಸನ್ನು ಕಲ್ಪಿಸಿ ಕೊಟ್ಟು, ಆಟಕ್ಕೆ ಏನಾದರೂ ಕೊಟ್ಟು ಮಗುವನ್ನು ಬಿಟ್ಟು ಓಡುವ ತಾಯಿ ಯಂತೆ, ಎಲ್ಲಿಗೋ ಓಡಿಹೋಗಿ ಮರೆಯಿಸಿಕೊಂಡಿವೆ. ವಿಶ್ವಾಮಿತ್ರನಿಗೆ ಜಾಗ್ರದ್ವೃತ್ತಿಯು ಸಡಿಲವಾಗಿ, ಝೋಂಪು ಹತ್ತಿ ಕನಸಿಗೆ ಇಳಿದಿದೆ.

ಕನಸಿನಲ್ಲಿ ಮಹಾ ಭಯಂಕರಾಕಾರಿಯಾದವನೊಬ್ಬ ಪುರುಷನು ಕಾಣಿಸಿದ್ದಾನೆ. ಆಕಾಶಕ್ಕೂ ಭೂಮಿಗೂ ಕೀಲುಕೊಟ್ಟಂತೆ ನಿಂತಿರುವ ಆ ಮಹಾಪುರುಷನ ಆಕಾರವು ಭಯಂಕರವಾಗಿದ್ದರೂ, ಆತನು ಮಾತ್ರ ಸೌಮ್ಯನಾಗಿಯೇ ಸುಖಮುಖನಾಗಿಯೇ ಸ್ಮಿತಸುಂದರನಾಗಿಯೇ ಪ್ರಸನ್ನನಾಗಿಯೇ ಇದ್ದಾನೆ. ವಿಶ್ವಾಮಿತ್ರನು ಅಪೂರ್ವ ದೃಷ್ಟನಾದ ಆ ಮಹಾಪುರುಷನನ್ನು ಸಮೀಪಿಸಿ, ಯಥೋಚಿತವಾಗಿ ಸತ್ಕಾರಮಾಡಿ, ನೀನು ಯಾರೆಂದು ಕೇಳುತ್ತಾನೆ. ಆತನು ನಕ್ಕು ನನ್ನನ್ನು ಕಾಣೆಯಾ? ಅಥವಾ ಯಾರು ತಾನೇ ನನ್ನನ್ನು ಬಲ್ಲರೆಂದು ನೀನು ನನ್ನನ್ನು ಕಂಡಿರಬೇಕು? ಅದರಿಂದ ನಾನೇ ನನ್ನ ಪರಿಚಯವನ್ನು ಹೇಳುವೆನು. ಕೇಳು. ನೀನು ಇಷ್ಟುಹೊತ್ತೂ ಯಾರನ್ನು ಕುರಿತು ಯೋಚಿಸುತ್ತಿದ್ದೆಯೋ ಆ ಕಾಲನೇ ನಾನು! ನೋಡು ಇತ್ತ ಬೆಳೆಯನ್ನು ಬೆಳೆಸುತ್ತಿರುವೆನು. "ಅತ್ತ ಬೆಳೆದಿರುವುದನ್ನು ಭಕ್ಷಿಸುತ್ತಿರುವೆನು. ಹೀಗೆ ಮುಂದಿನ ಅನ್ನವನ್ನು ಬೆಳೆಸುತ್ತ, ಬೆಳೆದಿರುವ ಅನ್ನವನ್ನು ಭಕ್ಷಿಸುತ್ತ ಇರುವುದೇ ನನ್ನ ಕೆಲಸವು" ಎನ್ನುತ್ತಾನೆ.

ವಿಶ್ವಾಮಿತ್ರನು ಪರ್ವತದ ಮುಂದೆ ಒಂದು ಬೆಟ್ಟದಷ್ಟು ಇರುವ ಬೆಣಚುಕಲ್ಲು ನಿಂತು ಮಾತನಾಡಿಸಿದಂತೆ ಆತನನ್ನು ಮಾತನಾಡಿಸುತ್ತ "ಅನ್ನವೂ ಅನ್ನಾದನೂ ನಾನೇ ಎಂದು ಪ್ರಾಣನು ಹೇಳಿದನಲ್ಲ!" ಎನ್ನುತ್ತಾನೆ. ಕಾಲನು ದಿಕ್ತಟಗಳೆಲ್ಲ ಮೊಳಗುವಂತೆ, ಪರ್ವತಗಳು ಒಡೆಯುವಂತೆ, ನಗುತ್ತಾ "ಆತ್ಮಾ ವೈ ಪುತ್ರನಾಮಾಸಿ" – ಪ್ರಾಣನು ನನ್ನ ಮಗ! ಅವನು ಮೊದಲು ಹುಟ್ಟಿದ ಅನ್ನ: ಅವನನ್ನೇ ನಾನು ಕೊನೆಗೆ ತಿನ್ನುವುದು." ಎನ್ನುತ್ತಾನೆ.

ವಿಶ್ವಾಮಿತ್ರನಿಗೆ ಏಕೋ ಅಂಜಿಕೆಯಾಗುತ್ತದೆ. ನಮ್ಮ ಗತಿ ಏನು ಯೆನ್ನಬೇಕು. ಅಷ್ಟರೊಳಗೆ ಮಾತು ಅಲ್ಲಿಯೇ ನಿಂತುಹೋಗುತ್ತದೆ. ಕಾಲನು ತನ್ನ ಕೆಂಪಾದರೂ ಸುಂದರವಾದ ಕಣ್ಣಿನಿಂದ ಚಂದ್ರಿಕೆಯಂತೆ ಮನೋಹರವಾದ ನೋಟವನ್ನು ಬೀರುತ್ತ, "ವಿಶ್ವಾಮಿತ್ರ, ಇರುವುದೆಲ್ಲ ಒಂದೇ ಒಂದು, ಅದು ಆಗ, ಈಗ ಎನ್ನುವುದು ಇಲ್ಲವೇ ಇಲ್ಲ. ಆಗ ಎನ್ನುವುದರ ಎರಡು ಕೊನೆಗಳು ಹಿಂದು ಮುಂದು. ಅಲ್ಲವೇ ನೋಡು" ಎನ್ನುತ್ತಾನೆ.

ಅಪಾರವಾದ ಜನಸಮೂಹದ ಒಂದು ದೃಶ್ಯ. ಪರ್ವತದಂತಹ ಒಂದು ತೇರು. ಜನ ಅದನ್ನು ಎಳೆಯುತ್ತಿದ್ದಾರೆ. ಅವರ ಸಂಭ್ರಮ ಅಷ್ಟಿ

ಷ್ಟೆಂದು ಹೇಳಲು ಸಾಧ್ಯವಿಲ್ಲ. ಅವರು ಭೂಮಿತೂಕದ ಆ ತೇರನ್ನು ಎಳೆಯು ತ್ತಿದ್ದಾರೆ. ಅದು ಮುಂದು ಮುಂದೆ ಬಂದಂತೆಲ್ಲ ಅದನ್ನು ಎಳೆದವರೇ ಅದರ ಕೆಳಗೆ ಸಿಕ್ಕಿ ಸಾಯುತ್ತಿದ್ದಾರೆ. ಸತ್ತವರ ಲಕ್ಷ್ಯವೇ ಇಲ್ಲದೆ ಜನ ಮುನ್ನುಗು ತ್ತಲೇ ಇದೆ.

ವಿಶ್ವಾಮಿತ್ರನು ಆ ಕೊಲೆಯನ್ನು ನೋಡಲಾರದೆ ಕಣ್ಮುಚ್ಚಿಕೊಳ್ಳ ಬೇಕೆಂದುಕೊಳ್ಳುತ್ತಾನೆ. ಕಣ್ಣು ಇನ್ನಷ್ಟು ವಿಶಾಲವಾಗಿ ತೆರೆಯುತ್ತದೆ. ತೇರು ನೇರವಾಗಿ ಕಣ್ಣೊಳಕ್ಕೆ ಬಂದುಬಿಡುತ್ತದೆ. ಹಾಹಾ ಎಂದುಕೊಳ್ಳು ವುದರೊಳಗಾಗಿ ಕಣ್ಣಿಂದ ಇಳಿದು ಎದೆಯೊಳಕ್ಕೆ ಬಂದೇ ಬಿಟ್ಟಿದೆ. ಆ ತೂಕ ವನ್ನು ತಡೆಯಲಾರದೆ, ಗಾಬರಿಯಾಗಿ ವಿಶ್ವಾಮಿತ್ರನು ಕೂಗಿಕೊಂಡು ಎದ್ದಿ ದ್ದಾನೆ. ಆತನ ಕೂಗು ಗವಿಯನ್ನು ತುಂಬಿ, ಪ್ರತಿಧ್ವನಿಯು ಎದ್ದು ತನ್ನನ್ನು ಮುಸುಕುವುದರೊಳಗಾಗಿ ತಾನೂ ಕಣ್ಣು ಬಿಟ್ಟಿದ್ದಾನೆ. ಇನ್ನೂ ಆತನಿಗೆ ತೇರು ಕಣ್ಣಲ್ಲಿ ಕುಳಿತಿರುವಂತೆ ಇದೆ. ಎದೆಯಲ್ಲಿ ಏನೋ ತೂಕವಾಗಿದೆ. ಇನ್ನೂ ಗಾಬರಿಯೂ ಹಾಗೆಯೇ ಇರುವಂತಿದೆ.

ಎಚ್ಚರವಾದ ಮೇಲೆಯೂ ಸ್ವಪ್ನವೃತ್ತಿಯು ಹಾಗೆಯೇ ಇತ್ತು. ತೇರು, ಜನ, ಕೊಲೆ ಮರೆಯುವಂತಿರಲಿಲ್ಲ. ಇದು ಏನು ಎಂದು ವಿಚಾರ ಮಾಡು ತ್ತಿರುವಾಗ, ಯಾರೋ ಉತ್ತರ ಹೇಳಿದಂತಾಯಿತು. "ಇದೇ ಜಗನ್ನಾಥನ ತೇರು."

---

## ನಲವತ್ತೇಳನೆಯ ತರಂಗ

ವಿಶ್ವಾಮಿತ್ರನಿಗೆ ಆಶ್ಚರ್ಯವಾಯಿತು. ಗುಹೆಯಲ್ಲಿ ಇನ್ನು ಯಾರೂ ಇಲ್ಲ. ಕೇಳಿಸಿದ ದನಿ ದಪ್ಪವಾಗಿರಲಿಲ್ಲ. ಸಣ್ಣನಾಗಿತ್ತು. ಯಾರೋ ನುಡಿದಿರಬೇಕು? ಯಾರು ನುಡಿದವರು? ಹೊರಗಿನಿಂದ ಮಾತನಾಡಿದರು ಎನ್ನಲು ಸಾಧ್ಯವಿಲ್ಲ. ಹೊರಗಿನಿಂದ ಮಾತನಾಡಿದ್ದರೆ ದನಿ ದಪ್ಪವಾಗಿರ ಬೇಕು. ಆ ದನಿ ಮಿದುವಾಗಿದ್ದು ಅದು ಗಂಡಿನದೋ ಹೆಣ್ಣಿನದೋ ಅದೂ ಹೇಳಲು ಸಾಧ್ಯವಿಲ್ಲ.

ಕೇಳಿರುವುದುಂಟು? ಆಡಿದವರು ಯಾರು ತಿಳಿಯದು. ಹೀಗೆ ಕೊಂಚ ಹೊತ್ತು ಆಶ್ಚರ್ಯದಲ್ಲಿದ್ದು ಕೊನೆಗೆ ಯಾರು ತಿಳಿಯಲೇ ಬೇಕು ಎನ್ನಿಸಿತು. ಹೇಗೆ ತಿಳಿಯುವುದು.

ಧ್ಯಾನದಲ್ಲಿ ಕುಳಿತನು. ಮತ್ತೆ ಪ್ರಾಣನನ್ನು ಅನುಸಂಧಾನ ಮಾಡಿದನು. ಪ್ರಾಣ ದರ್ಶನವಾಯಿತು. ಯಥಾವಿಧಿಯಾಗಿ ಆರಾಧಿಸಿ "ದೇವ, ಅಪ್ಪಣೆಯಾಗಬೇಕು. ಹೀಗೆ ಅಜ್ಞಾತವಾಗಿ ನುಡಿದವರಾರು?" ಎಂದು ಪ್ರಾರ್ಥಿಸಿಕೊಂಡನು. ಪ್ರಾಣನು ಗಹಗಹನೆ ನಕ್ಕು, ಹೇಳಿದನು. "ಇಷ್ಟು ತಿಳಿಯಲಿಲ್ಲವೆ? ಕನಸಿನಲ್ಲಿ ನನ್ನ ತಂದೆಯನ್ನು ಕಂಡೆ. ನನ್ನ ತಂದೆಯ ವಿರಾಟ್ ಸ್ವರೂಪವು ಜಗನ್ನಾಥನ ತೇರು. ಅದನ್ನೂ ಕಂಡೆ. ನಿನಗೆ ಅದು ಅರ್ಥವಾಗಲಿಲ್ಲ. ಇದೇನು ಎಂದು ಕೇಳಿದೆ. ನಾನೇ ನಿನಗೆ ಉತ್ತರವನ್ನು ಕೊಟ್ಟೆ. ಆದರೆ ತಿಳಿದವರು ನನ್ನನ್ನು ಸಮಷ್ಟಿ ವ್ಯಷ್ಟಿಗಳಿಂದ ಆರಾಧಿಸುವರು. ಸಮಷ್ಟಿಯಾದಾಗ ನಾನು ಪ್ರಾಣ. ವ್ಯಷ್ಟಿಯಾದಾಗ ಐದು ರೂಪದಿಂದ ದೇಹ ದೇಹವನ್ನೂ ಹಿಡಿದಿರುವೆನು. ಆದಾನ, ವಿಸರ್ಜನ, ಶಬ್ದನ, ಧಾರಣ, ಪೋಷಣ ಎಂಬ ಪಂಚಕ್ರಿಯೆಗಳನ್ನೂ ಅಹರ್ನಿಶಿಯಲ್ಲೂ ಮಾಡುತ್ತ ಸ್ಥಿತಿ ಕರ್ತನಾಗಿರುವವನು ನಾನು. ನನ್ನ ರೂಪವನ್ನು ಸಮಷ್ಟಿಯಲ್ಲಿ ಕಂಡಿರುವೆ. ಬೇಕಾದರೆ ಹೇಳು. ವ್ಯಷ್ಟಿಯಾಗಿ ತೋರಿಸುವೆನು."

"ದೇವ, ನಿನ್ನ ಅನುಗ್ರಹವಾದರೆ ಆ ವ್ಯಷ್ಟಿ ರೂಪವನ್ನೂ ತೋರಿಸು. ಅದಕ್ಕಿಂತ ಮುಂಚೆ ನನಗೆ ಕಾಲಪುರುಷನ ದರ್ಶನವೇಕಾಯಿತು ಎನ್ನುವುದನ್ನು ಹೇಳು."

"ನೀನು ಪ್ರಾಣನಾದ ನನ್ನನ್ನು ಕಂಡೆ. ನಿನ್ನ ವೃತ್ತಿಯು ನನ್ನಿಂದ ಕೊಂಚ ಹಿಂದೆ ಹೋಗಿ ನನ್ನ ತಂದೆಯನ್ನು ಕುರಿತು ಹೊರಟಿತು. ಆ ವೃತ್ತಿಯು ಹೋಗಿ ಆತನನ್ನು ಸಂಧಿಸಿತು. ಆತನ ದರ್ಶನವಾಯಿತು. ವೃತ್ತಿಯೇಕೆ ಅತ್ತ ತಿರುಗಿತು ಎನ್ನುವಿಯೇನೋ? ಅದೀಗಲೇ ಬೇಡ. ಅದು ದೇವ ರಹಸ್ಯ. ಇಷ್ಟು ಹೇಳಿರುವೆನು. ತಿಳಿದಿರು. ವೃತ್ತಿಯೇ ಜೀವನ. ಮನೋವೃತ್ತಿಗಳ ಸಮುದಾಯವೇ ಮನಸ್ಸು. ಮನಸ್ಸು ಪ್ರೇರಿಸುವವನು ನಾನು. ನನ್ನನ್ನು ಪ್ರೇರಿಸುವವನು ಕಾಲ. ಇದಿಷ್ಟು ತಿಳಿದಿರು. ಆದರಿಂದ ನನ್ನ ಪ್ರೇರಣೆಯಿಂದಲೇ ನಿನಗೆ ಕಾಲವೃತ್ತಿ ಹುಟ್ಟಿತು. ಕಾಲವೃತ್ತಿಯಿಂದ ನಿನಗೆ

ಕಾಲಪುರುಷನ ದರ್ಶನವಾಯಿತು. ನನ್ನ ಪ್ರೇರಣೆಯಿಂದಲೇ ನಿನಗೆ ಈಗ ನುಡಿದವರು ಯಾರು ತಿಳಿಯಬೇಕೆಂಬ ಪ್ರವೃತ್ತಿ ಹುಟ್ಟಿದುದು. ನಿನ್ನಲ್ಲಿ ಶಬ್ದನ ವಿಲ್ಲವೇನು? ಅಹೋರಾತ್ರಿಗಳಲ್ಲಿ ನಿನ್ನ ಕಿವಿಯಲ್ಲಿ ಸದ್ದು ಕೇಳಿಸುತ್ತಿಲ್ಲವೇನು? ಅದೇನೆಂದು ಯಾವೊತ್ತಾದರೂ ಕೇಳಿದೆಯಾ? ಇದೇ ದೇವ ರಹಸ್ಯವೆನ್ನು ವುದು. ನೀನು ಕಾಣುವುದಕ್ಕಿಂತ ಮುಂಚೆ ನಾನು ನಿನ್ನ ದೇಹದಲ್ಲಿ ಇರಲಿಲ್ಲವೆ? ನೀನು ಗರ್ಭಕ್ಕೆ ಬರುವುದಕ್ಕೆ ಮುಂಚೆ ನಿನಗಾಗಿ ಬಂದು ಇಲ್ಲಿ ದೇಹವನ್ನು ಕಟ್ಟಿ ನಿನ್ನನ್ನು ತಂದವನು ನಾನು. ಹೀಗೆ ಈ ದೇಹವನ್ನು ಕಟ್ಟಿ, ನೀನು ಇರುವವರೆಗೂ ದೇಹವನ್ನು ಕಾಪಾಡಿಕೊಂಡಿದ್ದು, ಇಲ್ಲಿಂದ ಹೊರಡುವ ಕಾಲ ಬಂದಾಗ ನಿನ್ನನ್ನು ಹೊರಡಿಸಿಕೊಂಡು ಹೋಗುವವನೂ ನಾನೇ! ಆದರೆ ನೀನು ಹೇಗೆ ನನ್ನನ್ನು ಇದುವರೆಗೂ ತಿಳಿದಿರಲಿಲ್ಲವೋ ಹಾಗೆಯೇ ಆಜೀವವೂ ತಿಳಿಯ ದವರೆಷ್ಟೋ ಮಂದಿ ಇರುವರು. ಆಯಿತು. ಈಗ ನೀನು ನೋಡಬೇಕೆನ್ನು ವುದು ಯಾರನ್ನು? ಹೇಳು. ನಿನಗೆ ಯಾರನ್ನು ನೋಡಬೇಕೆಂದು ಅಪೇಕ್ಷೆ? ನಾವು ಸೋದರರು ಐವರು. ಐವರನ್ನೂ ನೋಡಬೇಕೆನ್ನುವೆಯಾ?"

"ಹೌದು, ದೇವ, ನಾನು ಐವರನ್ನೂ ನೋಡಬೇಕು."

"ಇದೋ ನೋಡು."

ವಿಶ್ವಾಮಿತ್ರನ ಎದುರಿಗೆ ಐದು ಜ್ವಾಲೆಗಳು ನಿಂತಿವೆ. ಕಣ್ಣಿಟ್ಟು ನೋಡಿದರೆ ಹಾವುಗಳಂತೆ ಕಾಣುತ್ತವೆ. ಆದರೂ ಧಗಧಗನೆ ಉರಿಯುತ್ತಿವೆ. ಸೌಮ್ಯವಾಗಿರುವ ಆ ಜ್ವಾಲೆಗಳ ದರ್ಶನದಿಂದ ವಿಶ್ವಾಮಿತ್ರನ ಅಂತಃಕರಣವು ಪರಮ ಶಾಂತವಾಗಿ, ಶೀತಲವಾಗಿ, ಮಡಕೆಯಲ್ಲಿ ಹೆಪ್ಪುಹಾಕಿರುವ ಮೊಸರಿ ನಂತೆ ನಿಶ್ಚಲವಾಗಿದೆ. ಮುನೀಂದ್ರನು ಅವರವರಿಗೆ ಸಮಷ್ಟಿಯಾಗಿ ಪೂಜೆ ಯೊಪ್ಪಿಸಿ "ದೇವ, ಅಪ್ಪಣೆಯಾಗಲಿ. ಪ್ರತ್ಯೇಕವಾಗಿ ಪೂಜೆಯೊಪ್ಪಿಸಬೇಕೆಂ ದಿರುವೆನು. ಜ್ಯೇಷ್ಠಾನುಕ್ರಮವನ್ನು ತಿಳುಹಿಸಿಕೊಡಬೇಕು" ಎಂದು ಪ್ರಾರ್ಥಿಸಿದನು.

ಪ್ರಾಣನು ಹೇಳಿದನು: "ಇದೋ ಈತನು ವ್ಯಾನದೇವನು. ದೇಹಾ ದ್ಯಂತವೂ ಇದ್ದುಕೊಂಡು, ಅದನ್ನು ಧರಿಸಿರುವ ತ್ರಿವಿಕ್ರಮಸ್ವರೂಪಿಯಿವನು. ಈತನು ಇರುವುದರಿಂದಲೇ ದೇಹವು ಉಷ್ಣವಾಗಿರುವುದು. ಈತನು ಯಾವ ಭಾಗವನ್ನು ಬಿಡುವನೋ ಆ ಭಾಗವು ಹಿಮಶೀತಲವಾಗಿ ವ್ಯಾಪಾರಶೂನ್ಯ

ವಾಗುವುದು. ಈತನು ಅಪಾನದೇವನು. ದೇಹದಲ್ಲಿರುವ ವಿಸರ್ಜನಕ್ರಿಯೆ ಯೆಲ್ಲವೂ ಈತನದು, ಈತನು ತನ್ನ ವ್ಯಾಪಾರವನ್ನು ಒಂದು ಗಳಿಗೆ ನಿಲ್ಲಿಸಿ ದರೆ ಕೂಡಲೇ ಮೃತ್ಯುಪಾಶವು ಬಂದು ಹಿಡಿಯುವುದು. ನಾನು ಮಧ್ಯಮನು. ಆದಾನವೆಲ್ಲವೂ ನನ್ನದು. ನೀನು ಉಸಿರಾಡುವಾಗ ನಿಃಶ್ವಾಸವು ಅಪಾನದೇವ ನದು : ಉಚ್ಛ್ವಾಸವು ನನ್ನದು. ಯೋಗದಿಂದ ನನ್ನನ್ನು ಆರಾಧಿಸಿ ಚಂಚಲ ನಾದ ನನ್ನನ್ನು ನಿಶ್ಚಲನಾಗಿ ಮಾಡಿಕೊಂಡರೆ, ಮನೋಬಲ ಬುದ್ಧಿಬಲ ದೇಹ ಬಲಗಳು ಹೆಚ್ಚುವುವು. ನಾನು ಕುಪಿತನಾಗುವುದೇ ರೋಗವು. ಇದೋ ಈತನು ಉದಾನದೇವನು. ನಿನ್ನ ದೇಹದಲ್ಲಿ ನಡೆಯುವ ಶಬ್ದಕ್ರಿಯೆಗಳೆಲ್ಲ ಈತನದು. ಈತನೇ ನಿನಗೆ "ಜಗನ್ನಾಥನ ತೇರು" ಎಂದು ಹೇಳಿದವನು. ನಮ್ಮೆಲ್ಲರ ಸುಖದುಃಖಗಳನ್ನು ಹೊರಗೆ ಹೇಳುವವನೇ ಈತನು. ಈತನು ಅಪ್ರಸನ್ನನಾದರೆ ಕಿವಿಯು ಕಿವುಡಾಗುವುದು. ಇಂದ್ರಿಯಗಳು ನಿರ್ಬಲ ಗಳಾಗುವುವು. ಇಗೋ ಎಲ್ಲರಿಗಿಂತ ಚಿಕ್ಕವನಾದರೂ ವಾಮನನಂತೆ ತೇಜಸ್ವಿ ಯಾಗಿರುವ ಈ ಮಹಾನುಭಾವನೇ ಸಮಾನದೇವನು. ಹೊರಗಿನಿಂದ ಬಂದುದು ಯಾವುದೂ ಶತ್ರುವಾಗದಂತೆ ಎಲ್ಲವನ್ನೂ ಜೀರ್ಣಿಸಿಕೊಂಡು ಅದನ್ನೂ ಅನ್ನರಸವಾಗಿ ಮಾಡಿ ದೇಹದಲ್ಲಿ ಯಾರು ಯಾರಿಗೆ ಯಾವದು ಯಾವದು ಬೇಕೋ ಅದದನ್ನೇ ಕೊಟ್ಟುಕೊಂಡು ಎಲ್ಲರನ್ನೂ ಕಾಪಾಡುತ್ತ ಸ್ಥಿತಿಕರ್ತನಾಗಿರುವಾತನು ಈತನು. ಈ ನಮ್ಮ ಐವರನ್ನೂ ಸಾಕ್ಷಾತ್ಕರಿಸಿ ಕೊಂಡು ದೇಹದಲ್ಲಿ ಯಾವಾಗಲೂ ಅವಿಶ್ರಾಂತವಾಗಿ ನಡೆಯುತ್ತಿರುವ ಸೃಷ್ಟಿ ಸ್ಥಿತಿ ಲಯ ವ್ಯಾಪಾರಗಳೆಲ್ಲ ನಮ್ಮದು ಎಂದು ತಿಳಿದು, ಭಾವನೆಮಾಡುತ್ತಿರು ವುದೇ ಪಂಚಾಗ್ನಿಹೋತ್ರವು. ಇನ್ನೇನು ಬೇಕೋ ಹೇಳು."

"ದೇವ, ಪರಮಾನುಗ್ರಹವಾಯಿತು. ಈ ಪಂಚಾಗ್ನಿಹೋತ್ರವು ನನ್ನಲ್ಲಿ ಯಾವಾಗಲೂ ನಡೆಯುತ್ತಿರುವಂತೆ ನನಗೆ ಅನುಗ್ರಹ ಮಾಡಬೇಕು. ಇನ್ನು ಅಪ್ಪಣೆಯಾದರೆ, ನಾನು ತಮ್ಮೆಲ್ಲರಿಗೂ ಕ್ರಮವಾಗಿ ಪೂಜೆಯನ್ನೊಪ್ಪಿಸು ವೆನು. ತಾವು ಸ್ವೀಕರಿಸಬೇಕು" ಎಂದು ಮತ್ತೆ ನಮಸ್ಕಾರ ಮಾಡಿದನು. ಪ್ರಾಣಪಂಚಕವು ಆತನ ಪೂಜೆಯನ್ನು ಒಪ್ಪಿಸಿಕೊಂಡು ಆತನಿಗೆ ಅನುಗ್ರಹ ಮಾಡಿ, ಅಂತರ್ಧಾನವನ್ನು ಹೊಂದಿತು.

---

# ನಲವತ್ತೆಂಟನೆಯ ತರಂಗ

ವಿಶ್ವಾಮಿತ್ರನು ಮೌನವನ್ನು ಸಾಧಿಸಬೇಕೆಂದಿದ್ದವನು ಅದು ಸಾಧ್ಯ ವಿಲ್ಲೆಂದು ಕಂಡುಕೊಂಡಿದ್ದಾನೆ. ಮಾತನಾಡದೆ ಸುಮ್ಮನಿರುವುದು ಮೌನ ವಾದರೆ, ನಾಲಗೆಯೆಂಬ ಯಂತ್ರವು ಅಲ್ಲಾಡಿ ಹೊರಗಿನವರೊಡನೆ ಏನೂ ಆಡದೆ ಸುಮ್ಮನಿರುವುದು ಮೌನವಾದರೆ, ಆತನಿಗದು ಅದು ಬೇಕಾದಷ್ಟಿದೆ. ಆದರೆ ಆತನಿಗೆ ಬೇಕಾಗಿರುವ ಮೌನವದಲ್ಲ.

ಕಣ್ಣು ತಾನು ನೋಡಿದ ವಸ್ತುವನ್ನು ಮತ್ತೊಮ್ಮೆಯಾದರೂ ತಂದು ತೋರಿಸದೆ ಬಿಡುವುದುಂಟೆ? ಕಿವಿಯು ತಾನು ಕೇಳಿದ ಸದ್ದನ್ನು ಮತ್ತೆ ಕೇಳದೆ ಇರುವುದುಂಟೆ? ಮನವು ತಾನು ಮೆಚ್ಚಿಕೊಂಡಿರುವುದನ್ನು ಮತ್ತೊಮ್ಮೆ ನೆನೆಯದೆ ಇರುವುದುಂಟೆ? ಹೀಗೆ ತನಗಿಷ್ಟವಿಲ್ಲದಿದ್ದರೂ ಬರುವ ಇಂದ್ರಿಯ ಸ್ಮೃತಿಗಳೊಂದೂ ಇಲ್ಲದಂತಾಗಿ, ಒಳಒಳಗಿರುವ ಯಾವುದೋ ಅದು ಈಚೆಗೆ ಬರಲಿ. ಅದನ್ನು ನೋಡೋಣ ಎಂದು ಅಂತರ್ಬಹಿಶ್ಚ ನಿಶ್ಚಲವಾಗಿರು ವಿಕೆಯನ್ನು ಆತನು ಕೋರುತ್ತಿದ್ದಾನೆ. ಆದರದು ಸಿಕ್ಕಿಲ್ಲ.

ಆ ಏಕಾಂತವಾದ ಗುಹೆಯಲ್ಲಿ ವಿಶ್ವಾಮಿತ್ರನಲ್ಲದೆ ಒಂದು ಪ್ರಾಣಿಯೂ ಇಲ್ಲ. ಸೊಳ್ಳೆ ಇರುವೆಗಳೂ ಇಲ್ಲ. ಅಲ್ಲಿ ಒಂದು ಕೃಷ್ಣಾಜಿನದ ತುಂಡನ್ನು ಉಟ್ಟುಕೊಂಡು ಇನ್ನೊಂದು ತುಂಡು ಉತ್ತರೀಯ ಮಾಡಿಕೊಂಡು, ದೇಹದ ಬಹು ಭಾಗವೆಲ್ಲ ಅನಾವೃತವಾಗಿರಲು ವಿಶ್ವಾಮಿತ್ರನು ಕುಳಿತಿದ್ದಾನೆ. ಬೆಳ ಗಿಂದ ಸಂಜೆಯವರೆಗೂ ಬೇರೆಯ ಕೆಲಸವಿಲ್ಲ. ಪದ್ಮಾಸನದಲ್ಲಿ ಕುಳಿತು ಪಂಚಾಗ್ನಿ ದರ್ಶನಮಾಡುತ್ತ ಕುಳಿತಿರುವುದೇ ಕೆಲಸ. ಆತನಿಗೆ ಸೂರ್ಯೋ ದಯ, ಸೂರ್ಯಾಸ್ತಮಯಗಳಲ್ಲಿ ಮಾತ್ರ ಒಂದು ವಿಚಿತ್ರವಾದ ಅನುಭವ ವಾಗುತ್ತಿದೆ. ಪಂಚಾಗ್ನಿಗಳ ದರ್ಶನಮಾಡುತ್ತ ಕುಳಿತಿರುವ ವಿಶ್ವಾಮಿತ್ರನ ಜೊತೆಗೆ ಆಗ ಇನ್ನೊಬ್ಬ ವಿಶ್ವಾಮಿತ್ರನು ದೇಹದಿಂದ ಈಚೆಗೆ ಬರುತ್ತಾನೆ. ಆತನು ದೇಹದಿಂದ ಈಚೆಗೆ ಬರುತ್ತಿದ್ದಹಾಗೆಯೇ ದೇವಗಂಗೆಯು ಬಂದು ಗುಹೆಯ ಬಾಗಿಲಲ್ಲಿ ಆತನಿಗೆ ಸ್ನಾನಮಾಡಿಸಿ ಹೋಗುತ್ತಾಳೆ. ಯಾರು ಯಾರೋ ಬಂದು ಆತನಿಗೆ ಮಡಿಯನ್ನೊಪ್ಪಿಸುತ್ತಾರೆ. ಇನ್ನು ಯಾರೋ ಬಂದು ಆಹ್ನಿಕಕ್ಕೆ ಬೇಕಾದುದನ್ನೆಲ್ಲ ಸಿದ್ಧಪಡಿಸುತ್ತಾರೆ. ಇನ್ನು ಯಾರೋ

ಬಂದು ದಿವ್ಯಹವಿಸ್ಸನ್ನು ಒಪ್ಪಿಸುತ್ತಾರೆ. ಆತನು ಅದರಲ್ಲಿ ಅಷ್ಟು ಹೋಮ ಮಾಡುತ್ತಾನೆ. ದೇವತೆಗಳೆಲ್ಲ ಬಂದು ಹವಿಸ್ಸನ್ನು ಸ್ವೀಕರಿಸುತ್ತಾರೆ. ಉಳಿದು ದನ್ನು ಆತನು ಸ್ವೀಕರಿಸಿ ತೃಪ್ತನಾಗಿ ಮತ್ತೆ ಹಿಂತಿರುಗಿ ಮನೆಯನ್ನು ಬಿಟ್ಟು ಹೊರಗೆ ಹೋಗಿದ್ದವನು ಮನೆಗೆ ಬರುವಂತೆ ಬಂದು ದೇಹವನ್ನು ಸೇರುತ್ತಾನೆ.

ವಿಶ್ವಾಮಿತ್ರನಿಗೆ ಈ ನಾಟಕ ನೋಡಿ ಬಹು ಕುತೂಹಲವಾಯಿತು. ಹಾಗಾದರೆ ದೇಹದಲ್ಲಿ ಇಬ್ಬಗು ಇರುವರೆ? ಒಬ್ಬನು ಹೋಗಿ ತನ್ನ ಕೆಲಸವನ್ನು ಮಾಡುತ್ತಿದ್ದರೆ ಇನ್ನೊಬ್ಬನು ಕುಳಿತಿರಲು ಸಾಧ್ಯವೆ? ಎಂಬುದೊಂದು ದೊಡ್ಡ ಯೋಚನೆಯಾಯಿತು. ಆ ಯೋಚನೆಯು ತನ್ನ ಮೌನಸಾಧನಕ್ಕೆ ವಿಘ್ನ ವಾಗುವುದೆಂದು ಅದನ್ನೂ ಅತ್ತ ತಳ್ಳಿದ್ದಾನೆ. ಯೋಚನೆಯು ಹುಟ್ಟುವ ವರೆಗೂ ಒಂದು ಘಟ್ಟ. ಹುಟ್ಟಿದಮೇಲೆ ಇನ್ನೊಂದು ಘಟ್ಟ. ಹುಟ್ಟಿದ ಯೋಚನೆ, ನೀರಿನ ಬುಡದಲ್ಲಿ ಹುಟ್ಟಿದ ಗುಳ್ಳೆಯು ಮೇಲಕ್ಕೆ ಬಂದೇ ತೀರು ವಂತೆ, ಜಾಗ್ರನ್ಮನಕ್ಕೆ ಬಂದೇ ತೀರಬೇಕು. ಅಲ್ಲಿ ಇತ್ಯರ್ಥವಾಗಲೇ ಬೇಕು. ಇಲ್ಲದಿದ್ದರೆ ಮನಸ್ಸಿಗೆ ಶಾಂತಿಯೆಲ್ಲಿ?

ಈ ಯೋಚನೆಗಿಂತ ಇನ್ನೊಂದು ಯೋಚನೆ ಬಲವಾಗಿ ಆತನಿಗೆ ಒಡಿ ದಿದೆ. ಈ ಪಂಚ ವಾಯುಗಳು ಸರಿಯಾಗಿರುವಾಗಲಂತೂ ಸರಿಯೋ ಸರಿ. ಆದರೂ ಹೆಚ್ಚು ಕಡಿಮೆಗಳಾಗುವುದುಂಟು ಎಂದು ಪ್ರಾಣದೇವನೇ ಹೇಳಿ ದ್ದಾನೆ. ಹಾಗೆ ಆಗಲು ಏನಾದರೂ ಕಾರಣವಿರಲಿ. ಆದಾಗ ಅದೇನು ಮಾಡಿ ದರೆ ಸರಿಹೋಗುವುದು? ಅದೊಂದು ಭಾರಿಯ ಯೋಚನೆ.

ಮೌನವಾಗಿ ಕುಳಿತಿರಬೇಕೆಂದರೆ ಈ ಅಗ್ನಿಗಳೇ ಮನೋವೃತ್ತಿಗಳನ್ನು ಪ್ರೇರೇಪಿಸುತ್ತವೆ. ಮನೋವೃತ್ತಿಗಳು ದೇಹೇಂದ್ರಿಯ ವೃತ್ತಿಗಳನ್ನು ಪ್ರೇರೇ ಪಿಸುತ್ತವೆ. ದೇಹೇಂದ್ರಿಯಗಳು ಪ್ರೇರಿತವಾದಮೇಲೆ ಸುಮ್ಮನಿರುವುದೆಂತು? ಚಾಟಿಯ ಏಟು ತಿನ್ನುತ್ತಿರುವ ಕುದುರೆಯಾದರೂ ಸುಮ್ಮನಿದ್ದೀತು. ಪ್ರಚೋ ದಿತಗಳಾದ ದೇಹೇಂದ್ರಿಯಗಳು ಸುಮ್ಮನಿದ್ದಾವೆ?

ಜೊತೆಗೆ ಯೋಚನೆಗಳು. ಹೀಗಾಗಿ ವಿಶ್ವಾಮಿತ್ರನು ಹಣ್ಣುಹಣ್ಣಾಗಿ ಹೋಗಿದ್ದಾನೆ. ಹಿಂದೆ ಮಂತ್ರಯೋಗದಲ್ಲಿದ್ದಾಗ ಆತನು ಹೀಗೆ ಒದ್ದಾಡು ತ್ತಿರಲಿಲ್ಲ. ಕಣ್ಮುಚ್ಚಿ ಅಥವಾ ಏಕಾಗ್ರದೃಷ್ಟಿಯಾಗಿ ಕುಳಿತರೆ ಮನಸ್ಸು

ಕುಲೀನೆಯಾದ ಪತ್ನಿಯಂತೆ ವಶಕ್ಕೆ ಬಂದುಬಿಡುವುದು. ಈಗ ಹಾಗಿಲ್ಲ. ಈ ಧ್ಯಾನದಲ್ಲಿರುವಾಗ ಪಂಚಾಗ್ನಿ ಸನ್ನಿಧಾನದಲ್ಲಿದ್ದರೂ ಯಾವುದನ್ನು ನೋಡಿದರೆ ಅದಕ್ಕೆ ಜೀವ ಬಂದು ಎದ್ದು ಕುಣಿಯುವುದೋ ಎನ್ನುವಂತಿದೆ. ಹುಲ್ಲುಕಡ್ಡಿಯೊಂದು ಅಲ್ಲಿ ಬಿದ್ದಿದ್ದು ಅದು ವಿಶ್ವಾಮಿತ್ರನ ಕಣ್ಣಿಗೆ ಕಂಡರೆ, ವಿಶ್ವಾಮಿತ್ರನ ಹೃದಯದಿಂದ ಏನೋ ಒಂದು ಅನಿರ್ವಚನೀಯ ಶಕ್ತಿಯು ಹೊರಗೆ ಹೋಗಿ ಅದಕ್ಕೆ ಸೇರಿಕೊಂಡು ಅದರಲ್ಲಿ ಚೇತನವುಂಟಾಗುತ್ತದೆ. ಈಗ ವಿಶ್ವಾಮಿತ್ರನು ಗುಹೆಯನ್ನು ಬಿಟ್ಟು ಹೊರಗೆ ಬರದಿರುವುದಕ್ಕೆ ಅದೊಂದು ಕಾರಣ. ಆತನು ಹೊರಗೆ ಬಂದರೆ ಆತನ ದೃಷ್ಟಿಗೆ ಬಿದ್ದ ಸ್ಥಾವರಗಳೆಲ್ಲ ಜಂಗಮಗಳಂತೆ ಸವ್ಯಾಪಾರಗಳಾಗುತ್ತವೆ. ಕಲ್ಲುಗಳೂ ಕೂಡ ಕದಲಿದಂತೆ ಕಾಣುತ್ತವೆ. ಆತನು ಉಸಿರುಬಿಟ್ಟರೆ, ಆ ಗಾಳಿಯು ಹೊರಗಿನ ಗಾಳಿಯೊಡನೆ ಸೇರಿದರೆ, ಆ ಹೊರಗಿನ ಗಾಳಿಗೆ ಏನೋ ನವಚೇತನ ಬಂದಂತಾಗಿ ಅದು ಏನೋ ಒಂದು ನವೀನ ವ್ಯಾಪಾರವನ್ನು ಆರಂಭಿಸುತ್ತದೆ. ಈತನು ನದಿಗೆ ಹೋಗಿ ನೀರು ಮುಟ್ಟಿದರೆ ನೀರಿಗೆ ಹೊಸ ಜೀವ ಬಂದಂತಾಗಿ ಅದು ಏನೋ ಆಗಿಹೋಗುತ್ತದೆ. ಆದರೆ ಆ ವ್ಯಾಪಾರದಿಂದ ದುಃಖವಿಲ್ಲ: ಸುಖವಿದೆ: ಪ್ರಿಯವಿದೆ: ಹಿತವಿದೆ: ಆನಂದವಾಗುತ್ತದೆ. ಆದರೂ ವಿಶ್ವಾಮಿತ್ರನಿಗೆ ಒಳಒಳಗಿಂದ "ಕೂಡದು, ಈ ವ್ಯಾಪಾರ ಕೂಡದು" ಎನ್ನಿಸುತ್ತದೆ. ಅದರಿಂದ ಆತನು ಗುಹೆಯನ್ನು ಬಿಟ್ಟು ಈಚೆಗೇ ಬರುವುದಿಲ್ಲ. ಅಷ್ಟೇನು? ಎದ್ದು ಓಡಾಡಿದರೆ ನೆಲವೆಲ್ಲ, ಕಾಲಿಗೆ ತಗುಲಿದ ಮೃತ್ಕಣಗಳೆಲ್ಲ ಸಚೇತನವಾದಂತೆ ಭಾಸವಾಗುತ್ತದೆ. ಕುಳಿತಿದ್ದರೆ ತಾನೇ ಏನು? ಅದೇನೋ ಒಂದು ವಿಚಿತ್ರವಾದ ಶಕ್ತಿಯು ದೇಹದಿಂದ ಹೊರಚಿಮ್ಮುತ್ತದೆ. ಆತನು ಅದನ್ನು ತಡೆಯಲಾರ. ಆತನ ಪ್ರಯತ್ನವಿಲ್ಲದೆ ಸಂತತವಾಗಿ, ದೀಪದಿಂದ ಹೊರಹೊಮ್ಮುತ್ತಿರುವ ಕಾಂತಿಯಂತೆ ತೇಜಃಪ್ರವಾಹವೊಂದು, ತೇಜಸ್ಸಾದರೂ ಕಣ್ಣಿಗೆ ಕಾಣದೆ ಮನಸ್ಸಿಗೆ ಮಾತ್ರ ಅರಿವಾಗುವ ಏನೋ ಒಂದು ಶಕ್ತಿಯು ಪ್ರವಾಹವಾಗಿ, ಪುಷ್ಪಗಂಧದಂತೆ ಸೂಕ್ಷ್ಮವಾಗಿ ಹೊರಗಿನ ವಾತಾವರಣದಲ್ಲಿ ಹೋಗಿ ಸೇರಿಕೊಳ್ಳುತ್ತಿದೆ. ಗುಹೆಯು ಗಾಳಿಯ ದಾರಿಯಲ್ಲಿಲ್ಲದಿದ್ದರೂ, ಆ ಸೂಕ್ಷ್ಮ ಶಕ್ತಿಯನ್ನು ಪಡೆದುಕೊಳ್ಳಬೇಕೆಂದೋ ಎಂಬಂತೆ ಗಾಳಿಯು ಬಂದು ಸುಳಿದು ಸುಳಿದು ಹೋಗುತ್ತದೆ.

ಆದರೆ ಉದಯಾಸ್ತಮಯಗಳಲ್ಲಿ ಮಾತ್ರ ದೇಹದಿಂದ ಆ ಇನ್ನೊಂದು ಮೂರ್ತಿಯು ಎದ್ದು ಹೊರಕ್ಕೆ ಹೋದಾಗ ಆ ಶಕ್ತಿವಿಕಿರಣನವಿಲ್ಲ. ಇದನ್ನು ಕುರಿತು ಪ್ರಾಣದೇವನನ್ನೇ ಕೇಳಬೇಕೆಂದು ಮನಸ್ಸಿಗೆ ಬರುತ್ತದೆ. ಆದರೆ ಗುರುವಿನ ಬಳಿಯಲ್ಲಿ ಕುಳಿತ ಶಿಷ್ಯನು ಗುರುಮುಖದಿಂದ ಬರುವ ಅಮೃತಧಾರೆಯನ್ನು ಸವಿಯುವ ಆನಂದದಲ್ಲಿ ಮಿಕ್ಕೆಲ್ಲವನ್ನೂ ಮರೆಯುವಂತೆ, ಆ ಪ್ರಾಣದೇವನ ಸಂದರ್ಶನಾನಂದದಲ್ಲಿ ಕೇಳಬೇಕು ಹೇಳಬೇಕು ಮೊದಲಾದ ಮನೋವೃತ್ತಿಗಳೆಲ್ಲ ಸುಪ್ತವಾಗಿ ಸರ್ವವೂ ಸಂನ್ಯಸ್ತವಾದಂತೆ ವಿಶ್ವಾಮಿತ್ರನು ಸುಖವಾಗಿರುತ್ತಾನೆ.

---

## ನಲವತ್ತೊಂಬತ್ತನೆ ತರಂಗ

ಹೀಗೆ ಅಷ್ಟುದಿನ ಕಳೆಯಿತು. ಪ್ರಾಣದೇವನು ಒಂದು ದಿನ "ವಿಶ್ವಾಮಿತ್ರ, ನಿನ್ನ ಹೃದಯದಲ್ಲಿರುವ ಸಂದೇಹಗಳು ಕಳೆಯಲಿ. ವಾಮದೇವನ ಬಳಿಗೆ ಹೋಗಿ ಬಾ" ಎಂದನು. ವಿಶ್ವಾಮಿತ್ರನು ಆಜ್ಞೆಯನ್ನು ಅಂಗೀಕರಿಸಿ, "ದೇವಾ, ಈ ವಿಕಿರಣನದಿಂದ ಇತರರಿಗೆ ಕಷ್ಟವಾದೀತೇನೋ? ಎಂದು ಹೆದರಿಕೆ." ಪ್ರಾಣದೇವನು ಅದನ್ನು ಕೇಳಿ ನಕ್ಕುಬಿಟ್ಟನು. "ಏನು ಮುನೀಂದ್ರರೆ, ಜಗತ್ತು ಅಷ್ಟು ಅರಕ್ಷಿತವಾಗಿರುವುದೇನು? ತಾವೊಬ್ಬರಲ್ಲ ಹೀಗೆ ಕಿರಣಗಳನ್ನು ಚೆಲ್ಲುತ್ತಿರುವುದು. ಸ್ಥಾವರ ಜಂಗಮಗಳೆಲ್ಲ ಕಿರಣಗಳನ್ನು ಚೆಲ್ಲುತ್ತಿವೆ. ಸೂರ್ಯ ಚಂದ್ರ ನಕ್ಷತ್ರಗಳಂತೆ ಅಣು ರೇಣು ತೃಣಕಾಷ್ಠಗಳೆಲ್ಲ ತೇಜೋಮಂಡಲಗಳೇ! ಕೆಲವು ವ್ಯಕ್ತಿಗಳಲ್ಲಿ ಅದು ಕಾಣುತ್ತದೆ: ಇನ್ನು ಕೆಲವರಲ್ಲಿ ಕಾಣುವುದಿಲ್ಲ. ತಾವು ಯೋಚಿಸಬೇಕಾಗಿಲ್ಲ. ಹೋಗಿ ಬರುವಾಗ ಹಾದಿಯಲ್ಲಿ ಏನೇನಾಗುತ್ತದೆ ಕಣ್ಣಿಟ್ಟು ನೋಡಿಕೊಂಡು ಬನ್ನಿ. ಎಲ್ಲವೂ ಸರಿಹೋಗುತ್ತದೆ" ಎಂದು ಆಶೀರ್ವಾದಮಾಡಿ ಕಳುಹಿಸಿಕೊಟ್ಟನು.

ವಿಶ್ವಾಮಿತ್ರನು ದೇಹದಲ್ಲಿರುವ ಪೃಥ್ವೀಭೂತವನ್ನೂ ಜಲಭೂತವನ್ನೂ ಅನುಸಂಧಾನಮಾಡಿ ಲಘ್ವೀಕರಣಮಾಡಿಕೊಂಡು ಉಡ್ಡೀನಮಾಡಿ ಆಕಾಶಮಾರ್ಗದಲ್ಲಿ ಹೊರಟಿದ್ದಾನೆ. ಆತನಿಗೆ ವಾಮದೇವನ ಆಶ್ರಮಕ್ಕೆ ಹೋಗ

ಬೇಕೆಂಬುದು ಸಂಕಲ್ಪ. ಆದರೆ ಪ್ರಬಲವಾಗಿದ್ದರೂ ಹಿಂಸಕವಲ್ಲದ ವಾತ ವೊಂದು ಎದ್ದು ಶರದಭ್ರವನ್ನು ಕರೆದುಕೊಂಡು ಹೋಗುವಷ್ಟು ಸುಖವಾಗಿ ಆತನನ್ನು ಕರೆದುಕೊಂಡು ಹೋಗಿ ಒಂದು ಆಶ್ರಮದಲ್ಲಿ ಇಳಿಸಿದೆ. ವಾಕ್ಪೂರ್ವ ವಾಗಿಯಲ್ಲದಿದ್ದರೂ ಇಲ್ಲಿ ಇಳಿಯಬೇಕು ಎಂದು ನಮ್ರನಾಗಿ ಭಂಗಿಯಿಂದ ಮುದ್ರೆಯಿಂದ ಸೂಚಿಸುವ ವಿನಯ ಗೌರವ ನಮ್ರನಾದ ಮಿತ್ರನಂತೆ, ಆ ವಾಯು ತನ್ನ ಸ್ಪರ್ಶದಿಂದಲೇ ಆ ಮುನೀಂದ್ರನಿಗೆ ಅರಿಕೆಯನ್ನು ಕೊಟ್ಟಿದೆ. ಆತನೂ ಗತಿಸ್ತಂಭನಮಾಡಿ ಅಲ್ಲಿ ಇಳಿಯುತ್ತಾನೆ. ತಿರುಗಿದರೆ ವೇದಘೋಷ ಮಾಡುತ್ತಾ ವಾನಪ್ರಸ್ಥನೊಬ್ಬನು ಸಸ್ತ್ರೀಕನಾಗಿ ಬರುತ್ತಿದ್ದಾನೆ.

ಆಗಂತುಕನು ಬಳಿಗೆ ಬಂದು ಅರ್ಘ್ಯಪಾದ್ಯಗಳನ್ನು ಒಪ್ಪಿಸಿ "ಮುನೀಂದ್ರರು ದಯಮಾಡಿ ನಮ್ಮ ಆಶ್ರಮದ ಬಳಿಗೆ ಬಂದು ಮಧುಪರ್ಕ ವನ್ನು ಗ್ರಹಿಸುವ ಕೃಪೆಮಾಡಬೇಕು" ಎಂದು ಪ್ರಾರ್ಥಿಸಿದನು. ವಿಶ್ವಾಮಿತ್ರನು ಆಹ್ವಾನವನ್ನು ಅಂಗೀಕರಿಸಿ ಆತನ ಜೊತೆಯಲ್ಲಿ ಹೊರಟು, ಆತನಾರೆಂದು ವಿಚಾರಿಸಿದನು. ಆತನು ಪುರೂರವ. ಆತನ ಜೊತೆಯಲ್ಲಿರುವಾಕೆಯು ಔಶೀನರಿ. ಈತನು ಬರುವ ವಿಚಾರ ತಿಳಿದುದು ಅಗ್ನಿದೇವನಿಂದ. ಆತ ನಪ್ಪಣೆಯಂತೆ ಈತನಿಗೆ ಮಧುಪರ್ಕವನ್ನೊಪ್ಪಿಸಲು ಆತನು ಬಂದಿರುವುದು.

ಮಧುಪರ್ಕ ಸಮರ್ಪಣವಾಯಿತು: "ಮುನೀಂದ್ರರು ಮನ್ನಿಸಬೇಕು. ಮಧುಪರ್ಕದ ಸಮಯದಲ್ಲಿ ತಮಗೆ ಒಪ್ಪಿಸಲು ನಮ್ಮಲ್ಲಿ ಗೋವಿಲ್ಲ. ಅದ ರಿಂದ ಅಗ್ನಿದೇವನ ಅಪ್ಪಣೆಯಂತೆ ತಮಗೆ ಸ್ಥಾಲೀ ಪಾಕವಿದ್ಯೆಯನ್ನು ಒಪ್ಪಿಸು ವೆನು. ಅದನ್ನು ಸ್ವೀಕರಿಸಿ ನಮ್ಮನ್ನು ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿ ದನು. ವಿಶ್ವಾಮಿತ್ರನು ಆಗಲೆಂದು ಒಪ್ಪಿಕೊಂಡು ಆ ವಿದ್ಯೆಯ ಪೂರ್ವೋತ್ತರ ಗಳನ್ನೂ ಅದು ಬಂದ ರೀತಿಯನ್ನೂ ಕೇಳಿದನು.

ಪುರೂರವನು ಹೇಳಿದನು: "ಮುನೀಂದ್ರರು ಕೇಳಬೇಕು. ನಡೆದು ದನ್ನು ಹೇಳುವೆನು. ಅದು ಆತ್ಮಕಥೆಯಾದರೂ ಅಲ್ಲಿ ಅಹಂಭಾವನೆಯಿಲ್ಲ ವಾಗಿ ನಾನು ನಾನು ಎಂದು ಬಂದರೂ ಅದನ್ನು ಸಹಿಸಿಕೊಳ್ಳಿ. ನಾನೊಮ್ಮೆ ಊರ್ವಶಿಯೆಂಬ ದಿವ್ಯಸ್ತ್ರೀಯಲ್ಲಿ ಅನುರಕ್ತನಾದೆನು. ಆಕೆಯೂ ನನ್ನಲ್ಲಿ ಭಾವವಿಟ್ಟು ಗೌರವಿಸಿದಳು. ಈಕೆಯ ಅಪ್ಪಣೆಯಿಂದ ನಾವಿಬ್ಬರೂ ಪತಿಪತ್ನಿ

ಯರಾದೆವು. ದೇವಲೋಕವನ್ನು ಬಿಟ್ಟು ಆಕೆಯು ಭೂಲೋಕದಲ್ಲಿ ಇರುವುದು ಗಂಧರ್ವರಿಗೆ ಸಮ್ಮತವಾಗದೆ ಆಕೆಯೊಡನೆ ನಾನು ಮಾಡಿಕೊಂಡಿದ್ದ ಸಮಯವು ತಪ್ಪುವಂತೆ ಮಾಡಿ ಆಕೆಯನ್ನು ಅವರು ಕರೆದುಕೊಂಡು ಹೋದರು. ಮತ್ತೆ ಬಹುವಾಗಿ ಅಲೆದು ಕೊನೆಗೆ ಆಕೆಯನ್ನು ಕಂಡು ಪ್ರಾರ್ಥಿಸಿಕೊಳ್ಳಲು, ಆಕೆಯು ಗಂಧರ್ವಹೋಮವನ್ನು ಮಾಡಿ ಸಕಾಮನಾಗೆಂದು ಅನುಗ್ರಹಿಸಿದಳು. ಅದರಂತೆ ಗಂಧರ್ವರ ಅನುಗ್ರಹವನ್ನು ಸಂಪಾದಿಸಿಕೊಳ್ಳಲು ಅವರು ಈ ಸ್ಥಾಲೀಪಾಕವನ್ನು ಕರುಣಿಸಿದರು. ಅಧಿಯಜ್ಞವಾದಾಗ ಈ ಸ್ಥಾಲೀಪಾಕವು ವಿಕ್ಷೇಪದಿಂದ ವಿಮುಖವಾಗಿರುವ ಪ್ರಾಣಾಪಾನಗಳನ್ನು ಶಾಂತಗೊಳಿಸಿ ಅಭಿಮುಖಮಾಡುವುದು. ಲೋಕದಲ್ಲಿ ಇದನ್ನು ಅಧಿಭೂತವಾಗಿ ಆಚರಿಸಿದರೆ ಪತಿಪತ್ನಿಯರ ಪ್ರೇಮವೂ ಆಯಸ್ಸೂ ದೃಢವಾಗುವುದು. ಅಧಿದೈವನಾಗಿ ಇದನ್ನು ಮಾಡಿದರೆ ಸ್ವರ್ಣವಿದ್ಯೆಯು ಲಭಿಸುವುದು. ಸೃಷ್ಟಿಕಾಮನಾಗಿ ಅಧ್ಯಾತ್ಮವಾಗಿ ಇದನ್ನು ಆಚರಿಸಿದರೆ ಇಷ್ಟ ಪ್ರಜೆಯು ಲಭಿಸುವುದು. ಇದನ್ನು ದೇವತೆಗಳೂ ಋಷಿಗಳೂ ತಮ್ಮ ಸಭೆಯಲ್ಲಿ ಅನುಮೋದನ ಮಾಡಿದಾಗ ಅಗ್ನಿದೇವನ ದಯೆಯಿಂದ ಇದು ರೂಪಕವಾಗಿ ಹದಿನೆಂಟು ಮಂತ್ರಗಳ ಉರ್ವಶೀಪುರೂರವ ಸೂಕ್ತವಾಯಿತು."

ವಿಶ್ವಾಮಿತ್ರನು ಅದನ್ನು ಕೇಳಿ ಬಹು ಸಂತೋಷಪಟ್ಟನು. ಪ್ರಾಣದೇವನ ಮಾತು ನೆನೆಪಾಗಿ "ದೇವತೆಗಳು ಏನೇನು ವಿಚಿತ್ರ ಮಾಡುವರೋ? ಅಂತೂ ಬಿಟ್ಟ ಕಣ್ಣಿನ ಕಾವಲಾಗಿಲ್ಲದಿದ್ದರೆ ಕೆಟ್ಟೆವು." ಎಂದುಕೊಂಡು, ಪುರೂರವನನ್ನು ಕುರಿತು "ಎಲೈ ರಾಜರ್ಷಿಯೆ, ನೀನು ಶ್ರಮಪಟ್ಟರೂ ದಂಪತಿಗಳ ಪ್ರೇಮವನ್ನು ದೃಢಪಡಿಸಿ ಲೋಕವನ್ನು ಉದ್ಧರಿಸುವ ಅಗ್ನಿ ವಿದ್ಯೆಯೊಂದನ್ನು ತಂದುಕೊಟ್ಟು ಲೋಕೋಪಕಾರಿಯಾದೆ. ಈ ನಿನ್ನ ಉಪಕಾರವನ್ನು ಲೋಕಲೋಕಗಳೂ ಚಿರಕಾಲ ಸ್ಮರಿಸುವುವು" ಎಂದು ಆನಂದವಾಗಿ ಹೊಗಳಿದನು.

ಪುರೂರವನು "ವಿಶ್ವಾಮಿತ್ರ, ನಮ್ಮದಿರಲಿ. ನೀನೆಂತಹ ಪುಣ್ಯವಂತನಿರಬೇಕು. 'ಅಗ್ನಿಹೋತ್ರಿಯು ಬರುತ್ತಿದ್ದಾನೆ. ಹೋಗಿ ಆತನನ್ನು ದರ್ಶನಮಾಡಿ ಕರೆದುಕೊಂಡು ಬಂದು ನಿನ್ನಲ್ಲಿರುವ ಅಗ್ನಿವಿದ್ಯೆಯನ್ನು ಆತನಿಗೆ ಒಪ್ಪಿಸು' ಎಂದು ಅಗ್ನಿದೇವನೇ ಸಾಕ್ಷಾತ್ತಾಗಿ ಅಪ್ಪಣೆ ಮಾಡಿದನಲ್ಲ. ನಿನ್ನ ಭಾಗ್ಯವು ಎಂಥದು" ಎಂದು ಹೊಗಳಿದನು.

ವಿಶ್ವಾಮಿತ್ರನೂ ಎರಡು ಮೂರುದಿನ ಅಲ್ಲಿದ್ದು ಆ ರಾಜರ್ಷಿವರ್ಯನ ಆತಿಥ್ಯವನ್ನು ಸ್ವೀಕರಿಸಿದನು. ಆತನಿಗೆ ಅಲ್ಲಿ ಆ ರಾಜರ್ಷಿ ದಂಪತಿಗಳ ಸನ್ನಿಧಿಯಲ್ಲಿದ್ದರೆ ದೇಹವು ಶಾಂತವಾಗಿರುವುದು : ಏಕಾಂತದಲ್ಲಿದ್ದರೆ ಶಕ್ತಿ ಕಿರಣಗಳನ್ನು ಚೆಲ್ಲುವುದು. ಅದನ್ನು ಕಂಡು ಆಶ್ಚರ್ಯವಾದರೂ ಆತನು ಅದೇಕೆ ಎಂದು ಹುಡುಕಲಿಲ್ಲ.

ಆತನು ಆ ಆಶ್ರಮದಲ್ಲಿರುವಾಗ ಅಲ್ಲಿಗೆ ಹಸ್ತಿನಾಪುರದಿಂದ ಸುದ್ದಿಯು ಬಂತು : " ದುಷ್ಯಂತನು ಕಣ್ವಾಶ್ರಮದಲ್ಲಿ ಅವರ ಸಾಕು ಮಗಳಾದ ಶಕುಂತಲೆಯನ್ನು ಮದುವೆಯಾದನು. ಆ ದಂಪತಿಗಳ ಹೊಟ್ಟೆಯಲ್ಲಿ ಚಕ್ರವರ್ತಿಯಾಗುವ ಭರತನೆಂಬ ಮಹಾಪುರುಷನು ಹುಟ್ಟಿರುವನು " ಎಂದು.

ಆ ಮಾತು ಕೇಳಿ ರಾಜರ್ಷಿ ದಂಪತಿಗಳು ಬಹು ಸಂತೋಷಪಟ್ಟರು. ವಿಶ್ವಾಮಿತ್ರನೂ ಆ ಸಂತೋಷದಲ್ಲಿ ಭಾಗಿಯಾದನು. ಆದರೂ ಆತನಿಗೆ ಸಂತೋಷ ದುಃಖ ಎರಡೂ ಅಲ್ಲದ ಇನ್ನೇನೋ ಒಂದು ಭಾವವಿತ್ತು. ಆತನಿಗೆ ಅಲ್ಲಿ ಇನ್ನೂ ಎರಡು ದಿನ ಇದ್ದು ಹೋಗೋಣ ಎಂದು ಒಂದು ಮನಸ್ಸು. ಆದರೂ ಏಕೋ ಏನೋ, ರಾಜಕಾರ್ಯವಿರುವವನಂತೆ ಅಲ್ಲಿಂದ ಹೊರಟುಬಿಟ್ಟನು.

---

## ಐವತ್ತನೆಯ ತರಂಗ

ವಿಶ್ವಾಮಿತ್ರನು ನೇರವಾಗಿ ವಾಮದೇವನ ಆಶ್ರಮಕ್ಕೆ ಬಂದನು. ಅಲ್ಲಿ ವಾಮದೇವನೂ ವಿಶ್ವಾಮಿತ್ರನನ್ನು ಎದುರು ನೋಡುತ್ತಿದ್ದಾನೆ. ಮಿತ್ರರಿಬ್ಬರೂ ಬಹು ಸಂತೋಷದಿಂದ ಒಬ್ಬರನ್ನೊಬ್ಬರು ಆಲಿಂಗಿಸಿದರು. ವಾಮದೇವನು ತನ್ನ ಮಿತ್ರನಿಗೆ ಅರ್ಘ್ಯಪಾದ್ಯಾದಿ ಕಾಲೋಚಿತವಾದ ಉಪಚಾರಗಳನ್ನೆಲ್ಲ ಮಾಡಿ " ವಿಶ್ವಾಮಿತ್ರ, ನೀನು ಸಾಮಾನ್ಯನಲ್ಲ ! ನಮ್ಮ ಅಗ್ನಿದೇವನನ್ನು ಕೂಡ ಬುಟ್ಟಿಗೆ ಹಾಕಿಬಿಟ್ಟಿದ್ದೀಯಲ್ಲ ! " ಎಂದನು.

ಅದು ವಿಶ್ವಾಮಿತ್ರನಿಗೆ ಅರ್ಥವಾಗಲಿಲ್ಲ. "ಇಲ್ಲವಲ್ಲ. ನಾನು ಅಗ್ನಿ ವಿದ್ಯೆಗೆ ಕೈಯಿಟ್ಟವನೇ ಅಲ್ಲ. ದಾರಿಯಲ್ಲಿ ಬರುತ್ತ ಪುರೂರವ ದಂಪತಿಗಳ

ಆಶ್ರಮದಲ್ಲಿ ತಂಗಬೇಕಾಯಿತು. ಅವರು ಬೇಕಾದ ಹಾಗೆ ಉಪಚಾರಮಾಡಿ ದರು. ಅಲ್ಲಿ ಆ ರಾಜರ್ಷಿಯು ತನಗೆ ಅಗ್ನಿದೇವನ ಅಪ್ಪಣೆಯಾಯಿತೆಂದು ಸ್ಥಾಲೀಪಾಕವನ್ನು ಕೊಟ್ಟನು. ಅಗ್ನಿಯು ಇನ್ನೊಬ್ಬರಿಗೆ ಒಲಿಯುವುದೂ ಉಂಟೆ? ಅದು ಏನಿದ್ದರೂ ನಿಮ್ಮ ಮೂರು ಕುಲದವರ ಸ್ವತ್ತು. ಭಾರತರು, ಭೃಗುಗಳು, ಭರದ್ವಾಜರು. ಮಿಕ್ಕವರಿಗೆ ಅಗ್ನಿಯು ದೊರೆತನೆಂದರೆ ಅದು ನಿಮ್ಮ ಅನುಗ್ರಹ. ನನಗೂ ಜಮದಗ್ನಿಯಿದ್ದಾಗ ಅಗ್ನಿವಿದ್ಯೆಯನ್ನು ಸಂಗ್ರ ಹಿಸಬೇಕೆಂಬ ಆಶೆಯಿತ್ತು. ಆದರೆ ಆ ವಂಶಕ್ಕೆ ನಾವು ಹೆಣ್ಣುಕೊಟ್ಟಿದ್ದೇವೆ. ಅವರಿಂದ ಏನೂ ತೆಗೆದುಕೊಳ್ಳಬಾರದು ಎಂದು ನಾನು ಆತನನ್ನು ಕೇಳಲಿಲ್ಲ. ಇದರಮೇಲೆ ಒಂದು ವೇಳೆ, ಏನೋ ಕಳ್ಳದಾರಿ ಹಿಡಿದು ನಾವು ಅಗ್ನಿಯನ್ನು ಸಾಧಿಸಿದೆವು. ನಿಮ್ಮ ಗಂಟೇನು ಹೋಯಿತು? ಅಗ್ನಿಪ್ರಸಾದವು ನಮಗೆ ಲಭಿಸಿದರೆ ನಿಮಗೆ ಹೋದುದೇನು?" ಎಂದನು.

ವಾಮದೇವನು ನಕ್ಕು "ಅಲ್ಲಯ್ಯಾ, ನೀನು ಬರುವುದಕ್ಕೆ ಮುಂಚೆಯೇ ಅಗ್ನಿದೇವನು ಪ್ರತ್ಯಕ್ಷನಾಗಿ ವೈಶ್ವಾನರ ವಿದ್ಯೆಯನ್ನು ಅವನಿಗೆ ಕೊಡು ಎಂದು ಹೇಳಿದನಲ್ಲ! ನನ್ನನ್ನು ಕೇಳಿದ್ದರೆ ನಾನೇ ಕೊಡುತ್ತಿರಲಿಲ್ಲವೆ? ಇನ್ನೇನಿಲ್ಲ ದಿದ್ದರೂ ನಮ್ಮ ಗುರುಗಳ ಕಷ್ಟದಲ್ಲಿ ಸಹಾಯ ಮಾಡಿದವನೆಂದಾದರೂ ನಾನು ನಿನಗೆ ಆ ವಿದ್ಯೆಯನ್ನು ಕೊಡುತ್ತಿರಲಿಲ್ಲವೆ?" ಎಂದನು.

ವಿಶ್ವಾಮಿತ್ರನಿಗೆ ಆಶ್ಚರ್ಯವಾಯಿತು: ಆತನಿಗೆ ವಾಮದೇವನ ಗುರು ಗಳು ಯಾರು ಎಂಬುದು ಗೊತ್ತಿಲ್ಲ: ಕೇಳುವ ಪ್ರಸಂಗವೂ ಬಂದಿರಲಿಲ್ಲ. ಆತನ ಮುಖದ ಆಶ್ಚರ್ಯಮುದ್ರೆಯನ್ನು ಕಂಡು ವಾಮದೇವನೇ ಕೇಳಿದನು: "ಏಕೆ, ನಮ್ಮ ಗುರುಗಳು ಎಂದರೆ ಆಶ್ಚರ್ಯಪಡುತ್ತಿದ್ದೀಯೆ? ನಮ್ಮ ಗುರುಗಳನ್ನು ಕಾಣೆಯಾ? ನೀನು ಯಾರನ್ನು ಸರಸ್ವತೀ ನದಿಯಲ್ಲಿ ಕೊಚ್ಚಿಸಿ ದುದು? ಅದೂ ಮರೆತುಹೋಯಿತೇನು?"

ವಿಶ್ವಾಮಿತ್ರನು ನಂಬುವುದು ಕಷ್ಟವಾಯಿತು: ಹಿಂದೆ ನಡೆದುದೆಲ್ಲವೂ ಒಮ್ಮೆ ಮಾನಸ ಭಿತ್ತಿಯಮೇಲೆ ಕಂಡು ಮಾಯವಾಯಿತು. ತಾನು ವಾಮ ದೇವನಿಂದ ರುದ್ರನನ್ನು ಪಡೆದುದು: ರುದ್ರನ ಅನುಗ್ರಹದಿಂದ ತಾನು ಅಸ್ತ್ರ ಗ್ರಾಮವನ್ನು ಸಂಪಾದಿಸಿದುದು: ಆ ಅಸ್ತ್ರಗಳನ್ನು ತಾನು ಆಶ್ರಮದಲ್ಲಿ ಉಪ ಯೋಗಿಸಿದುದು: ಅಲ್ಲಿ ತಾನು ತೇಜೋಭೂತನಾಗಿ ಬಿದ್ದಾಗ ವಾಮದೇವನು

ತನ್ನನ್ನು ತಂದು ಉಪಚರಿಸಿದುದು : ಮುಂದೆ ತ್ರಿಶಂಕುವಿನ ಪ್ರಸಂಗ : ಎಲ್ಲವೂ ನೆನೆಪಾಗಿ, "ಹಾಗಾದರೆ, ವಸಿಷ್ಠರೇ ನಿನ್ನ ಗುರುಗಳು ?" ಎಂದನು.

ವಾಮದೇವನು ಸಹಜವಾಗಿ "ಹೌದು. ನೀನು ಅದನ್ನು ಕಾಣೆಯಾ? ಇನ್ನೂ ಒಂದು ಹೆಜ್ಜೆ ಹೋಗಿ ಹೇಳುವೆನು ಕೇಳು. ನೀನು ಆಶ್ರಮದಲ್ಲಿ ಅಷ್ಟೆಲ್ಲಾ ಮಾಡಿ ಹೊರಟು ಹೋದೆಯಲ್ಲ. ಆಗ ಅವರೇ ನನ್ನನ್ನು ಕರೆದು, 'ನೀನು ಬೇರೊಂದುಕಡೆ ಆಶ್ರಮ ಮಾಡಿಕೊಂಡಿರು. ಕೌಶಿಕನು ಅಲ್ಲಿಗೆ ಬರುವನು. ಆತನಿಗೆ ರುದ್ರಾನುಗ್ರಹವು ಲಭಿಸುವ ಹಾಗೆ ಮಾಡಿಕೊಡು.' ಎಂದು ಹೇಳಿ ನನಗೆ ಇಷ್ಟವಿಲ್ಲದಿದ್ದರೂ ಅವರೇ ನನ್ನನ್ನು ಕಳುಹಿಸಿದುದು. ನೀನು ಶತ್ರುಪಕ್ಷ, ನಮ್ಮ ಆಶ್ರಮವನ್ನು ಧ್ವಂಸಮಾಡುತ್ತೀಯೆ ಎಂದು ತಿಳಿದಿದ್ದಾಗಲೇ ನಿನಗೆ ಗುರುಗಳ ಅಪ್ಪಣೆಯೆಂದು ರುದ್ರ ವಿದ್ಯೆಯನ್ನು ಕೊಟ್ಟವನು, ಈಗ, ನಾವಿಬ್ಬರೂ ಮಿತ್ರರಾಗಿದ್ದೇವೆ; ನಮ್ಮ ಗುರುಗಳಿಗೆ ಅಪಾರವಾದ ಉಪಕಾರ ಮಾಡಿದ್ದೀಯೆ; ಹೀಗಿರಲು ನಿನಗೆ ವೈಶ್ವಾನರ ವಿದ್ಯೆ ಕೊಡುವುದಿಲ್ಲವೆ? ಎಂದು ಕೇಳಿದೆ. ಅಷ್ಟೇ!"

ವಿಶ್ವಾಮಿತ್ರನಿಗೆ ವಸಿಷ್ಠನೆಂಬ ಪರ್ವತದ ಮುಂದೆ ತಾನೊಂದು ಸಾಸಿವೆಯ ಕಾಳೂ ಅಲ್ಲ ಎನ್ನಿಸಿತು. ಇನ್ನು ಆತನ ಹಾಗೆ ಬ್ರಹರ್ಷಿಯಾಗುವುದು ಸಾಧ್ಯವೇ ಎಂದು ಸಂದೇಹ ಮೂಡಿತು. ವಸಿಷ್ಠಸಮನಾಗುವುದು ಅಸಾಧ್ಯ ಎಂದು ನಂಬಿಕೆಯಾಯಿತು. ಹಾಗೆ ತಾನು ಆ ನಿರಾಶೆಯಲ್ಲಿ ಕರಗಿ ಹೋಗುತ್ತಿರುವಾಗ ವಾಮದೇವನ ಮಾತುಗಳು ಒಂದೂ ಅರ್ಥವಾಗದೆ 'ಆಂ' ಎಂದನು.

ವಾಮದೇವನು ಆತನ ಮನಃಕ್ಷೋಭವನ್ನು ಕಂಡು "ಏನು, ವಸಿಷ್ಠರ ಸ್ಮರಣೆಯಾಗುತ್ತಲೂ ಮತ್ತೆ ಎಲ್ಲವೂ ಮರುಕಳಿಸಿತೋ ?" ಎಂದನು. ಆ ಚುಚ್ಚು ಮಾತು ವಿಶ್ವಾಮಿತ್ರನನ್ನು ಬಹಿರ್ಮುಖನನ್ನು ಮಾಡಿತು. ಆತನು ಗಂಭೀರವಾಗಿ, ಅದಲ್ಲ, ವಾಮದೇವ, ಕೌಶಿಕನು ಸಂಪೂರ್ಣವಾಗಿ ಸತ್ತು ಇಂದು ವಿಶ್ವಾಮಿತ್ರನ ಅವತಾರವಾಗಿದೆ. ಅದರಿಂದ ದ್ವೇಷವಿಲ್ಲ. ಆತನ ಹಿರಿಯತನವೆಷ್ಟು ? ನನ್ನ ಕಿರಿಯತನವೆಷ್ಟು ? ಎಂಬುದು ಇವೊತ್ತು ತಿಳಿಯಿತು. ಇನ್ನು ಆತನಿಗೆ ಸುಮನಾಗುವುದು ಎಂದರೆ ಭೂಮಿಯನ್ನು ಸುತ್ತಿ ಕಂಕುಳಲ್ಲಿ

ಇಟ್ಟುಕೊಳ್ಳುವೆನೆಂದಂತೆಯೇ !" ಎಂದು ಏನೋ ನಿರಾಶೆಯಿಂದ ಎಳೆದೆಳೆದು ಹೇಳಿದನು.

ವಾಮದೇವನು ನಕ್ಕನು, "ಹಾಲು ಉಕ್ಕಿದಹಾಗೆ ಅಂತಃಕರಣವು ಉಕ್ಕುವುದು. ಆ ಉಕ್ಕುವಿಗೆ ಅಭಿಮತ ವಸ್ತು ವಿಷಯವಾಗಿದ್ದರೆ ರಾಗವಾಗುವುದು: ಅನ್ಯಥಾ ಆಗಿದ್ದರೆ ದ್ವೇಷವಾಗುವುದು. ಹೀಗೆ ಸಹಜವಾಗಿ ವಿಜೃಂಭಿಸುವ ರಾಗದ್ವೇಷಗಳಿಂದ ಮಹಾತ್ಮರಿಗೆ ಸುಖ ದುಃಖಗಳಾಗುವುವು ಎಂದು ಭಾವಿಸಿರುವೆಯಾ? ಅವರು ಅದನ್ನು ಪರ್ವಕಾಲದಲ್ಲಿ ಸಮುದ್ರವು ಉಕ್ಕುವಹಾಗೆ ಎಂದುಕೊಳ್ಳುವರು. ನಮ್ಮ ಗುರುಗಳು ನೀನೇನು ಮಾಡುವೆಯೆಂಬುದನ್ನು ಕಂಡಿದ್ದರು. ಅವರಿಗೆ ಗೊತ್ತಿತ್ತು. ಅವರು ಅದರಿಂದ ವಿಕಾರವನ್ನು ಪಡೆಯಲಿಲ್ಲ. ಉಕ್ಕುವ ಸಮುದ್ರದ ಪಕ್ಕದಲ್ಲಿರುವ ಬಂಡೆಯು ಸಮುದ್ರದ ಏರು ಇಳಿತಗಳಿಂದ ಹೇಗೆ ಯಾವುದೊಂದೂ ವಿಕಾರವನ್ನೂ ಪಡೆಯುವುದಿಲ್ಲವೋ ಅದರಂತೆಯೇ ಮಹಾತ್ಮರು ಸುಖ ದುಃಖಗಳಲ್ಲಿ ಸಮರು."

ವಿಶ್ವಾಮಿತ್ರನು ಕೇಳಿದನು: "ಆಯಿತು, ವಾಮದೇವ, ವಸಿಷ್ಠರು ಸುಖ ದುಃಖ ಸಮರಾದರೆ, ಆ ಶೋಕವೇಕೆ ಅವರನ್ನು ಅಷ್ಟು ಗೋಳುಗುಟ್ಟಿಸಿತು?"

"ಅದೇ! ಅದು ಅವರ ದುಃಖವಲ್ಲ. ಯುಗಸಂಧಿಕಾಲದಲ್ಲಿ ಪಂಚಮಹಾಭೂತಗಳ ಶಕ್ತಿಯು ಕ್ಷರಣವಾಗಿ ಅವು ದುಃಖಿಸುವುವು. ಆ ದುಃಖವನ್ನು ಕೃತಯುಗದಲ್ಲಿ ಯಾರಾದರೊಬ್ಬರು ಅನುಭವಿಸುವರು. ಆ ಮಹಾಭೂತಗಳ ದುಃಖವನ್ನು ವಹಿಸಿಕೊಳ್ಳಲು ಇನ್ನು ಯಾರೂ ಶಕ್ತರಲ್ಲವೆಂದು ಕಲಿದೇವನು ಸ್ವಯಂ ಬಂದು ವಸಿಷ್ಠರನ್ನು ಪ್ರಾರ್ಥಿಸಿದನು. ಅವರು ಆಗಲಿ, ವಹಿಸಿಕೊಳ್ಳುತ್ತೇನೆ ಎಂದರು. ಪುತ್ರಶೋಕ ರೂಪವಾಗಿ ಅದು ಬಂತು. ಅವರು ಅದನ್ನು ಆ ರೂಪವಾಗಿಯೇ ಅನುಭವಿಸಿದರು. ಅವರು ಬೇಕೆಂದಿದ್ದರೆ ಅದಷ್ಟನ್ನೂ ಸುಖರೂಪವಾಗಿಯೇ ಅನುಭವಿಸಬಹುದಾಗಿತ್ತು. ಆದರೆ ವರ ಕೊಟ್ಟಿದ್ದರಾಗಿ, ಅದನ್ನು ದುಃಖವಾಗಿ ಅನುಭವಿಸಿದರು."

"ದುಃಖವನ್ನು ಸುಖವಾಗಿ ಅನುಭವಿಸುವುದು ಹೇಗೆ?" "ಅಯ್ಯೋ! ಇದೊಂದು ದೊಡ್ಡ ವಿಷಯವೇ ವಿಶ್ವಾಮಿತ್ರ? ಈಗ ನಾನು ಇಲ್ಲಿ ಈ ಶಿಲಾಸನದಲ್ಲಿ ಕುಳಿತಿದ್ದೇನೆ. ಕೆಳಗೆ ಬಿದ್ದೆ ಎಂದುಕೋ. ಭೂಮಿಗೂ ನನ್ನ ದೇಹಕ್ಕೂ

ಸಂಬಂಧವಾದಾಗ ಭೂಮಿಯ ಕಾಠಿಣ್ಯ ಬಲವಾಗಿದ್ದು ಅದನ್ನು ದೇಹವು ತಡೆಯಲಾರದೆ ಹೋದರೆ, ಇಲ್ಲಿ ನೋವಾಗಿ ದೇಹಕ್ಕೆ ದುಃಖವಾಗುವುದು. ದೇಹದಲ್ಲಿ ಆ ಭೂಮಿಗಿಂತ ಹೆಚ್ಚು ಕಾಠಿಣ್ಯವಿದ್ದರೆ, ಅಥವಾ ಭೂಮಿಯಲ್ಲಿ ದೇಹವು ಸಹಿಸಬಲ್ಲಷ್ಟೇ ಕಾಠಿಣ್ಯವು ಇದ್ದರೆ, ಅಥವಾ ಭೂಮಿಯಲ್ಲಿ ಮೃದುತ್ವ ವಿದ್ದರೆ, ಆಗ ದೇಹಕ್ಕೆ ನೋವೆಲ್ಲಿಯದು? ಹತ್ತಿಯ ರಾಶಿಯ ಮೇಲೆ ಬಿದ್ದರೆ, ಮರಳುರಾಶಿಯ ಮೇಲೆ ಬಿದ್ದರೆ, ನಿನಗೆ ನೋವಾಗುವುದೇನು? ಹಾಗೆ, ದುಃಖವು ಬರುವುದು ಲೋಪದಿಂದ, ದೇಹದಲ್ಲಿ ಸಮವಾಗಿರುವ ವ್ಯಾನದ ಒತ್ತಡವು ಹೆಚ್ಚು ಕಡಿಮೆಯಾಗುವುದರಿಂದ. ಆ ವ್ಯಾನವನ್ನು ಅನು ಸಂಧಾನಮಾಡಬಲ್ಲವನು, ಧ್ಯಾನದಲ್ಲಿದ್ದು ತನ್ನ ದೇಹ ಕಾಠಿಣ್ಯವನ್ನು ಹೆಚ್ಚಿಸಿ ಕೊಂಡರೆ ಆಯಿತು. ಬಂಡೆಯ ಮೇಲೆ ಬಿದ್ದರೂ ನೋವಾಗುವುದಿಲ್ಲ. ಹಾಗೆಯೇ ಇಂದ್ರಿಯಗಳಿಗೆ ಸಹನಶಕ್ತಿಯು ಅಷ್ಟಿದೆ. ಅದನ್ನು ಹೆಚ್ಚಿಸಿ ಕೊಂಡರೆ ದುಃಖದ ಆವೇಗವು ಕಡಿಮೆಯಾಗುವುದು. ಜೊತೆಗೆ ದುಃಖವನ್ನು ಮಾರುವುದೂ ಒಂದು ವಿದ್ಯೆಯಿದೆ."

ವಿಶ್ವಾಮಿತ್ರನಿಗೆ ಅದನ್ನು ಕೇಳಿ ಇನ್ನೂ ಆಶ್ಚರ್ಯವಾಯಿತು. "ಏನು! ದುಃಖವನ್ನು ಮಾರುವುದೇ?" ಎಂದನು. ವಾಮದೇವನು ಮೊದಲಿನಂತೆಯೇ ಗಂಭೀರನಾಗಿ, ಧೀರವೃತ್ತಿಯಿಂದ ಹೇಳಿದನು: "ಹೌದು, ನಿನ್ನ ಮನೆಯಲ್ಲಿ ರುವ ಹಸುವಿನ ಮೇಲೆ ನಿನಗೆ ಅಭಿಮಾನವಿದೆ. ಅದನ್ನು ನಾನು ಕ್ರಯ ಮಾಡಿದಾಗ ನೀನು ಕೊಡುತ್ತೀಯೆ. ಕೊಡುವಾಗ ನಿನಗೆ ಸಂಕಟವಾಗುವು ದಿಲ್ಲವೇ? ಆದರೆ, ಅದಕ್ಕೆ ತಕ್ಕ ಬೆಲೆಯು ನಿನಗೆ ಬಂತು ಎಂದು ಗೊತ್ತಿದ್ದರೆ ನಿನಗೆ ಆ ಮಾರಾಟದಿಂದ ದುಃಖವಾಗುವುದಿಲ್ಲ. ಹಾಗೆಯೇ ನಿನಗೆ ಬೇಡ ವಾದ ವಸ್ತುವು ಹೋದರೂ ನಿನಗೆ ದುಃಖವಾಗುವುದಿಲ್ಲ. ಅದರಿಂದ ನಷ್ಟ ವಾದ ವಸ್ತುವಿನ ಗುಣವನ್ನು ಚಿಂತಿಸದೆ, ದೋಷವನ್ನೇ ಎಣಿಸಿದರೆ, ಹೋದುದು ಕ್ಷೇಮವಾಯಿತು ಎಂದು ಸುಖವಾಗುವುದು. ಇದೇ ನಾನು ಹೇಳಿದ ವಿನಿಮಯ" ಎಂದನು.

ರಾಜ್ಯವನ್ನು ಆಳುತ್ತಿದ್ದ ವಿಶ್ವಾಮಿತ್ರನಿಗೆ ಈ ವಿನಿಮಯ, ಈ ಮಾರಾಟ ಹೊಸದಲ್ಲ. ಆದರೆ ಆತನು ಅದನ್ನು ಸ್ವಂತಕ್ಕೆ ಉಪಯೋಗಿಸು ವುದನ್ನು ಕುರಿತು ಯೋಚಿಸಿರಲಿಲ್ಲ. ಮುಂದೆ ತಾನು ಅನುಭವಿಸಬೇಕಾದ

ದುಃಖವನ್ನು ಸುಖವನ್ನು ಮಾಡಿಕೊಳ್ಳುವ ಸಾಧನವು ಇಲ್ಲಿದೆ ಎಂಬುದು ಆತನಿಗೆ ಕಂಡಂತಾಯಿತು.

ವಾಮದೇವನು ಹೀಗೆಯೇ ಕಥಾಲಾಪಗಳಲ್ಲಿರುವಾಗ ಸಂಜೆಯಾಯಿತು. ಅದೇನದು ಹಿಮಾಲಯದ ಸಂಜೆ. ಇನ್ನು ಸೂರ್ಯಾಸ್ತಮಯವಾಗುವುದಕ್ಕೆ ಅರ್ಧ ಯಾಮವಿದೆ ಎನ್ನುವಾಗಲೇ ಚಳಿಗಾರಂಭ: ಕಾವಳಕ್ಕೆ ಮೊದಲು.

ಮಿತ್ರರಿಬ್ಬರೂ ಸಂಧ್ಯಾಕರ್ಮವನ್ನು ಮುಗಿಸಿ ಹಾಗೆಯೇ ಮಾತನಾಡುತ್ತಿದ್ದು ನಿದ್ದೆಯನ್ನಂಗೀಕರಿಸಿದರು. ವಿಶ್ವಾಮಿತ್ರನಿಗೆ ರಾತ್ರಿಯೆಲ್ಲ ನಿದ್ದೆಯಿಲ್ಲ. ವಶಿಷ್ಠರದೇ ಯೋಚನೆ.

---

## ಐವತ್ತೊಂದನೆಯ ತರಂಗ

ಮರುದಿನ ಪ್ರಾತಃಕರ್ಮಗಳೆಲ್ಲ ತೀರಿ ವಿಶ್ವಾಮಿತ್ರನು ತೂಷ್ಣೀಂ ಕುಳಿತಿರುವಾಗ ವಾಮದೇವನು ಅಗ್ನಿಗೃಹಕ್ಕೆ ಕರೆದನು. "ಮುನೀಂದ್ರರು ದಯಮಾಡಿಸಬೇಕು. ಅಗ್ನಿದೇವನ ಅಪ್ಪಣೆಯಾಗಿದೆ. ತಾವು ವೈಶ್ವಾನರ ವಿದ್ಯೆಯನ್ನು ಸ್ವೀಕರಿಸಬೇಕು" ಎಂದನು.

ವಿಶ್ವಾಮಿತ್ರನು ಆ ಮರ್ಯಾದೆಯ ಮಾತುಗಳನ್ನು ಕೇಳಿ ನಗುತ್ತಾ "ಆಗಬಹುದು. ವಾಮದೇವ ಮಹರ್ಷಿಗಳು ಅನುಗ್ರಹಮಾಡಿ ಅಗ್ನಿರಹಸ್ಯವನ್ನು ಬೋಧಿಸಬೇಕು. ಮೈತ್ರಿಯಿಂದ ಆಗ ರುದ್ರವಿದ್ಯೆಯನ್ನು ಕೊಟ್ಟು ಸಾತ್ವಿಕನನ್ನು ಮಾಡಿದಿರಿ. ಈಗ ಈ ವೈಶ್ವಾನರವನ್ನು ಅನುಗ್ರಹಿಸಿ ನನ್ನನ್ನು ಬ್ರಾಹ್ಮಣನನ್ನು ಮಾಡಬೇಕು" ಎಂದನು.

"ನೀನು ಬ್ರಾಹ್ಮಣನಲ್ಲ ಎಂದು ನಿನಗೆ ಯಾರಾದರೂ ಹೇಳಿದರೇನು?"

ವಿಶ್ವಾಮಿತ್ರನು "ಆ ವಿಷಯವನ್ನು ಮತ್ತೆ ಪ್ರಸ್ತಾಪಿಸುವೆನು. ಈಗ ತಾವು ಅಭಿಮುಖರಾಗಿದ್ದೀರಿ. ತಾವೇ ಅಗ್ನಿಯಾಗಿ ಕುಳಿತು ನನಗೆ ವೈಶ್ವಾನರ ವಿದ್ಯೆಯನ್ನು ಕರುಣಿಸೋಣವಾಗಲಿ" ಎಂದು ಕೈಮುಗಿದನು.

ವಾಮದೇವನು ಸಮಾಹಿತಚಿತ್ತನಾಗಿ ಕುಳಿತನು: ಹೋಮಮಾಡಿ ಅಗ್ನಿದೇವನ ಅಪ್ಪಣೆ ಪಡೆದು ವೈಶ್ವಾನರ ವಿದ್ಯೆಯನ್ನು ದಾನಮಾಡಿದನು. ವಿಶ್ವಾಮಿತ್ರನೂ ಗ್ರಹಿಸಿದನು. ಅಗ್ನಿದೇವನ ಅನುಗ್ರಹದಿಂದ ಆ ವಿದ್ಯೆಯು

ಆತನಿಗೂ ಒಲಿಯಿತು. ಆತನಿಗೆ ಅಗ್ನಿಸಾಕ್ಷಾತ್ಕಾರವಾಯಿತು: ಆನಂದದಲ್ಲಿ ಮೈಮರೆತುಹೋಯಿತು. ಆ ಯಜ್ಞೇಶ್ವರನ ದಯೆಯೇ ವಾಕ್ಕಾಗಿ ಪ್ರವಹಿಸಿ ಮಂತ್ರವಾಯಿತು. ವೈಶ್ವಾನರ ಸೂಕ್ತವೊಂದು, ಒಂಬತ್ತು ಮಂತ್ರಗಳಾಗಿ, ಗಿಡದಲ್ಲಿ ಕಾಯುವ ಹೂವಿನಷ್ಟು ಸಹಜವಾಗಿ ಸುಂದರವಾಗಿ ಪ್ರಕಟ ವಾಯಿತು.

ವಾಮದೇವನಿಗೆ ಆಶ್ಚರ್ಯವಾಯಿತು. ಭರತರ ಕುಲದೈವವೂ ತನ್ನ ಇಷ್ಟದೈವವೂ ಆದ ಯಜ್ಞೇಶ್ವರನು ತನ್ನ ಮಿತ್ರನಿಗೂ ಒಲಿದನೆಂದು ಆತನಿ ಗಾದ ಸಂತೋಷಕ್ಕೆ ಪಾರವೇ ಇಲ್ಲ. ಬಹು ರಹಸ್ಯವಾಗಿ ಜಾತಶುದ್ಧರೆಂದು ಪ್ರಸಿದ್ಧರಾದ ಬ್ರಾಹ್ಮಣರಿಗೆ ಮಾತ್ರವೇ ತಿಳಿದಿದ್ದ ಈ ವಿದ್ಯೆಯು ಉಪದೇಶ ವಾಗುತ್ತಿದ್ದ ಹಾಗೆಯೇ ಈ ಕೌಶಿಕನಿಗೆ ಫಲಿಸಿತಲ್ಲಾ ಎಂಬ ಆನಂದ ಆತನಿ ಗಷ್ಟಿಷ್ಟು ಅಲ್ಲ.

ಜಾತವೇದನ ಅನುಗ್ರಹದಿಂದ ಜಾತವೇದನೇ ಆಗಿ ಕುಳಿತ ಮುನೀಂದ್ರ ನನ್ನು ಯಥೋಚಿತವಾದ ಉಪಚಾರಗಳಿಂದ ಸತ್ಕರಿಸಿ ಮುಂದಿನ ಕಾರ್ಯ ವೇನು ಎಂದು ವಾಮದೇವನು ವಿನಯದಿಂದ ಪ್ರಾರ್ಥಿಸಿದನು. ಜಾತವೇದನು "ನಾಳೆಯ ದಿನ ನಚಿಕೇತರ ಆಶ್ರಮಕ್ಕೆ ಹೋಗಿ ಅಲ್ಲಿ ಋಷಿ ಪರಿಷತ್ತನ್ನು ಕರೆಯಿಸು. ಅಲ್ಲಿ ನಡೆಯುವುದನ್ನು ನೋಡಿ ಸಂತೋಷಪಡಿ" ಎಂದು ಅಪ್ಪಣೆಕೊಟ್ಟು ಉಪಶಾಂತನಾದನು.

ವಿಶ್ವಾಮಿತ್ರನಿಗೆ ಎಚ್ಚರವಾಯಿತು. ಎಚ್ಚರವಾಗುತ್ತಿದ್ದ ಹಾಗೆಯೇ ತನ್ನ ದೇಹದಿಂದ ಸುಂದರ ಜ್ವಾಲಾಮಾಲೆಗಳು ಪ್ರಸರಿಸುತ್ತಿರುವಂತೆ ಭಾಸ ವಾಯಿತು. "ವಾಮದೇವ! ಇದೇನಿದು?" ಎಂದನು.

ವಾಮದೇವನು ನಗುತ್ತಾ ಹೇಳಿದನು: "ಅಗ್ನಿಹೋತ್ರಿಗಳು ಅಗ್ನಿಯೇ ಆದರು. ಈಗ ಏನು ಎಂದು ಕೇಳಿದರೆ ನಾನೇನು ಹೇಳಬೇಕು? ನೀನು ರುದ್ರನ ಅನುಗ್ರಹವನ್ನು ಪಡೆದೆ. ಅನಂತರ ಆಪೋದೇವಿಯರ ಅನುಗ್ರಹ ವನ್ನು ಸಂಪಾದಿಸಿ ಆ ರುದ್ರನನ್ನು ಶಂಕರನನ್ನು ಮಾಡಿಕೊಂಡೆ. ಆ ಶಿವನ ಕೃಪೆಯಿಂದ ಸ್ವರ್ಗವು ಮನೆಯ ಬಾಗಿಲಿಗೆ ಬಂದು ಕರ್ಮಜದೇವತೆಯಾದೆ. ಆ ರುದ್ರನ ಅನುಗ್ರಹವೇ ಮುಂಬರಿದು ಪ್ರಾಣದರ್ಶನವಾಯಿತು. ದೇಹ ದಲ್ಲಿದ್ದ ಪಂಚಭೂತಗಳೂ ಶುದ್ಧವಾಗಿ ಎಲ್ಲವೂ ಕಾಂತವಾಗಿ ತೇಜೋಮಯ

ಗಳಾದುವು. ಸ್ಥಾಲೀಪಾಕದಿಂದ ಪ್ರಾಣಾಪಾನಗಳು ಪ್ರಸನ್ನವಾದವು. ಈಗ ವೈಶ್ವಾನರ ವಿದ್ಯೆಯನ್ನು ಪಡೆದು ಬೃಹತ್ಪ್ರಾಣ ಮಂಡಲವೇ ಪರಿಶುದ್ಧ ವಾಯಿತು. ಈಗ ತೇಜೋಮಯ ಮೂರ್ತಿಯಾದೆ. ಇದುವರೆಗೆ ಸ್ಥೂಲ ಚಕ್ಷುಸ್ಸಿಗೆ ಕಾಣದಿದ್ದ ತೇಜಸ್ಸು ಈಗ ಸ್ಥೂಲಚಕ್ಷುಸ್ಸಿಗೂ ಕಾಣುವಂತಾ ಯಿತು. ಈ ತೇಜಸ್ಸು ಈಗ ಪ್ರಸ್ಫುರಿತವಾಗಿ ನಿನ್ನ ಕ್ಷೇತ್ರವಾದ ಈ ದೇಹ ದಲ್ಲಿ ಇರುವ ಪಂಚಭೂತಗಳಲ್ಲಿ ಜ್ಞಾತಾಜ್ಞಾತವಾಗಿ, ಸ್ವಪರಕರ್ತೃಕವಾಗಿ, ಸಂಭವಿಸಿರುವ ಮಲಗಳನ್ನೆಲ್ಲಾ ದಹಿಸುತ್ತಿರುವುದು. ಅದರಿಂದ ಈ ಸ್ಥೂಲ ಚಕ್ಷುಸ್ಸಿಗೆ ಹೀಗೆ ಕಾಣುತ್ತಿರುವುದು. ಆ ಭೂತಪಂಚಕವು ನಿರ್ಮಲವಾಗು ತ್ತಲೂ ಇದು ಮತ್ತೆ ಶಾಂತವಾಗಿ ಶಮಿಯಲ್ಲಿರುವ ತೇಜಸ್ಸಿನಂತೆ ಅಂತರ್ನಿಹಿತ ವಾಗುವುದು."

ವಿಶ್ವಾಮಿತ್ರನು ಕೇಳಿದನು : "ಪ್ರಾಣಾಗ್ನಿಪಂಚಕ ದರ್ಶನವಾದಾಗ ತೇಜೋವಿಕಿರಣವಾಯಿತಲ್ಲ, ಅದೇನು ?"

"ಅದು ಭೂತತನ್ಮಾತ್ರಗಳಲ್ಲಿ ಪ್ರಾಣಸಂಚಾರವಾದುದರ ಲಕ್ಷಣ. ತನ್ಮಾತ್ರಗಳಿಂದಲೇ ಪ್ರಾಣಗಳು ಹುಟ್ಟವೆ. ಆದರೂ ಜನ್ಮದಿಂದಲಾಗಲಿ, ಮಣಿಮಂತ್ರಾದಿ ಕರ್ಮಗಳಿಂದಾಗಲೀ ಈ ಪ್ರಾಣಗಳು ಬಹಿರ್ಮುಖ ವೃತ್ತಿ ಯನ್ನು ಅಂತರ್ಮುಖವಾಗಿ ಭೂತಗಳಲ್ಲೂ ಪ್ರಾಣಸಂಚಾರವಾಗುವುದು. ಆಗ ಆ ಭೂತಗಳು ತೇಜೋಮಯ ಮೂರ್ತಿಗಳಾಗುವುವು. ತೇಜಸ್ಸಿನ ಸ್ಫುರಣವು ಅವುಗಳಿಗೂ ಲಭಿಸಿ, ಭೂತಭೂತಗಳೂ ಪ್ರಾಣವಂತಗಳಾದಂತೆ ಸವ್ಯಾಪಾರಗಳಾಗುವುವು. ಆಗ ಯಾವ ದೇಹದಲ್ಲಿ ಇದು ನಡೆಯುವುದೋ ಆ ದೇಹವು ವಿಪ್ರನಾಗುವುದು. ಹಾಗೆ ನೀನು ವಿಪ್ರನಾದೆಯೆಂದೇ ನಿನಗೆ ಅಗ್ನಿರಹಸ್ಯವು ತಿಳಿದುದು. ಇನ್ನು ನಚಿಕೇತಾಶ್ರಮಕ್ಕೆ ಹೋಗಬೇಕೆಂದೂ ಅಲ್ಲಿ ಋಷಿ ಪರಿಷತ್ತನ್ನು ಕರೆಯಬೇಕೆಂದೂ ಅಪ್ಪಣೆಯಾಗಿದೆ. ಅಲ್ಲಿ ಏನೇನು ವಿಚಿತ್ರ ನಡೆಯುವುದೋ ? ಹೀಗೆ ನೀನು ವಿಪ್ರನಾಗಿರುವುದನ್ನು ಕಂಡೇ ನಾನು ಕೇಳಿದುದು ನೀನು ಬ್ರಾಹ್ಮಣನಲ್ಲವೆಂದು ನಿನಗೆ ಯಾರು ಹೇಳಿದರು ಎಂದು ?"

"ಮೇನಕೆಯನ್ನು ನಾನು ಕೇಳಿದಾಗ, ಆಕೆಯು ಈ ನಿನ್ನ ಮಗುವು ಯಾರನ್ನು ವರಿಸುವುದೋ ಅದೇ ಕುಲ ನಿನ್ನದು ಎಂದಳು. ಪುರೂರವಾಶ್ರಮ

ದಲ್ಲಿದ್ದಾಗ ಆ ಮಗುವು ದುಷ್ಯಂತನನ್ನು ಮದುವೆಯಾದಳೆಂದು ಸುದ್ದಿ ಬಂತು."

"ಹೌದು, ಮೇನಕೆಯು ಗರ್ಭಧಾರಣ ಮಾಡಿದಾಗ ನಿನ್ನಲ್ಲಿ ಇನ್ನೂ ಕ್ಷತ್ರಿಯಾಂಶವಿತ್ತು. ಹಾಗೂ ಆಗಲಿ, ಕರ್ಮಠರು ಯಾವ ಸ್ವರ್ಗಕ್ಕಾಗಿ ಹಗಲೂ ಇರುಳೂ ಹೋಮ ಇಜ್ಯಾದಾನಾದಿ ಇಷ್ಟಾಪೂರ್ತ ಕರ್ಮಗಳಿಂದ ಪುಣ್ಯವನ್ನು ಸಂಪಾದಿಸುವರೋ ಆ ಸ್ವರ್ಗವೇ ನಿನ್ನ ಬಳಿಗೆ ಬಂತಲ್ಲಾ! ನೀನು ಕ್ಷತ್ರಿಯನಾಗದೆ ಬ್ರಾಹ್ಮಣನಾಗಿದ್ದರೆ, ಅದು ಸಾಧ್ಯವಾಗುತ್ತಿತ್ತೇನು ?"

"ಏಕೆ ಬ್ರಾಹ್ಮಣನಾದರೆ ಸ್ವರ್ಗಸುಖವನ್ನು ಅನುಭವಿಸುವಂತಿಲ್ಲ ವೇನು ?"

"ಹುಚ್ಚ, ಕರ್ತೃತ್ವ ಭೋಕ್ತೃತ್ವಗಳೆರಡೂ ಪರರದು ಎಂದು ತಿಳಿದು ಲೋಕಾನುಗ್ರಹಾರ್ಥವಾಗಿ ತನ್ನದಲ್ಲದ ಆ ಎರಡನ್ನೂ ವಹಿಸಿಕೊಂಡು, ಈ ಲೋಕಕ್ಕೆ ಬಂದು ಹೋಗುವ ದೇವತೆಗಳಿಗೆಲ್ಲ ತನ್ನ ದೇಹದಲ್ಲಿ ಅವಕಾಶ ಕೊಡುತ್ತಾ, ಯಾವ ರೀತಿಯಿಂದಲೂ ಮೋಹಪರವಶನಲ್ಲದಿರುವನು ಬ್ರಾಹ್ಮಣ. ಇಂತಹ ಬ್ರಾಹ್ಮಣನಾಗಿ ನೀನು ಸ್ವರ್ಗಭೋಗವನ್ನು ಅನು ಭವಿಸುವೆಯಾ ? ಸಾಕ್ಷಿ ನೋಡು. ಭಾರ್ಗವರು ಜಾತಿಬ್ರಾಹ್ಮಣರಾದರೂ ಭೋಗಪರಾಯಣನೆಂದು ಅವರಿಗೆ ಕ್ಷತ್ರಿಯರಿಂದ ಹಾನಿಯಾಯಿತು. ವಸಿ ಷ್ಠರು ಭೋಗಪರಾಯಣರಲ್ಲವಾಗಿ, ಸನ್ಯಸ್ತಸಂಕಲ್ಪರಾದುದರಿಂದ, ಮಹಾ ಕ್ಷತ್ರಿಯನಾದ ನೀನು ಅವರ ಮೇಲೆ ಕೈಮಾಡಲು ಹೋಗಿ ಸೋತು ನಿನ್ನ ಕ್ಷಾತ್ರವನ್ನೇ ಬಲಿಗೊಟ್ಟು ನೀನೂ ಬ್ರಾಹ್ಮಣನಾದೆ. ಅಲ್ಲವೇ ? ಹೇಳು.

ವಾಮದೇವನು ಇನ್ನೂ ಮುಂದರಿದು ಹೇಳಿದನು : "ನಿನ್ನಲ್ಲಿದ್ದ ಭೋಗ ಪ್ರವೃತ್ತಿಯೆಲ್ಲವೂ ತಪಶ್ಶುದ್ಧವಾಗಿ ಪಿಂಡವಾಗಿ ಪರಿಶುದ್ಧ ಕ್ಷಾತ್ರ ತೇಜೋ ಧಾನಿಯಾಗಿ ಮಗುವಾಯಿತು. ಅವಳಲ್ಲಿ ಚಂದ್ರವಂಶ ಪ್ರತಿಷ್ಠಾಪಕನಾದ ಮಹಾಪುರುಷನು ಚತುಸ್ಸಮುದ್ರ ಮುದ್ರಿತವಾದ ಭೂಮಂಡಲದಲ್ಲಿನ್ನು ಧರ್ಮವ್ಯವಸ್ಥೆಯನ್ನು ಸಂಸ್ಥಾಪಿಸುವ ಮಹಾಚಕ್ರವರ್ತಿಯು ಹುಟ್ಟಿರು ವನು. ಹಾಗೆ ನಿನ್ನ ಕ್ಷಾತ್ರತೇಜಸ್ಸು ಪಿಂಡವಾಗಿ ತನ್ನ ಗರ್ಭಕ್ಕೆ ಬಂತೆಂಬು ದನ್ನು ತಿಳಿಯದ ಮೇನಕೆಯು ನೀನು ಕೇಳಿದ ಪ್ರಶ್ನಕ್ಕೆ ಏನು ಉತ್ತರ ಕೊಡ ಬೇಕು ? ಅಲ್ಲದೆ, ನಿನಗಾಗಿ ಮಾನವ ಧರ್ಮವನ್ನು ಅಂಗೀಕರಿಸಿದ್ದವಳು

ಅವಳು. ಮಾನವ ದೇಹದಲ್ಲಿ ಆಪಃಪೃಥ್ವೀಭೂತಗಳೆರಡೂ ಬಲವಾಗಿದ್ದು ತೇಜಸ್ಸನ್ನು ಒತ್ತಿಟ್ಟಿರುವುದರಿಂದ ದೇವತಾ ದೇಹದಲ್ಲಿ ಕಾಣುವ ಸಿದ್ಧಿಗಳು ಆ ಕ್ಷೇತ್ರದಲ್ಲಿ ಕಾಣಲು ತಪಸ್ಸುಬೇಕು. ಅವಳು ಹೊರಟುಹೋಗುವಾಗ ನೋಡ ಬಹುದಾಗಿತ್ತು. ಆದರೆ ಅವಳಿಗೆ ಆವಸರ.

"ಆ ನಚಿಕೇತನು ಪರಮರ್ಷಿ. ಸಾಕ್ಷಾತ್ ವೈಶ್ರವಣನಿಂದ ಅಗ್ನಿವಿದ್ಯೆ ಬ್ರಹ್ಮವಿದ್ಯೆಗಳೆರಡನ್ನೂ ಸಂಪಾದಿಸಿದ ಮಹಾನುಭಾವ. ಆತನ ಆಶ್ರಮದಲ್ಲಿ ಇನ್ನು ಏನೇನು ವಿಚಿತ್ರಗಳು ಕಾದಿವೆಯೋ? ಹಿಂದೆ ನಮ್ಮ ಪೂರ್ವಜರಲ್ಲಿ ಒಬ್ಬನಾದ ಸಿಂಧೂದ್ವೀಪನೂ, ನಿಮ್ಮ ವಂಶಕ್ಕೇ ಸೇರಿದ ದೇವಾಪಿಯೂ ಬ್ರಾಹ್ಮಣ್ಯವನ್ನು ಸಂಪಾದಿಸಿ ಬ್ರಹ್ಮರ್ಷಿಗಳಾದರು. ಆದರೆ ಅವರ ಜೀವನ ದಲ್ಲಿ ಇಷ್ಟು ವಿಚಿತ್ರಗಳಾಗಲಿಲ್ಲ. ನೀನು ಮಹಾಪುರುಷ. ಮಾತಾಪಿತೃ ವಂಶಗಳೆರಡೂ ಉದ್ಧಾರವಾದುವು."

---

## ಐವತ್ತೆರಡನೆಯ ತರಂಗ

ಮರುದಿನ ವಾಮದೇವ ವಿಶ್ವಾಮಿತ್ರರಿಬ್ಬರೂ ಮಹರ್ಷಿ ನಚಿಕೇತರ ಆಶ್ರಮಕ್ಕೆ ಹೋದರು. ಅವರಿಗೆ ಇವರಿಬ್ಬರೂ ಬರುವರು ಎಂಬುದು ಗೊತ್ತಿರಬೇಕು. ಅಂತೂ ಭಗವಾನರೇ ಆಶ್ರಮದ ಬಾಗಿಲಿಗೆ ಬಂದಿದ್ದಾರೆ. ಬ್ರಹ್ಮವಿದ್ಯಾ ಸಂಪ್ರದಾಯ ಕರ್ತೃಗಳಲ್ಲಿ ಒಬ್ಬರಾದ ನಚಿಕೇತರ ಆಶ್ರಮವೆಂದ ರೇನು ಸಾಮಾನ್ಯವೇ? ಬ್ರಹ್ಮಪಿತೃಗಳು, ಬ್ರಹ್ಮಜ್ಞರು, ಬ್ರಹ್ಮಿಷ್ಠರು, ಬ್ರಾಹ್ಮಣರು, ಬೇಕಾದಹಾಗೆ ಇದ್ದಾರೆ. ಎಲ್ಲರೂ ಉಪನಿಷತ್ಪಾರಾಯಣ ಮಾಡುತ್ತ ಇವರನ್ನು ಪ್ರತೀಕ್ಷೆ ಮಾಡುತ್ತಿದ್ದಾರೆ.

ಆಕಾಶ ಮಾರ್ಗದಲ್ಲಿ ಬಂದು ಇಬ್ಬರೂ ಆಶ್ರಮೋಪಾಂತದಲ್ಲಿ ಇಳಿ ದರು. ಅಲ್ಲಿದ್ದ ಮೃಗಪಕ್ಷಿಗಳೇ ಸಂಭ್ರಮವಾಗಿ ಇವರ ಬರವನ್ನು ಉದ್ಘೋಷಿ ಸುತ್ತ ಆಶ್ರಮದ ಬಾಗಿಲಿಗೆ ಕರೆದೊಯ್ದುವು. ಅಲ್ಲಿದ್ದ ಮರಗಿಡಗಳೂ ಸಹ ತಮ್ಮ ತಮ್ಮ ಹೊಸತನವನ್ನು ಮೆರೆದು ಹೊಸ ಬಟ್ಟೆಯುಟ್ಟ ಹೆಣ್ಣುಗಳಂತೆ

ಅವರಿಗೆ ಸ್ವಾಗತವನ್ನು ನೀಡಿದುವು. ಮುಗ್ಗುಲಲ್ಲಿ ಹರಿಯುವ ಭಾಗೀರಥಿಯೂ ಕೂಡ ಮಂಜುಲನಾದದಿಂದ ಮಂಗಳ ಗೀತೆಗಳನ್ನು ಪಾಡಿದಳು.

ಭಗವಾನ್ ನಚಿಕೇತರೇ ಇಬ್ಬರಿಗೂ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಕರೆದುಕೊಂಡುಹೋಗಿ ಅವರನ್ನು ಅತಿಥಿ ಗೃಹದಲ್ಲಿ ಇಳಿಸಿದರು. ಪರಸ್ಪರ ಕುಶಲ ಪ್ರಶ್ನೆಗಳಾದವು. ಮಧುಪರ್ಕ ದಾನದಿಂದ ಅತಿಥಿಗಳ ಪೂಜೆಯು ಮುಕ್ತಾಯವಾಯಿತು.

ಎಲ್ಲರನ್ನೂ ಬೀಳ್ಕೊಟ್ಟು ನಚಿಕೇತರೊಬ್ಬರೇ ಉಳಿದರು : " ಅತಿಥಿಗಳಿಗೆ ಆಯಾಸವಾಗಿಲ್ಲದೆ ಇದ್ದರೆ, ಸ್ನಾನಾದಿಗಳಿಗೆ ಏಳಬಹುದು." ಎಂದು ಉಪಚಾರ ವಾಗಿ ಅವರಿಗೆ ಸ್ನಾನಾದಿಗಳನ್ನು ಮಾಡಿಸಿ ತಮ್ಮ ಅಗ್ನಿಗೃಹಕ್ಕೆ ಕರೆದು ಕೊಂಡು ಹೋದರು. ಅಲ್ಲಿ ವಾಮದೇವನನ್ನು ಸಾಕ್ಷೀ ಕರಿಸಿಕೊಂಡು, " ಬ್ರಹ್ಮರ್ಷಿಗಳಿಗೆ ಅಗ್ನಿವಿದ್ಯೆ ಬ್ರಹ್ಮವಿದ್ಯೆಗಳಲ್ಲಿ ಯಾವುದು ಬೇಕಾದರೆ ಅದನ್ನು ತೆಗೆದುಕೊಳ್ಳಬಹುದು. ಸಮ್ಮತವಾದಲ್ಲಿ ಎರಡನ್ನೂ ಅಂಗೀಕರಿಸಬಹುದು. ಆದರೆ ಉಪದೇಶವಾಗಿ ಅಲ್ಲ: ದಾನವಾಗಿ. ಭಗವಾನ್ ಯಜ್ಞೇಶ್ವರನ ಅಪ್ಪಣೆ ಯಾಗಿದೆ." ಎಂದರು.

ವಿಶ್ವಾಮಿತ್ರನಿಗೆ ಆಶ್ಚರ್ಯದಮೇಲೆ ಆಶ್ಚರ್ಯವಾಗಿದೆ. ಭಗವಾನರು ತನಗೆ ವಾಮದೇವನೊಡನೆ ಸರಿಸಮವಾಗಿ ಮಧುಪರ್ಕಾದಿಗಳನ್ನು ಕೊಟ್ಟುದೂ ತನ್ನನ್ನು ಬ್ರಹ್ಮರ್ಷಿಯೆಂದು ಸಂಬೋಧಿಸಿದುದೂ ಆತನಿಗೆ ಬ್ರಹ್ಮಾನಂದವನ್ನು ಕೊಟ್ಟು ತನ್ನ ಜನ್ಮ ಸಾರ್ಥಕವಾಯಿತೆಂಬ ಕೃತಕೃತ್ಯತಾಭಾವವನ್ನು ತಂದಿತ್ತಿವೆ. ಆತನಿಗೆ ಏನು ಹೇಳಬೇಕೆಂಬುದೇ ತೋರದೇ ಹೋಗಿದೆ; ಮೂಕ ನಾದಂತಾಗಿದ್ದಾನೆ. ಅದನ್ನು ಕಂಡು ವಾಮದೇವನೇ ಮಾತನಾಡಿದನು.

" ಭಗವಾನರು ತ್ರಿಕಾಲಜ್ಞರು. ಹೃದಯಗ್ರಂಥಿ ವಿಚ್ಛೇದನ ಸಂಪ್ರ ದಾಯವನ್ನು ಭಗವಾನ್ ವೈಶ್ರವಣನಿಂದ ಪಡೆದುಕೊಂಡ ಮಹಾನುಭಾವರು. ತಾವು ಈ ಮಹಾವಿದ್ಯೆಗಳನ್ನು ಕೊಡುವೆನೆಂದ ಮಾತ್ರದಿಂದಲೇ ಈತನು ತೃಪ್ತ ನಾಗಿ ಆನಂದಪರಾಕಾಷ್ಠದಶೆಗೆ ಬಂದಿದ್ದಾನೆ. ಇನ್ನು ಉಳಿದಿರುವುದೇನು ? ತಮ್ಮಂತಹವರು ಕೊಡುವೆನು ಎಂದು ಸಂಕಲ್ಪಿಸಿದಾಗಲೇ ಆ ವಿದ್ಯೆಗಳು ಆ ಪಾತ್ರನನ್ನು ಸೇರಿ ಅನುಗ್ರಹಮಾಡುವುವು. ಅದರಿಂದ, ಯಾವುದು ಬೇಕು ಎಂದು ಆತನನ್ನು ಕೇಳಿ ಕೊಡುವುದಕ್ಕಿಂತ ಪ್ರದಾತೃಗಳಾದ ತಾವು

ತಮಗೆ ಅಪ್ಪಣೆಯಾಗಿರುವಂತೆ ಉಭಯ ವಿದ್ಯೆಗಳನ್ನೂ ಅಲಂಕರಿಸಿ ಈತನನ್ನು ಸಮಲಂಕರಿಸೋಣವಾಗಲಿ" ಎಂದರು.

ಭಗವಾನರಿಗೆ ಆ ಮಾತು ಸೊಗಸಿತು : "ವಸಿಷ್ಠರ ಶಿಷ್ಯರಲ್ಲದೆ ಇತರರಿಗೆ ಈ ವಿನಯವೆಲ್ಲಿಂದ ಬರಬೇಕು ! ಅಂತೂ ವಾಮದೇವರು 'ಉಭಯ ವಿದ್ಯೆಗಳನ್ನೂ ಕೊಡಿ, ಲೋಭಿಗಳಾಗಬೇಡಿ' ಎಂದು ಅಪ್ಪಣೆಮಾಡಿದರು. ಆಗಲಿ. ವಾಸಿಷ್ಠರ ಅಪ್ಪಣೆ. ಮುಖ್ಯ ಭಗವಾನ್ ಯಜ್ಞೇಶ್ವರನ ಕೃಪೆಯು ವಿಶ್ವಾಮಿತ್ರರಿಗೆ ತಾನೇತಾನಾಗಿರಲು ಏನೇನು ತಾನೇ ಲಭ್ಯವಾಗುವುದಿಲ್ಲ" ಎಂದು ವಿಶ್ವಾಮಿತ್ರನ ಮುಖವನ್ನು ನೋಡಿದರು.

ಆತನು ಎದ್ದು ಕೈಮುಗಿದುಕೊಂಡು, "ನಾನು ಎಷ್ಟೇ ಆಗಲಿ, ತಮ್ಮ ಅನುಗ್ರಾಹ್ಯವರ್ಗಕ್ಕೆ ಸೇರಿದವನು. ಆಜ್ಞಾಕರನಾಗುವುದಕ್ಕೆ ಬದ್ಧನು" ಎಂದು ನಮಸ್ಕಾರ ಮಾಡಿದನು.

ಭಗವಾನರು ನಗುನಗುತ್ತಾ ಆತನನ್ನು ಹಿಡಿದು ಮೇಲಕ್ಕೆತ್ತಿ "ಬೆಂಕಿಯಲ್ಲಿ ದೊಡ್ಡದು ಯಾವುದು ? ಚಿಕ್ಕದು ಯಾವುದು ? ಎಲ್ಲಾ ವ್ಯತ್ಯಾಸಗಳೂ ಬೆಂಕಿಯಾಗುವವರೆಗೆ ! ಆದಮೇಲೆ ಯಾವುದೂ ತಾರತಮ್ಯವಿಲ್ಲ. ಅಲ್ಲಿ ತಾರತಮ್ಯವನ್ನು ಕಾಣುವುದು ಕಾರ್ಯಾನುಗುಣವಾಗಿ. ಆದಿರಲಿ. ಗೌರವಕ್ಕೆ ನಾವು ಎಷ್ಟು ಪಾತ್ರರೋ ನೀವೂ ಅಷ್ಟೇ ಪಾತ್ರರು. ತಾವೂ ಗೋತ್ರಪ್ರವರ್ತಕರಾಗುವಿರಿ. ಆಗಲಿ ಮಂತ್ರಪತಿಗಳೂ ಮಂತ್ರದ್ರಷ್ಟರೂ ಆಗಿರುವಿರಿ. ವೇದಪುರುಷನು ತಮ್ಮಿಂದ ಅಪಾರಸೇವೆ ತೆಗೆದುಕೊಳ್ಳಲು ಕಾದಿರುವನು. ನಾವು ಭೂತಾರ್ಥದ ಬಲದಿಂದ ಗೌರವಕ್ಕೆ ಪಾತ್ರರಾದರೆ, ತಾವು ಭವಿಷ್ಯದರ್ಥ ಸಂಪತ್ತಿಯಿಂದ ಗೌರವಾರ್ಹರು" ಎಂದು ವಿಶ್ವಾಸದಿಂದ ನುಡಿದು ಮಗ್ಗುಲಲ್ಲಿ ಕುಳ್ಳಿರಿಸಿಕೊಂಡರು. ವಿಶ್ವಾಮಿತ್ರನೂ ವಿನೀತನಾದ ಶಿಷ್ಯನು ಕುಳಿತುಕೊಳ್ಳುವಂತೆ ಮಗ್ಗುಲಲ್ಲಿ ಬೇರೊಂದು ಕೃಷ್ಣಾಜಿನದ ಮೇಲೆ ಕುಳಿತನು.

ನಚಿಕೇತರು ಅನುಸಂಧಾನಮಾಡಿ ಸ್ವನಾಮವಿಖ್ಯಾತವಾದ ಅಗ್ನಿವಿದ್ಯೆಯನ್ನು ದಾನಮಾಡಿದರು. ಯಜ್ಞೇಶ್ವರನು ಕೃಪೆಮಾಡಿ ತನ್ನ ವಿಶ್ವರೂಪವನ್ನು ಪ್ರಕಟಮಾಡಿ ಬ್ರಹ್ಮಾಂಡವೆಲ್ಲವನ್ನೂ ತಾನು ಧರಿಸಿರುವ ಮರ್ಮವನ್ನು ತೋರಿಸಿ, "ಬ್ರಹ್ಮರ್ಷಿ, ಇದು ಈ ಲೋಕ, ಇದು ಈ ಲೋಕ, ಎಂದು

ಚತುರ್ದಶ ಲೋಕಗಳನ್ನೂ ನಾಮನಿರ್ದೇಶಪೂರ್ವಕವಾಗಿ ತೋರಿಸಿ, ಇನ್ನು ನಿನಗೆ ಏಕೆ ಈ ವಿದ್ಯೆಯು ಬಂತು ಎಂಬುದನ್ನು ಸಾವಧಾನವಾಗಿ ತಿಳಿದುಕೋ. ಮುಂದೆ ಈ ಮಹಾನುಭಾವನಿಂದ ಬ್ರಹ್ಮವಿದ್ಯೆಯನ್ನು ಪಡೆದುಕೋ" ಎಂದು ಅಪ್ಪಣೆಕೊಟ್ಟನು.

ನಚಿಕೇತರು ಯಜ್ಞೇಶ್ವರನು ವಿಶ್ವಾಮಿತ್ರರಲ್ಲಿ ವಹಿಸಿರುವ ಆದರವನ್ನು ಕಂಡು ಪರಮಸಂತುಷ್ಟರಾಗಿ, "ಅಯ್ಯಾ, ಹೀಗೆ ದೇವತಾನುಗ್ರಹವನ್ನು ಸಂಪೂರ್ಣವಾಗಿ ಸಾಧಿಸಿರುವವರೇ ಬ್ರಹ್ಮವಿದ್ಯಾಧಿಕಾರಿಗಳು. ಇಂತಹವರು ಸಿಕ್ಕಿ ಅವರಿಗೆ ವಿದ್ಯಾದಾನ ಮಾಡಿದಲ್ಲದೆ ನಾವು ಋಷಿಋಣವನ್ನು ತೀರಿಸಿದಂತಾಗುವುದಿಲ್ಲ. ಇಂದಿಗೆ ನಾನೂ ಕೃತಾರ್ಥನಾದಂತಾಯಿತು. ನಿಮ್ಮಂತಹ ಅಧಿಕಾರಿಗಳು ಜನ್ಮದಲ್ಲಿ ಒಬ್ಬರಾದರೂ ಸಿಕ್ಕುವರೋ ಇಲ್ಲವೋ ?" ಎಂದು ಮನಃಪೂರ್ವಕವಾಗಿ ಹೊಗಳುತ್ತಾ, ಆಚಮನಮಾಡಿ ಮತ್ತೊಂದು ವಿದ್ಯೆಯನ್ನು ಕೊಡಲು ಸಿದ್ಧರಾದರು.

ವಿಶ್ವಾಮಿತ್ರನೂ ಆಚಮನ ಶುದ್ಧನಾಗಿ ವಿದ್ಯಾಗ್ರಹಣಕ್ಕೆ ಸಿದ್ಧನಾದನು. ಅವರು ಪ್ರಣವೋಚ್ಚಾರ ಮಾಡುತ್ತಿದ್ದ ಹಾಗೆಯೇ ವಿಶ್ವಾಮಿತ್ರನಿಗೆ ದೇಹವೆಲ್ಲ ಏಕಾಗ್ರತೆಗೆ ಬಂದು ತಾನು ಹಣ್ಣಿನೊಳಗಿನ ಓಟೆಯಂತೆ ದೇಹದಿಂದ ಪ್ರತ್ಯೇಕನು ಎಂಬ ಅನುಭವವು ಬಂತು. ಶಾಂತಿ ಪಾಠವನ್ನು ಹೇಳುತಿದ್ದ ಹಾಗೆಯೇ ದೇಹದಲ್ಲಿ ಸರ್ವಾಂಗಗಳಲ್ಲೂ ಅಪ್ಯಾಯನವಾಗಿ ಎಲ್ಲಕ್ಕೂ ಹೊಸದೊಂದು ಜೀವ ಬಂದಂತಾಗಿ ಬ್ರಹ್ಮವಿದ್ಯೆಯನ್ನು ಧರಿಸುವುದಕ್ಕೋಸ್ಕರವೇ ನವೋನವವಾದ ಚೇತನವನ್ನು ವಹಿಸಿದಂತಾಯಿತು.

ನಚಿಕೇತರ ಮುಖದಿಂದ ಹೊರಟುದು ಬರಿಯ ಶಬ್ದಗಳಲ್ಲ: ಅಯಃಪಿಂಡಗಳಂಬಂತೆ ವಿಶ್ವಾಮಿತ್ರನ ಹೃದಯದಲ್ಲಿ ಇಳಿದು ದೇಹದಲ್ಲಿ ಮನೆಮಾಡಿ ಕುಳಿತುಕೊಂಡು ಆತನ ವಾಕ್ಕು ಅಲ್ಲಿ ಪಲ್ಲವಿಸಿ ಬೆಳೆಯಿತು. ಏನೋ ಒಂದು ಹೊಸದಾಗಿ ಕಂಡರೂ ಹಳೆಯದೆಂದು ಬೋಧವಾಗುತ್ತಿರುವ ಚೇತನವೇ ತನ್ನೊಳಹೊಕ್ಕು ತನ್ನಲ್ಲಿದ್ದ ಚೇತನವನ್ನು ಪ್ರಬುದ್ಧಗೊಳಿಸಿ ಅದನ್ನು ಲೋಕದಲ್ಲೆಲ್ಲಾ ಹರಡುತ್ತಿರುವಂತೆ ಆಯಿತು. ಘನವಾಗಿ ಒಂದು ಪಿಂಡದಂತೆ ಇದ್ದ 'ತಾನು' ಎಂಬುದೊಂದು ಭಾವವು ಅಗ್ನಿಪುಟದಿಂದ ಧೂಮವಾಗಿ ಲೋಕಲೋಕಾಂತರಗಳನ್ನೆಲ್ಲ ಬ್ರಹ್ಮಾಂಡ ಬ್ರಹ್ಮಾಂಡಗಳನ್ನೆಲ್ಲಾ ವ್ಯಾಪಿಸಿದಂತಾ

ಯಿತು. ತಾನು ಏಕಾಂತವಾಗಿ ಗವಿಯಲ್ಲಿ ಕುಳಿತು ಪ್ರಾಣಾಗ್ನಿ ಪಂಚಕ ದರ್ಶನಾದಿ ವ್ಯಾಪಾರ ಮಗ್ನನಾದಾಗ, ಋತ್ವಿಜನಾಗಿ ತನ್ನಿಂದ ಎದ್ದುಹೋಗಿ ಸ್ನಾನಾಹ್ನಿಕಗಳನ್ನುಮಾಡಿ ಬರುತಿದ್ದ ಆ ರೂಪವು ಇಂದು ಇಂದ್ರಿಯಾ ಗೋಚರವೆನ್ನುವಷ್ಟು ಸೂಕ್ಷ್ಮವಾಗಿ ಬ್ರಹ್ಮಾಂಡವನ್ನೆಲ್ಲ ಆವರಿಸುತ್ತಿರುವು ದನ್ನು, ತಾನು ಹಿಂದೆ ದರ್ಶನಮಾಡಿದ್ದ ಕಾಲ ಪುರುಷನನ್ನು ವ್ಯಾಪಿಸಿ, ಆತ ನನ್ನು ಭೇದಿಸಿಕೊಂಡು ಆತನ ಒಳಹೊರಗನ್ನೆಲ್ಲ ಬಳಸಿಕೊಂಡು ಆತನನ್ನು ಒಂದು ಮಗುವಿನಂತೆ ಎತ್ತಿಕೊಳ್ಳುವುದನ್ನು ಆ ಮಹಾನುಭಾವನು ಕಂಡನು.

ವಿಶ್ವಾಮಿತ್ರನಿಗೆ ಜಾಗ್ರತ್ತಿನಲ್ಲಿ ನಡೆದಂತೆ ಆಗುತ್ತಿರುವ ಈ ವ್ಯಾಪಾರ ವೆಲ್ಲ ವಾಮದೇವನಿಗೆ ಕನಸಾಗಿ ಕಾಣುತ್ತಿದೆ. ದೇಶ ಕಾಲವೆರಡೂ ಪ್ರಸ್ವ ವಾಗಿ ಅದರ ಹೊರಗಿನ ಯಾವುದೋ ಒಂದು ಪದಾರ್ಥವು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿಕೊಂಡು ಅದನ್ನು ಧರಿಸಿರುವಂತೆಯೂ ಆ ' ನಾನು ' ಎಂಬುದು ಅದರ ದೊಂದು ಅಂಶವಾಗಿ ತಾನೇ ಬೇಕೆಂದು ಒಂದು ಆಕಾಶ ಕೋಶವನ್ನು ಸೇರಿ ಕೊಂಡು ಇರುವಂತೆಯೂ ಭಾಸವಾಯಿತು.

ನಚಿಕೇತರು ವಿದ್ಯಾದಾನ ಕರ್ಮವನ್ನು ಸಾಂಗವಾಗಿ ನೆರವೇರಿಸಿದರು. ವಿಶ್ವಾಮಿತ್ರನಂತೆ ವಾಮದೇವನೂ ಪ್ರಕೃತಿಸ್ಥನಾದನು. ನಚಿಕೇತರು ಅವರಿ ಬ್ಬರ ಸಾಮರ್ಥ್ಯವನ್ನು ಕಂಡು ಬಹು ಸಂತೋಷಪಟ್ಟು, " ಅಯ್ಯಾ ! ನಮ್ಮ ಗುರುಗಳು ಈ ದಿನ ಸಂತುಷ್ಟರಾದರು. ಅವರು ನನ್ನಲ್ಲಿ ಇಟ್ಟಿದ್ದ ಈ ನಿಕ್ಷೇಪವು ಇಂದು ಸತ್ಪಾತ್ರದಲ್ಲಿ ವಿನಿಯೋಗವಾಗಿ ಅವರ ಸಂಕಲ್ಪವು ಈಡೇರಿತೆಂದು ನಾನೂ ಕೃತಾರ್ಥನಾದೆನು. ಈಗ ನಿಮಗೆ ದರ್ಶನವಾದುದು ಜ್ಞಾತೃ. ದೇಹ ದೇಹದಲ್ಲಿಯೂ ಕುಳಿತು ಕೆಲಸಮಾಡುತ್ತಿರುವ ಪ್ರತ್ಯಗಾತ್ಮನೀತನು. ಇನ್ನು ಮುಂದೆ ಇದನ್ನು ಬೆಳೆಸಿಕೊಂಡು ವ್ಯಷ್ಟಿ ಸಮಷ್ಟಿಗಳಲ್ಲಿ ಆತ್ಮದರ್ಶನಮಾಡಿ ಕೃತಾರ್ಥರಾಗಿ " ಎಂದು ಆಶೀರ್ವದಿಸಿದರು.

---

## ಐವತ್ತಮೂರನೆಯ ತರಂಗ

ಋಷಿ ಪರಿಷತ್ತು ನಚಿಕೇತಾಶ್ರಮದಲ್ಲಿ ಸೇರಿತು. ದೂರ ದೂರದಿಂದ ಪ್ರಸಿದ್ಧರಾದ ಬ್ರಹ್ಮರ್ಷಿ, ಮಹರ್ಷಿ, ದೇವರ್ಷಿಗಳೆಲ್ಲ ದಯಮಾಡಿಸಿದ್ದಾರೆ. ಎಲ್ಲರೂ ಮಧುಪರ್ಕಕ್ಕೆ ಯೋಗ್ಯರಾದವರು. ವೇದ ಪುರುಷನ ಅನುಗ್ರಹದಿಂದ ಅನೇಕಾನೇಕ ಋಕ್ಸಾಮಗಳನ್ನು ಪ್ರತ್ಯಕ್ಷವಾಗಿ ಕಂಡು ಹಾಡಿ ಲೋಕೋದ್ಧಾರಕರಾದವರು. ವೇದವೇದಾಂಗ ಪಾರಂಗತರು. ಹಲವಾರು ಯಜ್ಞಗಳಲ್ಲಿ ಸೋಮಪಾನಮಾಡಿ ಕೃತಾರ್ಥರಾದವರು. ಧರ್ಮಜ್ಞರಾಗಿ ಬ್ರಹ್ಮವೇತ್ತರಾಗಿ ತಮ್ಮ ತಪೋಬಲದಿಂದ ಬ್ರಹ್ಮಾಂಡವನ್ನು ಪ್ರಲಯಮಾಡಿ ಮತ್ತೆ ಸೃಷ್ಟಿಸಬಲ್ಲಂಥವರು. ಎಲ್ಲರಿಗೂ "ವಸಿಷ್ಠರು ಬಂದಿದ್ದರೆ ಚೆನ್ನಾಗಿತ್ತು" ಎಂದು ಕೊಂಚ ಯೋಚನೆ. ಅವರು ವರುಣಲೋಕಕ್ಕೆ ಹೋಗಿದ್ದಾರೆ. ಬರುವುದು ಯಾವಾಗಲೋ ಗೊತ್ತಿಲ್ಲ. ಕಾಯುವಂತಿಲ್ಲ.

ಭಗವಾನ್ ಪಿಪ್ಪಲಾದರು ಅಧ್ಯಕ್ಷರಾಗಬೇಕೆಂದು ಭಗವಾನ್ ನಚಿಕೇತರು ಸೂಚಿಸಿದರು. ಭಗವಾನ್ ಯಾಜ್ಞವಲ್ಕ್ಯರು ಅದನ್ನು ಅನುಮೋದಿಸಿದರು. ಭಗವತಿ ಗಾರ್ಗಿಯವರು "ಈ ಧರ್ಮಬ್ರಹ್ಮ ಪರಿಷತ್ತಿಗೆ ಅಧ್ಯಕ್ಷರಾಗಲು ಭಗವಾನರು ಸರ್ವವಿಧದಿಂದಲೂ ಅರ್ಹರು" ಎಂದರು. ಸುಮಂತು, ಕಹೋಳ, ಬಭ್ರು ಮೊದಲಾದ ಬ್ರಹ್ಮರ್ಷಿಗಳು ತಥಾಸ್ತು ಎಂದರು. ಪಿಪ್ಪಲಾದರ ಅಧ್ಯಕ್ಷತೆಯಲ್ಲಿ ಸಭೆಯು ಮೊದಲಾಯಿತು.

ಸಭೆಯನ್ನು ಕರೆದ ನಚಿಕೇತರು ಎದ್ದುನಿಂತು "ದೊಡ್ಡವರಿಗೆ ನಮಸ್ಕಾರ, ಚಿಕ್ಕವರಿಗೆ ನಮಸ್ಕಾರ, ಸಮಾನರಿಗೆ ನಮಸ್ಕಾರ. ಇವೊತ್ತು ನಾವು ಸೇರಿರುವುದು ತಪೋಬಲದಿಂದ ಬ್ರಾಹ್ಮಣ್ಯ ಸಾಧಿಸಿ ಬ್ರಹ್ಮರ್ಷಿಯಾಗಿರುವ ವಿಶ್ವಾಮಿತ್ರರ ಬ್ರಹ್ಮರ್ಷಿತ್ವವನ್ನು ಒಪ್ಪಿಕೊಳ್ಳುವುದಕ್ಕೆ. ಈ ಸೂಚನೆಗೆ ಸಾಧಕಬಾಧಕಗಳು ಏನಿದ್ದರೂ ಸಭೆಯವರ ಮುಂದಿಡುವುದು ನಮ್ಮೆಲ್ಲರ ಕರ್ತವ್ಯ" ಎಂದರು.

ಭಗವಾನ್ ಯಾಜ್ಞವಲ್ಕ್ಯರೆದ್ದು, "ನಾನು ಪ್ರತ್ಯಕ್ಷವಾಗಿ ವಿಶ್ವಾಮಿತ್ರರನ್ನು ನೋಡಿದುದು ಇದೇ ಮೊದಲು. ತ್ರಿಶಂಕು ಮಹಾರಾಜನನ್ನು ಸ್ವರ್ಗಕ್ಕೆ ಕಳುಹಿಸಿದ ಮಹಾನುಭಾವರು. ವಸಿಷ್ಠರಿಗೆ ಪ್ರಾಪ್ತವಾಗಿದ್ದ ಪುತ್ರಶೋಕ

ವನ್ನು ನೀಗುವುದಕ್ಕೆ ಕಾರಣರಾದವರು. ಇವೆರಡರಲ್ಲಿ ಒಂದೊಂದು ಸಾಕು ಬ್ರಹ್ಮರ್ಷಿ ಎನ್ನುವುದಕ್ಕೆ. ಅಂಥಾದ್ದರಲ್ಲಿ ಎರಡೂ ಇರುವಾಗ ನಾವು ಹಿಂತೆಗೆಯಲು ಏನು ಕಾರಣವೂ ಇಲ್ಲ. ಇದೆಲ್ಲದರ ಜೊತೆಗೆ ಸಿಂಧೂದ್ವೀಪ ಬ್ರಹ್ಮರ್ಷಿಯ ವಂಶದವರು ಮತ್ತೂ ಇವರ ತಂದೆಯಾದ ಕುಶಿಕ ಮಹಾರಾಜನು ಚ್ಯವನ ಮಹರ್ಷಿಯ ಸೇವೆಮಾಡಿ ಬ್ರಾಹ್ಮಣ್ಯವನ್ನು ಅನುಗ್ರಹಿಸಬೇಕೆಂದು ಕೇಳಿದನು. ಆಗ ಅವರು ನಿನಗೆ ಆ ಯೋಗವಿಲ್ಲ. ನಿನ್ನ ಮಗನಾಗುವನು ಎಂದು ಅನುಗ್ರಹ ಮಾಡಿದ್ದರು. ಅದರಿಂದ ಆ ಋಷಿವಾಕ್ಯವನ್ನು ನೆರವೇರಿಸಲು ಇಂದು ನಾವು ಸೇರಿರುವುದು. ನಿರಾತಂಕವಾಗಿ ಆಗಬಹುದು. ಧರ್ಮಬ್ರಹ್ಮ ಪರಾಯಣರಾದ ಭಗವಾನ್ ನಚಿಕೇತರ ಸೂಚನೆಯನ್ನು ನಾನು ತ್ರಿಕರಣಶುದ್ಧವಾಗಿ ಅನುಮೋದಿಸುತ್ತೇನೆ" ಎಂದರು.

ಭಗವತೀ ಗಾರ್ಗಿಯು ಎದ್ದು ಹೇಳಿದರು: ಭಗವಾನ್ ನಚಿಕೇತರು ಸೂಚಿಸಿ, ಭಗವಾನ್ ಯಜ್ಞವಲ್ಕ್ಯರು ಅನುಮೋದಿಸಿದಮೇಲೆ ಎಷ್ಟಾಗಲೀ ಸ್ತ್ರೀಯಾದ ನಾನು ಸಭೆಯಲ್ಲಿ ನಿಂತು ಸಮರ್ಥಿಸಲೇ ಬೇಕು. ಆದರೆ, ಬ್ರಹ್ಮರ್ಷಿತ್ವವು ಒಬ್ಬರು ಇಬ್ಬರ ಅಭಿಮಾನದಿಂದ ಬರುವ ಪದವಿಯಲ್ಲ. ಕ್ಷತ್ರಿಯನಾಗಿದ್ದ ಈತನ ದೇಹದಲ್ಲಿರುವ ಪಂಚಭೂತ ತನ್ಮಾತ್ರಗಳೆಲ್ಲವೂ ಪರಿಶುದ್ಧವಾಗಿ ಸತ್ವಗುಣಕ್ಕೆ ಬಂದಿವೆಯೆಂದು ಪರೀಕ್ಷೆಯಾಗಿ ಸಿದ್ಧಾಂತವಾಗಲಿ. ಆ ಕೂಡಲೇ ನಾನು ಒಪ್ಪುತ್ತೇನೆ" ಎಂದಳು.

ಭಗವಾನ್ ಪಿಪ್ಪಲಾದರು ಎದ್ದು ನಿಂತರು: "ಸಭೆಗೂ ಸಭಿಕರಿಗೂ ನಮಸ್ಕಾರಗಳು. ಭಗವತೀ ಗಾರ್ಗಿಯವರು ಕೇಳಿರುವ ಪ್ರಶ್ನವು ಸಾಧುವಾದುದು. ನಾನು ಈ ಅಧ್ಯಕ್ಷಸ್ಥಾನದಲ್ಲಿ ಇಲ್ಲದೆ ಅಲ್ಲಿ ಸಭೆಯಲ್ಲಿ ಕುಳಿತಿದ್ದರೆ ನಾನೂ ಅದೇ ಮಾತು ಕೇಳುತ್ತಿದ್ದೆ. ಬ್ರಹ್ಮರ್ಷಿ ಪದವಿಯೆಂದರೆ ಸಾಮಾನ್ಯವಲ್ಲ. ನಾಳಿನ ದಿನ ಸಪ್ತರ್ಷಿಗಳ ಸ್ಥಾನಕ್ಕೆ ಹೋಗಬಹುದಾದ ಯೋಗ್ಯತೆಯಿರುವವರಿಗೆ ಮಾತ್ರ ಆ ಪದವಿ. ಸಪ್ತರ್ಷಿಗಳೆಂದರೆ ಸಾಮಾನ್ಯವಾಯಿತೆ? ಸೃಷ್ಟಿಗೆ ಬರುವ ಪ್ರತಿಯೊಬ್ಬ ಪ್ರಜೆಯ ಮೇಲೂ ಅಧಿಕಾರ ನಡೆಸಬೇಕು. ಸೃಷ್ಟಿಕರ್ತನಾದ ಪ್ರಜಾಪತಿಗೆ ಸಹಾಯಮಾಡಬೇಕು. ಆದರಿಂದ ಆಕೆಯು ಕೇಳಿರುವ ಪ್ರಶ್ನವು ಬಹು ಸಾಧುವಾದುದು. ಪ್ರತಿಯೊಬ್ಬರೂ ವಿಚಾರಮಾಡಿ ನಿರ್ದಾಕ್ಷಿಣ್ಯವಾಗಿ ಕೇಳಬೇಕಾದುದನ್ನೆಲ್ಲ ಕೇಳಿ ಅನಂತರ ಒಪ್ಪಬೇಕಾದ ಮಾತು ಇದು. ಅಧ್ಯಕ್ಷ

ಸ್ಥಾನದಲ್ಲಿದ್ದು ಇಷ್ಟು ಮಾತನಾಡಿದ್ದು ತಪ್ಪಿದ್ದರೆ ಸಭೆಯುವರು ಮನ್ನಿಸುವುದು" ಎಂದು ಕೈಮುಗಿದು ಕುಳಿತರು.

ಮಹರ್ಷಿ ನೋಧಾ ಅವರು ಎದ್ದರು: "ಸಭೆಯವರಿಗೂ ಸಭಿಕರಿಗೂ ಸಭಾಪತಿಗಳಿಗೂ ನಮಸ್ಕಾರಗಳು. ನಾವು ಇಲ್ಲಿ ಕುಳಿತಿರುವವರು ವೇದ ಪುರುಷನ ಅನುಗ್ರಹದಿಂದ ಮಹರ್ಷಿಗಳಾಗಿರುವವರು. ಆ ವೇದಪುರುಷನನ್ನು ಸಾಕ್ಷಾತ್ಕಾರ ಮಾಡಿಕೊಂಡು, ಆತನು ಹೇಳಿದಂತೆ ಕೇಳೋಣ. ನಾವು ಸ್ವತಂತ್ರಿಸುವುದೇ ಬೇಡ" ಎಂದರು.

ಭಗವತೀ ವಿಶ್ವಾವರಾ ಅವರು ಎದ್ದರು: "ಸದಸ್ಸಿಗೂ ಸದಸ್ಯರಿಗೂ ಸದಸತ್ಪತಿಗಳಿಗೂ ನಮಸ್ಕಾರ. ವೇದಪುರುಷನನ್ನು ಪ್ರಾರ್ಥಿಸಿಕೊಂಡು ಆತನ ಅಪ್ಪಣೆಯಂತೆ ನಡೆಯುವುದು ನಮ್ಮೆಲ್ಲರಿಗೂ ವಿಹಿತವೇ! ಆದರೆ, ಭಗವಾನ್ ನಚಿಕೇತರು ಸೂಚಿಸುವಾಗ ಅವರಿಗೆ ವೇದ ಪುರುಷನ ಆಜ್ಞೆಯಾಗಿಲ್ಲವೆಂದು ನಾವೆಂದುಕೊಳ್ಳುವುದು ನಾವು ಅವರಲ್ಲಿಟ್ಟಿರುವ ಗೌರವಕ್ಕೆ ತಡೆಯುವುದಿಲ್ಲ. ನಾವು ವೇದಪುರುಷನನ್ನು ಕರೆದು ಕೇಳುವುದಾದರೆ ನಮಗೆ ಎಳ್ಳಷ್ಟೂ ಸ್ವತಂತ್ರ್ಯವಿಲ್ಲದೆ ಹೋದೀತು. ಬುದ್ಧಿವಂತರು ಪ್ರಮಾಣಗಳನ್ನೂ ಲಕ್ಷಣ ಗಳನ್ನೂ ಹಿಡಿದು ಸ್ವತಂತ್ರವಾಗಿ ಸಿದ್ಧಾಂತ ಮಾಡುವರು. ಹಾಗಿಲ್ಲದೆ, ಕೇವಲ ಯುಕ್ತಿಯಿಂದ ಮಾತ್ರವೇ ಸಿದ್ಧಾಂತ ಮಾಡಿದರೆ, ಪ್ರಬಲ ಯುಕ್ತಿಯು ಬಂದಾಗ ಅನುತಾಪ ಪಡಬೇಕಾದೀತು: ಕೇವಲ ಶ್ರುತಿಯಿಂದ ಮಾಡಿದರೆ, ಆಗ ಸಂದೇಹವು ನಿವಾರಣೆಯಾಗದೆ ಪ್ರಭು ಸಮ್ಮತಿಯಿಂದ ನಡೆದ ಕಾರ್ಯ ವೆಂದು ಯಾವಾಗಲಾದರೊಮ್ಮೆ ಶಂಕಿಸಬೇಕಾದೀತು. ಎರಡೂ ಕೂಡದು. ಅದರಿಂದ ಈ ಸಭೆಯ ಪ್ರಮಾಣ ಲಕ್ಷಣಗಳನ್ನು ಗೊತ್ತುಮಾಡಿ ಯಾರಾದರೂ ಒಬ್ಬಿಬ್ಬರನ್ನು ಮುಖವಾಗಿಟ್ಟುಕೊಂಡು ಪರೀಕ್ಷೆ ಮಾಡುವುದು. ಅನಂತರ ವಿಶ್ವಾಮಿತ್ರರಿಗೆ ಈ ಪದವಿಯನ್ನು ಕೊಡುವುದು" ಎಂದು ವಿನಯದಿಂದ ಅರಿಕೆಮಾಡಿ ಕುಳಿತರು.

ಮಹರ್ಷಿಗಳೂ ಬ್ರಹ್ಮರ್ಷಿಗಳೂ ಎಲ್ಲರೂ ಆ ಮಾತಿಗೆ ಒಪ್ಪಿದರು. ಎಲ್ಲರೂ ಬ್ರಹ್ಮತ್ವವೂ ಋಷಿತ್ವವೂ ವಿಶ್ವಾಮಿತ್ರರಿಗೆ ಪ್ರಾಪ್ತಿಯಾಗಿದೆಯೆಂದು ಒಪ್ಪಿಕೊಂಡು, ಆದರೂ ಪರೀಕ್ಷೆಯು ಬೇಕು ಎಂದರು. ಭಾರದ್ವಾಜರು ಹೇಳಿದರು: "ಅಲ್ಲಿ ನೋಡಿ, ವೇದಪುರುಷನ ಪರಮಾನುಗ್ರಹವಿಲ್ಲದೆ, ಮುಖ

ದಲ್ಲಿ ಆ ತೇಜಸ್ಸೂ ವರ್ಚಸ್ಸೂ ಇರುವುದೂ ಉಂಟೆ? ನಾವೇನು ಪಾಮರರೆ? ದೇವತೆಗಳನ್ನು ಸಾಕ್ಷಾತ್ಕರಿಸಿಕೊಂಡು ನೂರಾರು ಯಾಗಗಳಲ್ಲಿ ಭಾಗವಹಿಸಿ ರುವ ನಮಗೆ ತಿಳಿಯದುದು ಇನ್ನು ಯಾರಿಗೆ ತಿಳಿಯುತ್ತದೆ?"

ಗೌತಮರು ಹೇಳಿದರು: "ಅಗ್ನಿ ರಹಸ್ಯವನ್ನು ತಿಳಿಯದವರಿಗೆ ಮುಖ ದಲ್ಲಿ ಈ ಕಾಂತಿಯಿರುವುದಿಲ್ಲ."

ಭಾರ್ಗವರು ಹೇಳಿದರು: "ಗೌತಮರ ಮಾತು ನಿಜ. ಅಗ್ನಿಯು ನಮ್ಮ ಕುಲದೇವರು. ಅಗ್ನಿಯ ವಿಚಾರ ನಾನು ಬಲ್ಲೆ. ಈತನು ನಿಜ ವಾಗಿಯೂ ಬ್ರಹ್ಮರ್ಷಿಯಾಗಿದ್ದಾನೆ."

ಪ್ರತಿಯೊಬ್ಬರೂ "ಸಭಾಪತಿಗಳೇ ಪರೀಕ್ಷಾ ಕಾರ್ಯವನ್ನು ನೆರವೇರಿಸು ವುದು: ಮರುದಿನ ಸಭೆಯಲ್ಲಿ ಅವರು ಮಾಡಿದ ಪರೀಕ್ಷೆಯ ಫಲಿತಾಂಶವನ್ನು ತಿಳಿಸುವುದು. ಅದರಂತೆ ಸಭೆಯು ನಡೆಯುವುದು" ಎಂಬ ಸಿದ್ಧಾಂತವನ್ನು ಅಂಗೀಕರಿದರು.

ಅಂದಿನ ಸಭೆಯು ವಿಸರ್ಜನವಾಯಿತು. ಎಲ್ಲರೂ ಸ್ವಕರ್ಮಾರ್ಥವಾಗಿ ತೆರಳಿದರು.

---

## ಐವತ್ತನಾಲ್ಕನೆಯ ತರಂಗ

ಮರುದಿನ ಯಥಾಕಾಲದಲ್ಲಿ ಸಭೆಯು ಸೇರಿತು. ಹಿಂದಿನ ದಿನ ಅಧ್ಯಕ್ಷ ರಾಗಿದ್ದ ಭಗವಾನ್ ಪಿಪ್ಪಲಾದರು ಇಂದಿನ ದಿನವೂ ಅಧ್ಯಕ್ಷರಾಗಬೇಕೆಂದು ಭಗವಾನ್ ನಚಿಕೇತರು ಕೋರಿದರು. ಭಗವಾನ್ ಪಿಪ್ಪಲಾದರು ಎದ್ದುನಿಂತು "ಸದಸ್ಸಿಗೆ ನಮಃ, ಸದಸ್ಯರಿಗೆ ನಮಃ, ನಿನ್ನೆಯ ದಿನ ಒಂದು ವಿಶೇಷ ವಾಯಿತು. ನಾನು ಸಾಯಂಹೋಮವನ್ನು ಪೂರಯಿಸಿಕೊಂಡು ಕುಳಿತಿರು ವಾಗ ಶ್ರುತಿಭಗವತಿಯು ಬಂದು "ವತ್ಸಾ! ನನಗೊಂದು ವರ ಬೇಕು" ಎಂದಳು. ಯಥಾವಿಧಿಯಾಗಿ ಅರ್ಚಿಸಿ, "ಆಗಬಹುದು" ಎಂದೆನು. ನಿನ್ನಲ್ಲಿ ರುವ ಅಪೋಜ್ಯೋತಿರ್ವಿದ್ಯವನ್ನು ವಿಶ್ವಾಮಿತ್ರನಿಗೆ ದಾನಮಾಡು" ಎಂದು ಅಪ್ಪಣೆಮಾಡಿದಳು. ಅದರಂತೆ ಈ ದಿನ ನಾನೇ ಭಗವಾನ್ ವಿಶ್ವಾಮಿತ್ರರನ್ನು

ಹುಡುಕಿಕೊಂಡು ಹೋಗಿ ಅವರನ್ನು ಕರೆದುಕೊಂಡು ಬಂದು ಅವರಿಗೆ ಈ ವಿದ್ಯೆಯನ್ನು ಒಪ್ಪಿಸಿದೆನು. ಅದರಿಂದ ಅವನೂ ನಾನೂ ಒಂದೇ ಅಂತಸ್ತಿನವರಾದೆವು. ಹೀಗಿರಲು ನಿನ್ನೆಯ ದಿನ ಸಭೆಯವರು ಅಪ್ಪಣೆಮಾಡಿದಂತೆ, ಪರೀಕ್ಷೆಯು ನಡೆಯುವುದಕ್ಕೆ ನಾನು ಸರಿಯಾದ ಸಾಧನವಲ್ಲ. ಅವರನ್ನು ಪರೀಕ್ಷಿಸಬೇಕಾದ ಆವಶ್ಯಕತೆ ನನಗಿಲ್ಲ. ಕ್ಷಮಿಸಬೇಕು. ಬ್ರಹ್ಮರ್ಷಿತ್ವವನ್ನು ಒಪ್ಪಿಕೊಳ್ಳುವುದು ಮಾತ್ರವಾದರೆ ನಾನು ಅಧ್ಯಕ್ಷನಾಗಲು ಅಡ್ಡಿಯಿಲ್ಲ" ಎಂದರು.

ಸಭೆಯವರು ಭಗವಾನರು ಹೇಳಿದುದು ಸರಿ. ಮತ್ತೊಬ್ಬರನ್ನು ಅಧ್ಯಕ್ಷರನ್ನು ಮಾಡಿ ಎಂದರು. ಎಲ್ಲರೂ ಭಗವಾನ್ ಯಾಜ್ಞವಲ್ಕ್ಯರು ಎಂದರು. ಅವರು ಎದ್ದು, "ಅರ್ಧ ತಿಳಿದು ಅರ್ಧ ತಿಳಿಯದೆ ಇರುವಲ್ಲಿ ಪರೀಕ್ಷೆಯು ನಡೆಯಬೇಕು. ನನಗೆ ವಿಶ್ವಾಮಿತ್ರರು ಬ್ರಹ್ಮರ್ಷಿಗಳು ಎಂಬ ವಿಷಯದಲ್ಲಿ ಎಳ್ಳಷ್ಟೂ ಅಪನಂಬಿಕೆಯಿಲ್ಲ. ನೋಡುತ್ತಿದ್ದಹಾಗೆಯೇ ಈತನು ಧರ್ಮಜ್ಞನು, ಈತನು ಬ್ರಹ್ಮಜ್ಞನು ಎಂಬುದು ಆತ್ಮಕ್ಕೆ ಅರಿಕೆಯಾಗದಿದ್ದರೆ, ಮತ್ತಾವ ಪರೀಕ್ಷೆಯು ಅದನ್ನು ಅರಿಕೆಗೆ ತರಬಲ್ಲುದು? ಅದರಿಂದ, ಪರೀಕ್ಷೆಯು ಬೇಕಿಲ್ಲವೆನ್ನುವವನು ನಾನು" ಎಂದು ಸುಮ್ಮನಾದರು.

ಮತ್ತೆ "ಭಗವಾನ್ ನಚಿಕೇತರೇ ಏಕಾಗಬಾರದು?" ಎಂದರು ಇನ್ನೊಬ್ಬರು. ಭಗವಾನರೆದ್ದು ಭಗವಾನ್ ಪಿಪ್ಪಲಾದರೂ ಯಾಜ್ಞವಲ್ಕ್ಯರೂ ಏನು ಕಾರಣಗಳಿಂದ ಅಧ್ಯಕ್ಷ ಪದವಿಯನ್ನು ಅಂಗೀಕರಿಸಲಿಲ್ಲವೋ ಆ ಎರಡೂ ಕಾರಣಗಳು ನನ್ನಲ್ಲುಂಟು. ಅದರಿಂದ ನಮಗೂ ಆ ಸ್ಥಾನಕ್ಕೂ ದೂರವೆಂದರು.

ಭಗವಾನ್ ವಾಮದೇವರು ಭರತಕುಲ ಭೂಷಣರು. ಅಗ್ನಿದೇವನ ಕೃಪೆಯಿಂದ ರಹಸ್ಯವಿದ್ಯೆಗಳನ್ನು ಪಡೆದವರು. ಅಲ್ಲದೆ ಭಗವಾನ್ ವಸಿಷ್ಠರ ಪಟ್ಟಶಿಷ್ಯರು. ಅವರಾಗಲಿ" ಎಂದು ಇನ್ನೊಂದು ಸಲಹೆಯು ಬಂದಿತು. ಭಗವಾನ್ ವಾಮದೇವರೆದ್ದು "ನಾವೂ ಪಿಪ್ಪಲಾದ ನಚಿಕೇತರಂತೆ ವಿಶ್ವಾಮಿತ್ರರಿಗೆ ನಮ್ಮ ವಿದ್ಯೆಯನ್ನು ಒಪ್ಪಿಸಿರುವವರು. ಆದರಿಂದ ನಾವು ಇಲ್ಲಿಯೇ ಇರಬೇಕು" ಎಂದರು. ಕೊನೆಗೆ ಸರ್ವಾನುಮತಿಯಿಂದ ಭಗವತೀ ಗಾರ್ಗಿಯವರು ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದರು.

ಸಭೆಯು ಆಕೆಯು ಹೇಳಿದ ಪರೀಕ್ಷಾಪೂರ್ವವಾಗಿ ಎಂಬ ಮಾತನ್ನು ಒಪ್ಪಿತು. ಆದರೆ ಪರೀಕ್ಷೆಯು ಯಾರಿಂದ ನಡೆಯಬೇಕು? ಎಂಬ ವಿಷಯ ದಲ್ಲಿ ಬಲು ದೊಡ್ಡ ಚರ್ಚೆಯಾಯಿತು. ಕೊನೆಗೆ ಸಪ್ತರ್ಷಿಗಳಲ್ಲಿ ಒಬ್ಬರಿಂದಲೇ ನಡೆಯಬೇಕು ಎಂದು ಗೊತ್ತಾಯಿತು.

ಸರ್ವರೂ ಈ ಪರೀಕ್ಷೆಯು ವಸಿಷ್ಠರಿಂದಲೇ ನಡೆಯಬೇಕು ಎಂದು ಒಪ್ಪಿದರು. ಒಬ್ಬರು ವಸಿಷ್ಠರಿಗೆ ವಿಶ್ವಾಮಿತ್ರರಮೇಲೆ ಕೊಂಚ ಕೋಪವಿರ ಬಹುದು ಎಂದು ವಸಿಷ್ಠ ಪುತ್ರ ಪ್ರಸಂಗವನ್ನೆತ್ತಿದರು. "ಭಾಗೀರಥಿಗಿಂತಲೂ ಶಾಂತರವರು. ಅವರಿಗೆ ಅದು ನೆನೆಪಿನಲ್ಲಿಯೂ ಇರುವುದಿಲ್ಲ. ಇದ್ದರೂ ಪೃಥ್ವಿಗಿಂತ ಕ್ಷಮಾವಂತರಲ್ಲವೆ ಅವರು?" ಎಂದು ಉತ್ತರವು ಬಂತು. "ಬಹುಶಃ ವಸಿಷ್ಠರು ವಿಶ್ವಾಮಿತ್ರರಿಗೆ ಅನುಕೂಲವಾಗಿರಬಹುದು. ಅವರ ದುಃಖವನ್ನು ಕಳೆಯುವುದರಲ್ಲಿ ಇವರೂ ಭಾಗವಹಿಸಿದ್ದರು ಅಲ್ಲವೆ?" ಎಂದು ಇನ್ನೊಬ್ಬರು ಕೇಳಿದರು. ಸಭೆಯು ಮತ್ತೆ ಏಕಕಂಠವಾಗಿ "ಭಗವಾನ್ ವಸಿ ಷ್ಠರು ರಾಗದ್ವೇಷ ವಶರಾಗುವರು ಎನ್ನುವದೂ ಗಾಳಿಯು ಹಿಮವತ್ಪರ್ವತ ವನ್ನು ಹಾರಿಸಿಕೊಂಡು ಹೋಯಿತು ಎನ್ನುವದೂ ಎರಡೂ ಒಂದೇ!" ಎಂದಿತು.

ಕೊನೆಗೆ ಸಭೆಯು ಎರಡು ಸೂಚನೆಗಳನ್ನು ಅಂಗೀಕರಿಸಿತು: ಮೊದ ಲನೆಯದು ಈ ಪರಿಷತ್ತು ವಿಶ್ವಾಮಿತ್ರರ ಬ್ರಹ್ಮರ್ಷಿತ್ವವನ್ನು ವಸಿಷ್ಠ ಮುಖ ವಾಗಿ ಅಂಗೀಕರಿಸುತ್ತದೆ: ಎರಡನೆಯದಾಗಿ ಇನ್ನುಮುಂದೆ ವಿಶ್ವಾಮಿತ್ರರನ್ನು ಭಗವಾನ್ ಎಂದು ಸಂಬೋಧಿಸತಕ್ಕುದು."

ಭಗವಾನ್ ವಸಿಷ್ಠರಿಗೆ ಈ ವಿಷಯವನ್ನು ತಿಳಿಸುವವರು ಯಾರು? ಎಂಬುದು ಚರ್ಚೆಗೆ ಬಂತು. ಕೊನೆಗೆ ಹಿರಿಯರೆಲ್ಲರೂ ಭಗವಾನರು ಅಗ್ನಿ ಮುಖದಿಂದ ಬಂದರೆ ಒಪ್ಪುವರಲ್ಲದೆ ಇನ್ನು ಯಾರು ಹೇಳಿದರೂ ಕೇಳುವುದಿಲ್ಲ. ಆದರಿಂದ ಭಗವಾನ್ ಯಾಜ್ಞವಲ್ಕ್ಯರು ಅಗ್ನಿಮುಖವಾಗಿ ಈ ವೃತ್ತಾಂತವನ್ನು ವಸಿಷ್ಠರಿಗೆ ತಿಳುಹಿಸುವುದು ಎಂದು ಗೊತ್ತಾಯಿತು.

ಸಭಾ ವಿಸರ್ಜನವಾಯಿತು. ಭಗವಾನ್ ನಚಿಕೇತರು ಅಲ್ಲಿ ನೆರೆದಿದ್ದವರಿ ಗೆಲ್ಲರಿಗೂ ಯಥಾವಿಧಿಯಾಗಿ ಅರ್ಚನಾದಿಗಳನ್ನು ಸಲ್ಲಿಸಿದರು. ಎಲ್ಲರೂ

ಭಗವಾನರ ಆಶ್ರಮದಲ್ಲಿ ಪರಿಷತ್ತಿಗಾಗಿ ನಡೆದಿದ್ದ ವಿತರಣೆಗಳನ್ನು ಕೊಂಡಾಡುತ್ತ ಅವರೆಲ್ಲರನ್ನೂ ಬೀಳ್ಕೊಂಡು ಹಿಂದಿರುಗಿದರು.

ಆ ಪರಿಷತ್ತಿಗೆ ಬಂದಿದ್ದವರೆಲ್ಲಾ ಭಗವಾನ್ ವಿಶ್ವಾಮಿತ್ರರನ್ನು ಒಬ್ಬೊಬ್ಬರಾಗಿ ಕಂಡು ಕುಶಲಪ್ರಶ್ನಗಳನ್ನು ಮಾಡಿ ತಮ್ಮ ತಮ್ಮ ಅಭಿನಂದನಗಳನ್ನು ಸಮರ್ಪಿಸಿ ತೆರಳಿದರು.

ಭಗವತೀ ಗಾರ್ಗಿಯು ಬಂದು ಸಾಷ್ಟಾಂಗ ಪ್ರಣಾಮಮಾಡಿದಳು. ಭಗವಾನರು ನನ್ನಲ್ಲಿ ಪ್ರಸನ್ನರಾಗಿರುವರಾದರೆ ನನಗೊಂದು ವರವನ್ನು ಕೊಡಬೇಕು" ಎಂದು ಪ್ರಾರ್ಥಿಸಿದರು.

"ಭಗವತಿಯವರ ಅಪ್ಪಣೆಯನ್ನು ಶ್ರುತೀಭಗವತಿಯ ಅಪ್ಪಣೆಯೆಂದು ಶಿರಸ್ಸಿನಲ್ಲಿ ಧರಿಸಿ ಮಾಡುತ್ತೇನೆ."

"ದೇವಾ, ಇನ್ನು ಮುಂದೆ ಬ್ರಾಹ್ಮಣ್ಯಸಾಧನೆಯು ಸುಲಭವಾಗುವಂತೆ ಏನಾದರೂ ಒಂದು ಉಪಾಯವನ್ನು ಕಲ್ಪಿಸಬೇಕು. ಬರುಬರುತ್ತ ಕಾಲಾನುಗುಣವಾಗಿ ಶಕ್ತಿ ಶ್ರದ್ಧಾ ಸಾಮರ್ಥ್ಯಗಳು ಹ್ರಸ್ವವಾಗುತ್ತ ಬರುವುವು. ಆಗ ತಮ್ಮಂತೆ ದೀರ್ಘ ತಪಸ್ಸುಮಾಡುವವರೇ ಇಲ್ಲವಾಗುವರು. ಬ್ರಾಹ್ಮಣ್ಯವು ಖಿಲವಾಗುವುದು. ಅದರಿಂದ ಸುಲಭಸಾಧ್ಯವಾದ ಒಂದು ಕಲ್ಪವು ಏರ್ಪಡಬೇಕು. ಅದನ್ನು ಇನ್ನು ಯಾರೂ ಮಾಡುವಂತಿಲ್ಲ. ತಾವೇ ಮಾಡಬೇಕು."

"ಇದು ಸಾಮಾನ್ಯವಾದ ಕೋರಿಕೆಯಲ್ಲ. ಆಗಲಿ, ದೇವತೆಗಳು ಇರುವರಲ್ಲ! ಈ ಬ್ರಹ್ಮಾಂಡದ ಆಡಳಿತವೆಲ್ಲ ಅವರಿಗೆ ಸೇರಿದುದು. ತಮ್ಮ ಕೋರಿಕೆಯನ್ನು ನೆರವೇರಿಸುವುದು ಅವರಿಗೆ ಭಾರವಲ್ಲ. ಆಗಲಿ. ನನ್ನ ತಪಸ್ಸರ್ವಸ್ವವನ್ನೂ ವಿನಿಯೋಗಿಸಿಯಾದರೂ ದೇವತೆಗಳನ್ನು ಪ್ರಾರ್ಥಿಸುವೆನು. ಪ್ರಯತ್ನ ಶೈಥಿಲ್ಯವಿಲ್ಲದಂತೆ ನೋಡಿಕೊಳ್ಳುವುದು ನನ್ನ ಕೆಲಸ. ಇದರ ಮೇಲೆ ಏನು ಹೇಳಲಿ?"

"ಭಗವಾನರು ನನಗೆ ಕೊಟ್ಟಿರುವುದು ವರ. ವಾಚಕ್ನವಿಯು ಹಟಮಾರಿಯೆಂಬುದು ಲೋಕವಿದಿತವಾದ ವಿಷಯ. ಇವೆರಡೂ ನೆನಪಿನಲ್ಲಿರಲಿ. ದೇವ, ಇದೋ, ನನ್ನ ತಪಸ್ಸೆಲ್ಲವನ್ನೂ ತಮಗೆ ಧಾರೆಯೆರೆಯುವೆನು. ಲೋಕವೆಲ್ಲವೂ ಬ್ರಾಹ್ಮಣವಾಗಲಿ. ಅದಕ್ಕೇನು ಮಾಡಬೇಕೋ ಮಾಡೋಣವಾಗಲಿ."

ಅದೇ ಮಾತಿಗೆ ಮಾತು ಸೇರಿಸಿಕೊಂಡು ಮತ್ತೊ ಒಬ್ಬರು ಒಳಕ್ಕೆ ಬಂದರು : "ಅಹುದಹುದು. ಭಗವತಿಯವರ ಕೋರಿಕೆ ಸರ್ವಥಾ ಸಾಧು ವಾದುದು. ಬೆಂಕಿಗೆ ಹಾಕಿದ ಸೌದೆ ಬೆಂಕಿಯಾಗುತ್ತದೆ. ಹಾಗೆಯೇ ಆರ್ಯ ರಾದ ನಾವು ಲೋಕವನ್ನೆಲ್ಲ ಆರ್ಯಮಾಡುವುದೇ ? ಅಥವಾ ಅದರ ಜೊತೆ ಯಲ್ಲಿ ನಾವೂ ಅನಾರ್ಯರಾಗುವುದೇ ? ಇದು ಆಕೆಯ ಪ್ರಶ್ನೆ. ಲೋಕವೆಲ್ಲ ಬ್ರಾಹ್ಮಣ ಎಂದರೆ ಅರ್ಥಾತ್ ಆರ್ಯವಾಗಬೇಕು. ಅದರ ಸಾಧನವನ್ನು ಕಂಡುಹಿಡಿಯಲು ಅನ್ಯಮಿಂದ್ರಂ ಕರಿಷ್ಯಾಮಿ ಎಂದು ನೆಲವನ್ನು ತಟ್ಟಿದ ಧೀರನಲ್ಲದೆ ಇನ್ನು ಯಾರು ಸಮರ್ಥರು ? ಪ್ರಯತ್ನ ಶೈಥಿಲ್ಯವೆಂದಿರಿ. ತಪ ಸ್ಸಿಗೆ ಸಾಧ್ಯವಲ್ಲದುದು ಯಾವುದೂ ಇಲ್ಲ. ಇದೋ ಈ ಯಾಜ್ಞವಲ್ಕ್ಯನಿಗೆ ಇರುವ ತಪಸ್ಸು ಎಳ್ಳಷ್ಟಾಗಲಿ, ಪರ್ವತದಷ್ಟಾಗಲಿ, ಅದಷ್ಟೂ ತಮ್ಮದು. ತಾವು ಗೆದ್ದು ಲೋಕವನ್ನು ಗೆಲ್ಲಿಸಿ."

ಆ ವೇಳೆಗೆ ಭಗವಾನ್ ನಚಿಕೇತರು ಇಬ್ಬರು ವೃದ್ಧ ದಂಪತಿಗಳನ್ನು ಕರೆದುಕೊಂಡು "ಭಗವಾನರ ಸಮಯವೇನು ? " ಎನ್ನುತ್ತ ಒಳಗೆ ಬಂದರು. ಬಂದವರು ಲೋಪಾಮುದ್ರಾಗಸ್ತ್ಯರು ಮತ್ತು ಅನಸೂಯಾತ್ರಿಗಳು. ಎಲ್ಲರೂ ಎದ್ದು ಬಂದವರಿಗೆ ಸಾಷ್ಟಾಂಗವಾಗಿ ಅಭಿವಾದನಮಾಡಿದರು. ಪರಮಪೂಜ್ಯ ರಾದ ಆ ದಂಪತಿಗಳು ಬರುತ್ತಲೂ ಆ ಪರ್ಣಶಾಲೆಯು ಬ್ರಹ್ಮಸಭೆಯಂತೆ ದೇದೀಪ್ಯಮಾನವಾಯಿತು. ಎಲ್ಲರಿಗೂ ಆನಂದವೋ ಆನಂದವಾಯಿತು.

ಬಂದವರಂತೂ "ಭಗವಾನ್ ವಿಶ್ವಾಮಿತ್ರರಿಗೆ ಕ್ಷೇಮವೆ ? ನಾವು ನಿನ್ನೆಯೇ ಬರಬೇಕಾಗಿತ್ತು. ಆದರೆ ಭಗವಾನರ ಆಹ್ವಾನವು ಬರುವ ವೇಳೆಗೆ ಒಂದು ಇಷ್ಟಿಯನ್ನು ಆರಂಭಿಸಿದ್ದೆವು. ಅದನ್ನು ಮುಗಿಸದೆ ಬರುವಂತಿಲ್ಲ. ಅದರಿಂದ ತಡವಾಯಿತು, ಕೋಪಮಾಡಿಕೊಳ್ಳಬಾರದು " ಎಂದು ಬೇಕಾದಷ್ಟು ಸಮಾ ಧಾನವನ್ನು ಹೇಳಿಕೊಳ್ಳುತ್ತ ತಮ್ಮ ಆನಂದವನ್ನು ಸೂಚಿಸಿದರು.

ಇಲ್ಲಿ ಹೀಗೆ ಇವರೆಲ್ಲ ಮಾತನಾಡುತ್ತಿರುವಾಗಲೇ ಇನ್ನೂ ಇಬ್ಬರು ಬಂದರು. ಪಿಪ್ಪಲಾದರು, ವಾಮದೇವರು. ಇಬ್ಬರೂ ಬರುತ್ತಿದ್ದ ಹಾಗೆಯೇ ಲೋಪಾಮುದ್ರಾಗಸ್ತ್ಯರನ್ನೂ ಅನಸೂಯಾತ್ರಿಗಳನ್ನೂ ಕಂಡು ವಿಸ್ಮಿತರಾಗಿ, "ಇನ್ನೇನು, ನಾವು ಬಂದ ಕೆಲಸ ಆಗುವುದಿಲ್ಲವೇನು ? ಉಮಾಮಹೇಶ್ವರ ರಂತೆ, ಲಕ್ಷ್ಮೀನಾರಾಯಣರಂತೆ, ಎರಡು ರೂಪವಾಗಿ ಬಂದ ದ್ಯಾವಾಪೃಥಿ

ಯರಂತೆ, ಈ ದಂಪತಿಗಳು ಬಂದಿರುವರು. ಅವಂಧ್ಯದರ್ಶನರಿವರು. ಇವರ ಸಮ್ಮುಖದಲ್ಲಿ ಸಲ್ಲಿಸಿದ ಪ್ರಾರ್ಥನೆಯು ಸಫಲವಾಗದೆ ಇನ್ನೇನೂ ಆಗುವಂತಿಲ್ಲ. ಬಹುಶಃ ಇವರು ನಮ್ಮ ಪ್ರಾರ್ಥನೆಯನ್ನು ಸಲ್ಲಿಸುವುದಕ್ಕೇ ಬಂದಿರುವರೋ ?" ಎಂದು ಆನಂದಪಟ್ಟರು.

ಪರಸ್ಪರ ಕುಶಲಪ್ರಶ್ನೆಗಳಾಗಿ ಎಲ್ಲರೂ ಯಥಾಯಥಾ ಕುಳಿತಮೇಲೆ, ಅಗಸ್ತ್ಯರು "ಅದೇನು ನಿಮ್ಮ ಕೋರಿಕೆ ? ಹೇಳಿ. ನಮ್ಮ ಕಿವಿಗಳು ಅದನ್ನು ಕೇಳಿ ಸಂತೋಷಪಡಲಿ. ಅದು ನೆರವೇರಲು ಏನಾದರೂ ನಮ್ಮ ತಪಸ್ಸು ಬೇಕಾದರೆ ನಾವೂ ಕೊಡೋಣ" ಎಂದರು. ಅತ್ರಿಗಳು "ಅವಶ್ಯವಾಗಿ ಆಗಬಹುದು. ನಾವು ಮಾಡುವುದೇನಾದರೂ ಇದ್ದರೆ ಅದಕ್ಕೂ ನಾವು ಸಿದ್ಧ" ಎಂದರು.

ಪಿಪ್ಪಲಾದರ ಕೋರಿಕೆಯಂತೆ ವಾಮದೇವರು ಹೇಳಿದರು. "ಹಿರಿಯರೆಲ್ಲರೂ ಸೇರಿದ್ದೀರಿ. ಕಾಲವಶದಿಂದ ಹ್ರಸ್ವವಾಗುವ ಶಕ್ತಿ ಶ್ರದ್ಧಾ ಸಾಮರ್ಥ್ಯಗಳನ್ನು ಕಂಡು, ಮುಂದಿನವರು ಬ್ರಾಹ್ಮಣ್ಯವನ್ನು ಪಡೆಯಲು ಸುಲಭವಾದ ಕಲ್ಪವೊಂದನ್ನು ಕಂಡು ಹಿಡಿಯಬೇಕೆಂದು ಭಗವಾನ್ ವಿಶ್ವಾಮಿತ್ರರನ್ನು ಕೇಳಿಕೊಳ್ಳಬೇಕೆಂದು ಬಂದೆವು. ತಾವೆಲ್ಲರೂ ಇದ್ದೀರಿ. ತಾವು ಹೇಗೆ ಹೇಳಿದರೆ ಹಾಗೆ ಆಗಬಹುದು" ಎಂದರು.

ಅತ್ರಿಗಳ ಸೂಚನೆಯಂತೆ, ಅಗಸ್ತ್ಯರು ಹೇಳಿದರು: ನಾವೂ ಇದಕ್ಕಾಗಿಯೇ ಬಂದೆವು. ನಾವು ಬರುವ ವೇಳೆಗೆ ಪರಿಷತ್ತು ಮುಗಿದುಹೋಗಿರುವುದು ಎಂದು ನಮಗೆ ಗೊತ್ತಿತ್ತು. ಆದರೆ, ಭಗವಾನ್ ವಿಶ್ವಾಮಿತ್ರರು ವಿಶ್ವಮಿತ್ರರಾಗಿ ಸರ್ವೇಷಾಂ ಹಿತಾಯ ಒಂದು ಕಲ್ಪವನ್ನು ಸಿದ್ಧಮಾಡಬೇಕು ಲೋಕೋಪಕಾರ ಮಾಡಬೇಕು. ವಯೋವೃದ್ಧರಾದ ನಾವು ಜ್ಞಾನವೃದ್ಧರಾದ ಇವರಲ್ಲಿ ಯಾಚನ ಮಾಡುವುದಕ್ಕೆ ಬಂದಿದ್ದೇವೆ."

ವಿಶ್ವಾಮಿತ್ರರಿಗೆ ಕಣ್ಣಿನಲ್ಲಿ ನೀರು ಬಂತು: ಅಲ್ಲಿ ಸೇರಿದ್ದ ಮಹಾನುಭಾವರ ತಪೋಜ್ವಾಲೆಯ ಬಿಸಿಯು ತಗುಲಿ, ಹಿಮವತ್ಪರ್ವತದ ಶಿಖರವೊಂದರಲ್ಲಿದ್ದ ಹಿಮವು ಕರಗಿ ನೀರಾಗಿ ಇಳಿಯುತ್ತಿರುವುದೋ ಎನ್ನುವಷ್ಟು ಧಾರಾಳವಾಗಿ ಕಂಬನಿಗಳು ಸುರಿಯುತ್ತಿರಲು, ಎದ್ದು ನಿಂತು ವಿನಯದಿಂದ ಕೈಮುಗಿದುಕೊಂಡು ಹೇಳಿದರು:—"ಬ್ರಹ್ಮಾಂಡ ಬ್ರಹ್ಮಾಂಡದ ತಪಸ್ಸೇ

ಒಂದೊಂದು ಮೂರ್ತಿಯಾಗಿ ಬಂತೋ ಎಂಬಂತಿರುವ ತಾವು ಒಬ್ಬರೊಬ್ಬರು ಆಜ್ಞೆ ಮಾಡಿದರೆ ಸಾಕಾಗಿರುವಾಗ, ವೇದಮೂರ್ತಿಗಳು ತಾವೆಲ್ಲರೂ ಸೇರಿ ಮಾಡಿರುವ ಈ ಆಜ್ಞೆಯು ನನಗೆ ಪರಮಾನುಗ್ರಹವು. ನಾನು ಯಾವುದೋ ಅಹಂಕಾರದಲ್ಲಿ ಲೋಕಕ್ಕೆಲ್ಲ ಮಿತ್ರನಾಗಿರಬೇಕೆಂದು ವಿಶ್ವಾಮಿತ್ರನೆಂದು ಹೆಸರಿಟ್ಟು ಕೊಂಡೆ. ಆ ಹೆಸರು ಸಾರ್ಥಕವಾಗಲೆಂದು ತಾವು ಅನುಗ್ರಹ ಮಾಡುತ್ತಿರುವಿರಿ. ಈ ಕಾರ್ಯವಾಗುವುದು ತಮ್ಮ ಆಶೀರ್ವಾದ ಬಲದಿಂದ. ಅದರ ಕೀರ್ತಿಯು ನನಗಾಗಲಿ ಎಂದು ಪರಮ ವಿಶ್ವಾಸದಿಂದ ಈ ಕಾರ್ಯದಲ್ಲಿ ನನ್ನನ್ನು ನಿಯೋಜಿಸುತ್ತಿರುವಿರಿ. ತಾವು ಯಾರಾದರೂ ಒಬ್ಬರು ಚಿಟಿಕೆ ಹಾಕುವಷ್ಟು ಸುಲಭವಾಗಿ ಮಾಡಬಹುದಾದ ಈ ಕೆಲಸವನ್ನು ನನಗೆ ವಹಿಸಿರುವಿರಿ. ಶಿರಸಾವಹಿಸಿ, ತಮ್ಮ ಅಪ್ಪಣೆಯನ್ನು ನೆರವೇರಿಸುವೆನು" ಎಂದು ಸಾಷ್ಟಾಂಗವಾಗಿ ಪ್ರಣಾಮ ಮಾಡಿದರು.

ಅಲ್ಲಿದ್ದವರೆಲ್ಲರ ಕೋರಿಕೆಯಂತೆ ಅತ್ರಿಗಳು ಹೇಳಿದರು: "ಭಗವಾನ್, ತಾವು ಅಪ್ಪಣೆ ಕೊಡಿಸಿದುದು ನಿಜ. ಇಲ್ಲಿ ಸೇರಿರುವವರಲ್ಲಿ ಒಬ್ಬೊಬ್ಬರೇ ಈ ಅಖಂಡ ಬ್ರಹ್ಮಾಂಡದ ಯೋಗಕ್ಷೇಮವನ್ನು ವಹಿಸಬಲ್ಲರು. ಆದರೂ ತ್ರಿಕಾಲಜ್ಞರಾದ ಈ ಮಹಾನುಭಾವರು ತಮ್ಮ ಆಗಮನವನ್ನೇ ಎದುರು ನೋಡುತ್ತಿದ್ದರು. ವಸಿಷ್ಠಾಶ್ರಮದಲ್ಲಿ ನಂದಿನೀ ಧೇನುವಿಗಾಗಿ ತಾವು ಲೋಭಪಟ್ಟಾಗಲೇ ನಾವೆಲ್ಲ 'ಸರಿ, ಲೋಕಹಿತದ ಕಾರ್ಯವು ಆರಂಭವಾಯಿತು. ಕೌಶಿಕನು ವಿಶ್ವಾಮಿತ್ರನಾಗಿ ವಿಶ್ವೋಪಕಾರಿಯಾಗುವ ಕಾಲವು ಬೇಗ ಸನ್ನಿಹಿತವಾಗಲಿ,' ಎಂದು ನಾವು ಹರಕೆ ಕಟ್ಟಿದೆವು. ಆ ಸತ್ಕಾಲವು ಬಂದಿದೆ. ಆಗಲಿ. ನಮ್ಮೆಲ್ಲರ ಆಶೀರ್ವಾದಗಳು, ತಪಸ್ಸು, ಎಲ್ಲವೂ ತಮ್ಮದಾಗಿ ಲೋಕೋಪಕಾರವಾಗಲಿ" ಎಂದರು.

ಎಲ್ಲರೂ ತಥಾಸ್ತು ತಥಾಸ್ತು ಎಂದರು. ವಿಶ್ವಾಮಿತ್ರರು ಮತ್ತೆ ಪ್ರಣಾಮ ಮಾಡಿ ಆ ನಿಯೋಗವನ್ನು ಗ್ರಹಣಮಾಡಿದರು.



## ಐವತ್ತೈದನೆಯ ತರಂಗ

ವಿಶ್ವಾಮಿತ್ರರು ಅವರೆಲ್ಲರನ್ನೂ ಬೀಳ್ಕೊಂಡು ಸಿಂಧೂನದಿಯ ತೀರದಲ್ಲಿ ಬಂದು ನಿಂತರು. ಸುತ್ತಲೂ ಬೆಟ್ಟಗಳು. ವಾಯವ್ಯದಿಂದ ನದಿಯು ನುಗ್ಗಿ ಬಂದು ಅರ್ಧಚಂದ್ರವಾಗಿ ಹರಿದು ದಕ್ಷಿಣಕ್ಕೆ ನುಗ್ಗಿ ಹೊರಟುಹೋಗುವುದು. ಆ ನದಿಯ ಇಕ್ಕೆಲಗಳಲ್ಲೂ ಬೆಟ್ಟದಂತಹ ಮರಗಳು. ಗಿರಿಕನ್ಯಕೆಯು ಯಾರೋ ತನಗೆ ಬೇಕಾದವರಿಗೋಸ್ಕರ ಉತ್ತಮೋತ್ತಮವಾದ ಹಸುರುಡೆ ಯನ್ನು ತಂದು ಗಾಳಿಗೆ ಹರಡಿರುವಳೆಂಬಂತೆ, ಕಾಡಿನ ಹಸುರು ಹೊದ್ದಿರಲು ಆ ಪ್ರಸ್ಥಭೂಮಿಯು ಸೊಗಸಾಗಿದೆ. ಅಲ್ಲಿ ವಿಶ್ವಾಮಿತ್ರರ ಆಶ್ರಮ.

ಈಗ ಅವರಿಗೆ ಎರಡೇ ಎರಡು ಯೋಚನೆ. ವಿಶ್ವಕ್ಕೆ ವಿಶ್ವವನ್ನೇ ಆರ್ಯಮಾಡಬೇಕಾದರೆ ಏನು ಮಾಡಬೇಕು? ಯಾವ ಯೋಗ, ಯಾವ ಯಾಗ, ಯಾವ ಉಪಾಸನೆ, ಯಾವ ಕರ್ಮ, ಯಾವ ವ್ರತವನ್ನು ಮಾಡಿ ದರೆ ಇದು ಸಾಧ್ಯವಾದೀತು? ಬ್ರಹ್ಮರ್ಷಿಲೋಕದ ಕೋರಿಕೆಯು ಎಂದಿಗೆ ನೆರವೇರೀತು? ಎಂಬ ದೀರ್ಘಯೋಚನೆಯ ಜೊತೆಗೆ ಒಂದು ಸಮಾ ಧಾನ: "ಇದರ ಹಿಂದೆ, ಈ ಕಲ್ಪವನ್ನು, ಈ ಸಾಧನೆಯನ್ನು ಕಂಡು ಹಿಡಿಯಬೇಕೆಂಬುವದರ ಹಿಂದೆ ಅಂತಹ ಮಹಾಮಹಿಮರ ಸಂಕಲ್ಪಗಳಿವೆ. ಅದರಿಂದ ಯಾವೊತ್ತಾದರೂ ಒಂದು ದಿನ ಅದು ಮಳೆಯಂತೆ ಬಂದೇಬಿಡ ಬೇಕು. ಅಥವಾ ಮಳೆಯೂ ಬಂದಿದೆ: ಆ ನೀರೆಲ್ಲ ಒಟ್ಟುಗೂಡುತ್ತಿದೆ. ನದಿಯಲ್ಲಿ ಪ್ರವಾಹವಾಗಿ ಬರಬೇಕು, ಬರುತ್ತದೆ."

ಎರಡನೆಯ ಯೋಚನೆ ಸಾಲ ತೀರಿಸುವುದು. ಅದು ಈಗ ಅಷ್ಟು ಕೊರೆಯುವುದಿಲ್ಲ. ಕೈಯಲ್ಲಿ ಹಣವಿಟ್ಟುಕೊಂಡಿರುವವನು, "ಇನ್ನೇನು ಹಣ ಬಂದಿದೆಯಲ್ಲಾ? ಸರಿ. ತೆಗೆದುಕೊಂಡು ಹೋಗಿ ಕೊಟ್ಟರಾಯಿತು" ಎಂಬ ಸಮಾಧಾನದಿಂದ ಇರುವಂತೆ ಅಲ್ಲೂ ಸಮಾಧಾನವಿದೆ. ಆದರೆ ಒಂದು ವ್ಯತ್ಯಾಸ. ಆಗ ಅದು ಇಂದ್ರನ ಸಾಲ ಎನ್ನುತ್ತಿದ್ದ ವಿಶ್ವಾಮಿತ್ರರು ಈಗ ಅದು ಭಗವಾನರ ಸಾಲ ಎನ್ನುತ್ತಾರೆ. ಅದು ಆದಷ್ಟು ಬೇಗ ತೀರಬೇಕು. ಇಲ್ಲವಾದರೆ ಉಳಿಗಾಲವಿಲ್ಲ ಎನ್ನುವಷ್ಟು ಕೊರತೆಯೂ ಇದೆ.

ಈ ಎರಡೂ ಒಟ್ಟಿಗೇ ಬರುವುದೂ ಉಂಟು. ಆಗ ತಪ್ಪದೆ ಎರಡನೆಯ ದಕ್ಕೆ ಪ್ರಥಮ ಸ್ಥಾನ. "ಸ್ವಂತ ಸಾಲವನ್ನು ತೀರಿಸಿ, ನಾನು ಅನೃಣನಾಗಿ,

ತನ್ನ ಹೊರೆಯನ್ನು ಇಳಿಸಿಕೊಂಡು, ಆತ್ಮೋದ್ಧಾರಮಾಡಿಕೊಂಡವನು ವಿಶ್ವೋದ್ಧಾರಕ್ಕೆ ಕೈಯಿಡಬೇಕು. ಇಲ್ಲದಿದ್ದರೆ, ಈಜು ಬರದಿದ್ದವನು ನೀರಲ್ಲಿ ಬಿದ್ದವನನ್ನು ಎತ್ತುವುದಕ್ಕೆ ಹೋದಂತಾಗುವುದು. ಅದರಿಂದ ಮೊದಲು ಒಂದು ಮದುವೆಯನ್ನು ಮಾಡಿಕೊಳ್ಳಬೇಕು. ಧರ್ಮಪ್ರಜೆಯಾಗಿಯೇ ಐವತ್ತು ಮಕ್ಕಳನ್ನು ಪಡೆಯಬೇಕು. ಅವರನ್ನು ತಾನಾಗಿ ಬಲಿಕೊಡಬೇಕು. ಆ ದುಃಖವನ್ನು ಹೊಡೆಯುವುದಕ್ಕೆ ಇನ್ನೊಂದು ಲೋಭವನ್ನು ಎದುರಿಸಿಟ್ಟು ಮುಳ್ಳಿಂದ ಮುಳ್ಳು ತೆಗೆದಹಾಗೆ ಮಾಡಿ, ತಾನು ನಿಶ್ಚಿಂತನಾಗಬೇಕು.

"ನಿಶ್ಚಿಂತನಾಗುವುದೇನೋ ಸರಿ. ಮಕ್ಕಳು ಎಂದರೆ ದಂಪತಿಗಳ ಸ್ವತ್ತು. ತಂದೆಯೊಬ್ಬನದೇ ಅಲ್ಲ. ಅದರಿಂದ ನನಗೆ ಬಲಿಗೆ ಐವತ್ತು ಮಕ್ಕಳು ಬೇಕಾದರೆ ನೂರು ಮಕ್ಕಳನ್ನು ಪಡೆದು, ಐವತ್ತು ಮಂದಿಯನ್ನು ಪಡೆದ ಹೊಟ್ಟೆಯ ತಂಪಿಗಾಗಿ ಬಿಟ್ಟು ಉಳಿದವರನ್ನು ನಾನು ಉಪಯೋಗಿಸಿಕೊಳ್ಳಬೇಕು. ಅದರಲ್ಲಿಯೂ ತಾಯಂದಿರಿಗೆ ಕನಿಷ್ಠನ ಮೇಲೆ ಪ್ರೇಮ. ಅದರಿಂದ ಮೊದಲಿನ ಐವತ್ತು ಮಂದಿಯನ್ನು ನಾವಿಟ್ಟುಕೊಳ್ಳಬೇಕು. ಅವರು ಗರ್ಭಕ್ಕೆ ಬರುವಾಗಲೇ ದುಷ್ಟರಾಗಿಯೇ ಹುಟ್ಟಲಿ: ಅವರ ದೌಷ್ಟ್ಯವೇ ಅವರನ್ನು ಕೊಲ್ಲಲಿ. ನಾವು ಅಡ್ಡಿ ಬರದೆ ಆಗಿಹೋಗಲಿ ಎಂದು ಸುಮ್ಮನಿರೋಣ.

" ಅದು ಸಾಧ್ಯವಿಲ್ಲ. ವಸಿಷ್ಠಪುತ್ರರ ಮರಣಕ್ಕೆ ನಾವು ಹೇಗೆ ಕಾರಣರಾದೆವೋ, ಅಥವಾ ನಾವು ಕರ್ತೃಗಳಾಗಿ ನಿಂತು ಆ ಋಷಿ ವಧೆಯು ಹೇಗೆ ನಡೆಯಿತೋ ಹಾಗೆಯೇ ಇಲ್ಲಿಯೂ ನಾವೇ ಕರ್ತೃಗಳಾಗಿ ನಿಂತು ಈ ಕಾರ್ಯವನ್ನು ನಡೆಯಿಸಬೇಕು. ಈ ನರಮೇಧದಲ್ಲಿ ಇಂದ್ರಿಯ ಸಂತರ್ಪಣಾರ್ಥವಾಗಿ, ಚಿತ್ತೋಪಶಾಂತಿಗಾಗಿ ಪ್ರತ್ಯಕ್ಷವಾದ ಫಲವೊಂದಿರಬೇಕು. ಹೌದು. ಹೌದು. ಇಂದ್ರಿಯಗಳ ಕರ್ಮವೇ ಅಂತಹುದು. ಅಪ್ರತ್ಯಕ್ಷವಾಗಿ ಒಂದು ಮೇರು ಪರ್ವತ, ಒಂದು ಕಾಂಚನಗಿರಿ, ಸಿಕ್ಕುವುದಿದ್ದರೆ ಅದನ್ನು ಬಿಟ್ಟು ಒಂದು ಮುದ್ದೆ ಹಿಟ್ಟು ಸಿಕ್ಕಿದರೆ ಅದನ್ನು ಹಿಡಿದುಕೊಳ್ಳುವುದು. ಹೀಗೆ ಗೋಚರವಾದ ಅಲ್ಪಕ್ಕಾಗಿ, ಅಗೋಚರವಾದ ಬಹುವನ್ನು ಬಿಡುವುದು ಈ ಇಂದ್ರಿಯಗಳ ಕರ್ಮ. ನಾವೂ ಈ ಉಪಾಯವನ್ನೇ ಹಿಡಿದು ಈ ನರಮೇಧವನ್ನು ನಿರ್ವಹಿಸಬೇಕು.

"ಆಯಿತು. ಈ ನೂರುಮಂದಿ ಮಕ್ಕಳನ್ನು ಪಡೆಯುವುದಕ್ಕೆ ಕಾಲ ಬೇಕು. ಮಾನವ ಗರ್ಭದಲ್ಲಿ ಶತಪುತ್ರರಾಗಲು ಶತಮಾನವೇ ಬೇಕು. ನಮಗೆ ಶತಮಾನದ ಲೆಕ್ಕವಿಲ್ಲ. ಆದರೆ ಮಾಡಬೇಕಾದ ಇತರ ಕಾರ್ಯಗಳಿರಲು ಒಂದು ಶತಮಾನ ಈ ಕೊಳೆ ತೊಳೆಯುವ ಕೆಲಸದಲ್ಲಿಯೋ ಕುಳಿತಿದ್ದರೆ ಹೇಗೆ? ಆದ ರಿಂದ ಯಾವಳಾದರೂ ಒಬ್ಬಳು ದಿವ್ಯ ಕನ್ಯೆಯನ್ನು ಮದುವೆಯಾಗಬೇಕು. ಅವಳಿಗೆ ತಪಸ್ಸನ್ನು ಕಲಿಸಬೇಕು. ಒಂದೇ ಗರ್ಭದಲ್ಲಿ ಶತಪಿಂಡಗಳನ್ನು ಉತ್ಪತ್ತಿಮಾಡಿ, ಅವು ಏಕಾಂಡವಾಗಿ ಈಚೆಗೆ ಬಂದು ಘೃತ ಕುಂಭಗಳಲ್ಲಿ ಪಕ ವಾಗುವ ಹಾಗೆ ಮಾಡಿಕೊಳ್ಳಬೇಕು. ಸರಿ. ಪ್ರಾಣದೇವನ ದಯೆಯಿಂದ ನಡೆಯಬೇಕಾದ ಕಾರ್ಯವಿದು. ವೈಶ್ವಾನರನು ಮನಸ್ಸು ಮಾಡಿದರೆ, ಈ ಕೆಲಸ ಸಾಧ್ಯ. ಆ ಮಡದಿಯಾಗುವವಳನ್ನು ಒಲಿಸಿಕೊಳ್ಳುವ ಸಾಧನ ಆ ರಾಜರ್ಷಿಯಿಂದ ದೊರೆತಿದೆ. ಹೌದು. ಹೌದು. ನಮಗೆ ಎಲ್ಲಾ ಇದೆ. ಮಕ್ಕಳನ್ನು ಪಡೆಯುವ ಬಯಕೆ ಇದೆ. ಮಕ್ಕಳನ್ನು ಮಾಡುವ ವಿದ್ಯೆ ಗೊತ್ತಿದೆ. ಆದರೆ ಮಡದಿಯಿಲ್ಲ. ಚಿತ್ರಕಾರನಿಗೆ ಬಣ್ಣ, ಬತ್ತಿ, ಬುದ್ಧಿ, ಎಲ್ಲಾ ಇದೆ. ಒಂದು ಪಟ ಸಿಕ್ಕಿಲ್ಲ, ಇರಲಿ. ದೇವತೆಗಳು ಇದ್ದಾರಲ್ಲ: ನಮ್ಮಿಂದ ಆಗದ ಕಾರ್ಯವನ್ನು ಮಾಡುವುದಕ್ಕೆ ತಾನೇ ಅವರಿರುವುದು? ಅಥವಾ ಅವರ ಕಾರ್ಯ ವನ್ನು ಮಾಡುವುದಕ್ಕೆ ತಾನೇ ನಾವಿರುವುದು? ಅವರೇನು ಮಾಡುವರೋ ನೋಡೋಣ. ಈಗ ಇನ್ನೂ ದಕ್ಷಿಣಾಯನ ಆರಂಭವಾಗಿಲ್ಲ. ಈಗತಾನೇ ಮಳೆಗಳು ಆರಂಭವಾಗಿವೆ. ಇನ್ನೊಂದು ದಕ್ಷಿಣಾಯನದ ಅವಧಿ. ಅಷ್ಟ ರೊಳಗೆ ಈ ಪ್ರಶ್ನೆ ಇತ್ಯರ್ಥವಾಗಬೇಕು. ಇಲ್ಲದಿದ್ದರೆ ಈ ಚಿಂತಾ ಪರಿಹಾರ ಕ್ಕಾಗಿ ಒಂದು ಹೋಮವೋ ಹವನವೋ ವ್ರತವೋ ಉಪಾಸನೆಯೋ ಏನೋ ಒಂದು ಮಾಡುವುದು.

"ಆಯಿತು. ಮುಖ್ಯವಾದುದನ್ನೇ ಮರೆತೆವಲ್ಲ. ನಾವು ದಂಪತಿಗಳು ಇಬ್ಬರು ಒಪ್ಪಿದರೆ ಈ ನರಮೇಧವಾಗುವುದೇನು? ನಾವಿಬ್ಬರೂ ವಂಶದ ಸ್ವತ್ತು. ವಂಶವು ಪಿತೃಗಳದು. ವಂಶದ ಸ್ವತ್ತು ಏನಿದ್ದರೂ ಪಿತೃಗಳು ಒಪ್ಪಿದಮೇಲೆ ವಿನಿಯೋಗವಾಗತಕ್ಕುದು. ಅವರ ಅಪ್ಪಣೆಯಿಲ್ಲದೆ ನಾವು ಎಷ್ಟು ಹೋರಾಡಿ ದರೆ ತಾನೇ ಆ ವಿನಿಯೋಗವು ಸದ್ವಿನಿಯೋಗವಾಗಿ ಸತ್ಫಲ ಬಂದೀತೆ? ಅವರ ಇಚ್ಛೆಗೆ ವಿರೋಧವಾಗಿ ನಾವು ಯಾವುದನ್ನು ಉಪಯೋಗಿಸಿದರೆ ಅದು ಇಲ್ಲ

ವಾಗಿ ಆದರ ದಾರಿದ್ರ್ಯವು ಬರುವುದು. ಆದರಿಂದ ಪಿತೃಗಳಿಗೆ ಸಮ್ಮತವಾಗಿ ಈ ನರಮೇಧವು ನಡೆಯಬೇಕು. ಪಿತೃಗಳು ಯಾವಾಗಲೂ ವಂಶಾಭಿವೃದ್ಧಿಯಾಗಲಿ ಎಂದು ಬಯಸುತ್ತಾ ಇರುವವರು ವಂಶನಾಶನವನ್ನು ಒಪ್ಪುವರೆ? ಮುಂದಿನ ಗತಿ?

"ಗತಿಯೇನು? ಅಲ್ಲಿಯೂ ಒಂದು ಲಾಭದ ಲೋಭಬೇಕು. ಪಿತೃಗಳ ಉದ್ದೇಶವೇನು? ತಮ್ಮ ವಂಶವಿರಬೇಕು: ಉಜ್ವಲವಾಗಿ ಕೀರ್ತಿ ಸಂಪನ್ನವಾಗಿ ಮಹೋನ್ನತವಾಗಿ ಬಾಳುತ್ತಿರಬೇಕು. ಅಲ್ಲವೆ? ಸರಿ. ತೇಜಸ್ವಿಯಾಗಿ, ಋಷಿಯ ಪ್ರತಿಭೆಯನ್ನುಳ್ಳವನಾಗಿ, ದೈವಾನುಗ್ರಹ ಸಂಪನ್ನನಾದವನು ಯಾವನಾದರೂ ಸಿಕ್ಕಿದರೆ, ಅವನನ್ನು ತೆಗೆದುಕೊಳ್ಳುವುದು. ಅವನಿಗಾಗಿ ಈ ಐವತ್ತು ಮಂದಿಯನ್ನು ಸ್ವಾಹಾ ಎನ್ನುವುದು ಸರಿ. ಇದೇ ಸರಿ. 'ಸಿದ್ಧಂ ಸಾಧ್ಯಾಯ ಕಲ್ಪತೇ'.

"ಇತ್ತಲಾಗಿ ಎಲ್ಲವೂ ಸರಿಹೋಯಿತು. ಈ ನದಿಯನ್ನು ದಾಟಿ ನಾವು ಹೋಗಿ ಮಾಡುವುದೇನು? ಮುಟ್ಟುವುದೇನು? ಸಾಧನವೇನು? ಸಿದ್ಧಿಯೇನು? ಎಲ್ಲವನ್ನೂ ಗೊತ್ತುಮಾಡಿಕೊಂಡಾಯಿತು. ಈ ನರಮೇಧವಾಗಲು ಇನ್ನೊಂದು ನಾಟಕವೇ ಆಗಬೇಕು. ಅದನ್ನು ದೇವತೆಗಳು ಆಡಿಸಬೇಕು. ಹೋದ ಸಲ ಮೇನಕೆಯನ್ನು ಮದುವೆಯಾದಾಗ ಕಾಮವೇ ಪ್ರಧಾನವಾಯಿತು. ಈ ಸಲ ಮದುವೆಯಾಗುವಾಗ ಆ ಕಾಮ ದಮನವಾಗಿ ಕೈಗೆ ಸಿಕ್ಕಿರುವ ಕುದುರೆಯಂತಿರಬೇಕು. ಋಷಿಗಳಾಗುವರು ಐವತ್ತು ಮಂದಿ, ಋಷಿಕಲ್ಪರಾದವರು ಐವತ್ತುಮಂದಿ, ಅಂತೂ ನೂರು ಮಂದಿ ಮಕ್ಕಳನ್ನು ಪಡೆಯಲು ಮತ್ತೆ ಗೃಹಮೇಧಿಯಾಗಬೇಕು. ದೇವತೆಗಳು ಈ ನಾಟಕವನ್ನು ನಿರ್ವಹಿಸಿ ನನ್ನನ್ನು ಕೃತಾರ್ಥನನ್ನು ಮಾಡಲಿ."

---

## ಐವತ್ತಾರನೆಯ ತರಂಗ

ವಿಶ್ವಾಮಿತ್ರರ ಆಶ್ರಮೋಪಾಂತದಲ್ಲಿ ಒಂದು ವಿಮಾನವು ಮಿಂಚಿನ ಮಂಟಪದಂತೆ ಬಂದು ಇಳಿಯಿತು. ಅದರಿಂದ ಇಬ್ಬರು ದಿವ್ಯಾಂಗನೆಯರು

ಇಳಿದುಬಂದರು. ಇಬ್ಬರಿಗೂ ದಿಗಿಲು. ಏನೋ ಗಾಬರಿ. ವ್ಯಾಧನ ಭೀತಿಯಿಂದ ಹೆದರಿರುವ ಹರಿಣಿಯರ ಹಾಗೆ ಕಣ್ಣು ಅಗಲಿಸಿಕೊಂಡು ಸುತ್ತಲೂ ನೋಡುತ್ತ, ಮುಂದಿನ ಹೆಜ್ಜೆಯಲ್ಲಿ ಏನು ವಿಪತ್ತು ಕಾದಿದೆಯೋ ಎಂದು ಬೆದರುತ್ತ ನಡೆಯುತ್ತಿದ್ದಾರೆ. ನೋಡಿದರೆ ಅಭಿಸಾರಿಕೆಯ ವೇಷ. ಅಭಿಸಾರಿಕೆಯರಾಗಿ ಪ್ರಿಯನನ್ನು ಹುಡುಕಿಕೊಂಡು ಹೊರಟವರಿಗೆ ಅದೂ ದಿವ್ಯಾಂಗನೆಯರಿಗೆ, ಇಷ್ಟು ದಿಗಿಲೇಕೆ ?

"ರಂಭೆ, ನೀನಿಷ್ಟು ಅಂಜಿರುವುದನ್ನು ನೋಡಿದರೆ ಏನೋ ಅನರ್ಥವಾಗುವುದು ಎಂದೇ ಹೇಳಬೇಕು. ಆ ರಾಜರ್ಷಿಯು ನಮ್ಮ ಮೇನಕೆಯ ಮೇಲೆ ಅಷ್ಟು ಅಭಿಮಾನವಿಟ್ಟುಕೊಂಡಿದ್ದವನು. ನಾವು ಮೇನಕೆಯ ಪ್ರಿಯ ಸಖಿಯರು ಎಂದರೆ, ಆತನ ಅಭಿಮಾನವು ನಮಗೂ ಅಷ್ಟು ಲಭಿಸುವುದು. ಅಥವಾ ಆತನು ತಪಸ್ವಿಯೆಂದರೆ, ನನ್ನ ಜೊತೆಯಲ್ಲಿ ಅಷ್ಟು ತಪಸ್ಸುಮಾಡಿ ಎಂದಾನು, ನಮ್ಮ ಮನೋಭಿಲಾಷೆಯನ್ನು ಪೂರೈಸಿಕೊಳ್ಳುವುದಕ್ಕೆ ನಾವೂ ಆ ಆಟವನ್ನು ಆಡಿದರಾಯಿತು."

"ಘೃತಾಚಿ, ನನ್ನ ಸ್ಥಿತಿಯು ಹೆಣ್ಣಾಗಿದ್ದರೂ ನನಗೆ ವೇದ್ಯವಾಗಿಲ್ಲ. ಈ ತಪಸ್ವಿಗಳು ಧರ್ಮಸಂಮೂಢರು. ನಾವು ಕಾಮಕ್ಕಾಗಿ ಏನು ಬೇಕಾದರೂ ಬಲಿಕೊಡುವಂತೆ, ಇವರು ಧರ್ಮವೆಂದರೆ ಏನು ಬೇಕಾದರೂ ಮಾಡಿಬಿಡುವರು. ತಪಸ್ಸಿನಿಂದ ದಗ್ಧವಾಗಿ ಹೋದ ಆ ಹಾಳುಹೃದಯದಲ್ಲಿ ಇನ್ನಾವ ಲಲಿತಭಾವನೆಗೂ ಅವಕಾಶವೇ ಇರುವುದಿಲ್ಲ. ಅದರಿಂದ ಬೆಟ್ಟದಿಂದ ಉತ್ಸಾಹಪಟ್ಟು ಕೆಳಕ್ಕಿಳಿದ ನದಿಯು ಮರಳುಗಾಡು ಕಂಡು ಅಯ್ಯೋ ಮರಳಿನಲ್ಲಿ ಇಂಗಿಹೋಗಬೇಕಲ್ಲ ಎಂದು ಯತ್ನವಿಲ್ಲದೆ ಅಗತಿಕವಾಗಿ ಮುಂದೆ ಹೋಗುವಂತೆ ಬರುತ್ತಿದ್ದೇನೆ."

"ಏನು ಹೇಳುವೆಯೋ ? ನೀನು ದೇವತೆಯಲ್ಲವೇನು ? ಏನಾಗುವುದು ನೋಡು. ಅದಕ್ಕೆ ತಕ್ಕಂತೆ ನಡೆದುಕೋ."

"ಹುಚ್ಚಿ, ದೇವತೆಗಳಾದರೇನು ? ವಿಧಿಯು ನಮ್ಮನ್ನು ಕಾಡುವುದಿಲ್ಲವೆಂದುಕೊಂಡಿದ್ದೀಯಾ ? ಅಲ್ಲದೆ ನನ್ನ ಸ್ವಭಾವ ನನಗೆ ಗೊತ್ತಿದೆ. ಹೆಣ್ಣು ತಾನು ಸೋತರೆ ಗೆಲುವನ್ನು ಪಡೆಯುವುದು. ಮೊದಲು ಸೋಲು ಆಮೇಲೆ ಗೆಲುವು. ನನ್ನ ಹಾಳು ಸ್ವಭಾವದಲ್ಲಿ ಅದಿಲ್ಲ. ನಾನು ಗಂಡಸಿನ

ಮನಸ್ಸಿಗೆ ಜೋಡಿಸಿರುವ ಹೆಣ್ಣಿನ ದೇಹ. ಗೆಲ್ಲಬೇಕು ಗೆಲ್ಲಬೇಕು ಎಂದು ಸೋಲುತ್ತೇನೆ. ಅದರಿಂದಲೇ ನನಗೆ ಕಾಮತೃಪ್ತಿಯಿಲ್ಲ. ಇಲ್ಲದಿದ್ದರೆ, ನನ್ನನ್ನು ಇಷ್ಟ ದೈವದಂತೆ ಆರಾಧಿಸುವ ಯಕ್ಷೇಶ್ವರ ಕುಮಾರನಿಗಿಂತ ನನಗೆ ಇನ್ನಾರುಬೇಕು ? ಈ ಪುಣ್ಯಾತ್ಮನಿಗೆ ನಾನು ಬೇಕೋ ಬೇಡವೋ? ಅಂತೂ ಸಮುದ್ರಕ್ಕೆ ಬೀಳುವ ನದಿಯಂತೆ ನಾನೂ ಮುನ್ನುಗ್ಗುತ್ತಿದ್ದೇನೆ ? "

" ಇದೀಗ ಚೆನ್ನಾಯಿತು. ರಂಭೆ, ನಿನ್ನ ರೂಪವು ಎಂತಹ ಅದ್ವಿತೀಯ ವಾದುದು ನೀನು ಕಾಣೆ. ಈ ಗಿಡ ಮರ ಬಳ್ಳಿ ಮೊದಲುಗೊಂಡು ಈ ವನ ಸ್ಥಲಿಯೆಲ್ಲವೂ ಚೇತನವಾಗಿರುವಂತೆ ಕಾಣುತ್ತಿರುವುದೇಕೆ ಬಲ್ಲೆಯಾ ? ನಿನ್ನ ರೂಪವನ್ನು ಕಂಡು ಉದ್ರಿಕ್ತವಾಗಿ ನಡಗುತ್ತಿವೆ. ಈ ನದಿಯೇನು ಗೊತ್ತೆ ? ಈ ವನಸ್ಥಲಿಯು ಇಂತಹ ರೂಪರಾಶಿಯನ್ನು ಪಡೆದು, ಅನುಭವಿಸುವ ಭಾಗ್ಯವನ್ನು ಪಡೆದು ಬರಲಿಲ್ಲವಲ್ಲಾ ಎಂದು ನೀರವವಾಗಿ ರೋದಿಸಿಬಿಟ್ಟ ಕಣ್ಣೀರು. ಹುಚ್ಚಿ, ಭಗವಾನ್ ವಸಿಷ್ಠರಿಗಿಂತ ಇನ್ನಿಲ್ಲ. ಅವರೂ ಕೂಡ ನಿನ್ನನ್ನು ಕಂಡರೆ ಒಂದು ಗಳಿಗೆಯಾದರೂ ಮನೋವೈಕ್ಲವ್ಯವನ್ನು ಹೊಂದು ವರು. ಅಂಥಾದ್ದರಲ್ಲಿ ನೀನು ಹೋದಲ್ಲಿ ನಿನಗೆ ವಿಜಯವಲ್ಲದೆ ಮತ್ತೇನೂ ಇಲ್ಲ. ಗೆಲ್ಲುವುದಕ್ಕೆ ಹುಟ್ಟಿದ್ದೀಯೆ. ಗೆಲ್ಲುತ್ತೀಯೆ ! ನಮ್ಮಹಾಗೆ ನೀನೇನು ಹೆಣ್ಣು ಹೆಂಗಸು ಅಲ್ಲವಲ್ಲ."

" ಅದೇ ನನಗೆ ಬಂದಿರುವ ಶಾಪ. ಘೃತಾಚಿ, ಮೇನಕೆಯು ಈತನನ್ನು ಆರಾಧಿಸುವುದನ್ನು ಅವೊತ್ತು ನೋಡಿದೆವಲ್ಲ. ಹಾಗೆಯೇ ನಾನೂ ಯಾರ ನ್ನಾದರೂ ಆರಾಧಿಸಬೇಕು ಎಂದು ಆಸೆ. ಆದರೇನು ಮಾಡಲಿ, ಬಂದವರು ನನ್ನನ್ನು ಆರಾಧಿಸಲಿ ಎನ್ನಿಸಿ, ಗಂಡೆಂದರೆ ಕಸಕ್ಕಿಂತ ಕಡೆಮಾಡುವುದು ನನಗೆ ಅಭ್ಯಾಸವಾಗಿ ಹೋಗಿದೆ. ನಾನೀಗ ಮಾಡುತ್ತಿರುವುದು ಅನುಚಿತ. ಅದ ರಿಂದ ನನಗೆ ಮಹತ್ತರವಾದ ಹಾನಿಯುಂಟು. ಆದರೆ, ಅದನ್ನು ತಪ್ಪಿಸಿ ಕೊಳ್ಳುವುದಕ್ಕೆ ಹಾದಿ ಗೊತ್ತಿದ್ದರೂ ನನಗೆ ಸಾಧ್ಯವಿಲ್ಲ ; ಕಾಮವನ್ನು ಅಹಂಕಾರಕ್ಕೆ ಬಲಿಗೊಟ್ಟಿರುವವಳು ನಾನು. ಹುಂ. ಆದುದಾಗಲಿ, ಮಾಡುವು ದೇನು ? "

"ನೀನು ಅಂಜುತ್ತಿರುವುದನ್ನು ನೋಡಿದರೆ, ರಂಭೆ, ನಿನ್ನ ಅಂಜಿಕೆಗೆ

ಇನ್ನೂ ಬೇರೆ ಕಾರಣವಿರುವಂತೆ ತೋರುತ್ತಿದೆ. ನೀನು ಹೊರಟಾಗ ಇಂದ್ರನ ಅಪ್ಪಣೆಯನ್ನು ತೆಗೆದುಕೊಂಡೆಯಾ ?"

"ಇಲ್ಲ, ಅಂದು ಇಂದ್ರನು ಬರುವನೆಂದು ಹೇಳಿಕಳುಹಿಸಿದ್ದನು. ಅಲ್ಲಿಯೇ ಹೂ ಎನ್ನಿಸುವುದು ಎಂದಿದ್ದೆ. ಆತನು ಬರಲಿಲ್ಲ. ನಾನೂ ಹೇಳದೆ ಹೊರಟೇಬಿಟ್ಟೆ. ನೀನು ಅಪ್ಪಣೆಪಡೆದು ಬಂದಿರುವೆಯಾ ?"

"ಹೂ. ಎಂದಿನಂತೆ ಅರಮನೆಗೆ ಹೋಗಿ ಅಪ್ಪಣೆಪಡೆದು ಬಂದೆ. ನೀನೂ ಹಾಗೆ ಮಾಡಿದ್ದರೆ ಚೆನ್ನಾಗಿತ್ತು."

"ಹೇಳಿದೆನಲ್ಲ. ಮನಸ್ಸು ಅನರ್ಥವನ್ನು ನಿರೀಕ್ಷಿಸುತ್ತಿದೆ. ಅದನ್ನು ತಪ್ಪಿಸಿಕೊಳ್ಳುವುದಕ್ಕೂ ಬೇಡವಾಗಿ, ಆದುದಾಗಲಿ ಎಂದು ಮೊಂಡತನವು ಬಂದಿದೆ. ಆಯಿತು. ಅದಿರಲಿ. ನೀನು ಅಪ್ಪಣೆ ಕೇಳಿದಾಗ ಇಂದ್ರನೇನು ಹೇಳಿದನು ?"

"ಆತನೀಗ ಭಗವಾನ್ ಆಗಿದ್ದಾನೆ. ಆತನು ನನಗೆ ಬಹಳ ಆಪ್ತನಾದವನು. ನೀನು ಅಲ್ಲಿಗೆ ಹೋಗುವುದು ನನಗೂ ಬಹಳ ಪ್ರಿಯವಾದುದು. ಆದರೆ, ಸರ್ವವಿಧದಲ್ಲೂ ನೀನು ಆತನನ್ನು ಆರಾಧಿಸಿ ತೃಪ್ತಿಗೊಳಿಸುವೆನೆಂದು ಮಾತು ಕೊಡಬೇಕು. ಎಳ್ಳಷ್ಟೂ ತಪ್ಪಿ ನಡೆಯಬಾರದು. ಜೋಕೆ. ಹಾಗೆಂದು ಪ್ರಮಾಣಮಾಡು ಎಂದನು."

"ನೋಡಿದೆಯಾ ? ನಾನು ಹೋಗದಿದ್ದುದೇ ಸರಿಯಾಯಿತು. ನಾನು ಹಾಗೆಂದು ಪ್ರಮಾಣ ಮಾಡಿದ್ದರೂ ನನ್ನ ತುಂಟು ಬುದ್ಧಿ ನನ್ನಿಂದ ಏನಾದರೂ ಚೇಷ್ಟೆಮಾಡಿಸಿ ಸಾವಿರ ಚಿತ್ತಾರ ಒಂದು ಮಸಿ ನುಂಗಿತು ಎನ್ನುವ ಹಾಗೆ ಮಾಡಿಸಿ, ಮದ್ದಳೆಯಂತೆ ಎರಡೂ ಕಡೆ ಏಟು ತಿನ್ನುವಂತೆ ಮಾಡುತ್ತಿತ್ತು. ಈಗ ಏಟು ಬಿದ್ದರೆ ಒಂದೇ ಕಡೆ. ಅದೇ ಲಾಭ."

"ನೀನು ಹಾಗೆ ಕೆಟ್ಟ ಯೋಚನೆ ಮಾಡಬೇಡ. ಇದೋ ನೋಡಿದರೆ ಇದೇ ಆಶ್ರಮವೆಂದು ಕಾಣುತ್ತದೆ. ಬಾ. ಸೌಮ್ಯರಾಗಿ ಪ್ರವೇಶಿಸೋಣ."

"ನೀನು ಪ್ರಸನ್ನೆಯಾಗಿ ಪ್ರಸಾದವನ್ನು ಕೋರುವವಳು. ನೀನು ಮೊದಲು ಹೋಗು. ನಾನು ಒಂದು ಗಳಿಗೆ ಇಲ್ಲಿ ನಿಂತು ಒಮ್ಮೆ ಸ್ನಾನಮಾಡಿ ಈ ವಿಹ್ವಲತೆಯನ್ನು ಸಮಾಧಾನ ಮಾಡಿಕೊಂಡು ಬರುತ್ತೇನೆ."

ಘೃತಾಚಿಯು ಮುಸಿ ಮುಸಿನಕ್ಕು ಆ ಮಾತಿಗೆ ಒಪ್ಪಿ ತನ್ನೊಡನೆ ನಗುತ್ತಿರುವವನ ಸ್ಥಲಿಯೊಡನೆ ಬೆರೆತುಹೋದವಳಂತೆ ಮರಗಿಡಗಳಲ್ಲಿ ಮರೆಯಾದಳು.

ರಂಭೆಯು ಸ್ನಾನಾದಿಗಳಿಂದ ತನ್ನನ್ನು ಅಲಂಕರಿಸಿಕೊಂಡಳು. ಅಲ್ಲಿದ್ದೊಂದು ಶಿಲಾಫಲಕವನ್ನು ತನ್ನ ಪ್ರಭಾವದಿಂದ ನಿಲುಗನ್ನಡಿಯಾಗಿ ಮಾಡಿಕೊಂಡು ತನ್ನ ಪ್ರತಿಬಿಂಬವನ್ನು ನೋಡಿಕೊಂಡಳು. ಆಗತಾನೇ ಸುರಿದ ಶುಭ್ರವಾದ ಮಂಜು ಗಿಡಗವು ಹೊಡೆದು ಹೊತ್ತುಕೊಂಡು ಹೋಗುತ್ತಿರುವ ಪಾರಿವಾಳದ ಮೈಯ್ಯಿಂದ ತೊಟ್ಟಿಕ್ಕಿದ್ದ ರಕ್ತಬಿಂದುವಿನ ಉಷ್ಣಕ್ಕೆ ಅಷ್ಟು ಕರಗಿ ಆ ರಕ್ತವನ್ನು ಸುತ್ತಲೂ ಬೊಳೆದುಕೊಂಡು ಕೊಂಚ ಕೆಂಪಾಗಿರುವ ಮಂಜಿನ ಗುಡ್ಡೆಯಂತಿರುವ, ಆ ಮೈ, ಕಾಮರಾಗದಿಂದ ಕೆಂಪಾಗಿ ಕೆಂಪು ದಂತದಿಂದ ಆದ ಪುತ್ಥಳಿಯಂತಿರುವ ಆ ಆಕಾರ, ಕೆಂಪು ದಾಸವಾಳದ ಬಣ್ಣವನ್ನು ಮುಕ್ಕಳಿಸಿದಂತೆ ಇರುವ ಎಣ್ಣೆಗೆಂಪಿನ ಸೀರೆ, ಜೊತೆಗೆ ಎಲ್ಲವೂ ಕೆಂಪು ಚಿನ್ನದಲ್ಲಿ ಕೆತ್ತಿರುವ ಕೆಂಪಿನ ಒಡವೆಗಳು, ಅಷ್ಟೇನು, ಕೆಂಪಾಗಿರುವ ಆ ಮೊಕದಲ್ಲಿ ತಿದ್ದಿ ಇಟ್ಟಿರುವ ಕುಂಕುಮದ ಬೊಟ್ಟು ಕಾಣಿಸಬೇಕಾದರೆ ಹುಡುಕಿ ನೋಡಬೇಕು ಎನ್ನುವಂತಾಗಿದ್ದಾಳೆ.

ಆ ರೂಪದರ್ಶನದಿಂದ ತಾನೇ ತೃಪ್ತಳಾಗಿ ಮದ್ಯಪಾನದಿಂದ ಮತ್ತಳಾದವಳಂತೆ ವಿಹ್ವಲಳಾಗಿ ಬೇಟೆಯನ್ನೇ ಕುರಿತು ಚಿಂತಿಸುತ್ತಿರುವ ಬೇಟೆಗಾರನಂತೆ ಮುಂದಿನ ವ್ಯಾಪಾರವನ್ನು ಚಿಂತಿಸಿಕೊಂಡು ಕನ್ನಡಿಯಲ್ಲಿ ನೋಡಿಕೊಳ್ಳುತ್ತಿರುವಾಗ, ತನ್ನ ಹಿಂದೆ ಕರಾಳಾಕೃತಿಯೊಂದು ನಿಂತಿರುವುದು ಕಾಣಿಸಿತು.

ಥಟ್ಟನೆ ಹಿಂದಿರುಗಿ "ಯಾರು ?" ಎಂದಳು.

"ನಾನು ಭೈರವ, ಈ ಧರ್ಮಾರಣ್ಯದ ಪಾಲಕನು ನಾನು."

"ನನ್ನ ಬಳಿ ಬಂದುದೇಕೆ ?"

"ಆಶ್ರಮದಲ್ಲಿ ನಡೆಯುವ ಕಾರ್ಯಗಳಿಗೆ ನಿನ್ನಿಂದ ವಿಘ್ನವಾಗುವುದು. ನೀನು ಆಶ್ರಮದೊಳಕ್ಕೆ ಬರಕೂಡದು ಎಂದು ಹೇಳುವುದಕ್ಕೆ."

"ನಿನ್ನ ಅಪ್ಪಣೆಯನ್ನು ಮೀರಿ ಒಳಕ್ಕೆ ಹೋದರೆ ?"

"ಅನರ್ಥವಾಗುವುದು."

"ನಾನು ಭಗವಾನರನ್ನು ಕಾಣಲೇಬೇಕು."

"ಅದು ಸಾಧ್ಯವಿಲ್ಲ."

"ಕಾರಣ ?"

"ಕಾಮವೊಂದೇ ಜೀವನದ ಲಕ್ಷ್ಯವೆಂದುಕೊಂಡು ಈದ ಹುಲಿಯಂತೆ ಹೊಡೆದು ತಿನ್ನುವವಳು ನೀನು. ನಿನಗೆ ಆ ಧರ್ಮಮೂರ್ತಿಯ ದರ್ಶನ ವಾಗುವುದೆಂತು ?"

"ಆತನೇ ಬೇಕೆಂದರೆ ?"

"ಆಗ ನಿನಗೆ ಕಾಮವಾಸನೆಯೇ ನಿರ್ಮೂಲವಾಗುವುದು."

"ನಾನು ದೇವತೆ, ಎಲ್ಲಿಗೆ ಬೇಕಾದರೂ ಹೋಗಬಹುದು."

"ಹೌದು. ಇಂದ್ರನಪ್ಪಣೆ ಪಡೆದುಬಂದಿದ್ದರೆ ಅದು. ದುಡುಕಬೇಡ. ದುಡುಕಿ ಅನರ್ಥಕ್ಕೆ ಗುರಿಯಾಗಬೇಡ. ನಾನು ಗಂಡು ಹೆಣ್ಣೆಂದು ನೋಡದೆ ಬ್ರಹ್ಮಕರ್ಮಕ್ಕೆ ಅಡ್ಡಿ ಬಂದವರು ಯಾರೇ ಆಗಲಿ ಹೊಡೆಯುವವನು. ಬೇಡ, ಬೇಡ."

ರಂಭೆಯು ಮುಂದೆ ನುಗ್ಗಿದಳು. ಆಶ್ರಮದ ಭೂಮಿಯೊಳಕ್ಕೆ ಒಂದು ಕಾಲಿಟ್ಟಳು. ಇನ್ನೊಂದು ಕಾಲು ಇಡಬೇಕು. ಅಷ್ಟರೊಳಗಾಗಿ ಭೈರವನ ಬಡಿತ ಬಿತ್ತು. ಮಹಾಶಿಲೆಯಾಗಿ ಹೋದಳು.

---

## ಐವತ್ತೇಳನೆಯ ತರಂಗ

ಘೃತಾಚಿಯು ನಿರಾತಂಕವಾಗಿ ನಡೆದಳು. ಒಂದು ನಾಯಿಯು ಬಂದು ಆಕೆಯನ್ನು ಕರೆದುಕೊಂಡು ಹೋಯಿತು. ಆ ಪ್ರಾಣಿಯು ತನ್ನನ್ನು ಹೊರ ಗಿನವಳೆಂದು ಬೊಗಳದೆ, ಆತ್ಮೀಯಳಂತೆ ಕಂಡು, ಆಶ್ರಮವಾಸಿಗಳಲ್ಲಿ ವರ್ತಿಸು ವಂತೆ, ವಿಶ್ವಾಸದಿಂದ ಬಾಲವನ್ನಾಡಿಸಿಕೊಂಡು ಅತಿಥಿಯನ್ನು ಎಂತೋ ಅಂತೆ ಎದುರುಗೊಂಡು ಮುಂದಕ್ಕೆ ಕರೆದುಕೊಂಡು ಹೋದುದನ್ನು ಕಂಡು ಅವಳಿಗೆ ತೃಪ್ತಿಯಾಯಿತು. "ಧರ್ಮಾರಣ್ಯವಿದು. ಇಲ್ಲಿ ಧರ್ಮವಿರುದ್ಧವಾದ ಕಾರ್ಯ ವೇನೂ ನಡೆಯಬಾರದು" ಎಂದು ಮೈಯೆಲ್ಲ ಕಣ್ಣಾಗಿ, ಅಲ್ಲಿರುವ ಪುಷ್ಪಫಲ

ಗಳೂ ಸೌಮ್ಯಗಳಾಗಿ ಶಾಂತಗಳಾಗಿರುವುದನ್ನು ಕಂಡು ಎಚ್ಚರವಾಗಿ, ತನ್ನಿಂದ ಯಾರಿಗೂ ಯಾವುದಕ್ಕೂ ಉಪಹತಿಯಾಗಬಾರದೆಂದು, ಮೊಳೆತಿರುವ ಹುಲ್ಲಿನ ಗರಿಕೆಯೊಂದನ್ನು ಕೂಡ ತುಳಿಯದೆ, ಮಾರ್ಗದಲ್ಲಿಯೇ ನಡೆದು ಹೋದಳು. ಅವಳ ಕಾಲಿನ ಗೆಜ್ಜೆಯಂದಿಗೆಯು ಕೂಡ ನಿಯಮಬದ್ಧ ವಾಗಿರುವಂತೆ ಮೃದುವಾಗಿ ಮಂಜುಳನಾದಿಯಾಗಿ ಮನಸ್ಸನ್ನು ಮೆಚ್ಚಿಸು ತ್ತಿತ್ತು. ಅವಳು ಬಿಳಿಯ ಸೀರೆಯುಟ್ಟಿದ್ದಾಳೆ. ನಿರಾಭರಣ ಭೂಷಿತಳಾಗಿ ದ್ದಾಳೆ. ಕಂಠದಲ್ಲಿ ಒಂದು ದಪ್ಪ ಮುತ್ತಿನ ಹಾರವು ಉನ್ನತವಾದ ಸ್ತನ ಮಂಡಲವನ್ನು ಅಲಂಕರಿಸಿದೆ. ತೆಳುವಾದ ಉತ್ತರೀಯದ ಹಿಂದೆ ಬಳುಕುವ ದೇಹಲತೆಯೊಂದಿಗೆ ಬಳುಕುತ್ತಿದ್ದರೂ ಸ್ವಸ್ಥಾನವನ್ನು ಬಿಟ್ಟು ಕದಲದಿರುವ ಆ ನಾಯಕಮಣಿಯು ಅವಳ ಅಂತರಂಗದ ವಿಕ್ಷೋಭವನ್ನು ಸೂಕ್ಷ್ಮವಾಗಿ ಚಿತ್ರಿಸುತ್ತಿದೆ. ಅದರ ಹಿಂದೆ ರತ್ನ ಖಚಿತವಾದ ನೀಲಿಯ ಕುಪ್ಪಸವು ನಕ್ಷತ್ರ ರಂಜಿತವಾದ ನೀಲಾಕಾಶದಂತೆ ಶೋಭಿಸುತ್ತಿದೆ. ಎತ್ತರವಾದ ಕತ್ತು ಮುದ್ದಾದ ಮುಖಕಮಲವನ್ನು ಧರಿಸಿಕೊಂಡು ನನ್ನ ಸೊಬಗು ನೋಡಿದಿರಾ? ಎಂದು ಮಲೆತು ಕೇಳುವಂತಿದೆ. ಗಾಳಿಗೆ ಚೆಲ್ಲುತ್ತಿರುವ ಆ ಚೆಲ್ಲುಗುರುಳನ್ನು ಆಕೆಯು ನಿರೋಧಿಸುತ್ತಿದ್ದರೆ, ಒಳಗೆ ಕವಿಯುತ್ತಿರುವ ಕಾವಳವನ್ನೂ ಹೀಗೆಯೇ ನಿರೋಧಿಸುತ್ತಿರುವಳೋ ಎಂಬಂತಿದೆ.. ನೀಳವಾಗಿ ಬೆನ್ನಿನ ಮೇಲೆ ಜೋಲು ಬಿದ್ದಿರುವ ಆ ಜಡೆಯು, ಅವಳ ಕಾಮವಾಸನೆಯೂ ಹಾಗೇ ದೀರ್ಘವಾಗಿ ಘನವಾಗಿದ್ದರೂ ನಿಯಮಬದ್ಧವಾಗಿದೆಯೆಂಬುದನ್ನು ಉದ್ಘೋಷಿಸುವುದೋ ಎಂಬಂತಿದೆ.

ಭಗವಾನರೂ ಆಗತಾನೇ ಅಗ್ನಿಹೋತ್ರವನ್ನು ಮುಗಿಸಿಕೊಂಡು ಬಂದು, ಮೂಡಲಲ್ಲಿ ಮೇಲಕ್ಕೆ ಹತ್ತುತ್ತಿರುವ ಸೂರ್ಯನ ತೇಜಸ್ಸನ್ನು ಹಿಡಿದು ಕಡೆದು ಸೌಮ್ಯಮಾಡಿ ಎರಕ ಹೊಯ್ದ ಮೂರ್ತಿಯೋ ಎಂಬಂತೆ ಕುಳಿತಿದ್ದಾರೆ. ಅವರ ಮನಸ್ಸು ಎಂದಿಗಿಂತ ಹೆಚ್ಚಾಗಿ ಪರಿಗ್ರಹವನ್ನು ಅಪೇಕ್ಷಿಸಿ, "ಒಂದು ಹೋಮ ವನ್ನಾದರೂ ಮಾಡೋಣವೇ?" ಎಂದು ಕೇಳುವ ಮಟ್ಟಿಗಾಗಿದೆ. ಆದರೂ ಗೃಹಕೃತ್ಯದ ಭಾರವನ್ನೆಲ್ಲ ಗೃಹಿಣಿಗೆ ವಹಿಸಿ ನಿರಾತಂಕನಾಗಿರುವ ಸದ್ಗೃಹಸ್ಥ ನಂತೆ, "ದೇವತೆಗಳಿಗೆ ಒಪ್ಪಿಸಿದ್ದೇವಲ್ಲ: ಆ ಅವಧಿಯು ಕಳೆಯುವವರೆಗೂ ಏಕೆ ದುಡುಕಬೇಕು?" ಎನ್ನುತ್ತಿದೆ. ಅಂತೂ ಹೂ ಗಾಳಿಗೆ ಸಿಕ್ಕಿ ಕಿಂಚಿಚ್ಚಂಚಲ

ವಾಗಿರುವ ಬೆಟ್ಟಗಳ ನಡುವಿನ ಸರೋವರದ ನೀರಿನಂತೆ ಚಂಚಲವಾಗಿದ್ದರೂ ಸ್ಥಿರವಾಗಿದೆ. ಪ್ರಾತಃಕರ್ಮಗಳಿಂದ ದೇಹವು ಆಯಾಸಗೊಂಡು ಕೈಯಲ್ಲಿ ಹಿಡಿದಿರುವ ಜಪಮಾಲೆಯೂ ಭಾರವೋ ಎನ್ನುವಂತಾಗಿ, ಪರ್ಣಶಾಲೆಯ ಬಾಗಿಲ ಜಗುಲಿಯ ಮೇಲೆ ಒಂದು ಕೃಷ್ಣಾಜಿನವನ್ನು ಹಾಸಿಕೊಂಡು ಏಕಾಕಿಯಾಗಿ ಕುಳಿತಿದ್ದಾರೆ.

ಘೃತಾಚಿಯು ಬಂದು ನಮಸ್ಕಾರ ಮಾಡಿದಳು. ತಂದಿದ್ದ ಫಲಪುಷ್ಪಗಳನ್ನು ಒಪ್ಪಿಸಿದಳು. ದಿವ್ಯ ಫಲಪುಷ್ಪಗಳು ಬಂದಿರುವವಳು ದಿವ್ಯಾಂಗನೆಯೆಂಬುದನ್ನು ಹೇಳುತ್ತಿರಲು, ಭಗವಾನರು ಕೇಳಿದರು : " ನಡೆದು ಬಂದಿರಲ್ಲಾ ! ಇವೆಲ್ಲಿಯವು ? "

" ನಂದನದಿಂದ ನಾನೇ ತಂದವು. ನಾನು ಇಂದ್ರ ದೂತಿಯು. ಮೇನಕೆಯ ಸಖಿಯು. ನನ್ನನ್ನು ಘೃತಾಚಿಯೆನ್ನುವರು. ಧರ್ಮಾರಣ್ಯದಲ್ಲಿ ನಮ್ಮ ಪ್ರಭಾವವನ್ನು ಪ್ರಕಟಿಸಬಾರದು ಎಂದು ನಡೆದು ಬಂದೆನು. ನನ್ನ ಸಖಿಯಂತೆಯೇ ನಾನೂ ಸನ್ನಿಧಾನದಲ್ಲಿ ಕೆಲವು ಕಾಲವಾದರೂ ಇದ್ದು ಜೀವನದ ಸಾರ್ಥಕತೆಯನ್ನು ಸಂಪಾದಿಸಿಕೊಳ್ಳಬೇಕೆಂದು ಬಂದಿರುವೆನು. ಪ್ರಸಾದವನ್ನು ಕರುಣಿಸಬೇಕು."

ಮುಗಿದ ಕೈ ಆಡಿದ ಮಾತು ದಿಟವೆಂದು ನಂಬಬೇಕೆಂದು ಪ್ರಾರ್ಥಿಸುತ್ತಿರುವಂತೆ ಇತ್ತು : ವಿನಯವು ನೀನು ಒಪ್ಪಿಸಿಕೊಳ್ಳದಿದ್ದರೆ ಈ ಜನ್ಮವು ಅಸಾರ್ಥಕವಾಗುವುದೆಂಬುದನ್ನು ಕಾಣೆಯಾ ? ಎಂದು ಕೇಳುವಂತಿತ್ತು. ಸೌಮ್ಯವಾದ ಆ ದೃಷ್ಟಿಯು ಆತ್ಮಾರ್ಪಣವನ್ನು ಕಿವಿಯಬಳಿ ಬಂದು ಮೆತ್ತಗೆ ಹೇಳುವಂತಿತ್ತು. ನಾಚಿ, ಬಗ್ಗಿ, ಕೊಂಚ ವಕ್ರವಾದರೂ ಮುದ್ದಾಗಿ, ಆಶ್ರಮದ ಬಾಗಿಲಲ್ಲಿರುವ ಕಂಭವನ್ನು ಸಣ್ಣನೆ ಒರಗಿಕೊಂಡು, ಸೆರಗಿನ ಕೊನೆಯನ್ನು ಹೆಬ್ಬೆರಳಿಗೆ ಸುತ್ತುತ್ತಿರುವುದನ್ನು ಕಂಡರೆ, ' ನಾನು ನಿನ್ನ ವಶಳು. ನೀನೂ ನನ್ನನ್ನು ಹೀಗೆಯೇ ಬೇಕಾದಹಾಗೆ ವಿನಿಯೋಗಿಸಬಹುದು ' ಎಂದು ಸ್ಫುಟವಾಗಿ ಹೇಳುವಂತಿದ್ದಿತು.

ಭಗವಾನರು ಅದನ್ನೆಲ್ಲ ಕಂಡರು. ಅವಳು ಅಯಥಾರ್ಥವಾದಿಯಲ್ಲವೆಂಬುದು ಮನಸ್ಸಿಗೆ ಕೂಡಲೇ ಹೊಳೆಯಿತು. ಆದರದಿಂದ ಕುಳಿತುಕೊಳ್ಳ ಹೇಳಿ ಆಸನವನ್ನು ಕೊಟ್ಟು "ನಾವೂ ಪರಿಗ್ರಹ ಕುತೂಹಲಿಗಳಾಗಿದ್ದೇವೆ.

ಆದರೆ ಪರಿಗ್ರಹಿಸುವುದಕ್ಕೆ ಇರುವ ಅಡ್ಡಿಗಳನ್ನು ಹೇಳಬಹುದಷ್ಟೆ? ಅಡ್ಡಿ ಎನ್ನುವುದಕ್ಕಿಂತ ನಿಯಮ ಅಥವಾ ಸಮಯ ಎನ್ನಬಹುದು" ಎಂದರು.

"ಆಗಬಹುದು. ಅದರಂತೆ ನಡೆಯಲೂ ಸಿದ್ಧಳಾಗಿದ್ದೇನೆ."

"ಸಿದ್ಧವಾಗಿರುವಾಗ ಹೇಳಬೇಕಾದುದೇನು? ಆದರೂ, ಕಲ್ಮಷವು ನಿಲ್ಲದಿರಲೆಂದು ಹೇಳೋಣ. ನಮಗೊಂದು ಪುತ್ರಶೋಕವು ಪ್ರಾಪ್ತವಾಗು ವುದರಲ್ಲಿದೆ. ಅದನ್ನು ಸಹಿಸುವಿರಾ?"

"ನಾನು ಸಹಿಸುವೆನು. ಯಾವಾಗ ನನಗೆ ಸಹನೆಯು ಮೀರುವುದೋ ಆಗ ಅದನ್ನು ತಾವೇ ನಿವಾರಣಮಾಡುವಿರಿ. ಅಷ್ಟೇ!"

"ಅದರಲ್ಲಿ ನಿಮಗೆ ನಂಬುಗೆಯುಂಟೆ?"

"ಭಗವಾನರು ಪ್ರತಿಸೃಷ್ಟಿಮಾಡಬಲ್ಲರು ಎಂಬುದು ದೇವಲೋಕ ದಲ್ಲಿಯೂ ಜನಜನಿತವಾಗಿದೆ."

ಭಗವಾನರು ಆ ಸ್ತುತಿಯನ್ನು ಕೇಳಿ ಮೂಕರಾದರು. ಸಹಜವಾದ ಆ ಮಾತು, ಅದರ ಸರಳತೆ, ಅದರಲ್ಲಿ ಒಡೆದು ಮೂಡಿದಂತೆ ಕಾಣುವ ನಿಶ್ಚ ಯತೆ, ಎಲ್ಲವೂ ಆತನ ಮನಸ್ಸನ್ನು ಗ್ರಹಿಸಿದುವು. ಕೊನೆಯ ಮಾತಾಗಿ ಕೇಳಿದರು: "ಇಂದ್ರದೇವನ ಅಪ್ಪಣೆಯಾಗಿರುವುದೇ?"

"ಆಗಿದೆ."

ಅವರಿಗೆ ಸಂತೋಷವಾಯಿತು. "ಸಂತೋಷ, ಬಹಳ ಸಂತೋಷ. ದೇವೇಂದ್ರನಿಗೆ ನಾವು ಋಣಿಗಳು. ನಮಗೆ ಬೇಕೆಂಬುದನ್ನು ಕೊಡುವವರು ದೇವತೆಗಳು ತಾನೇ! ಆಗಲಿ. ನೀನು ನಮ್ಮ ಗೃಹಿಣಿಯಾಗಿರು. ನಮ್ಮ ನಮ್ಮ ಸಮಯವು ಹೀಗಿರಲಿ. ಈ ದಾಂಪತ್ಯದ ಫಲವಾಗಿ ಐವತ್ತು ಮಂದಿ ಋಷಿಕಲ್ಪರೂ, ಐವತ್ತುಮಂದಿ ಋಷಿಗಳೂ ಆಗಲಿ. ಆ ಋಷಿಗಳ ತಾಯಾಗಿ ನೀನು ಲೋಕವಿಖ್ಯಾತಳಾಗು. ಆ ಋಷಿಕಲ್ಪರನ್ನು ನಾವು ಕಾಲಬಂದಾಗ ಮತ್ತೊಬ್ಬ ದೇವದತ್ತನಿಗಾಗಿ ಕೊಟ್ಟುಬಿಡುವೆವು. ಆಗ, ನಾವು ಹಾಗೆ ಮಾಡಲು ನೀನು ಅಡ್ಡಿಯಾಗಬಾರದು: ಹಾಗೆ ಮಾಡಿದೆವೆಂದು ಶೋಕಿಸ ಬಾರದು: ಅನುತಾಪ ಪಡಬಾರದು: ಸಮ್ಮತವೇ?"

"ಆಗಬಹುದು. ನನ್ನದೂ ಒಂದು ನಿಯಮವನ್ನು ಭಗವಾನರು ಅಂಗೀ ಕರಿಸಬಹುದಷ್ಟೆ! ದೇವಯೋನಿಗಳಾದ ನಾವು ಮಾನವಿಯರಂತೆ ಗರ್ಭಭಾರ

ವನ್ನು ಸಹಿಸಲಾರೆವು. ಅದರಿಂದ ನೂರು ಮಕ್ಕಳನ್ನೂ ಒಂದೇಸಲ ಪಡೆಯು ವುದಕ್ಕೆ ಅಪ್ಪಣೆಯಾಗಬೇಕು. ಮತ್ತು ಐವತ್ತು ಮಕ್ಕಳನ್ನು ಭಗವಾನರು ತಮಗೆ ತೋರಿದಂತೆ ವಿನಿಯೋಗಿಸಿದರೂ ನನಗೆ ಅದರಿಂದ ಸಂತಾಪವೂ ಅನು ತಾಪವೂ ಆಗದಂತೆ ವರವನ್ನು ಕೊಡಬೇಕು. ಧರ್ಮಾರಣ್ಯವೆಂದು ಇಲ್ಲಿ ನನ್ನ ಪ್ರಭಾವವನ್ನು ಅತ್ತ ಇಟ್ಟಿರುವೆನು. ಅದರಿಂದ ತಮ್ಮ ಆ ವಿನಿಯೋಗವು ಇಲ್ಲಿ ನಡೆಯದೆ ಇನ್ನೆಲ್ಲಿಯಾದರೂ ನಡೆಯಬೇಕು. ಆಗ, ನನ್ನ ಪ್ರಭಾವವು ನನ್ನನ್ನು ಆ ದುಃಖವಂಟದಂತೆ ಕಾಪಾಡಲು ತಮ್ಮ ಅನುಜ್ಞೆಯಾಗಬೇಕು."

ಭಗವಾನರಿಗೆ ಆ ಮಾತು ಕೇಳಿ ಬಹಳ ಆನಂದವಾಯಿತು. 'ದೇವತೆ ಗಳು ತಮ್ಮ ಕಾರ್ಯವನ್ನು ಬಹಳ ಚೆನ್ನಾಗಿ ನಿರ್ವಹಿಸಿರುವರು. ದುಃಖವಂಟದ ದೇವಸ್ತ್ರೀಯಾದರೆ ಪುತ್ರಶೋಕವು ಸಹ್ಯವಾಗುವುದೆಂದು ದೇವೇಂದ್ರನು ಈಕೆ ಯನ್ನು ತಮಗೆ ಕರುಣಿಸಿ ಮಿತ್ರಕೃತ್ಯವನ್ನು ಮಾಡಿದನು' ಎಂದು ಅವರಿಗೆ ಆದ ಸಂತೋಷಕ್ಕೆ ಪಾರವಿಲ್ಲ.

ಅವರು ಆಗಬಹುದೆಂದು ಆಕೆಯ ನಿಯಮವನ್ನೊಪ್ಪಿಕೊಂಡು, ಆಕೆ ಯೊಡನೆ ನದಿಗೆ ಹೋಗಿ ಬಂದರು. ಅಗ್ನಿಯನ್ನು ಸ್ಥಾಪಿಸಿ ಹೋಮಮಾಡಿ ಆಕೆಯನ್ನು ಸಹಧರ್ಮಚಾರಿಣಿಯೆಂದು ಅಂಗೀಕಾರ ಮಾಡಿದರು. ತಮ್ಮ ಕೃತಜ್ಞತೆಯನ್ನು ತೋರಿಸಲು ಇಂದ್ರನಿಗೂ ವಿಶ್ವೇದೇವಗಳಿಗೂ ಆಹುತಿಗಳನ್ನು ಸಮರ್ಪಿಸಿದರು. ದಂಪತಿಗಳ ಪ್ರೇಮವು ದೃಢವಾಗಿರಲೆಂದು ಸ್ಥಾಲೀಪಾಕ ವನ್ನು ಮಾಡಿದರು. ಇಂದ್ರನ ಅಪ್ಪಣೆಯಾಗುವವರೆಗೂ ತಾನು ಪತ್ನಿಯಾಗಿ ನೆರಳಿಗೆ ನೆರಳಾಗಿರುವೆನೆಂದು ಆಕೆಯೂ ಪ್ರತಿಜ್ಞೆ ಮಾಡಿದಳು.

---

## ಐವತ್ತೆಂಟನೆಯ ತರಂಗ

ಭಗವಾನರ ಅತಿಥಿಗೃಹದಲ್ಲಿ ಇಂದು ಬಹಳ ಸಂಭ್ರಮ. ತ್ರಿಶಂಕು ಕುಮಾರನೂ ಇಕ್ಷ್ವಾಕು ಕುಲಭೂಷಣನೂ ಅಯೋಧ್ಯಾಧಿಪತಿಯೂ ಆದ ಹರಿಶ್ಚಂದ್ರ ಮಹಾರಾಜನು ಭಗವಾನರ ದರ್ಶನಕ್ಕಾಗಿ ಬರುತ್ತಾನೆ. ಭಗವತಿ

ಕೌಶಿಕಿಯವರು ತಾವೇ ಎದುರು ನಿಂತು ಅತಿಥಿ ಸತ್ಕಾರಕ್ಕೆ ಬೇಕಾಗುವುದನ್ನೆಲ್ಲ ಸಿದ್ಧ ಮಾಡುತ್ತಿದ್ದಾರೆ.

ಸಕಾಲದಲ್ಲಿ ಮಹಾರಾಜನು ಬಂದನು. ಮೂರ್ಧಾಭಿಷೇಕ ಪಡೆದ ಕ್ಷತ್ರಿಯನಿಗೆ ಸಲ್ಲಬೇಕಾದ ಮಧುಪರ್ಕಾದಿಗಳನ್ನೆಲ್ಲ ಸಮರ್ಪಿಸಿ ಭಗವಾನರ ಮಕ್ಕಳು ಆಂಧ್ರಕ, ಪುಲಿಂದ, ಮಧುಚ್ಛಂದ, ಅಷ್ಟಕ, ಪ್ರಭೃತಿಗಳು ಆತ ನನ್ನು ಅತಿಥಿಗೃಹಕ್ಕೆ ಕರೆತಂದಿದ್ದಾರೆ. ಹರಿಶ್ಚಂದ್ರನು ಬಂದಾಗ ಭಗವಾನರು ಆಶ್ರಮದಲ್ಲಿರಲಿಲ್ಲ. ಸಂಧ್ಯಾಕಾಲದಲ್ಲಿ ಬಂದರು. ಬರುವವೇಳೆಗೆ ಆಶ್ರಮವು ಅತಿಥಿಯಿಂದ ಸನಾಥವಾಗಿರುವುದನ್ನು ಅರಿತು ಸಂತೋಷಪಟ್ಟು, ನೇರವಾಗಿ ಅಲ್ಲಿಗೇ ಬಂದರು. ಪರಸ್ಪರ ಕುಶಲ ಪ್ರಶ್ನೆಗಳೆಲ್ಲ ಆಯಿತು. ಭಗವಾನರು ಸಂಧ್ಯಾಕರ್ಮಗಳೆಲ್ಲ ಮುಗಿದಮೇಲೆ ಮತ್ತೆ ನೋಡೋಣ ಎಂದು ಸ್ನಾನ ಗೃಹದತ್ತ ತೆರಳಿದರು.

ಈಗ ಧರ್ಮಾರಣ್ಯವು ಗೀರ್ವಾಣ ವಿದ್ಯಾಪೀಠವಾಗಿದೆ. ಚತುರ್ವೇದ ಪಾರಂಗತರಾದ ಮಹಾನುಭಾವರು ಬಂದು ವಿದ್ಯಾಪೀಠದಲ್ಲಿ ಕೆಲವು ಕಾಲ ವಿದ್ದು ತಮ್ಮ ಸಂದೇಹಗಳನ್ನೆಲ್ಲ ನಿವಾರಿಸಿಕೊಂಡು ಭಗವಾನರಿಂದ ಕೃತಾರ್ಥ ರಾದೆವೆಂದು ಕೃತಜ್ಞತೆಯಿಂದ ಹಿಂದಿರುಗುತ್ತಾರೆ. ಇಂದು ಧರ್ಮಾರಣ್ಯವು ವಿದ್ವಾಂಸರ, ತಪಸ್ವಿಗಳ, ಧರ್ಮಜ್ಞರ, ಬ್ರಹ್ಮವೇತ್ತೃಗಳ ಯಾತ್ರಾಸ್ಥಳ ವಾಗಿದೆ. ಬ್ರಹ್ಮಲೋಕದಂತಿದೆಯೆನ್ನುವವರು ಕೆಲವರು. ಭಗವಾನ್ ವಸಿ ಷ್ಠರ 'ತಪೋಭೂಮಿ' ಆಶ್ರಮವನ್ನು ಬಿಟ್ಟು ಇನ್ನೆಲ್ಲಿಯೂ ನಾವು ಈ ಕರ್ಮ ಬ್ರಹ್ಮಸಮೃದ್ಧಿಯನ್ನು ಕಾಣೆವು ಎನ್ನುವವರು ಇನ್ನು ಕೆಲವರು. ಮತ್ತೆ ಕೆಲವರು, ಇಲ್ಲಿ ಸಿದ್ಧಿಯಾಗದಿದ್ದರೆ, ಅವನ ಹಣೆಯಲ್ಲಿ ಸಿದ್ಧಿಯೇ ಬರೆದಿಲ್ಲ ಎಂದು. ಅಂತೂ ಲೋಕದ ದಿಗಂತ ದಿಗಂತಗಳಲ್ಲೆಲ್ಲ ವಿಖ್ಯಾತಿಯು ತುಂಬಿ ಹೋಗಿದೆ. ಮಹರ್ಷಿಗಳು ಮಾತ್ರ "ಯಾಜ್ಞವಲ್ಕ್ಯರ ಆಶ್ರಮ ವಿಶ್ವಾಮಿತ್ರರ ಆಶ್ರಮಗಳಲ್ಲಿ ಯಾವುದು ಹೆಚ್ಚು ಎಂದು ಹೇಳಲು ಸಾಧ್ಯವಿಲ್ಲ" ಎನ್ನುವರು. ಕೆಲವರು ತುಂಟರು ಮಾತ್ರ, "ಅಳತೆಗೋಲು ಇದ್ದರೂ ಅಳೆಯದಿದ್ದರೆ ಯಾರ ತಪ್ಪು! ಯಾಜ್ಞವಲ್ಕ್ಯರಿಗೆ ಇಬ್ಬರು ಹೆಂಡತಿಯರು. ಎಂಟು ಜನ ಮಕ್ಕಳು. ವಿಶ್ವಾಮಿತ್ರರಿಗೆ ಒಬ್ಬ ಹೆಂಡತಿ: ನೂರು ಜನ ಮಕ್ಕಳು. ಯಾರು ಹೆಚ್ಚು ಹೇಳಿ" ಎಂದು ಸೊಟ್ಟಾಗಿ ಮಾತನಾಡಿ ನಗಿಸುವರು.

ಘೃತಾಚಿಯು ಈಗ ಭಗವತೀ ಕೌಶಿಕಿಯಾಗಿದ್ದಾಳೆ. ಆಶ್ಚರ್ಯವೇನೆಂದರೆ ಆಕೆಯು ತಾನು ದೇವತಾ ಸ್ತ್ರೀಯೆಂಬುದನ್ನೇ ಮರೆತುಬಿಟ್ಟಿದ್ದಾಳೆ. ಆ ದೇವತ್ವವನ್ನು ಬಿಟ್ಟರೆ, ತನ್ನ ನಿತ್ಯ ಯೌವನವು ಹೋಗುವುದು ಎಂದು ಆಕೆ ಅದನ್ನು ಬಿಟ್ಟಿಲ್ಲ: ಅಲ್ಲದೆ ಭಗವಾನರ ಅಪ್ಪಣೆಯಾದಂತೆ ಯಾವಾಗಲೋ ಒಂದು ಸಲ ಆ ಪುತ್ರಶೋಕವು ಬರಲಿದೆ. ಅದನ್ನು ಸಹಿಸುವುದಕ್ಕೆ ಇರಲಿ ಎಂದು ಆ ದೇವತ್ವವನ್ನು ಬಿಡಲಾರದೆ ಇಟ್ಟುಕೊಂಡಿದ್ದಾಳೆ. ಮಿಕ್ಕೆಲ್ಲ ವಿಷಯ ಗಳಲ್ಲೂ ಆಕೆಯು ಗೃಹಿಣಿ. ಗೃಹಧರ್ಮವನ್ನು ಪಾಲಿಸಿಕೊಂಡು ಗೃಹಮೇಧಿ ಯಾದ ಆರ್ಯನ ಪತ್ನಿ. ಆಕೆಯು ಗೊತ್ತುಮಾಡಿಕೊಂಡಿದ್ದಾಳೆ: 'ಮತ್ತೆ ದೇವಲೋಕದಿಂದ ಕರೆಬರುವವರೆಗೂ ಇಲ್ಲಿಯೇ ಇರುವುದು. ಆ ಕರೆ ಬಂದಾಗ ದೇವತ್ವವನ್ನು ಬಿಟ್ಟುಬಿಡುವುದು' ಎಂದು.

ಆಶ್ರಮದಲ್ಲಿಯೂ ಅಷ್ಟೇ! ಎಲ್ಲವೂ ಸುಮುಖವಾಗಿದೆ. ಮೊದಲಿನ ಐವತ್ತುಮಂದಿ ಮಕ್ಕಳು ಪ್ರತಿಭಾವಂತರು: ವೇದವೇದಾಂಗ ಪಾರಂಗತರು. ಆದರೂ ಕರ್ಮದಲ್ಲಿರುವಷ್ಟು ಶ್ರದ್ಧೆ ಬ್ರಹ್ಮದಲ್ಲಿಲ್ಲ. ಸಾಂಪ್ರದಾಯಿಕರಾಗಿ, ಗುರುದೇವ ಭಕ್ತಿಸಂಪನ್ನರಾಗಿದ್ದಾರೆ. ಯಾವ ವಿಧದಲ್ಲಿ ಹುಡುಕಿದರೂ ಅವ ರಲ್ಲಿ ದೋಷವನ್ನು ಕಾಣಲಾಗುವುದಿಲ್ಲ. ಆದರೂ ಏನೋ ಕೊಂಕು. ಏನೋ ಸೊಟ್ಟತನ. ಏನೋ ಚೊಂಗು. ಒಂದೊಂದು ವೇಳೆ ನಿಷ್ಠುರೋಕ್ತಿಗಳಾಡಿ ಖಂಡುಗ ಹಾಲಿಗೆ ಒಂದು ತೊಟ್ಟು ಹುಳಿ ಹಿಂಡಿದಂತೆ ಮಾಡುವರು. ನೀರಿಗೆ ಕಲ್ಲು ಎಸೆದಂತೆ ಆಗಿ ಸಂಸಾರವು ಒಂದು ಗಳಿಗೆ ಕ್ಷುಬ್ಧವಾಗುವುದು. ಮತ್ತೆ ಎಲ್ಲವೂ ಸರಿಹೋಗುವುದು. ಭಗವತೀ ಕೌಶಿಕಿಯು 'ಭಗವಾನರು ಅವ ರನ್ನು ಸರಿಕಟ್ಟುತ್ತಿರುವುದರಿಂದ ಆಗುತ್ತಿರುವ ಅನರ್ಥವಿದು. ತಂದೆ ಯಾಗಿ ಮನೆಯ ಯಜಮಾನರಾದವರು ಅವರು ತಪ್ಪಿ ನಡೆದಾಗ ಒಮ್ಮೆ ಗದರಿಸಿಕೊಳ್ಳುವುದಾದರೂ ಬೇಡವೆ? ಅಷ್ಟೂ ಇಲ್ಲದಿದ್ದರೆ ಹೇಗೆ?' ಎಂದು ಕೊಳ್ಳುವಳು. ಮತ್ತೆ 'ಬಹುಶಃ ಈ ಐವತ್ತು ಮಂದಿಯೇ ಏನೋ ಬಲಿ ಯಾಗುವವರು? ಅದರಿಂದಲೇ ಏನೋ ಭಗವಾನರು ಇವರ ವಿಚಾರದಲ್ಲಿ ಅಷ್ಟು ಸದಯರಾಗಿರುವುದು? ಅವರಿಗೆ ತಿಳಿಯದುದು ತನಗೆ ಗೊತ್ತೇ?' ಎಂದು ಆತ್ಮಾರ್ಪಣಮಾಡಿರುವ ಸತಿಯ ಮಾತನಾಡಿಕೊಂಡು ಸುಮ್ಮನಾಗು ವಳು.

ಮಧುಚ್ಛಂದಾದಿ ಪಂಚಾಶರು ಸರ್ವವಿಧದಲ್ಲಿಯೂ ಸದ್ಗುಣಸಂಪನ್ನರು. ನುರಿತ ಕೈಯಿನ ವೀಣಾವಾದನದಂತೆ ಹೇಗೆ ಹೇಗೊ ಮಧುರರು. ಮತ್ತೊಂದು ವಿಶೇಷಗುಣವೆಂದರೆ ಮಧುಚ್ಛಂದನು ಅಂತರ್ಮುಖಿ. ಮೌನಿಯಲ್ಲದಿದ್ದರೂ ಆತನು ಒಟ್ಟಿಗೆ ನಾಲ್ಕು ಮಾತುಗಳನ್ನು ಆಡಿದುದನ್ನು ಯಾರೂ ಕಾಣರು. ನಿಯಮವಿಲ್ಲದಿದ್ದರೂ ನಿಯತಿಯನ್ನು ಮೀರದ ಸ್ವಭಾವದವನು. ಮಿಕ್ಕವರೆಲ್ಲರೂ ಆತನನ್ನು ಅನುಸರಿಸುವರು. ಅದೇನೋ ಎಂತೋ ಮಕ್ಕಳಲ್ಲಿ ಪರಸ್ಪರ ವೈಷಮ್ಯವಿಲ್ಲದಿದ್ದರೂ ಎಲ್ಲರೂ ಅನ್ಯೋನ್ಯವಾಗಿದ್ದರೂ, ನದೀ ಸಂಗಮದಲ್ಲಿರುವಂತೆ, ಅವರು ಅವರೇ. ಇವರು ಇವರೇ ಎಂಬುದು ಚೆನ್ನಾಗಿ ಒಡೆದುಕಾಣುವುದು. ಹೇಗೆ ಎಂದರೆ ಹೇಳುವುದು ಕಷ್ಟವಾಗಿದ್ದರೂ ಇಲ್ಲ ಎಂದು ಹೇಳುವುದಕ್ಕಾಗದಷ್ಟು ಸ್ಪಷ್ಟವಾಗಿ ಭೇದವುಂಟು.

ಹರಿಶ್ಚಂದ್ರನು ಭಗವಾನರ ಆತಿಥ್ಯದಿಂದ ಸುಪ್ರೀತನಾದನು. ಮಿತ ಪರಿವಾರನಾಗಿ ಬಂದಿರುವ ಅತಿಥಿಗೆ ದಿವ್ಯವಾದ ಉಪಚಾರಗಳೆಲ್ಲ ನಡೆದುವು. ಪರಿವಾರದವರಿಗೂ ಯಥೇಚ್ಛವಾಗಿ ಯಥಾಯೋಗ್ಯವಾಗಿ ಸತ್ಕಾರವು ಲಭಿಸಿ ಸರ್ವರೂ ಸುಪ್ರೀತರಾದರು. ಕ್ಷತ್ರಿಯರಲ್ಲಿ ಅನೇಕರು ದುಷ್ಟರಾಗಿದ್ದರೂ ಇಂತಹ ಕ್ಷತ್ರಿಯರೂ ಇರುವರಲ್ಲ ಎಂದು ಆಶ್ರಮವಾಸಿಗಳಿಗೆ ಬಹು ತೃಪ್ತಿ.

ಹರಿಶ್ಚಂದ್ರ ಮಹಾರಾಜನೂ ಯಥಾಯೋಗ್ಯವಾಗಿ ಭಗವಾನರಿಂದ ಹಿಡಿದು ಸರ್ವರಿಗೂ ಯಥೇಚ್ಛವಾಗಿ ಪೂಜಾದಿಗಳನ್ನು ಒಪ್ಪಿಸಿದನು. ಕೊಡ ಹಾಲು ಹಿಂಡುವ ಉತ್ತಮವಾದ ಹಸುಗಳಿಗೆ ಕೊಂಬು ಗೊರಸುಗಳಿಗೆ ಚಿನ್ನದ ಕಳಶ, ರೇಖುಗಳನ್ನು ಕಟ್ಟಿ, ಹಿಂಡುಹಿಂಡಾಗಿ ಒಂದು ಸಾವಿರವನ್ನು ಭಗವಾನರಿಗೆ ಒಪ್ಪಿಸಿದನು. ಉತ್ತಮಾಶ್ವಗಳಿಂದ ಮನೋಹರವಾಗಿ ರತ್ನಸುವರ್ಣ ಖಚಿತವಾದ ರಥವನ್ನೂ ದಿವ್ಯ ವಸ್ತ್ರಾಭರಣಗಳನ್ನೂ ಭಗವತೀ ಕೌಶಿಕಿಯವರಿಗೆ ಕಾಣಿಕೆಮಾಡಿದನು. ಉತ್ತಮವಾದ ಕೃಷ್ಣಾಜಿನಗಳು, ಉತ್ತರೀಯಗಳು,ಸ್ವರ್ಣ ರಜತ ಪಾತ್ರಾದಿಗಳನ್ನು ಆಶ್ರಮಕ್ಕೆಂದು ಬಂಡಿಬಂಡಿ ಕೊಟ್ಟನು. ಆಶ್ರಮವಾಸಿಗಳಿಗಂತೂ ಪ್ರತಿಯೊಬ್ಬರಿಗೂ ಅವರವರ ಇಚ್ಛಾನುಸಾರ ಸಂಭಾವನೆಯು ದೊರೆಯಿತು. ಅತಿಥಿಯೂ ಅತಿಥಿ ಪರಿವಾರದವರೂ ಆಶ್ರಮವಾಸಿಗಳ ಸತ್ಕಾರದಿಂದ ತೃಪ್ತರಾದರು. ಮಹಾರಾಜನ ಪ್ರದಾನಗಳಿಂದ ಆಶ್ರಮವಾಸಿಗಳೂ ತೃಪ್ತರಾದರು.

ಎಲ್ಲರೂ ತೃಪ್ತಿಪಟ್ಟರೂ ಆಂಧ್ರಕಾದಿಗಳಿಗೆ ಒಳಗೇನೋ ಶಂಕೆ: 'ಈ ಮಹಾರಾಜನು ಏಕೆ ಇಷ್ಟು ಐಶ್ವರ್ಯವನ್ನು ಈ ಆಶ್ರಮದಲ್ಲಿ ವಿತರಣ ಮಾಡುತ್ತಿದ್ದಾನೆ? ಏನೋ ಇದೆ. ಅರ್ಥಿಗಳಲ್ಲದ ನಮಗೆ ಇಷ್ಟು ಅರ್ಥ ವನ್ನು ಕೊಡುವುದು ಏನೋ ಅನರ್ಥಹೇತುವೆಂದೇ ನಮ್ಮ ಭಾವನೆ. ಅಂತೂ ಜಾಗ್ರತವಾಗಿರಬೇಕಾದ ವಿಷಯ' ಎನ್ನಿಸಿತು. ಆದರೆ ಅದನ್ನು ಯಾರೊಡನೆ ಹೇಳಬೇಕು?

ಹಾಗೂ ಹೀಗೂ ಸಂಜೆಯೂ ಆಯಿತು. ಮಹಾರಾಜನೂ ಸಂಧ್ಯಾ ವಿಧಿಗಳನ್ನೆಲ್ಲ ಮುಗಿಸಿ ಭಗವಾನರ ಆಜ್ಞೆಯನ್ನು ಪ್ರತೀಕ್ಷಿಸುತ್ತ ಕುಳಿತನು. ಅವರೂ ಎಲ್ಲವನ್ನೂ ಮುಗಿಸಿಕೊಂಡು ವಿಶ್ರಾಂತಿಗೇಹದಲ್ಲಿ ಬಂದು ಕುಳಿತು ಮಹಾರಾಜನಿಗೆ ಹೇಳಿ ಕಳುಹಿಸಿದರು.

---

## ಐವತ್ತೊಂಬತ್ತನೆಯ ತರಂಗ

ಹರಿಶ್ಚಂದ್ರನು ಬಂದು ವಿನಯದಿಂದ ಭಗವಾನರಿಗೆ ಸಾಷ್ಟಾಂಗ ಪ್ರಣಾಮಮಾಡಿ ಅವರ ಅಪ್ಪಣೆಪಡೆದು ತನಗಾಗಿ ಏರ್ಪಡಿಸಿದ್ದ ಸುಖಾಸನ ದಲ್ಲಿ ಕುಳಿತನು. ಭಗವಾನರೇ ಮಾತನಾಡಿಸಿದರು.

"ಮಹಾರಾಜನನ್ನು ಇಲ್ಲಿಯವರೆಗೂ ಕರೆತಂದ ಕಾರ್ಯಗೌರವವು ಯಾವುದು?"

"ನಾನು ಒಂದು ಯಜ್ಞ ಮಾಡಬೇಕೆಂದಿರುವೆನು. ಕುಲಗುರುಗಳಾದ ವಸಿಷ್ಠರ ಬಳಿಗೆ ಹೋಗಿದ್ದೆನು. ಅವರು ತಾವು ಹೋತೃವಾಗುವ ಹಾಗಿದ್ದರೆ ಆಗಬಹುದು ಎಂದರು. ತಾವು ಕೃಪೆಮಾಡಿ ಯಜ್ಞವನ್ನು ಮಾಡಿಸಿಕೊಡ ಬೇಕು."

ಭಗವಾನರು ಆಶ್ಚರ್ಯದಿಂದ ಒಂದು ಗಳಿಗೆ ಸುಮ್ಮನಿದ್ದರು: ಹಿಂದೆ ತ್ರಿಶಂಕುವಿಗೆ ವಿಶ್ವಾಮಿತ್ರರ ಬಳಿಗೆ ಹೋಗು ಎಂದು ಹೇಳಿ ಕಳುಹಿಸಿದ್ದರು. ಈಗ ನನ್ನನ್ನು ಹೌತ್ರಕ್ಕೆ ಕರೆಯುತ್ತಿದ್ದಾರೆ. ಸರಿ. ಪರೀಕ್ಷೆಗೆ ಬಹಳ ಅನುಕೂಲ ವಾಗಿದೆ. ಇವನಿಗೆ ದೇವತೆಗಳೆಲ್ಲ ಅನುಗ್ರಹ ಮಾಡಿದ್ದಾರೆಯೋ ಇಲ್ಲವೇ?

ಇವನು ಕರೆದರೆ ಬರುತ್ತಾರೆಯೇ ಇಲ್ಲವೆ? ಎಂದು ನೋಡಿಕೊಳ್ಳುವುದಕ್ಕೆ ಒಳ್ಳೆಯ ಅವಕಾಶ. ನಾವೂ ಈಗ ಪರೀಕ್ಷೆ ಕೊಡಬೇಕು. ಒಪ್ಪದಿದ್ದರೆ, ಸೋಲು ಒಪ್ಪಿಕೊಂಡಂತಾಗುವುದು. ಹಾಗಾಗಬಾರದು. ಪ್ರಾಣದೇವನನ್ನು ಕೇಳಿ ಆತನು ಹೇಳಿದಂತೆ ಮಾಡುವುದು. ಅಂತೂ ಪರೀಕ್ಷಾಕಾಲ. ಆತನೂ ಒಪ್ಪಿಕೊಳ್ಳೆಂದೇ ಹೇಳಬಹುದು. ಇರಲಿ ಎಂದುಕೊಂಡು ಮತ್ತೆ ಕೇಳಿದರು :

"ಆಯಿತು. ಯಾವ ಯಜ್ಞ? ಅಧ್ವರ್ಯುವು ಯಾರು? ಉದ್ಗಾತೃವು ಯಾರು?"

"ಯಜ್ಞವು ವಿಚಿತ್ರವಾದುದು. ಅದರಿಂದ ಕೊಂಚ ವಿವರವಾಗಿ ಹೇಳಲು ಅಪ್ಪಣೆಯಾಗಬೇಕು. ನನಗೆ ಬಹುಕಾಲ ಪುತ್ರಲಾಭವಾಗದಿರಲು, ನಾರದರ ಉಪದೇಶದಂತೆ ವರುಣನಿಗೆ 'ನನಗೆ ಮಕ್ಕಳಾದರೆ ಮೊದಲನೆಯ ಮಗನನ್ನು ನಿನಗೆ ಪಶುವಾಗಿ ಒಪ್ಪಿಸುವೆನು' ಎಂದು ಹರಕೆ ಕಟ್ಟಿಕೊಂಡೆನು. ವರುಣದೇವನ ಕೃಪೆಯಿಂದ ಮಗನಾದನು. ಮಗನನ್ನು ಪಶು ಮಾಡಲಾರದೆ ದಿನಗಳನ್ನು ತಳ್ಳುತ್ತಾ ಬಂದೆನು. ಕೊನೆಗೆ ಮಾಡಲೇಬೇಕಾಯಿತು. ಆಗ ಆ ಮಗನು ಕಾಡಿಗೆ ಓಡಿಹೋದನು. ನನಗೆ ವರುಣ ಕೋಪದಿಂದ ಮಹೋದರವು ಬಂತು. ಈ ಸುದ್ದಿಯನ್ನು ಕೇಳಿ ಮಗನಾದ ರೋಹಿತನು ತನ್ನ ಸ್ಥಾನದಲ್ಲಿ ಬಲಿಯಾಗುವುದಕ್ಕೆ ಒಬ್ಬ ಕುಮಾರನನ್ನು ಸಂಪಾದಿಸಿಕೊಂಡು ಬಂದಿರುವನು. ಈ ಯಜ್ಞವು ವರುಣದೇವತಾಕವಾದ ನರಮೇಧ. ಭಗವಾನ್ ಭಾರ್ಗವರು ಅಧ್ವರ್ಯುಗಳು. ಭಗವಾನ್ ಅಯಾಸ್ಯರು ಉದ್ಗಾತೃಗಳು."

ನರಮೇಧವೆಂದು ಕೇಳಿ ಅವರಿಗೆ ಇನ್ನೂ ಆಶ್ಚರ್ಯವಾಯಿತು. 'ಏನು ಈ ನರಮೇಧದಲ್ಲಿಯೇ ನಾನು ಮಾಡಬೇಕಾದ ನರಮೇಧವೂ ಕಳೆದುಹೋಗುವುದೋ?' ಎನ್ನಿಸಿತು.

"ಆಯಿತು. ಕುಮಾರನಾರು?"

"ಸಿಂಧೂ ತೀರದಲ್ಲಿರುವ ಆಂಗೀರಸ ಗೋತ್ರದ ಅಜೀಗರ್ತನು ನೂರು ಹಸುಗಳನ್ನು ತೆಗೆದುಕೊಂಡು ಮಗನನ್ನು ಕೊಟ್ಟಿರುವನು."

"ಕುಮಾರನು ತೇಜಸ್ವಿಯಾಗಿರುವನೋ?"

"ಹೌದು. ದೇವ ಕುಮಾರನಂತಿರುವನು. ಅವನನ್ನು ಯೂಪಸ್ತಂಭಕ್ಕೆ

ಕಟ್ಟುವುದೆಂತು? ಪ್ರೋಕ್ಷಿಸುವುದೆಂತು? ಅದನ್ನು ಮಾಡದಿದ್ದರೆ ನನ್ನ ಮಹೋದರವು ಇಳಿಯುವುದೆಂತು? ಇದೇ ನನಗೆ ಯೋಚನೆಯಾಗಿದೆ."

"ಈ ನರಮೇಧವಲ್ಲದೆ ವರುಣನ ಪ್ರಸಾದವನ್ನು ಪಡೆಯುವುದಕ್ಕೆ ಬೇರೆ ಸಾಧನವಿಲ್ಲವೋ?"

"ನಾನೂ ಬಹಳ ವಿಚಾರಿಸಿದೆ. ಇದು ಸ್ವಯಂ ಕೃತಾಪರಾಧ. ಇದಲ್ಲದೆ ಬೇರೆ ದಾರಿಯಿಲ್ಲ. ಆದರೆ ನಮ್ಮ ಗುರುಗಳು ಹೇಳಿದರು: 'ಯಾರಾದರೂ ದಕ್ಷರಿದ್ದರೆ, ಪಶುವಾದ ಕುಮಾರನನ್ನು ಉಳಿಸಬಹುದು: ಯಜಮಾನನನ್ನೂ ಕಾಪಾಡಬಹುದು: ನೋಡೋಣ' ಎಂದು."

ಭಗವಾನರಿಗೆ ಸಮಾಧಾನವಾಯಿತು.

"ಮುಂದೆ?"

"ಹೋತೃವಿಗೆ ದಶ ಸಹಸ್ರ ಗೋವುಗಳು, ಹತ್ತು ಭಾರ ಸುವರ್ಣ ದಕ್ಷಿಣೆಯೆಂದು ಗೊತ್ತುಮಾಡಿದ್ದೇನೆ."

"ಸರಿ."

"ಯಜ್ಞವು ಸರಯೂ ತೀರದಲ್ಲಿ, ಬರುವ ಶುದ್ಧ ದಶಮಿಯದಿನ ಆರಂಭವಾಗಬೇಕು. ತಾವು ಸಪರಿವಾರರಾಗಿ ದಯಮಾಡಿಸಬೇಕು. ಯಜ್ಞ ಮಂಟಪದ ಪಕ್ಕದಲ್ಲಿಯೇ ಋತ್ವಿಜರಿಗಾಗಿ ಪ್ರಶಸ್ತವಾದ ಪರ್ಣಶಾಲೆಗಳು ಏರ್ಪಟ್ಟಿವೆ."

"ಆಗಬಹುದು. ನಾಳೆಯ ದಿನ ನಾವು ಉತ್ತರವನ್ನು ಹೇಳುತ್ತೇವೆ."

ಮಹಾರಾಜನು "ಆಗಬಹುದು. ಆದರೂ ಕೊನೆಯ ಮಾತಾಗಿ ನಾನು ಕೇಳಿಕೊಳ್ಳುವುದು: ತಾವು ಒಪ್ಪಲೇಬೇಕು. ಈಗ ಯಾಗ ಮಾಡುವೆನೆಂದು ಪ್ರಯತ್ನಮಾಡಿದಮೇಲೆ ನನ್ನ ರೋಗವು ಅರ್ಧ ಗುಣವಾಗಿದೆ. ಆದರಿಂದ ಈ ಯಾಗವಾದರೆ, ನಾನು ನಿಸ್ಸಂದೇಹವಾಗಿ ಬದುಕಿಕೊಳ್ಳುತ್ತೇನೆ. ನಮ್ಮ ತಂದೆಯವರ ಮೇಲಿದ್ದ ಅಭಿಮಾನವನ್ನು ನನ್ನ ಮೇಲೆಯೂ ತೋರಿಸಬೇಕು" ಎಂದು ಕೈಮುಗಿದನು.

ಭಗವಾನರು ನಗುತ್ತ "ಮಹಾರಾಜ, ಈ ಯಾಗಕ್ಕೆ ಬರುವುದರಲ್ಲಿ ನಮಗೂ ಒಂದು ಸ್ವಾರ್ಥವಿದೆ. ಭಗವಾನ್ ಯಾಜ್ಞವಲ್ಕ್ಯರ ಮಾತು ನಿಜ.

ಎಲ್ಲರೂ ಮಾಡುವುದು ' ಆತ್ಮನಃ ಕಾಮಾಯ ' ತಮ್ಮ ತಮ್ಮ ಪ್ರಯೋಜನಕ್ಕೋಸ್ಕರ. ನೀನು ದಕ್ಷಿಣೆಯನ್ನು ಕೈತುಂಬ ಕೊಡುವೆನೆಂದ ಮೇಲೂ ನಾವು ಬರುವುದಿಲ್ಲವೆನ್ನಲಾಗುವುದೆ? ಆದರೂ ನಾವು ಇನ್ನೇನೋ ಒಂದು ವಿಷಯವಾಗಿ ಯೋಚಿಸಬೇಕಾಗಿದೆ. ಅದಿರಲಿ. ನೀನು ಈ ಯಾಗವು ಸಾಂಗವಾಗಿ ನೆರವೇರುವುದು ಎಂದು ನಂಬಿದ್ದೀಯಾ ?"

"ನಾನು ಶಕುನಜ್ಞರನ್ನು ವಿಚಾರಿಸಿದ್ದೇನೆ. ಅವರು ಈ ಯಾಗವು ಪೂರ್ಣವಾಗುವುದಿಲ್ಲ. ಆದರೆ ಅದರ ಫಲವು ಮಾತ್ರ ಪೂರ್ಣವಾಗಿ ಲಭಿಸುವುದು ಎಂದು ಹೇಳುತ್ತಾರೆ."

"ಅಧ್ವರ್ಯು ಉದ್ಗಾತೃಗಳು ಒಪ್ಪಿದ್ದಾರೆಯೋ ?"

"ಅವರೂ ತಾವು ಹೌತ್ರಕ್ಕೆ ಒಪ್ಪಿದರೆ ಆಗಬಹುದು ಎಂದಿದ್ದಾರೆ."

ವಿಶ್ವಾಮಿತ್ರರು ಯೋಚಿಸಿದರು : "ಏನು ? ಇದೂ ತ್ರಿಶಂಕುವಿನ ಯಾಗದಂತೆಯೇ ಆಗುವುದೋ ? ಪ್ರಾಣದೇವನ ಅನುಜ್ಞೆಯು ದೊರೆತು, ಈ ಯಾಗಕ್ಕೇನಾದರೂ ಹೋದರೆ, ಯಾವ ವಿಧದಲ್ಲೂ ಕ್ಷೋಭವನ್ನು ಪಡೆಯಬಾರದು : ಉದ್ರಿಕ್ತನಾಗಬಾರದು " ಎಂದುಕೊಂಡು ಮಹಾರಾಜನನ್ನು ಬೀಳ್ಕೊಟ್ಟರು.

---

## ಅರವತ್ತನೆಯ ತರಂಗ

ಮರುದಿನ ಆಶ್ರಮದಲ್ಲೆಲ್ಲಾ ಗುಲ್ಲೋಗುಲ್ಲು. "ಹರಿಶ್ಚಂದ್ರ ಮಹಾರಾಜನು ನರಮೇಧವನ್ನು ಮಾಡಬೇಕೆಂದಿದ್ದಾನೆಯಂತೆ. ಭಗವಾನರನ್ನು ಹೌತ್ರಕ್ಕೆ ಆಹ್ವಾನಿಸಲು ಬಂದಿರುವನಂತೆ ! ದಶಸಹಸ್ರ ಗೋಧನವನ್ನೂ ದಶಭಾರ ಸುವರ್ಣವನ್ನೂ ದಕ್ಷಿಣೆಯಾಗಿ ಕೊಡುವನಂತೆ. ಭಗವಾನ್ ವಸಿಷ್ಠರೂ ಒಪ್ಪಿರುವರಂತೆ. ಇನ್ನೂ ಇವರು ಒಪ್ಪಿಲ್ಲವಂತೆ " ಎಂದು ಎಲ್ಲರೂ ಒಂದೊಂದು ವಿಧವಾಗಿ ಮಾತನಾಡುತ್ತಿದ್ದಾರೆ.

ಕೆಲವರು ಸಾಂಪ್ರದಾಯಿಕರು ಹೋಗಿ ಆಶ್ರಮವಾಸಿಗಳಲ್ಲೆಲ್ಲಾ ವೃದ್ಧರೂ ತಿಳಿದವರೂ ಆದವರೆಂದೆನ್ನಿಸಿಕೊಂಡಿದ್ದವರನ್ನು ಕೇಳಿದರು: "ತಾತ, ನರಮೇಧವು ಶಾಸ್ತ್ರ ಸಮ್ಮತವೆ?" ಅವರು ನಕ್ಕರು: "ಅಲ್ಲವಯ್ಯಾ, ಇವೆಲ್ಲ ಕಾಮ್ಯಕರ್ಮಗಳು. ಇಷ್ಟಾರ್ಥ ಸಿದ್ಧಿಗೋಸ್ಕರ ಯಾವುದೋ ಒಂದನ್ನು ಹಿಡಿದು ಬಲಿಹಾಕುವುದೇ ಯಾಗ. ಅದರಿಂದ ನಿನ್ನ ಪ್ರಶ್ನೆಯೇ ಸರಿಯಲ್ಲ. ನೀನು 'ನರಪಶುವು ಶಾಸ್ತ್ರವಿಹಿತವೇ?' ಎಂದು ಕೇಳಬೇಕು. ಶಾಸ್ತ್ರವು ಪಶುವನ್ನು ನಿತ್ಯನೈಮಿತ್ತಿಕ ಕರ್ಮಗಳಲ್ಲಿ ಮಾತ್ರ ವಿಧಿಸಿದೆಯೇ ಹೊರತು ಕಾಮ್ಯಕರ್ಮಗಳಲ್ಲಿ ವಿಧಿಸಿಲ್ಲ. ಇನ್ನು ಅದು ಆಗಬಹುದೇ ಎಂದರೆ, ಹಿಂದಿನವರು ಹೇಳಿಯೇ ಇದ್ದಾರೆ: 'ಆತ್ಮಾರ್ಥೇ ಪೃಥಿವೀಂ ತ್ಯಜೇತ್' ಎಂದು. ಅಲ್ಲದೆ, ಆ ಕರ್ಮದಲ್ಲಿ ಪಾಪವುಂಟು. ಬಹುಶಃ ಅದಕ್ಕಾಗಿ ಇನ್ನಷ್ಟು ಹೋಮ ದಾನಗಳನ್ನು ಮಾಡಿ ಪ್ರಾಯಶ್ಚಿತ್ತಮಾಡಿಕೊಂಡು ಅದನ್ನು ಕಳೆದುಕೊಳ್ಳಬಹುದು. ಅಂತೂ ಕಾಮ್ಯಕರ್ಮ ರಗಳೆ. ಅದಿರಲಿ. ಇನ್ನುಮುಂದೆ ಇಂತಹ ಅವಿವೇಕ ಪ್ರಶ್ನೆಗಳನ್ನು ಕೇಳಬೇಡ. ವೇದವು ಸರ್ವಮಾನ್ಯವಾಗಬೇಕಾದರೆ ಸರ್ವ ಕಾಮಗಳನ್ನೂ ಸಾಧಿಸುವ ಸಾಧನಗಳನ್ನೆಲ್ಲ ಹೇಳಿಯೇ ಇರಬೇಕಲ್ಲ. ಒಂದು ವೇಳೆ ಕಲ್ಪವಿಲ್ಲದಿದ್ದರೆ ಒಂದು ಯಾಗವನ್ನು ಸ್ವತಂತ್ರವಾಗಿ ಕಲ್ಪಿಸಕೊಳ್ಳಲೂ ಅವಕಾಶವಿದೆ. ಅದು ತಿಳಿದುಕೊಂಡು ಸುಮ್ಮಗಾಗಿ" ಎಂದು ಅವರನ್ನು ಹಿಂತಿರುಗಿಸಿದರು.

ಇತ್ತ ಭಗವಾನರು ಅಗ್ನಿಗೃಹದಲ್ಲಿ ಅಗ್ನಿಹೋತ್ರವನ್ನು ಮುಗಿಸಿಕೊಂಡು ಕುಳಿತಿದ್ದಾರೆ. ಪ್ರಾಣದೇವನು 'ಹೌತ್ರವನ್ನು ಒಪ್ಪಿಕೊಳ್ಳಬಹುದು' ಎಂದು ಅಪ್ಪಣೆ ಕೊಟ್ಟಿದ್ದಾನೆ. ಹಾಗೆಯೇ 'ಅಲ್ಲೊಂದು ವಿಚಿತ್ರವು ನಡೆಯುವುದು. ಮೈಯೆಲ್ಲ ಕಣ್ಣಾಗಿದ್ದು ಶ್ರೇಯಸ್ಸನ್ನು ಸಂಪಾದಿಸಿಕೊಂಡು ಬಾ. ಭವಿಷ್ಯತ್ತನ್ನು ನೋಡುವುದಕ್ಕೆ ಹೋಗಬೇಡ' ಎಂದೂ ಕಟ್ಟಾಯವಾಗಿ ಅಪ್ಪಣೆಯಾಗಿದೆ. ಅವರಿಗೆ ಆಶ್ಚರ್ಯ. 'ನೋಡಬೇಡ ಎನ್ನುವುದಕ್ಕೆ ಕಾರಣವೇನು? ಏನು ವಿಚಿತ್ರವು ನಡೆದೀತು! ಸರಿ. ನಮ್ಮ ಪರೀಕ್ಷೆ. ವಿನಯವಾಗಿ, ಜಾಗ್ರತನಾಗಿ, ಇದ್ದು ಗೆದ್ದು ಬರಬೇಕು. ಸರಿ.' ಎಂದು ಗೊತ್ತುಮಾಡಿಕೊಂಡು, ಇನ್ನೇನು ಮಹಾರಾಜನಿಗೆ ಹೇಳಿ ಕಳುಹಿಸಬೇಕು: ತಾವೂ ಅಗ್ನಿಗೃಹಕ್ಕೆ ಹೋಗಬೇಕು ಎಂದು ಹೊರಟಿದ್ದಾರೆ. ಜ್ಯೇಷ್ಠಪುತ್ರ ಆಂಧ್ರನು

ಬಂದನು. ಮುಖವೇ ವಿರಸವಾಗಿ ಏನೋ ಅನಿಷ್ಟ ಸಮಾಚಾರವನ್ನು ತಂದಿರು ವಂತೆ ತೋರಿತು.

ತಂದೆಯು ವಿಚಾರಿಸಿದರು : "ಏನಪ್ಪಾ ?"

ಮಗನೂ ವಿನಯದಿಂದಲೇ ಮಾತನಾಡಿದನು : "ಹರಿಶ್ಚಂದ್ರ ಮಹಾ ರಾಜನು ನಿನ್ನೆಯಿಂದ ಆಶ್ರಮವಾಸಿಗಳಿಗೆಲ್ಲ ಬೇಕಾದಹಾಗೆ ಪ್ರದಾನ ಮಾಡುತ್ತ ಪ್ರಲೋಭ ಹುಟ್ಟುವಹಾಗೆ ಮಾಡುತ್ತಿದ್ದಾನೆ."

ಮುನ್ನಡೆಯುತ್ತಿದ್ದವರು ನಿಂತು ಕೇಳಿದರು : "ಆಶ್ರಮವಾಸಿಗಳು ಲೋಭದಿಂದ ಆತನನ್ನು ಆಶ್ರಯಿಸಲಿಲ್ಲವಲ್ಲ ? ಸರಿ ಮತ್ತೆ, ಆತನು ತಾನಾಗಿ ಕೊಟ್ಟುದನ್ನು ಬೇಡ ಎನ್ನುವುದು ಹೇಗೆ ? ಬೇಡ ಎನ್ನುವುದು ಬೇಕು ಎಂಬ ಲೋಭವಿರುವಾಗ ಅದರಮೇಲೆ ಹೂಡಿರುವ ಯುದ್ಧದ ಸೌಮ್ಯರೂಪ. ಆಶ್ರಮ ವಾಸಿಗಳಿಗೆ ಹೇಳು. ಯಾರೂ ಲೋಭಪಡುವುದು ಬೇಡ ಎಂದು. ಮುಂದೆ?"

"ಆತನು ಹೀಗೆ ಮಾಡುವುದಕ್ಕೆ ಕಾರಣವಿದೆ ...ಆತನು ನರಮೇಧಕ್ಕೆ ತಮ್ಮನ್ನು ಕರೆಯುವುದಕ್ಕೆ ಬಂದಿರುವನಂತೆ........ತಾವು ಒಪ್ಪಿಕೊಳ್ಳುವಿರಾ ?"

"ಏನಾದರೂ ಅಡ್ಡಿಯಿದೆಯೇನು ?"

"ನಮಗೆಲ್ಲಾ ಸಮ್ಮತವಿಲ್ಲ."

"ಎಲ್ಲರೂ ಹೊರಡಬೇಕು. ಬರುವ ಶುದ್ಧ ದಶಮಿಯ ದಿನ ದೀಕ್ಷೆ."

ಆಂಧ್ರನು ಏನೋ ಗೊಣಗಿಕೊಂಡು ಹೊರಟು ಹೋದನು. ಭಗ ವಾನರು ಹೋಗುವವನನ್ನು ಸಣ್ಣ ನಗೆಯಿಂದ ನೋಡುತ್ತಿದ್ದು 'ಹೌದು ಪ್ರಾಣ ದೇವನು ಹೇಳಿದುದು ಸರಿ. ಭವಿಷ್ಯತ್ತನ್ನು ಕುರಿತು ಯೋಚಿಸಬಾರದು. ನಿಜ' ಎಂದು ತಲೆದೂಗುತ್ತಾ ಅತಿಥಿಗೃಹಕ್ಕೆ ಹೋದರು.

ಮಹಾರಾಜನು ಬಂದು ಕಾದಿದ್ದನು. ಭಗವಾನರು ಏನೊಂದು ವಿಕಾ ರವೂ ಇಲ್ಲದೆ, "ಆಗಬಹುದು. ನಾವು ಹೌತ್ರವನ್ನು ಅಂಗೀಕರಿಸುತ್ತೇವೆ. ಮುಂದಿನ ಸನ್ನಾಹಗಳೆಲ್ಲ ನಡೆಯುಬಹುದು. ಈ ಮಾತನ್ನು ಭಗವಾನರಲ್ಲಿ ನಮ್ಮ ನಮಸ್ಕಾರಗಳೊಡನೆ ಅರಿಕೆಮಾಡಿ" ಎಂದು ಹೇಳಿದರು. ಹರಿಶ್ಚಂದ್ರನ ಆನಂದಕ್ಕೆ ಪಾರವೇ ಇರಲಿಲ್ಲ. ಮತ್ತೆ ಮತ್ತೆ ನಮಸ್ಕಾರಮಾಡಿ ತನ್ನ ಕೃತಾ ರ್ಥತೆಯನ್ನು ಹೇಳಿಕೊಳ್ಳುತ್ತ ಮತ್ತೆಯೂ ಒಂದು ಸಾವಿರ ಹಸುಗಳನ್ನು ಒಪ್ಪಿಸಿ ಬೀಳ್ಕೊಂಡು ಹೋದನು.

---

# ಅರವತ್ತೊಂದನೆಯ ತರಂಗ

ಸರಯೂ ತೀರದಲ್ಲಿ ವಿಸ್ತಾರವಾದ ಬಯಲಿನಲ್ಲಿ ಯಜ್ಞ ಮಂಟಪವು ಶೋಭಿಸುತ್ತಿದೆ. ಇಕ್ಷ್ವಾಕು ವಂಶದ ಅರಸುಗಳ ಕೀರ್ತಿ ಸ್ತಂಭಗಳೆಂಬಂತೆ ಅನೇಕಾನೇಕ ಯೂಪಸ್ತಂಭಗಳು ಅಜರಾಮರವಾಗಿ ನಿಂತಿವೆ. ನಟ್ಟ ನಡುವೆ ಯಾಗಕ್ಕಾಗಿ ಒಂದು ದೊಡ್ಡ ಪರ್ಣಶಾಲೆ. ಅದರ ಸುತ್ತಲೂ ಋತ್ವಿಕ್ಕುಗಳಿಗೆ, ಅದರ ಸುತ್ತಲೂ ಅತಿಥಿಗಳಿಗೆ, ಅದರ ಸುತ್ತಲೂ ಅಭ್ಯಾಗತರಿಗೆ, ಇತರರಿಗೆ ಪ್ರಶಸ್ತವಾಗಿ ಯಥೋಚಿತವಾದ ಪರ್ಣಶಾಲೆಗಳು ಏರ್ಪಟ್ಟಿವೆ. ಅಲ್ಲಿಂದ ಸ್ವಲ್ಪ ಮುಂದೆ ಭೋಜನ ಗೃಹ. ಬೇಕು ಬೇಕಾದಹಾಗೆ ಅನ್ನಪಾನಗಳು ಸಿದ್ಧವಾಗಿವೆ.

ವಿಶ್ವಾಮಿತ್ರರು ವಸಿಷ್ಠರ ದರ್ಶನ ಮಾಡಿದರು. ಋತ್ವಿಕ್ಕುಗಳೆಲ್ಲರೂ ಪರಸ್ಪರ ದರ್ಶನ ಕುಶಲಪ್ರಶ್ನ ಸಲ್ಲಾಪಗಳಿಂದ ಒಬ್ಬರನ್ನೊಬ್ಬರು ಸಂಭಾವಿಸಿದರು. ವಸಿಷ್ಠರೇ ಯಾಗಕ್ರಮವನ್ನೆಲ್ಲ ತಿಳಿಸಿ, "ಇಲ್ಲಿ ನಾವೇನೂ ಮಾಡುವಂತಿಲ್ಲ: ವರುಣದೇವನೇ ಈ ಯಾಗವು ಹೀಗೆ ನಡೆಯಬೇಕೆಂದು ವಿಧಾಯಕ ಮಾಡಿದ್ದಾನೆ" ಎಂದರು. ಎಲ್ಲರೂ "ಶಕುನಗಳಿಂದ ನೋಡುವುದಾದರೆ ಯಾಗವು ಪೂರ್ಣವಾಗುವಂತಿಲ್ಲ" ಎಂದು ತ್ರಿಕಾಲಜ್ಞರಾದ ವಸಿಷ್ಠ ವಿಶ್ವಾಮಿತ್ರರ ಕಡೆ ನೋಡುತ್ತಾರೆ. ವಸಿಷ್ಠರು "ಹಾಗಲ್ಲ. ನಾವು ಯಾವಾಗಲೂ ಶುಭಾಶಂಸಿಗಳು. ಎಲ್ಲವೂ ಚೆನ್ನಾಗಲಿ, ಎಲ್ಲವೂ ಸರಿಯಾಗಲಿ, ಎನ್ನುತ್ತಿರಬೇಕು. ಕರ್ಮದ ಉದ್ದೇಶವೇನು, ಯಜಮಾನನಿಗೆ ಶ್ರೇಯಸ್ಸಾಗಬೇಕು. ಅದಾದರೆ ಸರಿ" ಎಂದು ನಗುತ್ತಾರೆ. ಎಲ್ಲರೂ ಸರಿ ಸರಿ ಎನ್ನುತ್ತಾರೆ. ವಿಶ್ವಾಮಿತ್ರರು ತುಟಿಪಿಟಿಕ್ಕೆಂದಿಲ್ಲ.

ವಿಶ್ವಾಮಿತ್ರರು ತಮ್ಮ ಪರ್ಣಶಾಲೆಗೆ ಬಂದರು. ಸಂಧ್ಯಾಕರ್ಮಗಳೆಲ್ಲ ಸಾಂಗವಾಗಿ ನಡೆದುವು. ಇನ್ನು ಅವರು ಏಕಾಂತಕ್ಕೆ ತೆರಳಬೇಕು, ಆಗ ಒಬ್ಬ ಆಶ್ರಮವಾಸಿಯು ಬಂದು, "ಬಡ ಬ್ರಾಹ್ಮಣನು ದರ್ಶನಾರ್ಥಿಯಾಗಿ ಬಂದಿದ್ದಾನೆ. ಆರ್ತನಾಗಿ ಕಾದಿದ್ದಾನೆ. ಏಕಾಂತದಲ್ಲಿ ದರ್ಶನವನ್ನು ಅಪೇಕ್ಷಿಸುತ್ತಿದ್ದಾನೆ" ಎಂದು ತಿಳಿಸಿದನು. ಅವರೂ ಕೊಂಚ ಯೋಚನೆ ಮಾಡಿ, "ಬರಹೇಳು. ಆತನು ಇಲ್ಲಿ ಇರುವವರೆಗೂ ಇನ್ನು ಯಾರೂ ಬರಬಾರದು" ಎಂದು ಹೇಳಿಕಳುಹಿಸಿದರು.

ಬ್ರಾಹ್ಮಣನು ಬಂದನು. ಆ ಮುಖವನ್ನು ನೋಡಿದರೆ ತೊಳೆದು ಎಷ್ಟು ದಿನವಾಗಿದೆಯೋ ಎನ್ನುವಂತಿದೆ. ಕಣ್ಣುಗಳು ಬಹುವಾಗಿ ಅತ್ತಿರುವ ನೆಂದು ಸಾಕ್ಷಿ ಕೊಡುವುದಕ್ಕೋಸ್ಕರವೋ ಎಂಬಂತೆ ಕೆಂಪಾಗಿ ಊದಿ ಕೊಂಡಿವೆ. ಧ್ವನಿಯು ನಿರ್ಬಲವಾಗಿದೆ. ಮುಖದಲ್ಲಂತೂ ತೇಜಸ್ಸು ಎಳ್ಳಷ್ಟೂ ಇಲ್ಲ. ಬಂದವನೇ "ಅಕಾರ್ಯಕಾರಿಯಾದೆ. ನನ್ನನ್ನು ಉದ್ಧರಿಸ ಬೇಕು" ಎಂದು ಕಾಲು ಹಿಡಿದುಬಿಟ್ಟನು. ಅವರ ಬಾಯಿಂದ "ಏನಾದರೂ ಆಗಲಿ, ಅಭಯವುಂಟು. ಏಳು" ಎಂದು ವರವನ್ನು ಪಡೆದುಕೊಂಡು ಎದ್ದನು.

ಬಂದವನು ತನ್ನ ಕಥೆಯನ್ನು ಹೇಳಿಕೊಂಡನು. "ನಾನೇ ಆಂಗಿರಸ ಅಜೀಗರ್ತ. ನಾಳೆಯ ದಿನ ಪಶುವಾಗಬೇಕಾದ ಶುನಶ್ಶೇಫನ ತಂದೆ. ಕುಲ ಕ್ರಮಾಗತವಾದ ಅಗ್ನಿವಿದ್ಯೆಯನ್ನು ಅಲ್ಪಸ್ವಲ್ಪವಾಗಿ ಏಕದೇಶೀಯವಾಗಿ ಬಲ್ಲೆ. ಶುನಶ್ಶೇಫನು ಹುಟ್ಟುವಾಗಲೇ ನಮಗೆ ಕುಲೋದ್ಧಾರಕನಾದ ಮಗನು ಹುಟ್ಟುವನೆಂದು ಕನಸಾಗಿತ್ತು. ಆದರೂ ಅದನ್ನು ಮರೆತು ರೋಹಿತಾಶ್ವನು ಬಂದು ಕೇಳಿದಾಗ ಬಡತನವು ನೀಗಲೆಂದು ಆ ಹುಡುಗನನ್ನು ಮಾರಿಬಿಟ್ಟೆವು. ಈಗ ನಾವು ಮಾಡಿದ ಅಕಾರ್ಯಕ್ಕಾಗಿ ಪಶ್ಚಾತ್ತಾಪಪಡುತ್ತಿದ್ದೇವೆ. ಏನಾ ದರೂ ಮಾಡಿ ಭಗವಾನರು ಅವನನ್ನು ಉಳಿಸಿಕೊಡಬೇಕು. ಒಂದುವೇಳೆ ಮತ್ತೆ ಅವನು ನಮಗೆ ಉಳಿಯದಿದ್ದರೂ ಸರಿ, ಯಾರ ಮಗನಾಗಿಯಾದರೂ ಬದುಕಿಕೊಳ್ಳಲಿ. ತಾವೇ ತಮ್ಮ ಮಗನನ್ನಾಗಿ ಮಾಡಿಕೊಳ್ಳಿ. ಅಂತೂ ಬದುಕಿಸಿಕೊಡಿ" ಎಂದು ಅಂಗಲಾಚಿ ಬೇಡಿಕೊಳ್ಳುತ್ತಿದ್ದಾನೆ. ಪದೇಪದೇ ನಮಸ್ಕಾರಮಾಡುತ್ತಾನೆ. ಕೈಮುಗಿಯುತ್ತಾನೆ. "ನನ್ನ ಅಪರಾಧವನ್ನು ಮನ್ನಿಸಬೇಕು." "ಯಾವ ಪ್ರಾಯಶ್ಚಿತ್ತಕ್ಕಾದರೂ ಸಿದ್ಧವಾಗಿದ್ದೇನೆ." "ಭಗವಾನರು ಕೃಪೆಮಾಡಬೇಕು" ಎಂದು ಮುಂತಾಗಿ ಹಲವಾರು ತೆರದಲ್ಲಿ ಬೇಡಿಕೊಳ್ಳುತ್ತಿದ್ದಾನೆ.

ಭಗವಾನರು ತಮ್ಮ ಪರಿವಾರದಲ್ಲಿ ಒಬ್ಬನನ್ನು ಕಳುಹಿಸಿ ಶುನಶ್ಶೇಫನನ್ನು ಕರೆಸಿದರು. ಅವನೂ ಬಂದು ಭಗವಾನರಿಗೂ ತಂದೆಗೂ ನಮಸ್ಕರಿಸಿ ನಿಂತು ಕೊಂಡನು. ಮುಖವು ತೇಜಸ್ವಿಯಾಗಿದೆ. ಯಾವ ವಿಕಾರವೂ ಇಲ್ಲ. ಆಡಿ ಕೊಂಡಿರುವ ಹುಡುಗನ ನಿರಾತಂಕ ಭಾವವೇ ಇದೆ.

ಭಗವಾನರು ಕೇಳಿದರು: "ಏನು ಮಗು, ನಾಳೆಯ ದಿನ ನೀನು ಪಶು ವಾಗಿರಲು ಒಪ್ಪಿರುವೆಯಾ?"

ಹುಡುಗನು ಕೈಮುಗಿದುಕೊಂಡು ಹೇಳಿದನು: "ಭಗವಾನ್, ದೇಹವು ತಂದೆತಾಯಿಗಳದು. ರಾಜಕುಮಾರನು ಬಂದು ಕೇಳಿದಾಗ ಅವರಾಡಿದ ಮಾತುಗಳನ್ನು ಕೇಳಿದೆ. ಮನೆಯಲ್ಲಿ ದಾರಿದ್ರ್ಯವು ತಾನೇತಾನಾಗಿತ್ತು. ಅದರಿಂದ ಅವರು ಒಬ್ಬ ಮಗನನ್ನು ಮಾರಲು ಒಪ್ಪಿದರು. ಅನುಕೂಲವಾಗಿದ್ದರೆ ಮಾರುತ್ತಿರಲಿಲ್ಲ. ಅಣ್ಣನ ಮೇಲೆ ತಂದೆಗೆ ಆಸೆ: ತಮ್ಮನ ಮೇಲೆ ತಾಯಿಗೆ ಅಭಿಮಾನ. ಅದರಿಂದ ನಾನೇ ಹೋಗಿ ನನ್ನನ್ನು ಮಾರಿಬಿಡಿ. ನಿಮ್ಮ ದಾರಿದ್ರ್ಯ ತೀರಲಿ ಎಂದು ಕೈಮುಗಿದೆ. ನಾನು ಯಾವೊತ್ತಿದ್ದರೂ ಸಾಯಬೇಕು. ದೇವಕಾರ್ಯಕ್ಕಾಗಿ ಪರಪ್ರಯೋಜನಕ್ಕಾಗಿ ಸತ್ತರೆ ನನಗೂ ಸದ್ಗತಿಯುಂಟು. ಅದರಿಂದ ನನ್ನ ವಿಚಾರವಾಗಿ ನನಗೆ ಯೋಚನೆಯಿಲ್ಲ. ಆದರೆ ನಮ್ಮ ತಂದೆ ಮಗನನ್ನು ಕಳೆದುಕೊಂಡರೂ ಮನೆ ತುಂಬಿಸಿಕೊಳ್ಳಲಿಲ್ಲ. ಅದು ನನ್ನ ವ್ಯಥೆ. ನೂರು ಹಸು ಕೇಳದೆ ಒಂದು ಸಾವಿರ ಎಂದಿದ್ದರೆ ಇವರಿಗೆ ಅಷ್ಟೂ ಬರುತ್ತಿತ್ತು. ಇವರ ದಾರಿದ್ರ್ಯವು ತೀರುತ್ತಿತ್ತು. ಈಗ ಇವರಿಗೆ ಕೆಟ್ಟಹೆಸರೂ ಬಂತು ಪ್ರಯೋಜನವೂ ಇಲ್ಲವಾಯಿತು" ಎಂದು ಕೈಮುಗಿದನು.

ಆ ಹುಡುಗನು ದಿಟ್ಟವಾಗಿ ಮಾತನಾಡುತ್ತಿದ್ದರೆ ಬ್ರಹ್ಮಜ್ಞನಾದ ಋಷಿಯೊಬ್ಬನು ಮಾತನಾಡುವಂತಿದೆ. ದೇಹಾಭಿಮಾನದಿಂದ ದುಃಖಿಸದೆ ಕೇವಲ ತನ್ನ ತಂದೆಯ ದಾರಿದ್ರ್ಯಕ್ಕೆ ವ್ಯಥಿಸುವ ಆ ಬಾಲಕನನ್ನು ಕಂಡು ಭಗವಾನರ ಮನವು ಮರುಗಿತು. ಒಂದು ಅಪಶಬ್ದವಿಲ್ಲದೆ, ಸ್ವರ ವಿಕಾರವೂ ಇಲ್ಲದೆ, ಮೈಕೈ ಸೊಟ್ಟಮಾಡದೆ, ಗಂಭೀರವಾಗಿ ಮಾತನಾಡಿದುದಂತೂ ಅವರಿಂದ ಬಹು ಗೌರವವನ್ನು ಪಡೆಯಿತು.

ಭಗವಾನರು ಇನ್ನೂ ಎರಡು ಮಾತು ಕೇಳಿದರು: "ಏನೇನು ಪಾಠ ಮಾಡಿದ್ದೀಯೆ?"

"ನಾವು ಆಂಗೀರಸರು. ಅಥರ್ವಣವನ್ನು ಸಾಂಗವಾಗಿ ಅಧ್ಯಯನ ಮಾಡಿದ್ದೇನೆ. ಆದರೆ ನಾನು ಪ್ರಯೋಗಸಿದ್ಧನಲ್ಲ."

"ನಿನಗೆ ಬದುಕಬೇಕೆಂಬ ಆಸೆಯಿಲ್ಲವೇ?"

“ ಭಗವಾನ್, ನನಗೆ ಅಧ್ಯಯನವಾಗಿರುವ ಮಂತ್ರಗಳಲ್ಲಿ ಅಮೃತತ್ವ, ಸ್ವರ್ಗತಿ, ಸ್ವರ್ಗ, ಎಂದು ಮುಂತಾಗಿ ಬಂದಿದೆ. ಅವು ಇವೆಯೋ ಎಂಬುದೊಂದು ಸಂಶಯವು ನನಗೆ ಬಂದಿತ್ತು. ಈಗ ಪ್ರತ್ಯಕ್ಷವಾಗಿ ತಿಳಿದುಕೊಳ್ಳುವ ಅವಕಾಶವು ಬಂದಿದೆ. ಏಕೆ ಬರಲಿ ? ಅಲ್ಲದೆ, ಹೌತ್ರವು ತಮ್ಮದು. ಭಗವಾನ್ ವಸಿಷ್ಠರು ಬ್ರಹ್ಮ. ಅಧ್ವರ್ಯು ಉದ್ಗಾತೃಗಳೂ ತಮಗೆ ಸಮರಾದವರು. ಈ ಯಜ್ಞದಲ್ಲಿ ದೇವತೆಗಳು ಸಾಕ್ಷಾತ್ತಾಗಿ ಬಂದು ಹವಿರ್ಭಾಗಗಳನ್ನು ತೆಗೆದುಕೊಳ್ಳದೆ ಇರುವುದಿಲ್ಲ. ಯಾವ ದೇವತೆಗಳ ಸಾಕ್ಷಾತ್ಕಾರಕ್ಕಾಗಿ ಬ್ರಾಹ್ಮಣನು ಹಗಲಿರುಳೂ ಅಧ್ಯಯನ ವ್ರತಾದಿ ತಪಸ್ಸು ಮಾಡುವನೋ ಆ ದೇವತೆಗಳ ಸಾಕ್ಷಾತ್ಕಾರ. ಗಂಗಾದಿ ಪವಿತ್ರ ತೀರ್ಥಗಳಿಗಿಂತಲೂ ಪವಿತ್ರವಾಗಿರುವ ತಮ್ಮಂತಹ ತೀರ್ಥಪಾದರ ಸನ್ನಿಧಿಯಲ್ಲಿ, ಹರಿಶ್ಚಂದ್ರನಂತಹ ಮಹಾರಾಜನ ಉದರವ್ಯಾಧಿ ನಿವೃತ್ತಿಗಾಗಿ, ದೇವತೆಗಳಿಗೆ ಬಲಿಯಾಗುವುದು. ಇದಕ್ಕಿಂತ ನನಗೆ ಶ್ರೇಯಸ್ಸು ಬೇರೆ ಯಾವುದುಂಟು ? ಅದರಿಂದ ನನಗೆ ವ್ಯಥೆಯಿಲ್ಲ. ತಾವು ಕೇಳಿದಿರಿ ಬದುಕಬೇಕೆಂಬ ಆಸೆಯಿಲ್ಲವೆ ? ಎಂದು. ಭಗವಾನ್, ಜೀವ ಜಂತುಗಳಲ್ಲಿ ಯಾವುದಕ್ಕೆ ತಾನೆ ಬದುಕಬೇಕೆಂಬ ಆಸೆಯಿಲ್ಲ. ನನಗೆ ಪ್ರೋಕ್ಷಣೆಯಾಗಿದೆ. ಈ ದೇಹದಲ್ಲಿ ವರುಣನು ವ್ಯಾಪಾರ ಮಾಡುತ್ತಿರುವುದೂ ನನಗೆ ಅರ್ಥಾರ್ಥವಾಗಿ ತಿಳಿಯುತ್ತಿದೆ.”

ಭಗವಾನರು ಆ ಹುಡುಗನ ಮಾತುಗಳನ್ನು ಕೇಳಿ ಬಲು ಮೆಚ್ಚಿಕೊಂಡು ತಲೆದೂಗಿದರು. ಆತನ ಬುದ್ಧಿಯು ಧರ್ಮದಲ್ಲಿ ಹೇಗಿದೆಯೆಂಬುದನ್ನು ಪರೀಕ್ಷಿಸಬೇಕೆಂದು “ ಮಗು, ನಿನ್ನ ಆಸ್ತಿಕ್ಯ ಬುದ್ಧಿಯಿಂದ, ನಿನ್ನ ನಿರ್ವಚನ ಸಾಮರ್ಥ್ಯದಿಂದ, ನನಗೆ ಬಹು ಸಂತೋಷವಾಗಿದೆ. ನಿನಗೆ ಒಂದು ಸಹಸ್ರ ಗೋವುಗಳನ್ನು ಕೊಟ್ಟಿದ್ದೇನೆ. ತೆಗೆದುಕೊ ” ಎಂದರು.

ಹುಡುಗನು ಮತ್ತೆ ಅದೇ ಗಂಭೀರ ಭಾವದಿಂದಲೇ ವಿನಯವಾಗಿ ಹೇಳಿದನು : “ಭಗವಾನ್, ತಂದೆಯು ನನ್ನನ್ನು ಮಾರಿರುವುದರಿಂದ ನನಗೆ ಈಗ ಪಿತೃಗೋತ್ರವಿಲ್ಲ. ವಿಕ್ರಯಲಬ್ಧನಾಗಿ ಹರಿಶ್ಚಂದ್ರನ ಸ್ವತ್ತಾಗಿದ್ದರೂ ಆತನ ಗೋತ್ರವು ನನಗೆ ಬರುವುದಿಲ್ಲ. ಅದರಿಂದ ಗೋತ್ರವಿಲ್ಲದ ನಾನು ಈಗ ಶೂದ್ರಸಮನು. ನನಗೆ ಸ್ವತ್ವಾಧಿಕಾರವಿಲ್ಲವಾಗಿ ಗ್ರಹಣಾಧಿಕಾರವೂ ಇಲ್ಲ. ತಾವು ಕೊಟ್ಟುದು ನನಗೆ ಸೇರುವುದೆಂತು ? ಆದರೆ, ತಾವು ಕೊಟ್ಟುದನ್ನು ಬೇಡ

ವೆಂದರೂ ಅಪರಾಧವಾಗುವುದೆಂದು ಹೆದರಿ, ತಮಗೆ ಅಸಮ್ಮತವಲ್ಲದಿದ್ದರೆ, ಆ ಗೋಧನವನ್ನು ಈ ನನ್ನ ಹಿಂದಿನ ತಂದೆಗೆ ಕೊಟ್ಟು ಅವರ ದಾರಿದ್ರ್ಯವನ್ನು ನೀಗಿದರೆ, ನಾನು ನಿರಾತಂಕನಾಗುವೆನು."

"ಹೌದು. ಇವನು ಋಷಿ ಸಂದೇಹವಿಲ್ಲ. ಇವನನ್ನು ಉಳಿಸಬೇಕು" ಎನ್ನಿಸಿತು ವಿಶ್ವಾಮಿತ್ರರಿಗೆ. ಆದರೂ ಇನ್ನು ಪರೀಕ್ಷಿಸುತ್ತಾ, "ಆಯಿತು. ನಿನ್ನ ಮಾತಿಗೆ ಸಮ್ಮತಿಸಿ ನಿಮ್ಮ ತಂದೆಗೆ ಒಂದು ಸಹಸ್ರ ಗೋಧನವನ್ನು ಕೊಡೋಣ. ಈಗ ಅವರು ಬಂದು ನಿನ್ನನ್ನು ಬದುಕಿಸಬೇಕೆಂದು ಕೇಳುತ್ತಿದ್ದಾರೆ. ನೀನು ಪ್ರೋಕ್ಷಣೆಯಾಗಿದೆಯೆಂದು ಹೇಳುತ್ತಿದ್ದೀಯೆ. ನೀನು ಬದುಕಿದರೆ, ಆಗ ನೀನು ಯಾರ ಸ್ವತ್ತಾಗುವೆ."

"ಭಗವಾನ್, ಬಾಲಬುದ್ಧಿಯಿಂದ ಧರ್ಮಶಾಸ್ತ್ರವನ್ನು ಹೇಳುವುದು ವಿಹಿತವಲ್ಲ. ಆದರೂ ಹಿರಿಯರು ಕೇಳಿದ ಪ್ರಶ್ನೆಗೆ ಉತ್ತರ ಹೇಳದಿದ್ದರೆ ಓದಿದ ಶಾಸ್ತ್ರಕ್ಕೂ ಕೇಳಿದ ಹಿರಿಯರಿಗೂ ದ್ರೋಹವಾಗಬಹುದು ಎಂದು ಹೆದರಿ ತಿಳಿದಷ್ಟು ಹೇಳುವೆನು. ಧರ್ಮವನ್ನು ಸಾಕ್ಷಾತ್ತಾಗಿ ತಿಳಿದವರು ಯಾರೂ ಇಲ್ಲವಾದುದರಿಂದ ನನ್ನಮಾತು ಅಧರ್ಮವಾಗಿದ್ದರೆ, ಅನ್ಯಾಯವಾಗಿದ್ದರೆ, ಧರ್ಮಪುರುಷನಿಗೂ ತಮಗೂ ಕೋಪ ಬರದಿರಲಿ. ನಾನು ಈಗ ನಮ್ಮ ತಂದೆಯ ಮಗನಲ್ಲ : ವಿಕ್ರಯದಿಂದ ಆತನ ಅಧಿಕಾರವು ಲೋಪವಾಗಿದೆ. ವಿಕ್ರಯದಿಂದ ನನ್ನನ್ನು ಪಡೆದುಕೊಂಡ ಹರಿಶ್ಚಂದ್ರ ಮಹಾರಾಜನು ನನಗೆ ಪ್ರೋಕ್ಷಣೆಯನ್ನು ಮಾಡಿ ಈ ಯಾಗದ ಪ್ರಧಾನದೇವತೆಯಾದ ವರುಣನಿಗೆ ಒಪ್ಪಿಸಿದ್ದಾನೆಯಾಗಿ ಆತನಿಗೂ ನನ್ನ ಮೇಲೆ ಅಧಿಕಾರವಿಲ್ಲ. ಈಗ ನಾನು ವರುಣನ ಸ್ವತ್ತು. ನಾನು ಬದುಕಿದರೆ ವರುಣದೇವನು ಯಾರಿಗೆ ಕೊಟ್ಟರೆ ಅವರವನು ನಾನು."

"ಅಜೀಗರ್ತ, ನೀನೇನು ಹೇಳುವೆ ?"

"ಭಗವಾನ್, ವಂಶಭೂಷಣನಾದ ಇಂತಹ ಮಗನನ್ನು ಮಾರಿಕೊಂಡ ನನಗೆ ಇಲ್ಲಿ ಮಾತನಾಡಲು ಅಧಿಕಾರವಿಲ್ಲ. ಅವನು ಯಾರ ಮಗನಾದರೂ ಆಗಲಿ, ಯಾವ ಗೋತ್ರಕ್ಕಾದರೂ ಸೇರಲಿ. ಅಂತೂ ಬದುಕಿಸಿಕೊಡಿ. ಅವನು ಬದುಕಲಿ."

ಭಗವಾನ್ ವಿಶ್ವಾಮಿತ್ರರು ಶುನಶ್ಶೇಫನನ್ನು ಹತ್ತಿರಕ್ಕೆ ಕರೆದು ಕೂರಿಸಿಕೊಂಡರು. ತಲೆಯ ಮೇಲೆ ಕೈಯಿಟ್ಟರು. ಅಜೀಗರ್ತನು ತಾನಲ್ಲಿರಬಾರ

ದೆಂದು ಬಾಗಿಲಿಂದ ಹೊರಕ್ಕೆ ಹೋದನು. ಭಗವಾನರು "ಏನಾಗುತ್ತಿದೆ?" ಎಂದರು. ಹುಡುಗನು ಹೇಳಿದನು: "ಭಗವಾನ್ ನಮಸ್ತೇ! ಹಿಮವತ್ಪರ್ವತ ಶಿಖರದಿಂದ ಕೆಳಗೆ ಇಳಿಯುತ್ತಿರುವ ಭಾಗೀರಥಿಯಂತೆ ತಮ್ಮ ಹಸ್ತದಿಂದ ಯಾವುದೋ ಒಂದು ಶಕ್ತಿಧಾರೆಯು ತರಂಗ ತರಂಗವಾಗಿ ನನ್ನ ದೇಹವನ್ನು ಪ್ರವೇಶಿಸುತ್ತಿದೆ. ನನ್ನ ದೇಹವನ್ನೆಲ್ಲಾ ವ್ಯಾಪಿಸುತ್ತಿದೆ. ನನಗೆ ಹೊಸ ಶಕ್ತಿಯು ಬರುತ್ತಿದೆ. ಏನೋ ಒಂದು ವಿಧವಾದ ಅಪೂರ್ವ ವ್ಯಾಪಾರವು ನಡೆದು ನನ್ನಿಂದ ಮಂತ್ರಗಳು ಹೊರಡುವಂತಿವೆ. ತಮ್ಮ ಅಪ್ಪಣೆಯಾದರೆ ಈಗ ನಾನು ಮಂತ್ರಕರ್ತನಾಗುತ್ತೇನೆ. ಹಾಗೆ ನಾನು ಮಂತ್ರಕರ್ತನಾಗುವುದು ವರುಣನಿಗೂ ಸಮ್ಮತವಾಗಿರುವಂತೆ ತೋರುತ್ತಿದೆ" ಎಂದನು.

ವಿಶ್ವಾಮಿತ್ರರು ಕೈಯನ್ನು ತೆಗೆದರು: "ನಾಳೆಯ ದಿನ ನಿನ್ನನ್ನು ಯೂಪಸ್ತಂಭಕ್ಕೆ ಕಟ್ಟಿದಾಗ ನಿನಗೆ ಪ್ರಜ್ಞೆಯು ಇರುವುದು. ನೀನು ನಿರ್ವ್ಯಾಪಾರನಾಗುವುದಿಲ್ಲ; ಆಗ ನೀನು ನನ್ನ ಮುಖವನ್ನು ನೋಡು. ನಾನು ಅಪ್ಪಣೆಕೊಡುವೆನು. ಆಗ ಭಗವಾನ್ ವಸಿಷ್ಠರಿಗೆ ಕೈಮುಗಿದು, ಅಧ್ವರ್ಯು ಉದ್ಗಾತೃಗಳನ್ನೂ ಅಲ್ಲಿ ಸೇರಿರುವ ಋಷಿಮಂಡಲವನ್ನೂ ಭಾವಿಸಿ, ವರುಣ ದೇವನನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸಿ, ನೀನು ನಿನ್ನ ಮಂತ್ರಗಾನವನ್ನು ಆರಂಭಿಸು. ಆಗ ಯಾವ ದೇವತೆಯು ಬಂದು ಏನು ಹೇಳುವುದೋ ಅದರಂತೆ ಮಾಡಿ ಬಂಧಮುಕ್ತನಾಗು. ಮುಂದಿನ ಕಾರ್ಯ ದೇವತೆಗಳದು" ಎಂದು ಮನಃಪೂರ್ವಕವಾಗಿ ಆಶೀರ್ವಾದಮಾಡಿ ಕಳುಹಿಸಿಕೊಟ್ಟರು. ಅವರ ಮನಸ್ಸು ಶುನಶ್ಶೇಫನ ವಿಚಾರ ಮಾತ್ರ ಯೋಚಿಸುತ್ತಿತ್ತು.

---

## ಅರವತ್ತೆರಡನೆಯ ತರಂಗ

ಅಯೋಧ್ಯಾನಗರವಾಸಿಗಳೆಲ್ಲರೂ ಯಜ್ಞಮಂಟಪದಿಂದ ಆನಂದ ತುಂದಿಲರಾಗಿ ಹಿಂತಿರುಗುತ್ತಿದ್ದಾರೆ. ಎಲ್ಲರಿಗೂ ಆಶ್ಚರ್ಯವೋ ಆಶ್ಚರ್ಯ! ಅನೇಕರು ತಮ್ಮ ಕಣ್ಣಾರೆ ಕಂಡಿದ್ದಾರಾಗಿ ನಂಬಬೇಕು. ಇಲ್ಲವಾದರೆ ನಿಜವಾಗಿಯೂ ನಂಬುತ್ತಿರಲಿಲ್ಲ. ಅಂತಹ ವಿಶೇಷವು ನಡೆದಿದೆ.

ದಾರಿಯಲ್ಲಿ ಒಬ್ಬನು ಹೇಳಿದನು : " ಈ ಯಾಗ ಯಜ್ಞ ನಡೆಯುವಾಗ ಹವಿಸ್ಸು ಕೊಟ್ಟರೆ, ದೇವತೆಗಳೇ ಬಂದು ತೆಗೆದುಕೊಂಡು ಹೋಗುತ್ತಾರೆ ಎಂದು ಕೇಳಿದ್ದೆ. ಇವೊತ್ತು ಅದು ನಿಜವಾಯಿತು."

"ಹೌದು, ಹೌದು. ಆ ಬಂಗಾರದ ರಥ ಬಂದಾಗ ಎಲ್ಲರೂ ಆಶ್ಚರ್ಯ ಪಟ್ಟು ಹೋದರು. ಅದೇನು ರಥ! ಅದೇನು ಕುದುರೆಗಳು! ಅಬ್ಬಾ! ಅದೇನು ಎಲ್ಲಾದರೂ ಉಂಟೇನಯ್ಯ! ಗರಿಕೆಯ ಬಣ್ಣದ ಕುದುರೆಗಳು. ಅದರಲ್ಲಿದ್ದವನು ಯಾರಯ್ಯಾ?"

"ಗರಿಕೆಯ ಬಣ್ಣದ ಕುದುರೆಗಳು ಎಂದರೆ ಇಂದ್ರನೇ ಕಣಯ್ಯ! ಆ ಹೇಸರಕತ್ತೆ ಕಟ್ಟಿದ ರಥ ಬಂದಿತ್ತಲ್ಲಾ ಅದರಲ್ಲಿದ್ದವರು ಅಶ್ವಿನೀ ದೇವತೆಗಳು. ಆ ಕೆಂಪು ಕುದುರೆ ಕಟ್ಟಿದ್ದ ರಥದಲ್ಲಿ ಬಂದಿದ್ದ ದೇವತೆ ಉಷಾದೇವಿ."

"ಆಯಿತು. ನೀನು ಇನ್ನೊಂದು ವಿಶೇಷ ನೋಡಿದೆಯೇನು?' ಆ ಉಷಾದೇವಿಯು ಬಂದಳಲ್ಲಾ! ಆಗ ಜನರೆಲ್ಲಾ ಕೈಚಪ್ಪಾಳೆಯಿಟ್ಟರಲ್ಲಾ! ಏಕೆ ತಿಳಿಯಿತೇನು?"

"ಇಲ್ಲ. ನಾನು ದೂರದಲ್ಲಿದ್ದೆ. ಅದೇನೋ ಪಾಶ ಗೀಶ ಅಂತ ಕೂಗು ಕೇಳಿಸಿತು. ಗದ್ದಲದಲ್ಲಿ ಸರಿಯಾಗಿ ತಿಳಿಯಲಿಲ್ಲ."

"ಅದೇ? ಪಶುವಾಗಿ ಆ ಹುಡುಗನನ್ನು ಯೂಪದ ಕಂಭಕ್ಕೆ ಬಿಗಿದಿದ್ದರಲ್ಲ, ಆ ದೇವತೆಗಳು ಬರುತ್ತಬರುತ್ತ ಇಲ್ಲಿ ಒಂದೊಂದು ಪಾಶ ಸಡಿಲವಾಗಿ ಕಟ್ಟು ಬಿಚ್ಚಿಹೋಗುತ್ತ ಬಂತು. ಇಲ್ಲಿ ಈ ಹುಡುಗನನ್ನು ಕಟ್ಟಿದ್ದ ಪಾಶಗಳು ಬಿಡುತ್ತಬಂದಂತೆಲ್ಲ ಅಲ್ಲಿ ಮಹಾರಾಜನ ರೋಗ ಇಳಿಯುತ್ತ ಬಂತು."

"ಏನು? ಮಹೋದರವು ಇಳಿಯುತ್ತಬಂತೆ? ಗುಣವಾಗಿ ಹೋಯಿತೆ?"

"ಗುಣವಾಗಿ ಹೋಯಿತೆ! ಏಕೆ? ಮಹಾರಾಜನೇ ಎದ್ದು ಋತ್ವಿಕ್ಕುಗಳ ಸಂಭಾವನೆಯನ್ನು ತನ್ನ ಕೈಯಾರ ವಿನಿಯೋಗ ಮಾಡಲಿಲ್ಲವೆ?"

"ಎಲೆ! ನಾನು ಗುಡಾಣದ ಗಾತ್ರ ಹೊಟ್ಟೆಮಾಡಿಕೊಂಡು ಯಜ್ಞ ಮಂಟಪಕ್ಕೆ ಬಂದ ಮಹಾರಾಜನನ್ನು ನೋಡಿದವನು ತೆಳ್ಳಗೆ ರೊಟ್ಟಿಗಾತ್ರದ ಹೊಟ್ಟೆಯವನನ್ನು ಕಂಡು ಮಹಾರಾಜನೆಂದುಕೊಳ್ಳುವುದು ಹೇಗೆ? ಯಾರೋ ರಾಜನ ಸಮೀಪಬಂಧು ರಾಜನ ಹಾಗೆಯೇ ಅಲಂಕಾರ ಮಾಡಿಕೊಂಡಿದ್ದಾನೆ, ಎಂದುಕೊಂಡಿದ್ದೆ."

"ಏನಾದರೂ ಆಗಲಿ. ಹಿಂದೆ ತ್ರಿಶಂಕು ಮಹಾರಾಜನ ಕಾಲದಲ್ಲಿ ಹೀಗೆಯೇ ಅದ್ಭುತಗಳು ನಡೆದುದನ್ನು ನೋಡಿದ್ದೆವು. ಈ ಹರಿಶ್ಚಂದ್ರ ಮಹಾ ರಾಜನ ಕಾಲದಲ್ಲಿಯೂ ನಡೆದುದನ್ನು ನೋಡಿದೆವು. ಆಗ ಎಲ್ಲ ವಿಶ್ವಾ ಮಿತ್ರರ ಮಹಿಮೆ. ಈಗ ಇವರೆಲ್ಲ ಸೇರಿದ್ದಾರೆ. ಯಾರದು ಎಂದು ಹೇಳು ವಂತಿಲ್ಲ ! "

"ಅದೇನೋ ನಿಜ. ಈಗೇನು ಭಗವಾನ್ ವಸಿಷ್ಠರು ಬಂದಿದ್ದಾರೆ, ಅವರ ಜೊತೆಗೆ. ಅದಿರಲಿ, ನಿನಗೆ ಗೊತ್ತೇನು ? ಈಗ ವಿಶ್ವಾಮಿತ್ರರಲ್ಲಪ್ಪ, ಅವರು ಭಗವಾನ್ ವಿಶ್ವಾಮಿತ್ರರು. ಅಲ್ಲೆಲ್ಲೋ ಹಿಮಾಲಯದಲ್ಲಿ ಬ್ರಹ್ಮರ್ಷಿಗಳ ಸಭೆ ನಡೆದು ಅವರನ್ನು ಬ್ರಹ್ಮರ್ಷಿಗಳೆಂದು ಒಪ್ಪಿಕೊಂಡರಂತೆ."

"ನಾನೇನೋ ಆಗಲೇ ಈ ಮಾತು ಹೇಳಿದ್ದೆನಪ್ಪ. ವಿಶ್ವಾಮಿತ್ರರು ಯಾವ ಬ್ರಹ್ಮರ್ಷಿಗೂ ಕಡಿಮೆಯಿಲ್ಲ. ಆದರೂ ಅವರನ್ನು ರಾಜರ್ಷಿ ಎನ್ನು ವುದು ಎಲ್ಲಿಯ ನ್ಯಾಯ, ಎಂದು ನಾನು ಕೇಳಿಯೂ ಇದ್ದೆ."

"ಏನೋ ಈ ಋಷಿಗಳ ಮಾತು ನಮಗೆ ತಿಳಿಯುವುದಿಲ್ಲ. ಅದೆಲ್ಲ ಎಲ್ಲಾದರೂ ಹೋಗಲಿ. ಅಂತೂ ಬ್ರಹ್ಮರ್ಷಿಗಳೆಲ್ಲ ಸೇರಿದರು. ಸಾಯು ತ್ತಿದ್ದ ಹುಡುಗನನ್ನು ಉಳಿಸಿಕೊಂಡರು. ಮಹಾರಾಜನ ರೋಗ ಗುಣಮಾಡಿ ದರು. ಬೇಕಾದ ಹಾಗೆ ಗಾಡಿಗಾಡಿಯಲ್ಲಿ ಚಿನ್ನ ಬೆಳ್ಳಿ, ಮಂದೆಮಂದೆ ಹಸು ಗಳು ಹೊಡೆದುಕೊಂಡು ಹೋದರು."

"ಆ ಮಹಾರಾಜ ತನ್ನ ರೋಗ ಗುಣಮಾಡಿದವರಿಗೆ ಅರ್ಧ ರಾಜ್ಯ ಕೊಡುತ್ತೇನೆಂದು ಕೂಡ ಡಂಗುರ ಹೊಡಿಸಿದ್ದ."

"ಅಂತಹ ರೋಗ ವಾಸಿಯಾದರೆ ಅರ್ಧರಾಜ್ಯ ಕೊಡುವುದೇನು ಹೆಚ್ಚು ?"

"ಆಯಿತು. ಈಗ ಆ ಹುಡುಗ ಬದುಕಿಕೊಂಡು ಇದ್ದಾನಲ್ಲ, ಅವನು ಯಾರ ಪಾಲು ?"

"ಯಾರ ಪಾಲೇನು ? ಅವರಪ್ಪ ಇಲ್ಲವೆ ?"

"ಮಾರಿಕೊಂಡವನು ಎಲ್ಲಿಯ ಅಪ್ಪನಯ್ಯ ? ಇವನು ಹೋದರೆ ತಾನೇ ಅವನು 'ಇವನು ನನ್ನ ಮಗ' ಎಂತ ಮನೆಗೆ ಸೇರಿಸಿಕೊಳ್ಳೋಕೆ ಮೊಕ ಇರತದೆಯೇ ?"

"ಮುಖ್ಯ ಅವನು ಬದುಕಿದ. ಅವನು ಯಾರ ಮಗನಾದರೇನು? ಅದೆಲ್ಲ ನೋಡಿಕೊಳ್ಳುವುದಕ್ಕೆ ಇದ್ದಾರಲ್ಲ ಋಷಿಗಳು. ಅದು ಅವರ ಕೆಲಸ."

"ನೋಡಿದೆಯಾ ಗೌತಮ, ಇದಕ್ಕೇ ಮಹಾಸನ್ನಿಧಾನಗಳು ಇರಬೇಕು ಎನ್ನುವುದು? ದೊಡ್ಡದೊಡ್ಡವರು ಬಂದು ಕುಳಿತುಕೊಂಡರು. ದೇವತೆಗಳೂ ಕೂಡ ಪಶುವನ್ನು ಬಿಟ್ಟುಕೊಟ್ಟರು."

"ಬಿಡಯ್ಯಾ! ಆ ಮಗು ಹಾಡಿದ ಮಂತ್ರಕ್ಕಿಂತ ಹವಿಸ್ಸು ಹೆಚ್ಚೆ? ನೀನೇ ಹವಿರ್ಭಾಗಕ್ಕೆ ಬಂದ ದೇವತೆಯಾಗಿದ್ದರೂ ಆ ಮಂತ್ರ ಹೇಳಿದ ಸೊಗಸಿಗೆ ತಲೆದೂಗಿ, ಕುಮಾರ, ನಿನಗೇನು ಬೇಕು ಎಂದು ಅನುಗ್ರಹಮಾಡುತ್ತಿದ್ದೆ."

"ವೀತಿಹೋತ್ರ, ನೀನು ಹೇಳುವುದು ಬಹಳ ಸರಿ. ಅದಷ್ಟೇ ಅಲ್ಲ. ಅವನು ಋಕ್ಕು ಹೇಳುತ್ತಿದ್ದರೆ ನಿಜವಾಗಿ ಅಗ್ನಿದೇವನೋ ವಾಗ್ದೇವಿಯೋ ಕುಳಿತು ಹೇಳುತ್ತಿರಬೇಕು ಎನ್ನಿಸಿತು. ನಿಜವಾಗಿ ಅವೆಲ್ಲ ಹೊಸ ಮಂತ್ರಗಳು."

"ಆ ವರುಣ ಬಂದಾಗ ಜ್ವಾಲೆಗಳೆಲ್ಲ ನೀಲಿಯಾಗಿ ಆಕಾಶವೇ ಉರಿಯಾಗಿ ಮೇಲಕ್ಕೇಳುತ್ತಿದೆಯೋ ಎನ್ನುವ ಹಾಗಿದ್ದುದು ನೋಡಿದೆಯಾ? ನಾನು ದೇವತೆಗಳು ಯಜ್ಞಕುಂಡದಲ್ಲಿ ನಿಂತು ಹವಿರ್ಭಾಗ ತೆಗೆದುಕೊಂಡುದನ್ನು ಎಷ್ಟೋಕಡೆ ನೋಡಿದ್ದೇನೆ. ದೇವತೆಗಳು ರಥಗಳಲ್ಲಿ ಬಂದು ಹೋದುದನ್ನು ಕಂಡುದು ಇದೇ ಮೊದಲು."

"ಮುಖ್ಯ ಭಗವಂತರು ಆ ವಸಿಷ್ಠ ವಿಶ್ವಾಮಿತ್ರರು ಒಟ್ಟಿಗೆ ಸೇರಿದುದು ಇದೇ ಮೊದಲು. ಆ ಯೋಗ ಇದಕ್ಕೆಲ್ಲ ಕಾರಣ. ನಮ್ಮ ಮಹಾರಾಜ ಅವರ ತಂದೆಗಿಂತ ಅದೃಷ್ಟಶಾಲಿ."

"ಸಂದೇಹವೇನು? ನೋಡು ಪಶುಘಾತವಾಗಲಿಲ್ಲ: ಬ್ರಹ್ಮಹತ್ಯೆ ಬರುತ್ತಿದ್ದುದು ತಪ್ಪಿತು: ಬಂದಿದ್ದ ರೋಗ ತಪ್ಪಿತು: ದೇವಬ್ರಾಹ್ಮಣರ ಅನುಗ್ರಹ ಸಿಕ್ಕಿತು. ಇನ್ನೇನಾಗಬೇಕು?"

"ಬ್ರಹ್ಮಹತ್ಯೆ ಬರುತ್ತಿರಲಿಲ್ಲ. ಯಾಗಪಶುವನ್ನು ಕೊಂದರೆ ಹತ್ಯಾದೋಷ ಬರುವುದಿಲ್ಲ. ಶಾಮಿತ್ಯದಲ್ಲಿ ಮಾತ್ರ ನೆಪಕ್ಕೆ ಉಂಟು. ಅದು

ಪ್ರಾಯಶ್ಚಿತ್ತದಿಂದ ಕಳೆದುಹೋಗುತ್ತದೆ. ಅದೆಲ್ಲ ಇರಲಿ. ಯಾಗಪಶು ಬದುಕಿಯೂ ಯಾಗಫಲ ಸಿಕ್ಕಿರುವುದು ಇದೇ ಮೊದಲು."

"ಏನೇ ಹೇಳಪ್ಪ, ನರಮೇಧ ಬಾರದು. ನಮ್ಮಂತೆಯೇ ಇರುವ ಮನುಷ್ಯನನ್ನು ಪಶುಮಾಡುವುದು ನನಗೆ ಒಪ್ಪಿತವಿಲ್ಲ."

"ಬಿಡೋ, ಪಶು ಎಂದರೆ ಪಶು. ಪ್ರೋಕ್ಷಣೆಯಾದ ಮೇಲೆ ಪಶುವಿಗೆ ಜ್ಞಾನವಿರುತ್ತದೆಯೇ? ವ್ಯಾಪಾರವಿರುತ್ತದೆಯೇ? ಎಲ್ಲಾ ನಿಂತುಹೋಗಿ ರುತ್ತೆ? ಕಣ್ಣೊಂದು ಪಿಳಪಿಳ ಎಂದು ಬಿಟ್ಟುಕೊಂಡಿರುತ್ತೆ."

"ಪಶುವಿನ ಮಾತಿರಲಿ. ಬದುಕಿದ ಈ ಪಶು ಪಶುವರ್ಗಕ್ಕೇ ಸೇರಿತೋ? ಅಥವಾ ಮಾನವವೇ ಆಯಿತೋ?"

"ಎಂದರೆ, ಈಗ ಅವನು ಯಾರ ಪಾಲಾದ? ಯಾವ ಗೋತ್ರ ಅವ ನದು? ಅಥವಾ ಗೋತ್ರವಿಲ್ಲದ ಬ್ರಾಹ್ಮಣರೂ ಉಂಟು ಎಂದಾಗು ತ್ತದೆಯೋ?"

"ಅಲ್ಲವಯ್ಯಾ! 'ಮಹರ್ಷಿತುಲ್ಯನಾದವನು ಈ ಕುಮಾರ, ಈತ ಯಾಗವನ್ನು ಸಂಪೂರ್ಣಗೊಳಿಸಲಿ' ಎಂದು ಬ್ರಹ್ಮನ ಅಪ್ಪಣೆಯಾದಾಗ ಆಗಬಹುದು ಎಂದೆಲ್ಲರೂ ಒಪ್ಪಿಕೊಂಡಾಗ ಎತ್ತಬೇಕಾಗಿದ್ದ ಪ್ರಶ್ನೆ ಈಗ ಎತ್ತು ತ್ತಿದ್ದೀಯಲ್ಲ?"

"ಋಷಿಮಂಡಲದಲ್ಲಿ ನಾನೊಬ್ಬನೇ ಬುದ್ಧಿವಂತ ಎಂದಿಲ್ಲ. ನಿಜವಾಗಿ ಅದೂ ಈಗಲೇ ನನಗೆ ತೋರಿದುದು."

"ಮಗು! ಯೋಚಿಸಬೇಡ. ಕುಮಾರ ಬಹಳ ಪ್ರತಿಭಾವಂತ. ನಿಮ್ಮಂಥ ಧರ್ಮಶಾಸ್ತ್ರಜ್ಞರು ಮೇಲೆ ಬಿದ್ದಾರು ಎಂದು ಆಗಲೇ ಅವನು ಇತ್ಯರ್ಥಮಾಡಿದ್ದಾನೆ. ಅಧ್ವರ್ಯಕ್ಕೆ ನಿಂತು ಪೂರ್ಣಾಹುತಿ ಕೊಡುವುದಕ್ಕೆ ಮುಂಚೆಯೇ ಅವನು ಹೋಗಿ ವಿಶ್ವಾಮಿತ್ರರ ತೊಡೆಯ ಮೇಲೆ ಕುಳಿತುಬಿಟ್ಟ. ಆಗ ನನಗೂ ಇದೇಕೆ ಎನ್ನಿಸಿತು: ಅರ್ಥವಾಗಲಿಲ್ಲ. ಈಗ ತಿಳಿಯಿತು."

"ನಿಜ. ಇನ್ನೂ ಒಂದು ಗೊತ್ತೇನು? ಅವರೂ ಆ ಕುಮಾರನನ್ನು ದೇವರಾತ, ಹೋಗು ಪೂರ್ಣಾಹುತಿ ಕೊಡು ಎಂದರು. ಅವರು ಅವನನ್ನು ಮಗನೆಂದು ಒಪ್ಪಿಕೊಂಡು ನಾಮಕರಣವೂ ಮಾಡಿಬಿಟ್ಟರು."

“ನಾಮಕರಣದ ಒಬ್ಬಟ್ಟು ತಿನ್ನುವೆಯಂತೆ. ತಾಳು, ಅಲ್ಲಿ ನೋಡು. ಶುಕ್ರಾಚಾರ್ಯರೂ ಬೃಹಸ್ಪತ್ಯಾಚಾರ್ಯರೂ ಒಟ್ಟುಗೂಡಿದ ಹಾಗೆ ಭಗವಾನರಿಬ್ಬರೂ ನಿಂತು ಮಾತನಾಡುತ್ತಿದ್ದಾರೆ. ಬಾ, ಬಾ. ಇಂತಹ ಯೋಗ ನಮಗಿನ್ನು ಯಾವಾಗ ದೊರೆಯುವುದು? ಹತ್ತಿರ ಹೋಗಿ ನೋಡೋಣ.”

* * *

ವಿಶ್ವಾಮಿತ್ರರು ವಸಿಷ್ಠರ ಬಳಿ ನಿಂತಿದ್ದಾರೆ. ವಸಿಷ್ಠರು, “ನಾವು ಈ ವೇಳೆಗಾಗಲೇ ತಮ್ಮ ದರ್ಶನ ಪಡೆಯಬೇಕಾಗಿತ್ತು. ಏನೋ ಕಾರ್ಯ ಕಲಾಪಗಳು. ಅಂತೂ ಇಲ್ಲಾದರೂ ದರ್ಶನವಾಯಿತು. ತಾವೊಮ್ಮೆ ದಕ್ಷಿಣಕ್ಕೆ ಹೋಗಿ ಅಲ್ಲಿ ಅಗಸ್ತ್ಯಾಶ್ರಮ ಪ್ರಾಂತದಲ್ಲಿದ್ದು ಬನ್ನಿ. ಲೋಪಮುದ್ರಾ ದೇವಿಯು ನದಿಯಾಗಿ ಹರಿದಿರುವ ಆ ಪ್ರಾಂತ್ಯ ಭೂಲೋಕದಲ್ಲೆಲ್ಲಾ ವಿಶೇಷ ಮಹಿಮಾ ಸಂಪನ್ನವಾದುದು. ನಾವು ತಮ್ಮನ್ನು ನರ್ಮದಾ ತೀರದಲ್ಲಿ ಸಂದರ್ಶನ ಮಾಡುತ್ತೇವೆ. ತಾವು ಭಗವಾನ್ ಆದುದು ನಮಗೆ ಪರಮ ಸಂತೋಷವಾಗಿದೆ” ಎಂದರು.

ವಿಶ್ವಾಮಿತ್ರರು ಕುರುಡರಿಗೂ ಕಾಣಿಸುವಷ್ಟು ಸ್ಪಷ್ಟವಾದ ಸಂತೋಷದಿಂದ ನಮಸ್ಕಾರಮಾಡಿ “ಎಲ್ಲವೂ ತಮ್ಮ ಅನುಗ್ರಹ” ಎಂದರು. ವಸಿಷ್ಠರು ಅದನ್ನು ಒಪ್ಪಿಕೊಳ್ಳುತ್ತಾ “ಸಂದೇಹವೇನು? ಭೂಮಿಯು ಸ್ಥಿರವಾಗಿರುವುದು, ನದಿಗಳು ಹರಿಯುವುದು, ಅಗ್ನಿಯು ಜ್ವಲಿಸುವುದು, ವಾಯುವು ಬೀಸುವುದು, ಆಕಾಶವು ಹರಡಿರುವುದು, ಆದಿತ್ಯನು ಪ್ರಕಾಶಿಸುವುದು, ಎಲ್ಲವೂ ನಮ್ಮಿಂದಲೇ!” ಎಂದು ನಕ್ಕು ವಿಶ್ವಾಮಿತ್ರರನ್ನು ಆದರದಿಂದ ಬೀಳ್ಕೊಟ್ಟರು.

---

## ಅರವತ್ತಮೂರನೆಯ ತರಂಗ

ಭಗವಾನರ ತೊಡೆಯಮೇಲೆ ಶುನಶ್ಶೇಫನು ಬಂದು ಕುಳಿತುದು, ಅವರು ಅವನನ್ನು ದೇವರಾತ ಎಂದು ಸಂಬೋಧಿಸಿದುದೂ ಮಿಕ್ಕವರಿಗೆಲ್ಲ ಹಿತವಾದರೂ ಅಂಧ್ರಾದಿ ಪಂಚಕರಿಗೆ ಸರಿ ಹೋಗಲಿಲ್ಲ. ನೂರು ಹಸುಗಳಿಗೆ ವಿಕ್ರೀತನಾಗಿದ್ದವನೊಬ್ಬನು ಸುಲಭವಾಗಿ ಬ್ರಹ್ಮರ್ಷಿಗಳ ತೊಡೆಯಮೇಲೆ ಕುಳಿತುಕೊಳು

ವುದು ಉತ್ಪನ್ನ ಮರ್ಯಾದೆಯಾಯಿತು ಎಂದು ಅವರ ಸಿದ್ಧಾಂತ. ಅಡ್ಡಿ ಆತಂಕಗಳಿಲ್ಲದೇ ಇದ್ದಿದ್ದರೆ ಅವರು ಆಗಲೇ ಅವನಿಗೆ ಬುದ್ಧಿ ಕಲಿಸಿಬಿಡುತ್ತಿದ್ದರು. ಆದರೆ 'ಸಖೆ, ಭಗವಾನರಿಗೆ ತಿಳಿಸದೆ ಏನೂ ಮಾಡಬಾರದು" ಎಂದು ಸುಮ್ಮನಿದ್ದರು.

ಭೂಮಿಯಲ್ಲಿ ಬಿದ್ದ ಬೀಜವಾದರೂ ಮೊಳೆಯದೆ ಹೋದೀತು: ಹುಸಿದೀತು: ವಿಫಲವಾದೀತು. ಆದರೆ ಮನಸ್ಸಿನಲ್ಲಿ ಹುಟ್ಟಿದ ಭಾವವು ಮಾತ್ರ ಫಲಿಸದೆ ಹೋಗುವುದು ಉಂಟೆ? ಅಂಧ್ರಾದಿಗಳಿಗೆ ಯಜ್ಞ ಮಂಟಪದಲ್ಲಿ ಹುಟ್ಟಿದ ಈ ವಿರೋಧಭಾವವು ಗೊಬ್ಬರದ ಗುಂಡಿಯಲ್ಲಿ ಬಿದ್ದ ಕುಂಬಳ ಬೀಜದಂತೆ ಚೆನ್ನಾಗಿ ಹಬ್ಬುತ್ತ ಹೋಯಿತು. ಧರ್ಮಾರಣ್ಯಕ್ಕೆ ಬರುವವೇಳೆಗೆ ಅವರ ಭಾವವು ದೇವರಾತನ ವಿಷಯವಾಗಿ ಸಂಪೂರ್ಣವಾಗಿ ಧರ್ಮವಿರುದ್ಧವಾಗಿ ಹೋಗಿತ್ತು.

ಮಧುಚ್ಛಂದಾದಿಗಳ ದೇವರಾತನ ವಿಷಯವಾದ ವರ್ತನೆಯು ಅಂಧ್ರಾದಿಗಳ ಹುಚ್ಚಿಗೆ ಧೂಪ ಹಾಕಿದಂತಾಯಿತು. ಅವರು, ಆತನು ಭಗವಾನರ ವಿಶೇಷ ಕೃಪೆಗೆ ಪಾತ್ರನಾದವನು ಎಂದು ತಿಳಿದು ಆತನಲ್ಲಿ ವಿಶೇಷವಾದ ವಿಶ್ವಾಸವನ್ನು ವಹಿಸಿದರು. ಆತನು ವಯೋಜ್ಯೇಷ್ಠನಲ್ಲದಿದ್ದರೂ ವಿದ್ಯಾಜ್ಯೇಷ್ಠನೆಂದು ಆತನಲ್ಲಿ ಅವರಿಗೆಲ್ಲಾ ಬಹಳ ಗೌರವ. ಅದು ಅಂಧ್ರಾದಿಗಳ ದೃಷ್ಟಿಯಲ್ಲಿ ಮತ್ತೆ ಸಂಪ್ರದಾಯ ಭಂಗ. 'ದೊಡ್ಡವರು ದೊಡ್ಡವರೇ? ಇವೊತ್ತು ನೆಟ್ಟ ಗಿಡ ಶತಮಾನದ ಮರವನ್ನು ಮೀರುವುದೂ ಉಂಟೇನು? ನಾವು ಏನಾದರೂ ಸಹಿಸೇವು. ಕ್ರಮಭಂಗವನ್ನು ಸಹಿಸೆವು' ಎಂದು ಸ್ಪಷ್ಟವಾಗಿ ಹೇಳುವರು.

ಇದನ್ನು ಭಗವತೀ ಕೌಶಿಕಿಯೇ ಭಗವಾನರಿಗೆ ತಿಳಿಸಿದರು. ಅವರು "ಇದು ನನಗೆ ದಾರಿಯಲ್ಲಿಯೇ ತಿಳಿಯಿತು. ಆದರೂ ತಾನಾಗಿ ತಿಳಿದು ನೀನು ಬಂದು ಹೇಳಲಿ ಎಂದು ಕಾದಿದ್ದೆ. ಸರಿ. ವಿಷವೃಕ್ಷದ ಫಲವನ್ನು ಸಂಗ್ರಹಿಸುವ ಕಾಲ ಬಂದಿದೆ. ನೀನು ಇಂದ್ರಹೋಮವನ್ನು ಮಾಡಿ ದೇವತಾತ್ವವನ್ನು ಸ್ವೀಕರಿಸು" ಎಂದರು.

ಆಕೆಗೆ ಅರ್ಥವಾಗದೆ "ಹಾಗೆಂದರೆ?" ಎಂದರು. "ಹಾಗೆಂದರೆ? ಅವರಿಗೆ ತಾವು ಮಾಡುತ್ತಿರುವ ಅಧರ್ಮದ ವಿಷಫಲವನ್ನು ಸಂಗ್ರಹಿಸುವ

ಕಾಲ ಬಂದಿದೆ. ನನಗೆ ಪುತ್ರಶೋಕವನ್ನು ಅನುಭವಿಸುವ ಕಾಲ ಬಂದಿದೆ. ನೀನು ಅಕಾರಣವಾಗಿ ಪುತ್ರಶೋಕವನ್ನು ಅನುಭವಿಸಲೇಕೆ? ಅದರಿಂದ, ಇದು ಇತ್ಯರ್ಥವಾಗುವುದರೊಳಗಾಗಿ ದೇವತಾತ್ವವನ್ನು ವಹಿಸಿಕೊಂಡು ದುಃಖ ದೂರಳಾಗು."

"ನಾನು ತಮ್ಮ ಸಹಧರ್ಮಚಾರಿಣಿಯಾಗಿದ್ದೇನೆ. ತಾವು ಅನುಭವಿಸಿದುದನ್ನು ನಾನೂ ಅನುಭವಿಸಲೇಬೇಕು ತಾನೇ?"

"ಅಹುದು. ನೀನು ಸಹಧರ್ಮಚಾರಿಣಿ. ಎಂದರೆ ಧರ್ಮದಲ್ಲಿ ಸಹಚಾರಿಣಿ. ನಾನು ಹಿಂದೆ ವಿಶ್ವಾಮಿತ್ರನೆಂದು ಹೆಸರಿಟ್ಟುಕೊಂಡಿದ್ದೂ ಭಗವಾನ್ ವಸಿಷ್ಠರ ಪುತ್ರ ಶತವಿನಾಶಕ್ಕೆ ಕಾರಣನಾದೆ. ಅದರ ಫಲವಾಗಿ ಜನ್ಮಾಂತರದಲ್ಲಿ ಅನುಭವಿಸಬೇಕಾಗಿದ್ದ ಪಾಪಫಲ ಈಗಲೇ ಪಕ್ವವಾಗಿ ಕರಗತವಾಗಿದೆ. ಈ ಪಾಪಫಲವನ್ನು ನೀನು ಅನುಭವಿಸಬೇಕಾಗಿಲ್ಲ. ಜೊತೆಗೆ ನೀನು ಇದುವರೆಗೆ ನನ್ನಲ್ಲಿ ವರ್ತಿಸಿರುವ ಅನ್ಯಾದೃಶ ಧರ್ಮಾಚರಣದಿಂದ ನಾನು ಪ್ರಸನ್ನನಾಗಿದ್ದೇನೆ. ನೀನು ಬೇಕಾದ ವರವನ್ನು ಕೇಳು. ನೀನು ದೇವತೆ. ಹವಿರ್ಭಾಗಗಳಿಂದ ಆರಾಧಿಸಿ ಒಲಿಸಿಕೊಳ್ಳಬೇಕಾದವಳು. ನೀನು ಮಾನವರಿಗೆ ವರವನ್ನು ಕೊಡುವವಳು. ಇಂತಹ ನೀನು ಒಲಿದು ದೊಡ್ಡಮನಸ್ಸು ಮಾಡಿ ಸ್ವರ್ಗವೇ ಇಲ್ಲಿಗೆ ಬಂದಂತೆ ನನಗೆ ಪ್ರಿಯಳೂ ಹಿತಳೂ ಆಗಿದ್ದೆ. ನೀನು ಏನು ಬೇಕೆಂದರೆ ಅದನ್ನು ಮಾಡಲು ಸಿದ್ಧವಾಗಿದ್ದೇನೆ. ಸ್ತ್ರೀ ಬುದ್ಧಿಯನ್ನು ಆಶ್ರಯಿಸಿ ಹಟಹಿಡಿದು ದುಃಖಭಾಗಿನಿಯಾಗಬೇಡ. ಈ ದುಃಖವು ಅರುಂಧತೀ ದೇವಿಯನ್ನು ತಿನ್ನುವುದರಲ್ಲಿತ್ತು. ವಸಿಷ್ಠರಂಥವರಿಗೆ ದುಸ್ಸಹವಾಯಿತು. ಆ ವಸಿಷ್ಠಶೋಕದಲ್ಲಿ ಅರ್ಧವನ್ನು ನಾನು ತೆಗೆದುಕೊಂಡಿರುವೆನು. ಅದಕ್ಕಾಗಿ ಈ ದೇಹವನ್ನು ಕೊಟ್ಟರೂ ನನಗೆ ದುಃಖವಿಲ್ಲ. ಆದರೆ ಇಂತಹ ದುಸ್ಸಹ, ದುರ್ದಾಂತ, ದುಃಖವನ್ನು ಅಬಲೆ, ಕೋಮಲೆ, ಧರ್ಮಶೀಲೆ, ನೀನೇಕೆ ವಹಿಸಬೇಕು? ಆದರಿಂದ ನಿನಗೆ ಹೇಳುತ್ತಿರುವೆನು."

"ದೇವಾ, ಕ್ಷಮಿಸಿ. ತಮಗೆ ಪ್ರತಿಯಾಡುತ್ತಿಲ್ಲ. ನಾನು ಈಗ ತಾವು ಹೇಳಿದಂತೆ ಮಾಡಿದರೆ, ಲೋಕದಲ್ಲಿ ಎಷ್ಟಾಗಲಿ ಸೂಳೆ, ಆ ಸೂಳೆಯ ಬುದ್ಧಿ ಹೋದೀತೆ? ಕೆಟ್ಟಕಾಲ ಬಂತೆಂದು ತಿಳಿದು ಕೈಬಿಟ್ಟಳೆಂದು ನನಗೆ ಅಪಖ್ಯಾತಿಯು ಬರುವುದು. ಆದರಿಂದ ತಮ್ಮ ಅಪ್ಪಣೆಯನ್ನು ಮೀರದೆ ಇಂದ್ರ

ಹೋಮವನ್ನೇನೋ ಮಾಡುವೆನು ಆದರೆ ದೇವತ್ವವನ್ನು ಸ್ವೀಕರಿಸುವುದಿಲ್ಲ. ಇಂದ್ರನು ದೇವರಾಜನು. ದೇವತೆಗಳೆಲ್ಲರೂ ಆತನಿಗೆ ಸೇರಿದವರು. ಆತನು ಸರ್ವಾಂತರ್ಯಾಮಿಯು. ನಾನು ತಾವು ಇರುವಂತೆ ಇದ್ದುಬಿಡುವೆನು. ಆ ದುಃಖವು ಅಷ್ಟು ದುರ್ದಮ್ಯವಾಗಿ ಬಂದರೆ, ಅದಕ್ಕೆ ತಾವು ಬಲಿಯಾದರೆ ನಾನೂ ಬಲಿಯಾಗುವೆನು. ಅಲ್ಲಿಗೆ ನಾನು ಸೋತಂತಾಗಲಿಲ್ಲ. ಆಗ ನನ್ನನ್ನು ಮೀರಿಬಂದು ನನ್ನನ್ನು ಮುಕ್ಕುತ್ತಿರುವ ದುಃಖವನ್ನು ನೋಡಿ ದೇವೇಂದ್ರನು ಬೇಕಾದರೆ, ನನಗೆ ದೇವತ್ವವನ್ನು ಕೊಡಲಿ. ಹಾಗಿಲ್ಲದೆ, ನಾನು ಎಂದು ಕೊಂಡಿರುವಂತೆ, ತಪೋಧನರೂ ಜ್ಞಾನಧನರೂ ಆದ ತಮಗೆ ಈ ದುಃಖವು ತಗಲುವುದಿಲ್ಲ ಎಂಬುದೇ ನಿಜವಾದರೆ, ನಾನು ದೇವತ್ವವನ್ನು ವಹಿಸಬೇಕಾಗಿಲ್ಲ."

"ನೀನು ದೇವತ್ವವನ್ನು ವಹಿಸಲು ಏಕೆ ಹಿಂತೆಗೆಯುತ್ತಿದ್ದೀಯೆ?"

"ಪ್ರಭುವೆ, ದೇವತ್ವದಲ್ಲಿ ರಜೋಗುಣದ ಆವೇಶ, ಯಾವಾಗಲೂ ಭೋಗಚಿಂತೆ. ನಿಶ್ಚಲವಾಗಿ ನಿರಾತಂಕವಾಗಿ ಮನಸ್ಸು ಇರುವುದಿಲ್ಲ. ಈಗ ನಾನು ಸಾತ್ವಿಕಳಾಗಿ ಶುದ್ಧವಾಗಿ ಸುಖವಾಗಿದ್ದೇನೆ. ತಾವು ನನಗೆ ಪ್ರಸನ್ನರಾಗಿ ವರವನ್ನು ಕೊಡುವೆನು ಎಂದು ಅಪ್ಪಣೆ ಕೊಡಿಸಿದಿರಿ. ಅದರಿಂದ ನನಗೆ ಈಗ ಅಪ್ಪಣೆ. ಆ ವರವನ್ನು ಈ ರೀತಿಯಾಗಿ ಕೊಟ್ಟು ಅನುಗ್ರಹಮಾಡಿರಿ. ದುಃಖವಾಗಲಿ ಸುಖವಾಗಲಿ, ನಾನು ತಮ್ಮ ಪತ್ನಿಯಾಗಿ ಇದ್ದು ಬಿಡುವೆನು."

"ಸತಿ, ನಿಜವಾಗಿಯೂ ಹಾಗೆಯೇ ಆಗಲಿ. ಇಂದ್ರನು ನಿನ್ನನ್ನು ಹಿಂದಕ್ಕೆ ಕರೆಯುವವರೆಗೂ ನೀನು ನನ್ನ ಪತ್ನಿಯಾಗಿರು. ದೇವರಾಜನಪ್ಪಣೆಯನ್ನಂತೂ ನಾವಿಬ್ಬರೂ ಮೀರುವಂತಿಲ್ಲವಲ್ಲ?"

ಇಬ್ಬರೂ ಒಪ್ಪಿದರು. ಕೂಡಲೇ ಹಠಾತ್ತಾಗಿ ಆಕೆಗೆ ರಂಭೆಯ ನೆನಪಾಯಿತು: "ದೇವ, ಇನ್ನೊಂದು ಪ್ರಾರ್ಥನೆಯುಂಟು. ನನ್ನ ಜೊತೆಯಲ್ಲಿ ರಂಭೆಯೂ ಬಂದಳು. ಅದನ್ನು ನಾನು ಮರೆತೇ ಬಿಟ್ಟಿದ್ದೆ. ಅವಳೇನಾದಳು? ದೇವಲೋಕಕ್ಕೆ ಹಿಂತಿರುಗಿ ಹೊರಟುಹೋದಳೇ? ಪ್ರಭಾವದಿಂದ ನೋಡಬೇಕು."

ಭಗವಾನರು ನಕ್ಕರು. "ಅವಳು ಏನಾಗಿರುವಳೆಂಬುದು ನನಗೆ ಗೊತ್ತು. ಆದರೆ ನೀನು ನೋಯುವೆಯೆಂದು ನಾನು ಹೇಳಲಿಲ್ಲ. ಅವಳು ನಿನ್ನಂತೆ ಸಾತ್ವಿಕಳಾಗಿ ಬಂದಿದ್ದರೆ ಚೆನ್ನಾಗಿತ್ತು. ಆದರೆ ನಿನಗೆ ಸಾಪತ್ನ್ಯ ಯೋಗ್ಯವಿಲ್ಲವಾಗಿ ಅವಳು ರಜೋಮೂರ್ತಿಯಾಗಿ ಬಂದಳು. ಕ್ಷೇತ್ರ ಪಾಲಕನಾದ ಭೈರವನು ಹೇಳಿದರೂ ಕೇಳದೆ, ದುಡುಕಿ, ಇಲ್ಲಿ ಮಹಾಶಿಲೆ ಯಾಗಿ ಬಿದ್ದಿರುವಳು. ನೀನು ದೇವಲೋಕಕ್ಕೆ ಹೋಗುವಾಗ ಆಕೆಯನ್ನು ಕರೆದುಕೊಂಡು ಹೋಗುವೆಯಂತೆ. ಅದುವರೆಗೂ ಆ ವಿಚಾರವಾಗಿ ಯೋಚಿಸ ಬೇಡ."

ಭಗವತೀ ಕೌಶಿಕಿಯು ಅದನ್ನು ಕೇಳಿ ವ್ಯಥೆಪಟ್ಟಳು. "ದೇವೇಂದ್ರನಿಗೆ ಅವಳು ಬೇಕಾದವಳು ಎಂದು ಪ್ರತೀತಿ. ಅವಳು ಹೀಗೆ ಮಹಾಶಿಲೆಯಾಗಿ ದ್ದರೂ ಆತನೇಕೆ ಸುಮ್ಮನಿರುವನು? ಅಥವಾ ಪಾಪಫಲವನ್ನು ಅನುಭವಿಸಿ ತೀರಿಸಲೆಂದು ಸುಮ್ಮನಿರುವನೋ? ಆಗಲಿ, ನಾನು ದುಃಖಪಡುವಾಗ ನನ್ನನ್ನೂ ಹೀಗೆಯೇ ಬಿಟ್ಟುಬಿಟ್ಟರೆ? ಇಲ್ಲ. ಅಂತಹ ದಿಗಿಲಿಲ್ಲ. ಅಗ್ನಿಗೂ ಹಿಮದ ಬಾಧೆಯೇ? ಹಾಗೆ ಭಗವಾನರಿಗೂ ದುಃಖವುಂಟೆ? ಎಲ್ಲದಕ್ಕಿಂತ ಹೆಚ್ಚಾಗಿ, ನಾನು ಇಲ್ಲಿರುವವರೆಗೂ ಸತಿ. ದೇವತ್ವವನ್ನು ವಹಿಸುತ್ತಲೂ ಸೂಳೆ. ದೇವತೆಯಾಗಿ ಸೂಳೆಯಾಗಿರುವುದಕ್ಕಿಂತ ಮಾನವಿಯಾಗಿ ಸತಿ ಯಾಗಿರುವುದೇ ನನಗೆ ಹಿತ."

ಆಕೆಯ ಯೋಚನೆಗಳಿಗೆಲ್ಲ ಉತ್ತರವಾಗಿ ನುಡಿಯುವಂತೆ, "ನಿನ್ನ ಇಷ್ಟ ಬಂದ ಹಾಗೆ ಮಾಡು. ಆದರೆ ನಾಳೆಯ ಸಂಜೆಯೊಳಗಾಗಿ ಬಹುಶಃ ಎಲ್ಲವೂ ಇತ್ಯರ್ಥವಾಗಿ ಹೋಗುತ್ತದೆ" ಎಂದು ನುಡಿದು ಭಗವಾನರು ಎಲ್ಲವನ್ನೂ ಮುಗಿಸಿದರು.

---

## ಅರವತ್ತನಾಲ್ಕನೆಯ ತರಂಗ

ಅಂದಿನ ರಾತ್ರಿ ಆಂಧ್ರನು ಮಧುಚ್ಛಂದನಿಗೆ ಹೇಳಿಕಳುಹಿಸಿದನು. ಅಣ್ಣನು ಹೇಳಬೇಕೆಂದಿರುವ ವಿಷಯ ತಮ್ಮನಿಗೆ ಗೊತ್ತು. ಆದರೂ ದೊಡ್ಡ

ವನು ಎಂದು ತಮ್ಮನು ಅಣ್ಣನ ಬಳಿಗೆ ಬಂದನು. ಕೈಕಟ್ಟಿಕೊಂಡೇ ನಿಂತಿದ್ದನು. ಅಣ್ಣನು ಬಲವಂತಮಾಡಿ ಕುಳ್ಳಿರಿಸಿಕೊಂಡು "ಒಂದು ವಿಚಾರದಲ್ಲಿ ಸಲಹೆ ಕೇಳಬೇಕೆಂದು ನಿನಗೆ ಹೇಳಿಕಳುಹಿಸಿದೆ" ಎಂದು ಸಣ್ಣಗೆ ವಕ್ರವಾದರೂ ಕ್ರೂರವಲ್ಲದ ನುಡಿಯಿಂದ ಹೇಳಿದನು.

"ಅಪ್ಪಣೆ."

"ಈಗ ಈ ದೇವರಾತನ ವಿಷಯ ನನಗೆ ಬಹಳ ಕಷ್ಟಕ್ಕೆ ಬಂದಿದೆ. ಭಗವಾನರು ಅವನನ್ನು ಸರ್ವಜ್ಯೇಷ್ಠನಾಗಿ ಅಂಗೀಕರಿಸಿರುವಂತೆ ಕಾಣುತ್ತದೆ. ಇದಕ್ಕೆ ನೀನೇನು ಮಾಡಬೇಕೆಂದಿರುವೆ ?"

"ಅಣ್ಣಾ, ಬ್ರಾಹ್ಮಣರಲ್ಲಿ ವಯೋನುಕ್ರಮವಾಗಿ ಜ್ಯೇಷ್ಠತ್ವವಿಲ್ಲ. ನಮ್ಮಲ್ಲಿ ಯಾರೂ ಮಂತ್ರದ್ರಷ್ಟರಾಗುವುದಿರಲಿ, ಮಂತ್ರಕರ್ತರೂ ಆಗಿಲ್ಲ, ಆಗುವೆವೋ ಇಲ್ಲವೋ ಅದೂ ಗೊತ್ತಿಲ್ಲ. ಆತನು ಆಗಲೇ, ಪ್ರಜಾಪತಿ, ವರುಣ, ಅಗ್ನಿ, ಇಂದ್ರ, ಅಶ್ವಿನೀ ದೇವತೆಗಳು, ಉಷಸ್ ಇವರಿಷ್ಟು ದೇವತೆಗಳನ್ನು ಪ್ರಸನ್ನರನ್ನು ಮಾಡಿಕೊಂಡಿರುವುದು ವಿಶ್ವವಿದಿತವಾಗಿದೆ. ಆತನಿಗೆ ನನಗೆ ಆಗಿರುವಷ್ಟು ವಯಸ್ಸು ಆಗಿದ್ದರೂ ಮಧುಪರ್ಕಕ್ಕೆ ಅರ್ಹತೆಯು ಬರುತ್ತಿತ್ತು. ವಯಸ್ಸು ಸಾಲದೆಂದು ಸ್ನಾತಕನಾಗದಿದ್ದ ಮಾತ್ರಕ್ಕೆ ಯೋಗ್ಯತೆಯು ಕಡಿಮೆಯಾಯಿತೆ? ಅದರಿಂದ ನೀನೂ ಈ ವಿಚಾರವನ್ನು ಹೀಗೇ ನೋಡಬೇಕೆಂದು ಕೇಳಿಕೊಳ್ಳುತ್ತೇನೆ. ಗುಣಪಕ್ಷಪಾತಿಗಳಾದ ಭಗವಾನರು ನಿನ್ನ ಅಭಿಪ್ರಾಯವನ್ನು ತಿಳಿದರೆ ಏನೆಂದುಕೊಂಡಾರು ?"

"ನಾಳೆ ನಾನೇ ಹೇಳುತ್ತೇನೆ. ನೀನು ಸಾವಿರ ಹೇಳು. ನಾನು ಆಗಲೇ ಇತ್ಯರ್ಥಮಾಡಿದ್ದೇನೆ. ಔರಸರಿಗಿಂತ ದತ್ತನಿಗೆ ಅಧಿಕಾರ ಹೆಚ್ಚು ಎಂದು ಧರ್ಮಪುರುಷನೂ ಒಪ್ಪುವುದಿಲ್ಲ."

"ಅಣ್ಣಾ, ದುಡುಕಬೇಡ. ಇದು ದತ್ತವಿಚಾರವಲ್ಲ. ದೇವರಾತನೆಂದು ಹೆಸರಿಟ್ಟಾಗಲೇ ನಿನಗೆ ತಿಳಿಯಲಿಲ್ಲವೆ? ಧರ್ಮರಕ್ಷಕರಾದ ದೇವತೆಗಳು ಈತನನ್ನು ಭಗವಾನರಿಗೆ ಕೊಟ್ಟರು."

"ಮಧುಚ್ಛಂದ, ಸರಿಯಾಗಿ ಅರ್ಥಮಾಡಿಕೊಂಡು ಮಾತನಾಡು. ದೇವತೆಗಳೆಲ್ಲ ಇತ್ಯರ್ಥಮಾಡಿದುದು. ಅವಿದ್ಯಾವಂತನಾದ ಯಃಕಶ್ಚಿತನ

ಮಗನು ಬುದ್ಧಿವಂತಿಕೆಯಿಂದ ಭಗವಾನರನ್ನು ಹಿಡಿದು ಅವರ ಆಸ್ತಿಯನ್ನು ಹೊತ್ತುಹಾಕುವುದಕ್ಕೆಂದು ಅವರ ತೊಡೆಯಮೇಲೆ ಕುಳಿತುಕೊಂಡು ಬಿಟ್ಟರೆ, ಭಗವಾನರು ಅಜ್ಞಾತಕುಲಗೋತ್ರನನ್ನು ದೇವರಾತನೆಂದಲ್ಲದೆ ಇನ್ನೇನು ಹೆಸರಿಂದ ಕರೆಯಬೇಕು ? ಏನಾದರೂ ಆಗಲಿ. ನಾಳೆಯದಿನ ಪೂರ್ವಾಹ್ನ ದಲ್ಲಿಯೇ ಭಗವಾನರನ್ನು ಕಂಡು ಇದನ್ನು ಇತ್ಯರ್ಥ ಮಾಡುತ್ತೇನೆ. ಹಾಗಾ ದರೆ ನೀನು ನಮ್ಮ ಜೊತೆಯಲ್ಲಿಲ್ಲ."

" ಅಣ್ಣಾ, ನನ್ನಮೇಲೆ ಕೋಪಿಸಬೇಡ. ನಾನು ಭಗವಾನರ ಸಿದ್ಧಾಂತ ದಂತೆ ನಡೆಯುವವನು."

" ಒಂದುವೇಳೆ ಧರ್ಮ ನನ್ನ ಕಡೆಯಿದ್ದರೆ ? "

" ನಾವು ಧರ್ಮವನ್ನು ಬಲ್ಲೆವೆನ್ನುವುದು ಸಾಹಸ. ಅಣ್ಣಾ, ಧರ್ಮ ಅಧರ್ಮಗಳು ನಾನು ಧರ್ಮ ನಾನು ಅಧರ್ಮ ಎಂದು ಹಣೆಯಮೇಲೆ ಬರೆದು ಕೊಂಡು ತಿರುಗುತ್ತಿಲ್ಲ. ರಾಗದ್ವೇಷಗಳಿಂದ ನಮ್ಮ ದೃಷ್ಟಿಯು ದುಷ್ಟವಾಗಿರು ವಾಗಲಂತೂ ಧರ್ಮಾಧರ್ಮ ಸ್ವರೂಪವು ತಿಳಿಯುವುದೆಂದುಕೊಂಡಿರುವೆಯಾ ? ಬೇಡ. ನಾನು ಚಿಕ್ಕವನು. ನಿನ್ನೆದುರಿಗೆ ಇದುವರೆಗೆ ಹೀಗೆ ಬಾಯಿ ಬಿಟ್ಟು ಮಾತನಾಡಿದವನಲ್ಲ. ಅದರಿಂದ, ನೀನು ಏನೇ ಮಾಡು, ದುಡುಕದೆ, ಸಾವ ಧಾನವಾಗಿ ಸಮಾಧಾನವಾಗಿ ಯೋಚಿಸಿನೋಡು. ಇದುವರೆಗೆ ನೀವು ಆಡಿ ರುವ ಮಾತುಗಳು ಭಗವತಿಯವರಿಗೆ ಎಷ್ಟು ಅಪ್ರಿಯವಾಗಿವೆ ಎಂಬುದು ನಿಮಗೂ ಗೊತ್ತಿದೆ."

" ಮಧುಚ್ಛಂದ, ನಾನು ಸಾವಧಾನವಾಗಿ ಸಮಾಧಾನವಾಗಿ ಮೀ ಮಾಂಸಾ ನಡೆಸಿರುವೆನೆಂಬುದಕ್ಕೆ ಕನಿಷ್ಠನಾದ ನಿನ್ನ ಮಾತನ್ನು ಶಾಂತವಾಗಿ ಕೇಳುತ್ತಿರುವುದೇ ಸಾಕ್ಷಿ. ನನಗೆ ನಾನು ಸರಿ ಎನ್ನಿಸಿದೆ. ಅದಕ್ಕಾಗಿ ಬೇಕಾಗಿ ದ್ದರೆ ಪ್ರಾಣವನ್ನು ಪಣವಾಗಿಡಲು ಸಿದ್ಧವಾಗಿದ್ದೇನೆ. ನಾನು ಇದುವರೆಗೆ ಸುಮ್ಮನಿದ್ದುದೂ ಭಗವತಿಯವರಿಗೂ ಭಗವಾನರಿಗೂ ಅಸಮಾಧಾನವಾದೀತು ಎಂದು. ಆದರಿದು ನಾನು ಎದುರು ಬೀಳುವವರೆಗೂ ಸರಿಹೋಗುವುದಿಲ್ಲ ಎಂಬ ನಂಬಿಕೆ ಬಲಿಯುತ್ತಿದೆ. ಎಲ್ಲದಕ್ಕಿಂತ, ಆ ದೇವರಾತನೊಡನೆ ಭಗ ವಾನರು ಚರ್ಚಿಸುತ್ತಿರುವ ರಹಸ್ಯಗಳನ್ನು ಯಾವೊತ್ತಾದರೂ ನನ್ನೊಡನೆ ಬೇಡ, ನಾನು ಅಯೋಗ್ಯ. ನಿನ್ನೊಡನೆ, ಅಗ್ನಿಸಾಕ್ಷಾತ್ಕಾರ ಪಡೆದು ಆಗಲೇ

ಋಷಿ ಎನ್ನಿಸಿಕೊಂಡಿರುವ ನಿನ್ನೊಡನೆ ಚರ್ಚಿಸಿದ್ದಾರೆಯೇ? ಇದರಿಂದ ಹಾನಿಯೇನು ಎನ್ನುವೆಯೇನೋ? ಈ ವಿದ್ಯಾರಹಸ್ಯಗಳೇ ನಮ್ಮ ಕುಲಧನ. ಆಶ್ರಮದಲ್ಲಿರುವ ಗೋಧನಗಳನ್ನೆಲ್ಲಾ ಆತನಿಗೆ ಕೊಡಲಿ. ಆಶ್ರಮದಲ್ಲಿರುವ ಸ್ವರ್ಣವನ್ನೆಲ್ಲಾ ಅವನಿಗೆ ಎತ್ತಿ ಕೊಟ್ಟುಬಿಡಲಿ. ಆದರೆ ನಮ್ಮ ವಂಶದವರಿಗೆ ಮೀಸಲಾಗಿರುವ ಈ ರಹಸ್ಯಗಳನ್ನು ಕೊಡುವುದಂತೂ ನನಗೆ ಸಹಿಸುವುದಿಲ್ಲ."

"ಅಣ್ಣಾ, ಅಣ್ಣಾ, ಇಲ್ಲಿ ನೀನು ದುಡುಕುತ್ತಿದ್ದೀಯೆ. ಭಗವಾನರ ವಿದ್ಯಾವೈಭವವೆಲ್ಲವೂ ಸ್ವಾರ್ಜಿತವಾದುದು. ಅಲ್ಲದೆ ಆತ್ಮಾ ವೈ ಪುತ್ರ ನಾಮಾಸಿ ಎಂಬ ಶ್ರುತಿಯಂತೆ, ಅವರೇ ಸ್ವಯಂ ಮೇಧಾ ಜನನ ಮಾಡಿರುವ ನಮಗೆ ಅವರ ವಿದ್ಯಾವೈಭವವೆಲ್ಲವೂ ಜನ್ಮತಸ್ಸಿದ್ಧವಾಗಿಯೇ ಇರುವಾಗ ಕೊಡಬೇಕಾದುದೇನು? ನಾವು ಅದನ್ನು ಅನುಷ್ಠಾನದಿಂದ ಪಡೆದುಕೊಳ್ಳಬೇಕು. ಹೊಸಬನಿಗೆ ಅವರು ಕೊಡದಿದ್ದರೆ, ಬರುವುದೆಂತು? ಅದರಿಂದ, ನೀನು ಅದನ್ನು ನೋಡುತ್ತಿರುವ ದೃಷ್ಟಿ ವಕ್ರ."

"ಮಧುಚ್ಛಂದ, ನಾವಿಬ್ಬರೂ ಭಿನ್ನ ಪ್ರಸ್ಥಾನದಲ್ಲಿದ್ದೇವೆ. ನಮಗೆ ಇದು ವಿಮತಸ್ಥಾನ. ಇಲ್ಲಿಗೆ ಬಿಡೋಣ."

"ಭಗವಾನರಲ್ಲೂ ವಿಮತಸ್ಥಾನವೆಂದೇ ಬಿಟ್ಟು ಅವರು ಬೇಕಾದುದು ಮಾಡಿಕೊಳ್ಳಲಿ ಎಂದು ಸುಮ್ಮನಿರು."

"ನೀನು ನನಗೆ ನಿಯಮ್ಯ, ನಿಯಾಮಕನಲ್ಲ. ಭಗವಾನರು ನಿಯಾಮಕರು, ನಿಯಮ್ಯರಲ್ಲ. ಅದರಿಂದ ಅವರು ಒಂದು ಸಿದ್ಧಾಂತವನ್ನು ಹಿಡಿದರೆ, ಅದರಿಂದ ನಮಗೆ ಹಾನಿಯುಂಟು, ಅದರಿಂದ ನಾವು ಅದನ್ನು ಪ್ರತಿಭಟಿಸಲೇಬೇಕು. ನೀನಿನ್ನು ಹೋಗಿ ಬಾ. ಇಂದಿನಿಂದ ನಮ್ಮ ಗುಂಪು ಬೇರೆ. ನಿಮ್ಮ ಗುಂಪು ಬೇರೆ."

"ಆದರೂ ನಾವಿಬ್ಬರೂ ಒಂದೇ ಮರದ ಚಿಗುರುಗಳು ಅಣ್ಣಾ. ನೀವು ದೊಡ್ಡವರು. ನಿಮ್ಮ ಆಶ್ರಯದಲ್ಲಿ ಇರುವವರು ನಾವು. ಅಪ್ಪಣೆ ಕೊಡು. ಹೋಗಿ ಬರುತ್ತೇನೆ."

"ಮಧುಚ್ಛಂದ, ನಿನ್ನೊಡನೆ ಮಾತನಾಡುವುದೇ ಒಂದು ಸಂತೋಷ. ನಿನ್ನ ನಾಲಗೆಯು ಮಧುಸ್ಯಂದಿ. ನಾನೂ ನಿನ್ನಂತೆಯೇ ಇರಬೇಕು ಎನ್ನಿಸ

ತ್ತಿದೆ. ಆದರೆ ಏನು ಮಾಡಲಿ ? ನನಗೇಕೋ ಹೀಗೆ ಈ ದೇವರಾತನೇ ಕಾರಣ ವಾಗಿ ಕೋಪ ಬಂದಿದೆ. ಪ್ರವಾಹ ಹೆಚ್ಚಿದೆ. ಕಟ್ಟೆ ಒಡೆಯುತ್ತದೆ ಎಂದು ಆಗಾಗ ಭೀತಿಯೂ ಆಗುತ್ತದೆ. ಆದರೂ ಧರ್ಮಕ್ಕಾಗಿ ಏನಾದರೂ ಆಗಲಿ ಭಗವಾನರನ್ನೇ ಕೇಳಿಬಿಡುತ್ತೇನೆ. ಒಂದುವೇಳೆ ನೀನು ಹೇಳುವಂತೆಯೇ ಆಗಿದ್ದು ನಮಗೆ ಭಗವಾನರ ಕೋಪವು ದೊರೆತರೂ, ಅದರಿಂದ ನಿನಗೆ ಏನೂ ಕೆಡುಕಾಗದಿರಲಿ. ಇದೋ, ನನ್ನ ತಪಸ್ಸೆಲ್ಲ ನಿನಗೆ ರಕ್ಷೆಯಾಗಿರಲಿ. ನಿನ್ನ ವಿನಯವು ನಿನ್ನ ರಕ್ಷಾಕವಚ. ಮತ್ತೆ ಶಪಥಪೂರ್ವಕವಾಗಿ ಹೇಳುವೆನು. ದೇವತೆಗಳೂ ಧರ್ಮಪುರುಷನೂ ಸಾಕ್ಷಿಯಾಗಿರಲಿ. ನಾನು ಧರ್ಮವೆಂದು ಕೊಂಡು ಹೂಡುತ್ತಿರುವ ಈ ಯುದ್ಧದಲ್ಲಿ ಪಿತೃಕೋಪವನ್ನು ಪಡೆದು ಅದ ರಿಂದ ಹಾನಿಯಾಗುವುದಿದ್ದರೆ, ಅದು ನಮ್ಮ ಐವತ್ತು ಜನಕ್ಕೆ ಮಾತ್ರ ಅನ್ವ ಯಿಸತಕ್ಕದು. ಮಧುಚ್ಛಂದಾದಿ ಪಂಚಾಶರಿಗೆ ಅದರಿಂದ ಎಳ್ಳಷ್ಟೂ ಹಾನಿ ಯಿಲ್ಲದಿರಲಿ. ತಥಾಸ್ತು ; ತಥಾಸ್ತು."

ತಮ್ಮನಿಗೆ ಕಣ್ಣಲ್ಲಿ ನೀರು ಬಂತು. ಅದನ್ನು ಒರೆಸಿಕೊಂಡು ಅಣ್ಣನಿಗೆ ನಮಸ್ಕಾರಮಾಡಿ ಹೋದನು.

---

## ಅರವತ್ತೈದನೆಯ ತರಂಗ

ಭಗವಾನರು ಕೋಳಿ ಕೂಗುತ್ತಿದ್ದ ಹಾಗೆಯೇ ಎದ್ದರು. ನಿತ್ಯವೂ ಅವರು ಏಳುವ ವೇಳೆಗೆ ಭಗವತಿಯವರು ಎದ್ದು ಬಾಗಿಲಲ್ಲಿ ಸಾರಿಸಿ ರಂಗವಲ್ಲಿ ಹಾಕಿರುವರು. ಇಂದು ಅವರು ಇನ್ನೂ ಏಕೋ ಎದ್ದಿಲ್ಲ. ನಿದ್ದೆಯಲ್ಲಿರು ವವರನ್ನು ಎಬ್ಬಿಸುವಂತಿಲ್ಲ. ಸಾರಿಸದ ಹೊಸಲು ದಾಟ ಹೊರಗೆ ಹೋಗು ವಂತಿಲ್ಲ. ಅವರಿಗೆ ಸಣ್ಣಗೆ ನಗು ಬಂತು. 'ಸೂಚನೆ ಸರಿಯಾಗಿದೆ' ಎಂದು ಕೊಂಡು, ಮಂತ್ರಸ್ನಾನಮಾಡಿ ಅನುಷ್ಠಾನಕ್ಕೆ ಕುಳಿತರು.

ಅದೇನೋ ಅಂದು ಸಿಂಧೂದ್ವೀಪದ ದರ್ಶನವಾಯಿತು. ಪ್ರಾಣದೇವನು ಧ್ಯಾನಕ್ಕೆ ಬೇಗ ಸಿಕ್ಕಲಿಲ್ಲ. ವೈಶ್ವಾನರನನ್ನು ಆವಾಹನಮಾಡಿಕೊಂಡು ಪ್ರಾಣಪಂಚಕದರ್ಶನ ಮಾಡಬೇಕಾಯಿತು. ಇಷ್ಟಾಯಿತು ಎನ್ನುವ ವೇಳೆಗೆ

ಭಗವತಿಯವರು ಎದ್ದರು. 'ಏನೋ ಇವೊತ್ತು ಇಷ್ಟು ಹೊತ್ತಾಯಿತಲ್ಲಾ!' ಎಂದು ಗಾಬರಿಗೊಂಡು ಅವಸರ ಅವಸರವಾಗಿ ಎದ್ದರು. ಸೀರೆಯು ತೊಡರಿ ಕೊಂಡಿತು. ಬಿದ್ದರು. ಆ ಸದ್ದಿನಿಂದ ಭಗವಾನರಿಗೆ ಎಚ್ಚರವಾಯಿತು. ಭಗ ವತಿಯವರಿಗೆ ಏಟು ಬಿದ್ದು ಕೈನೋವಾಯಿತು. ಆದರೂ ಕಷ್ಟಪಟ್ಟು ಎದ್ದು ಹೋಗಿ ಬಾಗಿಲು ಗುಡಿಸಿ ಸಾರಿಸಿದರು. ಭಗವಾನರು ನಗುತ್ತ ನಗುತ್ತ ಎದ್ದು ಸ್ನಾನಕ್ಕೆ ಹೋದರು.

ನದಿಯ ಬಳಿ ದೇವರಾತನೊಬ್ಬನು ಸ್ನಾನಮಾಡಿ ಅಹ್ನೀಕ ಮಾಡು ತ್ತಿದ್ದಾನೆ. ಮಿಕ್ಕವರೆಲ್ಲರೂ ಆಗ ಎದ್ದೆದ್ದು ಬರುತ್ತಿದ್ದಾರೆ. ಶುಕ್ರೋದಯ ವಾಗಿದ್ದರೂ ಪೂರ್ವದಿಶೆಯಲ್ಲಿ ಮೋಡಗಳು ಮುಚ್ಚಿಕೊಂಡು ನಕ್ಷತ್ರಗಳನ್ನೂ ಕಾಣದಂತೆ ಮಾಡಿವೆ. ಎಲ್ಲರಿಗೂ ಏನೋ ಆಲಸ್ಯ. ಭಗವಾನರು ನದಿಯಲ್ಲಿ ಇಳಿಯುತ್ತಿರುವ ಹಾಗೆಯೇ ಭಗವತಿಯವರು ಬಂದರು. ಅವರಿಗೆ ಏನೋ ಗಾಬರಿ.

ಸುಮಾರು ಒಂದು ಝಾವವಾಗಿರಬಹುದು. ಸೂರ್ಯೋದಯವಾಗಿ, ಮೋಡಗಳಿಂದ ಸೂರ್ಯದರ್ಶನವೇ ಇಲ್ಲದೆಹೋಗಿದೆ. ಅದೇನು ಮೋಡ ಮುಚ್ಚಿದೆಯೆಂದು ಕಾವಳವೋ? ಅಥವಾ ಆಶ್ರಮವನ್ನೇನಾದರೂ ಕರಿಯ ಬೆಳಕು ಮುಸುಕಿದೆಯೋ? ಏನೋ? ಅಂತೂ ಆಶ್ರಮದಲ್ಲಿ ಎಂದಿನ ಲವ ಲವಿಕೆಯಿಲ್ಲ. ದುರ್ಭೋಜನ ಮಾಡಿದವರ ದೌರ್ಮನಸ್ಯದಂತೆ ಏನೋ ದುಗುಡ ಎಲ್ಲೆಲ್ಲೂ ದುಮುದುಮುಗುಟ್ಟುತ್ತಿದೆ.

ಭಗವಾನರು ಬಂದು ವಿಶ್ರಾಂತಿಗೇಹದಲ್ಲಿ ಕುಳಿತರು. ದೇವರಾತನನ್ನು ಬರಮಾಡಿಕೊಂಡರು. ಎಂದೂ ಇಲ್ಲದ ಅವಸರದಿಂದ "ದುಃಖವು ಬಂದಾಗ ಅದು ಇಂದ್ರಿಯ ಮನೋಬುದ್ಧಿಗಳನ್ನು ಹಿಡಿದು ನಿರ್ಬಲಮಾಡುವುದು. ಇಂದ್ರ ಚಂದ್ರ ಬೃಹಸ್ಪತಿಗಳನ್ನು ಧ್ಯಾನಮಾಡಿ ಅವರಿಂದ ಬಲವನ್ನು ಪಡೆದು ಇಂದ್ರಿಯ ಮನೋಬುದ್ಧಿಗಳಲ್ಲಿ ತುಂಬಿದರೆ ದುಃಖವು ಅಡಗುವುದು. ಇದನ್ನು ಮರೆಯದೆ ನೋಡಿಕೊಂಡಿರು" ಎಂದು ಹೇಳಿ ಮುಗಿಸುತ್ತಿದ್ದ ಹಾಗೆಯೇ ಆಂಧ್ರನು ಬಂದನು.

ದೇವರಾತನು ತನಗಿಂತ ಮುಂಚೆ ಬಂದಿರುವುದನ್ನು ಕಂಡು ಅವನಿಗೆ ರೇಗಿಹೋಯಿತು. ಆದರೂ ಅನುನಯವನ್ನು ಬಿಡಲಾರದೆ, ಅವರಿಗೆ ನಮ

ಸ್ಕಾರ ಮಾಡಿ, ದೇವರಾತನನ್ನು ಲಕ್ಷಿಸದೆಯೇ ನಿಂತನು. ಭಗವಾನರು ಅದನ್ನು ಕಂಡು "ಈತನೂ ನಮಸ್ಕಾರಕ್ಕೆ ಅರ್ಹನೇ !" ಎಂದರು. ಆಂಧ್ರನು, "ತಮ್ಮ ಅಪ್ಪಣೆಯೆಂದು ಈಗ ಮಾಡುತ್ತೇನೆ. ಆದರೆ ಆಂಧ್ರನು ಶುನಶ್ಶೇಫನಿಗಿಂತ ಶ್ರೇಷ್ಠ" ಎಂದು ನಮಸ್ಕಾರ ಮಾಡಿದನು.

ಭಗವಾನರು ತಲೆದೂಗುತ್ತ "ವಾದವೇನೋ ಚೆನ್ನಾಗಿ ಆರಂಭವಾಗಿದೆ. ಧರ್ಮಮಂದಿರಕ್ಕೇ ಹೋಗೋಣ" ಎಂದು ಎದ್ದು ಹೊರಟೇಬಿಟ್ಟರು. "ನಿಮ್ಮ ತಾಯಿಯೂ ಬರಲಿ" ಎಂದರು. ಆಂಧ್ರನು ತಾಯಿಯನ್ನು ಕರೆಯುವುದಕ್ಕೆ ಹೋದನು. ದೇವರಾತನನ್ನು ಕರೆದು "ನೋಡು, ಎಚ್ಚರವಿರಲಿ. ಧರ್ಮವಿಚಾರ ಮಾಡುವಾಗ ಪ್ರಾಣದ ಮೇಲೆ ದೃಷ್ಟಿಯಿರಬೇಕು. ಅಲ್ಲಿ ಕೊಂಚ ವಿಕಾರ ಕಂಡರೂ ಮನಸ್ಸು ಉದ್ರೇಕವಾಗಿದೆಯೆಂದು ಮತ್ತೆ ಸಮಾಹಿತಮನಸ್ಕರಾಗಿ ಕುಳಿತುಕೊಳ್ಳಬೇಕು" ಎಂದು ಹೇಳಿಕೊಳ್ಳುತ್ತ ಧರ್ಮಮಂದಿರದ ಕಡೆಗೆ ಬಂದರು.

ಆಂಧ್ರನು ತಾಯಿಯನ್ನೂ ತಮ್ಮಂದಿರನ್ನೂ ಕರೆದುಕೊಂಡು ಬಂದನು. ಭಗವಾನರು ಪತ್ನಿಯನ್ನು ಕರೆದು ಮಗ್ಗುಲಲ್ಲಿ ಕುಳ್ಳಿರಿಸಿಕೊಂಡು, "ನಿನ್ನ ಮಗನು ನಮ್ಮ ಮೇಲೆ ಆಪಾದನೆಯನ್ನು ತಂದಿದ್ದಾನೆ. ಧರ್ಮಮಂದಿರಕ್ಕೆ ಬಂದಿದ್ದೇವೆ. ಆತನೇ ಪರಿಷತ್ತನ್ನು ಕರೆಯಲಿ" ಎಂದರು.

ಭಗವತಿಯವರು ಆ ಮಾತು ಕೇಳಿ ಭೂಮಿಗೆ ಇಳಿದು ಹೋದರು: "ಆಂಧ್ರ, ಇದೇನು ? ಈ ಮಾತು ನಿಜವೇ ? ಭಗವಾನರನ್ನು ನೀನು ಧರ್ಮಮಂದಿರಕ್ಕೆ ಕರೆತಂದೆಯಾ ?" ಎಂದರು. ಅವನೂ "ನಾವೆಲ್ಲ ನಿನ್ನ ಕಾಲಿಗೆ ಬಿದ್ದು ಹೇಳಿಕೊಂಡೆವು. ನೀನು ಭಗವಾನರಿಗೆ ಹೇಳಲಿಲ್ಲ. ಅದರಿಂದ ಈ ದಿನ ನಾವೇ ಅವರಲ್ಲಿ ಅರಿಕೆ ಮಾಡಿಕೊಳ್ಳಬೇಕೆಂದು ಬಂದೆವು. ಅವರೇ ಇಲ್ಲಿಗೆ ಬರಹೇಳಿ ಬಂದು ಬಿಟ್ಟರು. ನಾವೂ ಅವರ ಅಪ್ಪಣೆಯೆಂದು ಬಂದಿದ್ದೇವೆ" ಎಂದನು.

ಭಗವಾನರು ಧರ್ಮಮಂದಿರಕ್ಕೆ ಬಂದರು ಎಂಬ ಸುದ್ದಿಯು ಬರುವುದೇ ತಡ. ಆಶ್ರಮಕ್ಕೆ ಆಶ್ರಮವೇ ಅಲ್ಲಿಗೆ ಮೊಗಚಿತು. ಎಲ್ಲರೂ ಬಂದು ತಮ್ಮತಮ್ಮ ಸ್ಥಾನದಲ್ಲಿ ಕುಳಿತರು. ಧರ್ಮಾಸನದಲ್ಲಿ ದರ್ಭೆಯ ಕೂರ್ಚೆ

ಯೊಂದನ್ನು ಕಟ್ಟಿಟ್ಟು, "ಧರ್ಮಪುರುಷನು ನಮ್ಮ ವಾದ ವಿವಾದಗಳನ್ನು ಪರೀಕ್ಷಿಸಿ ನಿರ್ಣಯ ಮಾಡಲಿ" ಎಂದು ಸಭೆಯು ಪ್ರಾರ್ಥಿಸಿತು.

ಭಗವಾನರು, ಎದ್ದು "ನಾವು ಆಪಾದಿತರು. ದೇವರಾತನನ್ನು ಜ್ಯೇಷ್ಠ ಪುತ್ರನನ್ನಾಗಿ ಅಂಗೀಕರಿಸಿ, ಔರಸರಾದ ಆಂಧ್ರಾದಿಗಳಿಗೆಲ್ಲ ಅವರ ಜನ್ಮಸಿದ್ಧ ವಾದ ಅಧಿಕಾರಕ್ಕೆ ಲೋಪ ತಂದಿದ್ದೇವೆ ಎಂಬುದು ನಮ್ಮ ಮೇಲಿನ ಆಪಾದನೆ. ಅಕುಲೀನನಾದ ಶುನಶ್ಶೇಫನು ಕುಲೀನರಾದ ಆಂಧ್ರಾದಿಗಳ ಅಧಿಕಾರವನ್ನು ಅಪಹರಿಸುತ್ತಿದ್ದಾನೆಯೆಂದು ಆತನ ಮೇಲಿನ ಅಪಾದನೆ. ಇದು ಅಧರ್ಮ ವೆಂದು ಸಿದ್ಧಾಂತ. ಇದನ್ನು ನಾವು ಅಂಗೀಕರಿಸಬೇಕು: ಅಥವಾ ನಿರಾ ಕರಿಸಬೇಕು. ಇದೋ ಈ ಧರ್ಮಸಭೆಯ ಮುಂದೆ ನಾವು ಶಪಥಪೂರ್ವಕ ವಾಗಿ ಹೇಳುತ್ತಿರುವೆವು. ಹರಿಶ್ಚಂದ್ರನ ಯಾಗದಲ್ಲಿ ದೇವತೆಗಳು ದಯಮಾಡಿ ಈ ಪುತ್ರರತ್ನವನ್ನು ನಮಗೆ ಅನುಗ್ರಹಿಸಿರುವರು. ಈತನು ವಯೋಮಾನ ದಿಂದ ಕಿರಿಯನಾದರೂ ಗುಣದಿಂದ, ವಿದ್ಯೆಯಿಂದ, ಪ್ರಭಾವದಿಂದ, ತಪಸ್ಸಿ ನಿಂದ, ಜ್ಞಾನದಿಂದ ನಮ್ಮ ಔರಸರು ಒಂದು ನೂರು ಜನಕ್ಕಿಂತ ಶ್ರೇಷ್ಠನು. ಅದರಿಂದಲೂ ದೇವತೆಗಳು ಅನುಗ್ರಹಿಸಿ ಕೊಟ್ಟವನೆಂಬ ಕಾರಣದಿಂದಲೂ ಇವನನ್ನು ಇವರಿಗೆಲ್ಲ ಜ್ಯೇಷ್ಠನೆಂದು ನಾವು ದಂಪತಿಗಳು ಅಂಗೀಕರಿಸಿರುವೆವು. ಇದನ್ನು ನಮ್ಮ ಮಕ್ಕಳೂ ಅಂಗೀಕರಿಸತಕ್ಕುದು. ಜೊತೆಗೆ ದೇವ ರಾತನು ದ್ವ್ಯಾಮುಷ್ಯಾಯಣನಾಗಿ ಆಂಗೀರಸ ವಿಶ್ವಾಮಿತ್ರ ಗೋತ್ರಗಳೆರಡಕ್ಕೂ ಭೂಷಣನಾಗಿರತಕ್ಕದು. ಯಥಾಮತಿಯಾಗಿ ನಾವು ಇದನ್ನು ಧರ್ಮವೆಂದು ಅಂಗೀಕರಿಸಿ ಆಚರಿಸುತ್ತಿದ್ದೇವೆ. ಇದನ್ನು ಅನುಮೋದಿಸುವವರೂ ವಿರೋ ಧಿಸುವವರೂ ಮುಂದೆ ಬಂದು ತಮ್ಮ ಪಕ್ಷವನ್ನು ಸಕಾರಣವಾಗಿ ಧರ್ಮ ಪರಿಷತ್ತಿಗೆ ನಿವೇದಿಸಬಹುದು. ನಮ್ಮದು ಅಧರ್ಮವೆಂದು ಸಪ್ರಮಾಣವಾಗಿ ಅಥವಾ ಸಯುಕ್ತಿಕವಾಗಿಯಾದರೂ ತಿಳಿಸಿಕೊಟ್ಟಲ್ಲಿ ತಿದ್ದಿಕೊಳ್ಳುವುದಕ್ಕೆ ಸಿದ್ಧ ರಾಗಿದ್ದೇವೆ" ಎಂದು ಗಂಭೀರವಾಗಿ, ನಿರ್ವಿಕಾರವಾಗಿ ಹೇಳಿ ಕೈಮುಗಿದು ಕುಳಿತರು.

ಸಭೆಯು ಒಂದು ಗಳಿಗೆ ನೀರವವಾಗಿತ್ತು. ಮಧುಚ್ಛಂದನು ಅಣ್ಣನ ಅಪ್ಪಣೆಯನ್ನು ಕಣ್ಣುಸನ್ನೆಯಿಂದ ಪಡೆದು ಎದ್ದನು. ಅವನ ಹಿಂದೆಯೇ ಆತನ ತಮ್ಮಂದಿರು ನಲವತ್ತೊಂಬತ್ತು ಮಂದಿಯೂ ಎದ್ದು ನಿಂತರು. ಅವ

ರಷ್ಟು ಮಂದಿಯೂ ಮುಂದೆ ಬಂದು ಸಭೆಗೂ ತಾಯಿತಂದೆಗಳಿಗೂ ನಮಸ್ಕಾರಮಾಡಿ ನಿಂತು "ಧರ್ಮಪುರುಷನಿಗೆ ನಮಸ್ಕಾರವು. ಧರ್ಮಿಷ್ಠರಿಗೆ ನಮಸ್ಕಾರವು. ಧರ್ಮಜ್ಞರಿಗೆ ನಮಸ್ಕಾರವು. ಭಗವಾನರು ಅಪ್ಪಣೆ ಕೊಡಿಸಿರುವುದು ಸರ್ವಥಾ ಧರ್ಮಸಮ್ಮತವಾಗಿದೆಯೆಂದು ನಾವು ಒಪ್ಪಿದ್ದೇವೆ. ಇವರೇ ಗೋತ್ರಪ್ರವರ್ತಕರಾದುದರಿಂದ, ಇವರ ಆಚರಣೆಯಿಂದ ವಂಶಕ್ರಮಾನುಗತವಾಗಿ ಬಂದ ಅಧಿಕಾರಗಳು ಯಾವವೂ ಲೋಪವಾಗುವುದಿಲ್ಲವಾಗಿ, ಔರಸರಾದ ನಾವು ಧರ್ಮ ಕರ್ಮ ಗುಣ ವಿದ್ಯಾ ತಪಸ್ಸುಗಳಿಂದ ಜ್ಯೇಷ್ಠನಾದೀತನನ್ನು ಸರ್ವಜ್ಯೇಷ್ಠನೆಂದು ಅಂಗೀಕರಿಸುತ್ತೇವೆ. ಈತನಿಗೆ ಜ್ಯೇಷ್ಠಾಂಶವು ಸಲ್ಲಲು ನಮ್ಮ ಅಭ್ಯಂತರವೇನೂ ಇಲ್ಲ" ಎಂದು ನಮಸ್ಕಾರ ಮಾಡಿದನು. ತಮ್ಮಂದಿರೂ ನಮಸ್ಕಾರ ಮಾಡಿದರು.

ಸಭೆಯು ಮಧುಚ್ಛಂದನ ಮಾತಿಗೆ ಅಂಗೀಕಾರವಿತ್ತಿತು. ಆಂಧ್ರನೂ ಅವನ ತಮ್ಮಂದಿರೂ ಎದ್ದು ನಿಂತರು: "ಧರ್ಮಜ್ಞರಿಗೂ ಧರ್ಮಿಷ್ಠರಿಗೂ ಧರ್ಮಪುರುಷನಿಗೂ ನಮಸ್ಕಾರವು. ನಾನು ಈ ತಮ್ಮಂದಿರೆಲ್ಲರ ಪರವಾಗಿ ಹೇಳುತ್ತಿರುವೆನು. ನಾವು ಹೇಳುತ್ತಿರುವುದನ್ನು ವಿಮರ್ಶೆಮಾಡಿ ನೋಡಿ ಇದು ಧರ್ಮ, ಸಪ್ರಮಾಣವಾಗಿದೆ, ಸಲಕ್ಷಣವಾಗಿದೆ ಎಂದು ನಂಬಿ ಈ ಸಭೆಯ ಮುಂದೆ ನಮ್ಮ ಪಕ್ಷವನ್ನು ಮಂಡಿಸುತ್ತಿದ್ದೇವೆ. ಒಂದುವೇಳೆ ನಾವು ಕ್ರೋಧಾದಿ ದುರ್ಬುದ್ಧಿಯನ್ನು ಆಶ್ರಯಿಸಿ, ಅಧರ್ಮವೆಂದು ನಮಗೆ ಗೊತ್ತಿದ್ದೂ ನಾವಿದನ್ನು ಸಾಧಿಸುತ್ತಿದ್ದರೆ, ಧರ್ಮಪುರುಷನು ನಮಗೆ ಪ್ರಾಣಾಂತ ಶಿಕ್ಷೆಯನ್ನು ವಿಧಿಸಲಿ. ಭಗವಾನರು ಮಾಡಿದ ಅಪ್ಪಣೆಯನ್ನು ನಾವು ಶಿರಸಾವಹಿಸಬೇಕೆಂದು ನಾವು ಒಪ್ಪುವವರಾದರೂ, ನಾವು ಒಪ್ಪಿಕೊಳ್ಳುವಂತಹ ಆಜ್ಞೆಯನ್ನು ಮಾಡಿ ನಮ್ಮನ್ನು ಅವರು ಅನುಗ್ರಹಿಸಬೇಕು. ಹಾಗಿಲ್ಲದೇ, ಅವರ ಸಿದ್ಧಾಂತದಿಂದ ನಮ್ಮ ಅಧಿಕಾರಕ್ಕೆ ಬರುವ ಲೋಪವನ್ನು ಗಮನಿಸದೆ ತಮ್ಮ ಸಿದ್ಧಾಂತವನ್ನು ನಮ್ಮ ಮೇಲೆ ಹೇರುವರಾದರೆ ಅದು ಪಿತೃಧರ್ಮದ ದುರ್ವಿನಿಯೋಗ. ಯಾರೇ ಹೇಳಿದರೂ ಈ ಶುನಶ್ಶೇಫನು ಶುನಶ್ಶೇಫನೇ ಹೊರತು ಅನ್ಯಥಾ ಅಲ್ಲ: ಅದೇ ಕಾರಣದಿಂದಲೇ ಇವನು ಆಂಗೀರಸ ಗೋತ್ರದವನೇ ಹೊರತು ವಿಶ್ವಾಮಿತ್ರ ಗೋತ್ರದವನಾಗುವುದಿಲ್ಲ. ಗೋತ್ರವು ಪರಂಪರಾ ಪ್ರಾಪ್ತವಾಗುವ ಅಧಿಕಾರ ವಿಶೇಷ. ಭಗವಾನರೇ ಆದರೂ ಹಾಗೆ

ತಾವು ಒಲಿದವರಿಗೆ, ತಮ್ಮನ್ನು ಒಲಿಸಿಕೊಂಡವರಿಗೆ ತಮ್ಮ ಗೋತ್ರವನ್ನು ಕೊಡುವುದಾದರೆ ಉತ್ತರಾಧಿಕಾರಿಗಳಾದ ನಮ್ಮನ್ನು ಕೇಳಿ ಕೊಡಬೇಕಾಗಿತ್ತು. ಹಾಗೆ ಕೊಟ್ಟರೂ ಅವನು ನಮಗೆ ತಮ್ಮನಾಗಬೇಕೇ ಹೊರತು ಅಣ್ಣನಾಗ ಬಾರದು. ಅದರಿಂದ ನಾವು ಈ ಶುನಶ್ಶೇಫನ ಜ್ಯೇಷ್ಠತ್ವವನ್ನು ಸರ್ವಥಾ ವಿರೋಧಿಸುತ್ತೇವೆ."

"ಈ ನಿಮ್ಮ ಸಿದ್ಧಾಂತವನ್ನು ಪುತ್ರಧರ್ಮದೊಡನೆ ಸಮನ್ವಯ ಮಾಡು ವಿರಾ?"

"ಲೋಕದಲ್ಲಿ ಧರ್ಮವು ಸಾಮಾನ್ಯ, ವಿಶೇಷ ಎಂದು ಎರಡು ವಿಧ. ಸಾಮಾನ್ಯಕ್ಕೆ ವಿಶೇಷದಿಂದ ಬಾಧೆಯುಂಟು. ಇದು ವಿಶೇಷ ಧರ್ಮ. ಅದ ರಿಂದ ಸಮನ್ವಯ ಬೇಕಾಗಿಲ್ಲ."

ಧರ್ಮಾಸನದಿಂದ ಒಂದು ಹುಂಕಾರ ಕೇಳಿಸಿತು.

ಮಧುಚ್ಛಂದನು "ಅಣ್ಣಾ, ಎಚ್ಚರಿಕೆ. ನೀನು ಪ್ರಾಣಪರ್ದಿಂದ ಧರ್ಮ ವಿಚಾರ ಮಾಡುತ್ತಿರುವೆ. ಯಾವ ರೀತಿಯಿಂದಲೂ ದುಷ್ಟವಾಗಬಾರದು ಧರ್ಮ" ಎಂದು ಕೈಮುಗಿದನು.

ಆಂಧ್ರನು ತಿರಸ್ಕಾರದ, ಗರ್ವದ, ಅಹಂಭಾವದ ನಗುವನ್ನು ನಗುತ್ತ "ಜ್ಯೇಷ್ಠರು ಜ್ಯೇಷ್ಠರು ಮಾತ್ರವಲ್ಲ: ಶ್ರೇಷ್ಠರೂ ಹೌದು. ಅದನ್ನು ಕನಿಷ್ಠರು ಮರೆಯಬಾರದು" ಎಂದನು.

ಮಧುಚ್ಛಂದನು ಗಡಗಡನೆ ನಡುಗುತ್ತಾ, ಭೀತಿಯಿಂದ, ವಿನಯದಿಂದ, ಕೇಳಿದನು: "ಇದೇ ಮಾತು ಭಗವಾನರಲ್ಲಿಯೂ ಅನ್ವಯಿಸಬೇಕಲ್ಲವೇ?"

"ಜ್ಯೇಷ್ಠರೆಂದು ಅಂಗೀಕರಿಸಿದರೆ ಜ್ಯೇಷ್ಠರು. ಪ್ರತಿಭಟಿಸಿದ ಮೇಲೆ?"

ಭಗವತಿಯವರು "ಆಂಧ್ರ, ಎಚ್ಚರಿಕೆ, ಎಚ್ಚರಿಕೆ" ಎಂದರು.

ಮತ್ತೆ ಮಧುಚ್ಛಂದನು ಕೇಳಿಕೊಂಡನು: "ಅಣ್ಣಾ, ಈ ಮಾತು ಬಾಯಿ ಹಿಡಿಯದ್ದು. ಹಿಂದಕ್ಕೆ ತೆಗೆದುಕೋ."

"ಇಲ್ಲ, ಆಡಿಯಾಯಿತು."

"ಬೇಡ ಅಣ್ಣ, ಹಿಂದಕ್ಕೆ ತೆಗೆದುಕೊ."

"ಇಲ್ಲ, ಆಡಿಯಾಯಿತು."

"ಇದು ಅನ್ಯಾಯ."

"ನಾನು ಹೇಳುತ್ತಿದ್ದೇನೆ. ಇದು ನ್ಯಾಯ."

ಧರ್ಮಾಸನದ ಬಳಿಯಿಂದ ಸಿಡಿಲಿನ ದನಿ ಕೇಳಿತು. ನಿಶ್ಶಬ್ದವಾಗಿ ನೀರವವಾಗಿ ಕುಳಿತಿದ್ದ ಸಭೆಯು ಅನಿರೀಕ್ಷಿತವಾಗಿ ಆದ ಆ ಮಹಾಧ್ವನಿ ಯಿಂದ ನಡುಗಿಹೋಗಿ ಮೇಲಕ್ಕೆ ಹಾರಿ ಬಿದ್ದಂತಾಯಿತು. ಭಗವಾನರು ತಗ್ಗಿಸಿದ್ದ ತಲೆಯನ್ನು ಮೇಲಕ್ಕೆತ್ತಿ ನೋಡುವುದರೊಳಗಾಗಿ ಒಂದೇ ಜ್ವಾಲೆಯು ಅವರು ಐವತ್ತು ಜನವನ್ನು ಸಿಯ್ಯನೆ ಸುಟ್ಟು ಬೂದಿ ಮಾಡಿಬಿಟ್ಟಿತು. ಭಗ ವತಿಯವರು ಅದನ್ನು ನೋಡಿ ಅಯ್ಯೋ ಎಂದು ಕುಳಿತಿದ್ದಹಾಗೆಯೇ ಬಿದ್ದು ಮೂರ್ಛೆಹೋದರು. ಭಗವಾನರಂತೂ ತಾವೇ ಆ ದಳ್ಳುರಿಗೆ ಸಿಕ್ಕಿದವರಂತೆ ನಿಶ್ಚೇತನರಾಗಿ ಉರುಳಿದರು. ಮಧುಚ್ಛಂದಾದಿಗಳು ಇತಿಕರ್ತವ್ಯತಾ ಶೂನ್ಯ ರಾದರು. ಸಭೆಯವರು ಕಣ್ಮುಚ್ಚಿದರು.

ಬಿಳಿಯ ಮೋಡವೊಂದು ಬಂದು ಭಗವತಿಯವರನ್ನು ಹೊತ್ತುಕೊಂಡು ಹೋದುದನ್ನು ಯಾರೂ ಕಾಣಲಿಲ್ಲ.

---

## ಅರವತ್ತಾರನೆಯ ತರಂಗ

ಭಗವಾನ್ ವಿಶ್ವಾಮಿತ್ರರಿಂದು ಭಗವಾನ್ ಅಗಸ್ತ್ಯರ ಆಶ್ರಮಕ್ಕೆ ಬಂದಿ ದ್ದಾರೆ. ಮಂತ್ರಪತಿಯಾದ ಮಹಾಬ್ರಾಹ್ಮಣನಿಗೆ ಸಲ್ಲಬೇಕಾದ ಮಧು ಪರ್ಕಾದಿ ಸತ್ಕಾರಗಳನ್ನೆಲ್ಲಾ ವಿಧಿವತ್ತಾಗಿ ಸಮರ್ಪಿಸಿ, ಅಗಸ್ತ್ಯರು ಸತೀ ದ್ವಿತೀಯರಾಗಿ ಅವರ ಬಳಿಯಲ್ಲಿ ಕುಳಿತು ಲೋಕಾಭಿರಾಮವಾಗಿ ಎರಡು ಮಾತನಾಡುತ್ತಿದ್ದಾರೆ. ಆಶ್ರಮದಲ್ಲೆಲ್ಲಾ ಇಂದು ಸಂಭ್ರಮವೊ ಸಂಭ್ರಮ. ಬಂದಿರುವವರು ಒಬ್ಬರೇ ಒಬ್ಬರಾದರೂ ಸಂಭ್ರಮವು ಮಾತ್ರ ಸಾವಿರಾರು ಜನ ಬಂದಾಗ ಇರುವಷ್ಟು ಇದೆ.

ಭಗವಾನರಿಬ್ಬರಿಗೂ ಭಗವತೀ ಲೋಪಾಮುದ್ರೆಯವರು ವೈಶ್ವದೇವಕ್ಕೆ ಅಣಿಮಾಡಿದರು. ಆಕೆಯ ದೃಷ್ಟಿಯಲ್ಲಿ ಇಂದು ವಿಶ್ವಕ್ಕೇ ಸಮಾರಾಧನ ನಡೆಯುತ್ತದೆ. ಚತುರ್ಮುಖ ಬ್ರಹ್ಮನಿಂದ ಹಿಡಿದು ಸ್ತಂಭವೆಂಬ ಅಗೋ ಚರವಾದ ಅಣುಪ್ರಾಯವಾದ ಕ್ರಿಮಿಯವರೆಗೆ ಇರುವ ಸಮಸ್ತ ಜೀವಜಂತು ಗಳಿಗೆ ಮಾತ್ರವಲ್ಲ, ಜಡಭೂತಗಳಿಗೂ ಸ್ಥಾವರಗಳಿಗೂ ಸಹ ಇಂದು ಮಹಾ

ಸಮಾರಾಧನೆಯಾಗುವುದೆಂದು ಬಹಳ ನಿಯಮದಿಂದ, ಉತ್ಸಾಹದಿಂದ, ಸಂಭ್ರಮದಿಂದ, ಅಣಿಯಾಗಿ, ಅಚ್ಚುಕಟ್ಟಾಗಿ, ಎಲ್ಲವನ್ನೂ ಮಾಡಿಸಿದ್ದಾರೆ. ವಿಶ್ವಭುಕ್ಕಾಗಿರುವ ಆ ಪರಮಾತ್ಮನು ಇಂದು ತಮ್ಮ ಆಶ್ರಮಕ್ಕೆ ಅತಿಥಿಯಾಗಿ ದಯಮಾಡಿಸಿದ್ದಾನೆ. ಆತನಿಗೆ ತೃಪ್ತಿಯಾದರೆ ಒಂದು ವಿಶ್ವಜಿತ್ ಯಜ್ಞ ವಾಗುವುದು ಎಂದು ಆಕೆಯು ಎಲ್ಲವನ್ನೂ ಸಿದ್ಧಮಾಡಿಸುತ್ತಿದ್ದಾರೆ.

ಮಧ್ಯಾಹ್ನವಾಯಿತು. ಬ್ರಹ್ಮರ್ಷಿಗಳಿಬ್ಬರೂ ಮಾಧ್ಯಾಹ್ನಿಕ ಕರ್ಮ ಗಳನ್ನು ನೆರವೇರಿಸಿಕೊಂಡು ಗೃಹಲಕ್ಷ್ಮಿಯ ಆಹ್ವಾನವನ್ನು ಅಂಗೀಕರಿಸಿ ಬಂದು ಭೋಜನ ಪಾತ್ರಗಳ ಮುಂದೆ ಕುಳಿತಿದ್ದಾರೆ. ಚಿನ್ನದ ಬಾಳೆಲೆಗಳು ಹಾಸಿ, ಸಣ್ಣಸಣ್ಣ ಕಂಚಿನ ಬಟ್ಟಲುಗಳಲ್ಲಿ ಚೋಹ್ಯ, ಲೇಹ್ಯ, ರಸಾಯನಾದಿ ಗಳನ್ನು ತುಂಬಿ, ಎಲೆಗಳ ಸುತ್ತಲೂ ಇಟ್ಟಿದೆ. ಆಯುಸ್ಸ್ವರೂಪವಾದ ಘೃತವು ತಾನು ಸದ್ಯೋಘೃತವೆಂದು ತನ್ನ ಪರಿಮಳದಿಂದ ಹೇಳಿಕೊಳ್ಳುತ್ತ ವೈಶ್ವಾನರ ನಿಗೆ ತನ್ನನ್ನೊಪ್ಪಿಸಿಕೊಳ್ಳಲು ಕಾದು ಕುಳಿತಿದೆ. ಭಕ್ಷ್ಯಭೋಜ್ಯಗಳು, ವಿವಿಧ ಪಕ್ವಾನ್ನಗಳು, ಫಲಮೂಲಗಳು ಯಥಾವತ್ತಾಗಿ ಸಂಸ್ಕಾರ ಪಡೆದು ಭೋಜ್ಯ ಗಳಾದ ಧಾನ್ಯಗಳು, ಎಲ್ಲವೂ ಯಜ್ಞದಲ್ಲಿ ಭಾಗವಹಿಸಲು ಸಿದ್ಧವಾಗಿವೆ. ಮಕ್ಷಿಕಾದಿಗಳಿಂದ ಬಾಧೆಯಾಗದೆ ಸಣ್ಣ ಬೀಸಣಿಗೆಗಳನ್ನು ಇಟ್ಟುಕೊಂಡು ಬೀಸುತ್ತಿದ್ದಾರೆ. ಇರುವೆ ಮೊದಲಾದವು ಬರದಂತೆ ಕರ್ಪೂರದ ಧೂಳಿನಿಂದ, ಅರಿಶಿನದಿಂದ ಎಲೆಯ ಸುತ್ತಲೂ ರಂಗವಲ್ಲಿ ಇಕ್ಕಿದ್ದಾರೆ. ಪ್ರತಿಯೊಂದು ಪ್ರಾಣಿಯ ಹೃದಯದಲ್ಲಿಯೂ ಇದ್ದುಕೊಂಡು ಸರ್ವಸಾಕ್ಷಿಯಾಗಿರುವ ಆತ್ಮಜ್ಯೋತಿಯನ್ನೂ, ಲೋಕನಿರ್ವಾಹಭಾರವನ್ನು ಹೊತ್ತಿರುವ ಧರ್ಮ ಜ್ಯೋತಿಯನ್ನೂ ಸಾಕ್ಷಾತ್ಕರಿಸಿಕೊಂಡಿರುವಂತೆ, ಎರಡು ದೀಪಗಳು ಎಲೆಯ ಮುಂದೆ ಬೆಳಗುತ್ತಿವೆ. ನಿರ್ಮಲವಾದ ಉದಕವು ಪಾನೀಯವಾಗಿ ಸಿದ್ಧ ವಾಗಿದೆ.

ಬ್ರಹ್ಮರ್ಷಿಗಳಿಬ್ಬರೂ ಅನ್ನಸ್ವರೂಪನಾದ ಪರಬ್ರಹ್ಮವನ್ನು ಧ್ಯಾನಿಸಿ ದರು. ಅನ್ನಾದಸ್ವರೂಪನಾಗಿ ಸರ್ವಪ್ರಾಣಿಗಳ ಅಂತಸ್ಥನಾಗಿರುವ ಪರ ಮಾತ್ಮನನ್ನು ಸ್ಮರಣಮಾಡಿದರು. ಅನ್ನವನ್ನು ಮಂತ್ರದಿಂದ ಪ್ರೋಕ್ಷಣ ಮಾಡಿ, ದೃಷ್ಟಿದೋಷಾದಿಗಳು ತಗುಲದಂತೆ ಅದಕ್ಕೆ ಪರಿಷೇಚನ ಮಾಡಿದರು. ದೇಹದೇಹದಲ್ಲಿಯೂ ಕುಳಿತು ಪ್ರಾಣಾಪಾನ ವ್ಯಾಪಾರಗಳಿಂದ ಅನ್ನವನ್ನು

ಪಚನಮಾಡುವ ವೈಶ್ವಾನರನನ್ನು ಸಂಬೋಧಿಸಿ, ಅನ್ನವು ಜಠರದೊಳಗೆ ನಿಲ್ಲಲು ಅಮೃತದ ಉಪಸ್ತರಣವಾಗಲೆಂದು ಜಲಪ್ರಾಶನಮಾಡಿ, ಪಂಚ ಪ್ರಾಣಗಳಿಗೆ ಆಹುತಿಯನ್ನು ಕೊಟ್ಟು, ದೇಹದಲ್ಲಿರುವ ವಿಶ್ವೇದೇವತೆಗಳನ್ನು ಆಡಿಗಡಿಗೆ ಧ್ಯಾನಮಾಡುತ್ತ ವೈಶ್ವದೇವನನ್ನು ಮುಗಿಸಿದರು. ಈ ಭುಕ್ತಾನ್ನಕ್ಕೆ ಅಮೃತವು ಪಿಧಾನವಾಗಲಿ ಎಂದು ಮತ್ತೆ ಜಲಪ್ರಾಶನಮಾಡಿ, ಪ್ರತ್ಯಕ್ಷವಾಗಿ ಅನ್ನಭಾಗವನ್ನು ಪಡೆಯಲಾರದ ಪಾಪಿಗಳಾಗಿ 'ಅನ್ನಕ್ಕಾಗಿ ಆತುರಪಡೆವ ಅಪುಣ್ಯನಿಲಯದಲ್ಲಿರುವ ಆರ್ತರಿಗೆ' ಎಂದು ಉದಕವನ್ನು ಬಿಟ್ಟು ಭೋಜನ ವನ್ನು ಮುಗಿಸಿ ಎದ್ದರು. ಮಂತ್ರರ್ಷಿಯಾದ ಲೋಪಾಮುದ್ರಾದೇವಿಯವರು ಆ ವೈಶ್ವದೇವದಿಂದ ಸರ್ವದೇವತೆಗಳೂ ತೃಪ್ತರಾಗಿರುವುದನ್ನು ಕಂಡು, "ವೇದ ವಿತ್ತಾದ ಬ್ರಾಹ್ಮಣನಲ್ಲಿ ಸರ್ವೇಸಮಸ್ತ ದೇವತೆಗಳೂ ಇರುವರು. ಎಂಬ ಮಾತು ನಿಜ. ಅಷ್ಟಿಲ್ಲದೇ ಹಿರಿಯರು ಹೇಳಿದರೇ? ಅವರು ಕಂಡು ಹೇಳಿ ದರು. ನಾವು ಕಾಣದೆ ಸುಳ್ಳು ಎಂದರೆ ಅವರದೇನು ಅಪರಾಧ?" ಎಂದು ಕೊಂಡು ಮುಂದಿನ ಕಾರ್ಯದಲ್ಲಿ ಪ್ರವೃತ್ತರಾದರು.

ಒಂದಷ್ಟು ವಿಶ್ರಾಂತಿಯಾದ ಮೇಲೆ ಅಗಸ್ತ್ಯರು ವಿಶ್ವಾಮಿತ್ರರನ್ನು ಅವ ರನ್ನು ಅಲ್ಲಿಗೆ ಕರೆತಂದ ಕಾರ್ಯಗೌರವವನ್ನು ಕುರಿತು ವಿಚಾರಿಸಿದರು. ಅವರೂ ಅನತಿವಿಸ್ತಾರವಾಗಿ, ಮೃದುವೂ ಅರ್ಥವತ್ತೂ ಆದ ಮಾತುಗಳಿಂದ ಹೇಳಿದರು: "ಭಗವಾನ್ ವಸಿಷ್ಠರ ಅಪ್ಪಣೆಯಾಯಿತು. ಇಲ್ಲಿ ಹೋಗಿ ಕೆಲವು ದಿನಗಳಿದ್ದು ಬರಬೇಕು ಎಂದು. ಈ ಜೀವನದಲ್ಲಿ ಇನ್ನು ಉಳಿದಿರುವುದು ಒಂದೇ ಒಂದು ಕಾರ್ಯ. ಅದು ಅಂದು ಬ್ರಹ್ಮರ್ಷಿ ಪರಿಷತ್ತು ಆದ ದಿನ ಭಗವತಿ ಗಾರ್ಗಿಯವರಾದಿಯಾಗಿ ತಾವೆಲ್ಲರೂ ಒಪ್ಪಿಸಿರುವುದು. ಇದೆಲ್ಲ ಮಾಡಿಕೊಂಡು ನರ್ಮದಾ ತೀರದಲ್ಲಿ ಭಗವಾನ್ ವಸಿಷ್ಠರ ದರ್ಶನಮಾಡಿದರೆ ಎಲ್ಲವೂ ಮುಗಿದಂತಾಯಿತು."

"ಭಗವಾನ್, ಅಷ್ಟು ಸುಲಭವಲ್ಲ. ನದಿಯು ಸಮುದ್ರದಲ್ಲಿ ಐಕ್ಯವಾಗು ವವರೆಗೂ ನದಿಯೇ! ನದಿಯಾಗಿರುವವರೆಗೂ ಹರಿಯುತ್ತಲೇ ಇರಬೇಕು. ಭಗವಾನ್ ವಸಿಷ್ಠರ ಪರೀಕ್ಷೆಯಲ್ಲಿ ಗೆದ್ದು ಬ್ರಹ್ಮರ್ಷಿಗಳೆನ್ನಿಸಿಕೊಂಡು ವಿರಾ ಜಿಸಬೇಡವೆ? ಅಲ್ಲಿಂದ ಮುಂದೆ ಸಪ್ತರ್ಷಿಕಲ್ಪರಾದ ತಮಗೆ ತಮ್ಮ ಕೆಲಸ ವೇನೂ ಇರುವುದಿಲ್ಲ. ನಿಜ. ಆದರೆ ಈ ಬ್ರಹ್ಮಾಂಡವನ್ನು ಕಾಪಾಡುವ

ಭಾರವನ್ನು ಹೊತ್ತಿರುವ ಮಹಾದೇವನು ತನ್ನ ಸಹಾಯಕ್ಕಾಗಿ ಅಪೇಕ್ಷಿಸು ವುದು ತಮ್ಮಂತಹ ಕೃತಕೃತ್ಯರನ್ನು. ಆಗಲಿ. ಅದು ದೂರದ ಮಾತು. ಸದ್ಯದಲ್ಲಿ ನಡೆಯಬೇಕಾದ ಕೆಲಸವನ್ನು ಕುರಿತು ಏನು ಯೋಚಿಸಿದ್ದೀರಿ ? ”

“ ಭಗವಾನರ ಅಪ್ಪಣೆಯಾಗಿರುವುದರ ಅರ್ಥ ತಾವು ಹೇಗೆ ಹೇಳಿದರೆ ಹಾಗೆ ಕೇಳಬೇಕೆಂದು ಇರಬೇಕು. ಅದರಿಂದ ಇತಿ ಕರ್ತವ್ಯತೆಯನ್ನು ನಿಶ್ಚಯಿ ಸುವ ಭಾರ ತಮ್ಮದು ಎಂದು ತೋರುತ್ತದೆ. ತಮ್ಮ ಅಪ್ಪಣೆ ಹೇಗೆ ಆದರೆ ಹಾಗೆ.”

“ ಹಾಗೆಯೇ ? ಅಲ್ಲದೆ ನಾವು ಮಾತು ಕೊಟ್ಟಿದ್ದೇವಲ್ಲ ನಮ್ಮಿಂದ ಏನು ಆಗುವುದಿದ್ದರೂ ಮಾಡಲು ಸಿದ್ಧರಾಗಿದ್ದೇವೆಂದು. ಆಯಿತು. ಈಗ ಪ್ರಕೃತ ಏನು ಮಾಡಬೇಕು ? ಯಾರಾದರೂ ಬ್ರಾಹ್ಮಣರಾಗಬೇಕು ಎಂದರೆ ಅವರಿಗೆ ಬ್ರಾಹ್ಮಣ್ಯವು ಸುಲಭವಾಗಿ ದೊರೆಯುವಂತಹ ಒಂದು ಸಾಧನ ಏರ್ಪಡ ಬೇಕು. ಇರಲಿ. ದೇವಿಯವರನ್ನೂ ಕರೆಯಬಹುದೋ ? ”

“ ಅಗತ್ಯವಾಗಿ ”

ಲೋಪಾಮುದ್ರಾದೇವಿಯವರು ಬಂದರು. ಶ್ರುತೀಭಗವತಿಯೇ ಲೋಕ ವನ್ನೆಲ್ಲಾ ಆರ್ಯವನ್ನಾಗಿ ಮಾಡುವುದಕ್ಕೆ ಬಂದಿರುವಳೋ ಎಂಬಂತೆ ಬಂದು ಕುಳಿತರು. ಅಗಸ್ತ್ಯರು ಕೇಳಿದರು : ಆವೊತ್ತು ಉತ್ಸಾಹದಲ್ಲಿ ಆಡಿದ ಮಾತು ಈವೊತ್ತು ಉಳಿಸಿಕೊಳ್ಳಬೇಕಾಗಿದೆ ದೇವಿ. ಬ್ರಾಹ್ಮಣವು ಸುಲಭ ವಾಗಿ ದೊರೆಯುವಂತೆ ಒಂದು ಸಾಧನವು ಏರ್ಪಡುವ ಕಾಲವು ಬಂದಿದೆ. ಏರ್ಪಡಬೇಕು. ಏನು ಮಾಡಿದರೆ ಆದೀತು ಎಂದು ಕೇಳಲು ನಿನ್ನನ್ನು ಕರೆ ದಿದ್ದೇವೆ.”

“ ಈ ದಿನ ತಾವು ಇಬ್ಬರೂ ಭೋಜನ ಮಾಡುತ್ತಿದ್ದಾಗಲೇ ನನಗೆ ಈ ಮಾತು ನೆನೆಪಾಯಿತು. ಅದರ ಮೇಲೆ ಹೀಗಾಗಬೇಕು ಎಂದು ಮೊದಲಿ ನಿಂದಲೂ ತಾವು ಯೋಚಿಸುತ್ತಲೇ ಇದ್ದಿರಿ. ತಮ್ಮ ಚಿಂತನವು ನನ್ನ ಮನಸ್ಸಿ ನಲ್ಲಿ ಪ್ರೇರೇಪಿಸಿರುವುದನ್ನು ಅಪ್ಪಣೆಯಾದರೆ ಒಪ್ಪಿಸುತ್ತೇನೆ.”

“ಆಗಬಹುದು.”

“ನನಗೆ ಹೀಗೆ ತೋರುತ್ತಿದೆ. ಧ್ಯಾನಯೋಗವು ಎಲ್ಲರಿಗೂ ಸಾಧ್ಯ ವಲ್ಲ. ಕೆಲವು ದೇಹಗಳಲ್ಲಿ ಧ್ಯಾನವು ಪ್ರವಹಿಸುತ್ತದೆ: ಕೆಲವು ದೇಹಗಳಲ್ಲಿ

ಧ್ಯಾನವು ಪ್ರವಹಿಸುವುದಿಲ್ಲ. ಆದರಿಂದ ಧ್ಯಾನಯೋಗದಿಂದ ಇದು ಸಾಧ್ಯವಲ್ಲ. ಕರ್ಮಯೋಗವೆಂದರೆ ಅನಧಿಕಾರಿಗಳ ಕರ್ಮದಿಂದ ಫಲವಾಗುವುದಿಲ್ಲವಾಗಿ ಅದೂ ಪ್ರಯೋಜನವಿಲ್ಲ. ಉಪಾಸನಾಮಾರ್ಗದಲ್ಲಿ ದೇವಾಪ್ಯಯವಾಗುವುದೇ ಹೊರತು, ಜೀವನ ಸಂಸ್ಕಾರ ಉತ್ತಮವಾಗಿ ದೇಹವು ಬ್ರಾಹ್ಮಣವಾಗುವುದಿಲ್ಲ: ದೇಹವು ಬ್ರಾಹ್ಮಣವಾದ ಹೊರತು ಬ್ರಾಹ್ಮಣ್ಯವು ಲಭಿಸುವುದಿಲ್ಲ. ಆದರಿಂದ ಉಳಿದಿರುವ ಮಂತ್ರಯೋಗವೊಂದೇ ಸಾಧನ."

---

## ಅರವತ್ತೇಳನೆಯ ತರಂಗ

ಭಗವತಿಯವರು ಸಯುಕ್ತಿಕವಾಗಿ ಸಪ್ರಮಾಣವಾಗಿ ಹೇಳಿದ ಮಾತು ಅವರಿಬ್ಬರಿಗೂ ಒಪ್ಪಿತು. ವಿಶ್ವಾಮಿತ್ರರು ಹೇಳಿದರು: "ಇಲ್ಲಿಗೆ ಬರುತ್ತಾ ದಾರಿಯಲ್ಲಿ ಯಾಜ್ಞವಲ್ಕ್ಯ, ಗಾರ್ಗಿ, ಭಾರದ್ವಾಜ, ವಾಮದೇವ, ನಚಿಕೇತ, ಅತ್ರಿ, ಅನಸೂಯಾ ಮೊದಲಾದ ಭಗವಂತರನ್ನೆಲ್ಲಾ ದರ್ಶನಮಾಡಿಕೊಂಡು ಬಂದೆ. ಎಲ್ಲರೂ ಒಂದೇ ಮಾತು ಹೇಳುತ್ತಿದ್ದಾರೆ. 'ಭೂತಪಂಚಕದ ಮಲದಿಂದ ತಮೋಮಯವಾಗಿರುವ ಅಂತಃಕರಣವನ್ನು ತೊಳೆದು ಅಲ್ಲಿ ಬೆಳಕು ತುಂಬಬೇಕು. ಬರಿಯ ಮಾತಿನಲ್ಲಿ ಸರ್ವವ್ಯಾಪಿ ಎಂದು ಹೇಳುತ್ತಿರುವುದು ತಪ್ಪಿ, "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ" ಎಂಬ ವಾಕ್ಯದ ಅರ್ಥವು ಕಣ್ಣಿಗೆ ಕಟ್ಟಿದಂತಾಗಬೇಕು. ತಾನು ಬೇರೆ ಎಂಬುದು ತಪ್ಪಿ, ಈ ಅಖಂಡ ವಿಶ್ವದಲ್ಲಿ ತಾನೊಂದು ಎಂಬ ಭಾವನೆಯು ರೂಢವಾಗಬೇಕು. ಎಲ್ಲದಕ್ಕಿಂತ ಹೆಚ್ಚಾಗಿ, ದೇವತೆಗಳಿಗೂ ಮಾನವರಿಗೂ ಸಂಬಂಧವನ್ನೇರ್ಪಡಿಸುವ ಕೊಂಡಿಯಾಗಬೇಕು. ಈ ಅಖಂಡ ವಿಶ್ವದ ಆಧಿಪತ್ಯವೆಲ್ಲ ಯಾವುದರ ಕೈಯಲ್ಲಿದೆಯೋ ಅದನ್ನು ಪದೇಪದೇ ಕಾಣುವ ಕಣ್ಣಿದ್ದವನಾಗಬೇಕು.' ಇದಿಷ್ಟನ್ನೂ ಸಾಧಿಸುವ ಮಂತ್ರವೊಂದು ಬೇಕು. ಎಲ್ಲರೂ ಆಶೀರ್ವಾದ ಮಾಡಿದ್ದಾರೆ. ತಮ್ಮ ತಮ್ಮ ತಪಸ್ಸನ್ನೆಲ್ಲಾ ಬೇಕಾದರೂ ಕೊಡಲು ಸಿದ್ಧರಾಗಿದ್ದಾರೆ."

"ನಾವು ದಂಪತಿಗಳು ಈಗಲೇ ನಮ್ಮ ತಪಸ್ಸನ್ನೆಲ್ಲಾ ಕೊಟ್ಟುಬಿಡುತ್ತೇವೆ. ತಪಸ್ಸು ಸಾಧಿಸದ ಕಾರ್ಯವಾವುದು ಇದೆ? ತಾವು ಅದಕ್ಕೆ ಕುಳಿತುಕೊಳ್ಳಿ. ನಮಗೆ ತಿಳಿಯದೆ ಹೋದರೆ, ಇತ್ತ ಬ್ರಹ್ಮಣಸ್ಪತಿ, ಅತ್ತ ಅಂಗಿರಸ್ಸು. ಆದರೆ ಇದು ಯಜ್ಞಯಾಗಗಳಿಂದ ಆಗತಕ್ಕದಲ್ಲವಾಗಿ ಅಂಗಿರಸ್ಸಿನಿಂದ ಫಲವಿಲ್ಲ. ಇನ್ನು ಉಳಿದಿರುವವನು ಬ್ರಹ್ಮಣಸ್ಪತಿ. ತಾವು ಬ್ರಹ್ಮಣಸ್ಪತಿಯ ದರ್ಶನ ಮಾಡಿದ್ದೀರಿ ತಾನೆ?"

ವಿಶ್ವಾಮಿತ್ರರು ತ್ರಿಶಂಕುವಿನ ಯಾಗದಲ್ಲಿ ತಾವು ಮತ್ತೊಂದು ಸ್ವರ್ಗವನ್ನು ರಚಿಸಬೇಕೆಂದು ಪ್ರಯತ್ನಪಟ್ಟಾಗ ಸ್ವಯಂ ಬೃಹಸ್ಪತಿಯೇ ಬಂದಿದ್ದು ತಮ್ಮನ್ನು ತಡೆದುದನ್ನು ಹೇಳಿದರು.

"ಸರಿ. ಮತ್ತೆ, ತಾವು ಆರಂಭಿಸಿ. ಇನ್ನು ಸ್ಥಳ. ಅದನ್ನು ಈಕೆಯು ಗೊತ್ತು ಮಾಡಿಟ್ಟಿದ್ದಾಳೆ. ಈಕೆಯೇ ಇಲ್ಲಿ ಕಾವೇರಿಯಾಗಿ ಹರಿಯುತ್ತಾ ಲೋಕೋಪಕಾರ ಮಾಡುತ್ತಿರುವುದು ತಮಗೆ ಗೊತ್ತಿದೆಯಲ್ಲ. ಆ ಪರಮ ಪಾವನೆಯಾದ ಈ ನದಿಯ ತೀರದಲ್ಲಿ ಒಂದು ರಹಸ್ಯ ಕ್ಷೇತ್ರವಿದೆ. ಅಲ್ಲಿಗೆ ಬ್ರಹ್ಮಣಸ್ಪತಿಯು ಪ್ರತಿ ಶುಕ್ಲಪಕ್ಷದಲ್ಲಿಯೂ ರಹಸ್ಯವಾಗಿ ಬಂದು ಒಂದು ಹಗಲಿದ್ದು ಹೋಗುವನು. ಅಲ್ಲಿ ತಾವು ಆಶ್ರಮವನ್ನು ಮಾಡಿಕೊಂಡು ತಪಸ್ಸಿಗೆ ನಿಲ್ಲಿ. ಆ ಕ್ಷೇತ್ರರಹಸ್ಯವನ್ನು ಬಲ್ಲವಳು ಈಕೆ. ಕೇಳಿ."

ಲೋಪಾಮುದ್ರಾದೇವಿಯು ಹೇಳಿದಳು : "ಈ ನದಿಯ ತೀರದಲ್ಲಿ ಆಗಾಗ ದೇವತೆಗಳು ಬಂದು ಹೋಗುವ ಗುರುತುಗಳು ಸಿಕ್ಕುತ್ತಲೇ ಇರುತ್ತವೆ. ಆದರೆ ಜಡಭಾವವನ್ನು ವಹಿಸಿ ಜಲವಾಗಿ ಹರಿಯುವಾಗ ಜಡಧರ್ಮವೇ ಇರಬೇಕಾಗಿ ನಾನು ಅದನ್ನು ಗಮನಿಸುವಂತಿಲ್ಲ. ಆದರೂ ನಾನು ಎಂಬ ಅಭಿಮಾನವು ತಪ್ಪುವುದೆಲ್ಲಿ? ಅದರಿಂದ ನಾವು ಆಗಾಗ ಬಂದು ಈ ನದಿಯ ತೀರದಲ್ಲಿ ಇದ್ದು ಹೋಗುವುದುಂಟು. ಒಂದು ಸಲ ಹೀಗೆ ಯಾತ್ರೆಯಾಗಿ ಬಂದಾಗ ಒಂದು ಕ್ಷೇತ್ರದಲ್ಲಿ ಒಂದೆರಡು ವರ್ಷ ಇರುವುದು ಎನ್ನಿಸಿತು. ಹಾಗೆ ಇರುವಾಗ ನದಿಯಲ್ಲಿರುವ ಒಂದು ಬಂಡೆಯಮೇಲೆ ತಿಂಗಳಿಗೊಂದುಸಲ ಮಂಜು ಕಟ್ಟುವುದು ಕಾಣಿಸಿತು. ಅದೂ ಸರಿಯಾಗಿ ಪಂಚಮಿಯ ದಿನ. ಇನ್ನೊಂದು ಸಲ ಪರೀಕ್ಷೆಮಾಡಿ ನೋಡಲು ಮಂಜುಕಟ್ಟುತ್ತಿದ್ದಹಾಗೆಯೇ ಬೆಳ್ಳಿಯ

ಬೊಂಬೆಯಂತಿರುವವರು ಒಬ್ಬರು ಬಂದು ನದಿಯಲ್ಲಿ ಸ್ನಾನಮಾಡಿ ಹೋಗಿ ಆ ಬಂಡೆಯಮೇಲೆ ಕುಳಿತುಕೊಂಡು ಆಹ್ನೀಕಗಳನ್ನೆಲ್ಲ ಮುಗಿಸಿಕೊಂಡರು. ಆ ವೇಳೆಗೆ ಸಂಜೆಯಾಯಿತು. ಸಂಧ್ಯಾಕಾಲದಲ್ಲಿ ಶಿವಪೂಜೆಯನ್ನು ಮಾಡಿ ಬಂದಿದ್ದವರಿಗೆಲ್ಲ ಪ್ರಸಾದವನ್ನು ಕೊಟ್ಟು ಹೊರಟುಹೋದರು. ಇದು ದೇವ ರಹಸ್ಯ. ಇದನ್ನು ಭೇದಿಸಬಹುದೋ ಕೂಡದೋ ಎಂದು ನಾನು ಯೋಚಿ ಸುತ್ತ ಬಂದು ಇವರಿಗೆ ಹೇಳಿದೆ. ಇವರೂ ಒಂದುಸಲ ಪರೀಕ್ಷೆಮಾಡಿ, ಮತ್ತೊಂದುಸಲ ಅವರು ಆಹ್ನೀಕದಲ್ಲಿರುವಾಗ ಮಧ್ಯಾಹ್ನದ ವೇಳೆಗೆ ಸರಿ ಯಾಗಿ ನದಿಯಲ್ಲಿ ಸ್ನಾನಾರ್ಥವಾಗಿ ಇಳಿದು ಅಘಮರ್ಷಣಸೂಕ್ತಗಳನ್ನು ಗಟ್ಟಿಯಾಗಿ ಪಾರಾಯಣ ಮಾಡುವುದಕ್ಕೆ ಆರಂಭಿಸಿದರು. ಆಗ ನಾನೂ ಒಂದು ಪೊದೆಯ ಮರೆಯಲ್ಲಿ ಏನಾಗುವುದೋ ನೋಡೋಣ ಎಂದು ಅವಿತು ಕುಳಿತಿದ್ದೆ. ಅವರು ಕಣ್ಣು ಬಿಟ್ಟು ನೋಡಿ, ಇವರಿಗೆ ಕಾಣಿಸಿಕೊಂಡು ಸ್ಥೂಲರೂಪದಲ್ಲಿಯೇ ಆಶ್ರಮದವರೆಗೂ ಬಂದು ಆತಿಥ್ಯವನ್ನು ಸ್ವೀಕರಿಸಿ ಹೋದರು."

"ಹೀಗೆ ಅವರ ಸನ್ನಿಧಾನದಿಂದ ಪವಿತ್ರವಾದ ಆ ಕ್ಷೇತ್ರದಲ್ಲಿ ತಾವು ಇದ್ದರೆ, ಮಹಾತಪಸ್ವಿಗಳಾದ ತಮಗೆ ಅವರ ದರ್ಶನವಾಗುವುದರಲ್ಲಿ ಏನೂ ಸಂದೇಹವಿಲ್ಲ. ದೇವಗುರುಗಳಾದ ಅವರಿಗೆ ನಮಗೆಲ್ಲ ಈ ಯೋಚನೆಯು ಏಕೆ ಬಂದಿತು ಎಂಬುದರ ಕಾರಣವು ತಿಳಿಯದಿರುವುದಿಲ್ಲ. ಅವರ ಸಲಹೆ ಯಂತೆ ಮುಂದಿನ ಕೆಲಸವೆಲ್ಲವನ್ನೂ ಮಾಡುವಿರಂತೆ."

ವಿಶ್ವಾಮಿತ್ರರು ಒಪ್ಪಿದರು. ಅಗಸ್ತ್ಯ ದಂಪತಿಗಳು ಬಂದು ಆ ಕ್ಷೇತ್ರ ವನ್ನು ತೋರಿಸಿದರು. ಅಲ್ಲಿ ಸಣ್ಣ ಪರ್ಣಶಾಲೆಯು ರಚಿತವಾಯಿತು. ವಿಶ್ವಾ ಮಿತ್ರರು ಆ ಕ್ಷೇತ್ರವನ್ನು ಅರ್ಚಿಸಿ, ಒಂದು ಹೋಮಮಾಡಿ ಕ್ಷೇತ್ರಪತಿಯನ್ನು ಒಲಿಸಿಕೊಂಡು, ಆಶ್ರಮ ರಕ್ಷಣದ ಭಾರವನ್ನು ಭೈರವನಿಗೆ ವಹಿಸಿ ತಾವು ತಪಸ್ಸಿಗೆ ಕುಳಿತರು.

ಈ ವೇಳೆಯಾಗಿ ಸರಿಯಾಗಿ ದೇವಲೋಕದಲ್ಲಿ ದೇವಗುರುಗಳು ಧ್ಯಾನ ದಲ್ಲಿದ್ದರು. ಅವರಿಗೆ ಹಠಾತ್ತಾಗಿ ಧ್ಯಾನವು ವಿಕ್ಷಿಪ್ತವಾಗಿ ಒಂದು ಕನಸು ಕಂಡಿತ್ತು. ತಾವು ಒಂದು ಸೊಗಸಾದ ಚಿನ್ನದ ಬಟ್ಟಿಯ ಮೇಲೆ ಕುಳಿ ತಿದ್ದಾರೆ. ಯಾವನೋ ಒಬ್ಬ ಹುಡುಗನು ಅದನ್ನು ಎಳೆಯುತ್ತಾನೆ. ಇವರು

'ಎಲೆಲಾ ! ನಿನಗೆ ಬೇಕಾದರೆ ಬೇರೆ ಕೊಡುತ್ತೇನೋ? ಇದು ಇಂದ್ರನದು.' ಎನ್ನುತ್ತಾರೆ. ಅವನು 'ನನಗೆ ಇದು ಬೇಕು ತಾ ಎಂದು ಅವರು ಹೇಳಿದ್ದಾರೆ. ತೆಗೆದುಕೊಂಡು ಹೋಗದೆ ಹೋದರೆ ಅವರು ಬಿಡುವುದಿಲ್ಲ' ಎನ್ನುತ್ತಾನೆ. ಅವರು ಒಳ್ಳೆಯ ಮೊಂಡ ಗಂಟು ಬಿದ್ದನಲ್ಲಾ ಎಂದುಕೊಂಡು, 'ಬಾಪ್ಪ, ಇಂದ್ರನಿಗೆ ಹೇಳಿ ಕೊಡಿಸಿಕೊಡುತ್ತೇನೆ' ಎಂದು ಇಂದ್ರನ ಬಳಿಗೆ ಕರೆದುಕೊಂಡು ಹೋಗುತ್ತಾರೆ. ಅವನು 'ಇಂತಹ ಬಟ್ಟೆ ನಮ್ಮೂರಿನಲ್ಲಿಯೇ ಎಲ್ಲಿಯೂ ಇಲ್ಲ. ಇದ್ದರೆ ಇದು ಪೂಷನದು ಇರಬೇಕು. ಆತನು ಎಲ್ಲೆಲ್ಲಿಂದಲೋ ಏನೇನಾದರೂ ತಂದಿಟ್ಟಿರುತ್ತಾನೆ' ಎನ್ನುತ್ತಾನೆ. ಇಬ್ಬರೂ ಅಲ್ಲಿಗೆ ಹೋಗುತ್ತಿದ್ದಾರೆ. ಕನಸು ಅಲ್ಲಿಗೇ ಕರಗಿಹೋಯಿತು.

ಅವರು ಆ ಕನಸಿನ ಅರ್ಥವೇನು ನೋಡಬೇಕು ಎನ್ನಿಸಿದರೂ ಏನೋ ಮನಸ್ಸಿಗೆ ಬೇಡವಾಗಿ 'ಇನ್ನೊಂದು ದಿನ ನೋಡೋಣ. ಏನವಸರ?' ಎಂದುಕೊಂಡರು.

---

## ಅರವತ್ತೆಂಟನೆಯ ತರಂಗ

ವಿಶ್ವಾಮಿತ್ರರು ತಪಸ್ಸಿಗೆ ಕುಳಿತರು. ಬೆಳಗಾಗಿನ ಬ್ರಾಹ್ಮೀ ಮುಹೂರ್ತಕ್ಕೆ ಸರಿಯಾಗಿ ಶ್ವಾಸನಿರೋಧಮಾಡಿ ಪ್ರಾಣದೇವನ ದರ್ಶನಮಾಡಿ ಆತನ ಅಪ್ಪಣೆಯನ್ನು ಪಡೆದು ಪ್ರಾಣಾಗ್ನಿಹೋತ್ರವನ್ನು ಆರಂಭಿಸಿದರು. ಪ್ರಾಣ ಪಂಚಕಗಳೂ ಅಗ್ನಿಗಳಾಗಿ ಕುಳಿತು ಉರಿಯುತ್ತಿವೆ.

ಕ್ರಮವಾಗಿ ಜ್ವಾಲೆಗಳು ದೇಹದಿಂದ ಹೊರಹೊಮ್ಮಲು ಆರಂಭವಾಯಿತು. ಶಾಂತವಾಗಿ ಹಿತವಾಗಿದ್ದರೂ ಇತರರಿಗೆ ಸಹಿಸಲು ಅಸಾಧ್ಯವಾಗಿ ಆ ಜ್ವಾಲಾಮಂಡಲವು ನದಿಯ ತೀರದಿಂದ ನದಿಯ ಜಲಕ್ಕೂ ವ್ಯಾಪಿಸುವಂತಾಗಲು, ಭಗವಾನರು, ಪ್ರಾಣದೇವನನ್ನು ಅನುಸಂಧಾನಮಾಡಿ ಆತನಿಗೆ ಈ ವಿಷಯವನ್ನು ನಿವೇದಿಸಿದರು: 'ಭಗವಾನ್, ನನ್ನ ಹೆಸರು ವಿಶ್ವಾಮಿತ್ರ. ನಿನ್ನ ದಯೆಯಿಂದ ನನ್ನ ಹೆಸರು ಸಾರ್ಥಕವಾಗಲಿ. ಈಗ ನಡೆಯುತ್ತಿರುವ ಅಗ್ನಿಹೋತ್ರದ ಫಲವಾಗಿ ಈ ದೇಹಗಳಿಂದ ಜ್ವಾಲೆಗಳು ಏಳುತ್ತಿವೆ.

ಈ ಜ್ವಾಲೆಗಳು ನನಗೆ ಹಿತವಾಗಿವೆ. ನನಗೆ ಶಾಂತವಾಗಿಯೇ ಕಾಣುತ್ತಿವೆ. ಆದರೂ ನೀರು ಕಾಯುತ್ತದೆ. ಕಾದ ನೀರಿನಿಂದ ಈಗ ಜಲಚರಗಳಿಗೆ ಅಪ್ರಿಯ ವಾದಂತೆಯೇ. ಈ ಮುಂದೆ ಖೇಚರ ಭೂಚರಗಳಿಗೂ ಅಪ್ರಿಯವಾದೀತು. ವಿಶ್ವಕ್ಕೇ ಬ್ರಾಹ್ಮಣ್ಯವನ್ನು ಸಂಪಾದಿಸಲು ಹೊರಟಿರುವ ನನ್ನಿಂದ ಮೊದಲು ಆಗುವ ಉಪಕಾರವೆಂದರೆ ಇತರರಿಗೆ ಅಪ್ರಿಯವೇ ? ಆದುದರಿಂದ ಇದನ್ನು ತಪ್ಪಿಸಬೇಕು.

ಪ್ರಾಣದೇವನು ನಕ್ಕನು. "ಭಗವಾನ್ ವಿಶ್ವಾಮಿತ್ರರು ಸುಡದಿದ್ದ ಬೆಂಕಿ ಯನ್ನು ಹುಡುಕುತ್ತಿದ್ದಾರೆ. ಆಗಲಿ. ಅದಕ್ಕೂ ದಾರಿಯಿದೆ. ಇನ್ನು ಮೇಲೆ ಪ್ರಾಣಾಗ್ನಿಪಂಚಕವನ್ನು ಪಂಚಕವಾಗಿ ಧ್ಯಾನಿಸದೆ, ಏಕಾಂಡವಾಗಿ ಧ್ಯಾನ ಮಾಡಿ. ಹಾಗೆ ಏಕಾಂಡವಾಗಿ ಮಾಡುವ ಧ್ಯಾನವು ಸತ್ತ್ವದಲ್ಲಿ ಪರಿಣಾಮ ವಾಗಿ ಸರ್ವಹಿತವಾಗುವುದು" ಎಂದು ಅಪ್ಪಣೆಯಾಯಿತು.

ಭಗವಾನ್ ವಿಶ್ವಾಮಿತ್ರರು ಏಕಾಂಡ ಧ್ಯಾನವನ್ನು ಆರಂಭಿಸಿದರು. ಮೊದಲು ಪ್ರಾಣದೇವನನ್ನು ಸಾಕ್ಷಾತ್ಕರಿಸಿಕೊಂಡು, ಆತನಪ್ಪಣೆಯಿಂದ ಪಂಚಕವನ್ನು ಕಂಡು ಅವರನ್ನು ಯಥಾವಿಧಿಯಾಗಿ ಅರ್ಚಿಸಿ, ಅವರ ಅಪ್ಪಣೆ ಯಿಂದ ಅವರು ಐವರನ್ನೂ ಸಮಷ್ಟಿಯಾಗಿ ಅರ್ಚಿಸಿದರು. ಐದು ಅಗ್ನಿಗಳೂ ಒಟ್ಟಾಗಿ ಒಂದೇ ಅಗ್ನಿಯಾಯಿತು. ಆ ಅಗ್ನಿಯ ಧ್ಯಾನದಲ್ಲಿ ವಿಶ್ವಾಮಿತ್ರರು ಬಾಹ್ಯಪ್ರಪಂಚವನ್ನು ಮರೆತು ಕುಳಿತರು.

ಅದೆಷ್ಟೋ ಹೊತ್ತು ಹೀಗೆ ಏಕಾಂತವಾಗಿ ಕುಳಿತಿರಲು ಹಠಾತ್ತಾಗಿ ಅವರನ್ನು ಯಾರೋ ಎಬ್ಬಿಸಿದಂತಾಯಿತು. ಕಣ್ಣುಬಿಟ್ಟು ನೋಡಿದರೆ ಎದು ರಿಗೆ ಒಬ್ಬರು ವೃದ್ಧರಲ್ಲದಿದ್ದರೂ ವೃದ್ಧರ ತೇಜಸ್ಸನ್ನುಳ್ಳವರು ಎದುರಿಗೆ ನಿಂತಿ ದ್ದಾರೆ. ದೇಹವೆಲ್ಲವೂ ಊದಿದ ಬೆಳ್ಳಿಯಿಂದ ಮಾಡಿ ಹೊಳಪಿಕ್ಕಿದಂತಿದೆ. ಕಣ್ಣುಗಳೆರಡೂ ಎರಡು ಬಿಳಿಯ ವಜ್ರದ ಹಲಗೆಗಳಲ್ಲಿ ಎರಡು ಗೋಮೇಧಿಕ ಗಳನ್ನಿಟ್ಟಂತಿದೆ. ಬೆಟ್ಟದ ಶಿಖರದಲ್ಲಿರುವ ಸರೋವರದ ತಿಳಿಯೂ ಪ್ರಸನ್ನ ತೆಯೂ ಗಾಂಭೀರ್ಯವೂ ಆ ಕಣ್ಣುಗಳಲ್ಲಿ ಮನೆಮಾಡಿಕೊಂಡಿದ್ದು, ನೋಡಿ ದವರಿಗೆಲ್ಲ ಅನುಗ್ರಹಮಾಡುವ ಅನುಗ್ರಹಮೂರ್ತಿಯಂತಿವೆ. ಎಲ್ಲಿಯೋ ನೋಡಿರುವಂತಿದೆ. ವಿಶ್ವಾಮಿತ್ರರಿಗೆ ನೋಡುತ್ತಿದ್ದಹಾಗೆಯೇ ಇದು ದಿವ್ಯ ದೇಹ ಎಂದು ತಿಳಿಯಿತು. ಯಾರು ? ಏನು ? ಎಂಬ ಆ ವಿಚಾರ ಆಮೇಲಾ

ಗಲಿ ಎಂದುಕೊಂಡು ತಕ್ಷಣವೇ ಮಾನಸ ಪೂಜೆಯೊಪ್ಪಿಸಿದರು. ಈ ಸಲದ ವಿಚಿತ್ರವೆಂದರೆ ಇವರು ಸಂಕಲ್ಪಮಾಡಿ ಬಾಯಿಂದ ಮಾತು ಹೊರಡುವ ವೇಳೆ ಗಾಗಲೇ ಅಲ್ಲಿ ಆ ಕಾರ್ಯಕ್ಕೆ ಬೇಕಾದ ಸಾಧನಗಳೆಲ್ಲ ಒದಗಿ ಆಯಾ ಕಾರ್ಯವಾಗು ವುದನ್ನು ಕಣ್ಣು ನೋಡುತ್ತದೆ.

ಪೂಜೆಯನ್ನೊಪ್ಪಿಸಿಕೊಂಡು, ಬಂದವರು "ಭಗವಾನರಿಗೆ ಆಯಾಸ ವಾಗಿರಬೇಕು. ಲೋಕಾನುಗ್ರಹ ಮಾಡಬೇಕೆಂದವರಿಗೆ ಆಯಾಸ ಎಂದಿಗೂ ತಪ್ಪಿದ್ದಲ್ಲ" ಎಂದು ಆರಂಭಿಸಿದರು.

ವಿಶ್ವಾಮಿತ್ರರಿಗೆ ಈತನೇ ಕ್ಷೇತ್ರಪತಿಯಾದ ಬೃಹಸ್ಪತಿಯಿರಬೇಕು ಎನ್ನಿ ಸಿತು. ಅಲ್ಲದೆ ಹಿಂದೊಮ್ಮೆ ನೋಡಿದ್ದ ನೆನೆಪು ಇದ್ದೇ ಇರಬೇಕು ಎಂದೂ ಹೇಳಿತು. ಮಾತನಾಡಿಸಿದರು: "ದೇವಗುರುಗಳಿಗೆ ಸುಖಾಗಮನವೇ?"

ಬೃಹಸ್ಪತಿಯು ನಗುತ್ತಾ ಹೇಳಿದರು: "ಭಲೆ, ವಿಶ್ವಾಮಿತ್ರ, ಜಾಡೆ ಯನ್ನು ಹಿಡಿಯಬಲ್ಲ ಜಾಣನಾದೆ. ನೀನೇನೋ ಕಣ್ಮುಚ್ಚಿ ಕುಳಿತಿರುವೆನೆಂದು ಕೊಂಡಿರುವೆ. ನೋಡಿದೆಯಾ ನಿನ್ನ ಪ್ರತಾಪವನ್ನು?"

ದೇವಗುರುವು ತಿರುಗಿಸಿದ ಕೈಯೊಡನೆ ತಿರುಗಿದ ಕಣ್ಣು ತನ್ನಂತೆಯೇ ಇರುವ ನೂರಾರು ಪ್ರತಿಕೃತಿಗಳು ತನ್ನಂತೆಯೇ ತಪೋನಿಷ್ಠರಾಗಿ ಕುಳಿತಿರುವು ದನ್ನು ಕಂಡಿತು. ಒಂದೇ ಗರಿಕೆಯ ಹುಲ್ಲು ಸರ್ವತೋಮುಖವಾಗಿ ಹೊರಟು ಹೋದ ಹೋದ ಕಡೆಯಲ್ಲೆಲ್ಲಾ ಬೇರು ಬಿಟ್ಟುಕೊಂಡು ಒಂದೊಂದು ಮೂಲ ವಾಗುವಂತೆ, ಕೊನ್ನಾರಿ ಗೆಡ್ಡೆಗಳು, ಬಜೆಯ ಬೇರುಗಳು ಹಬ್ಬಿಕೊಂಡು ಹೋಗಿ ಗಂಟೆಗೊಂದು ಗೆಡ್ಡೆಯಾಗುವಂತೆ, ಸುತ್ತಮುತ್ತಲೂ ತನ್ನ ಪ್ರಾಣವೇ ಹರಿದು ಹೋಗಿ ಅಲ್ಲೊಂದು ಪ್ರತಿಕೃತಿಯಾಗಿ ಕುಳಿತಿರುವುದನ್ನು ಕಂಡು ವಿಶ್ವಾ ಮಿತ್ರರಿಗೆ ಅಪಾರವಾದ ಆಶ್ಚರ್ಯವಾಗಿ ಹೋಯಿತು.

ವಿಸ್ಮಯಾವಿಷ್ಟರಾಗಿ ಮೌನವಾಗಿ ಹೋದ ಭಗವಾನರನ್ನು ದೇವ ಗುರುಗಳೇ ಮತ್ತೆ ಮಾತನಾಡಿಸಿದರು: "ಸುಖಾಗಮನವೇ? ಎಂದು ಕೇಳು ತ್ತಿರುವೆ. ನಾನು ಪ್ರತಿ ಶುದ್ಧ ಪಂಚಮಿಯೂ ಇಲ್ಲಿಗೆ ಬಂದು ಹೋಗುವ ವಾಡಿಕೆ. ಹೋದ ಸಲವೇ ನಾನಿದನ್ನು ಗಮನಿಸಬೇಕಾಗಿತ್ತು; ಇರಲಿ ಎಂದು ಕೊಂಡು ಹೊರಟು ಹೋದೆ. ಈಗ, ಏನು ಈ ಕ್ಷೇತ್ರವೆಲ್ಲ ನಿನ್ನದೇ ಆಗಿ ಹೋಗಿದೆ. ಇತರರು ಬರುವುದಕ್ಕೂ ಅವಕಾಶವಿಲ್ಲದಂತೆ ನಿನ್ನ ಪ್ರಾಣಶಕ್ತಿ

ಯನ್ನೂ ವ್ಯೂಹಮಾಡಿಕೊಂಡು ಕುಳಿತಿದ್ದೀಯಲ್ಲ? ಮಿಕ್ಕವರು ಈ ಪುಣ್ಯ ನದಿಯ ಸ್ನಾನಕ್ಕೂ ಬರಬಾರದೇನು ?"

ವಿಶ್ವಾಮಿತ್ರರು ದೇವಗುರುಗಳು ತೋರಿಸಿದ ದೃಶ್ಯ ಆಡಿದ ಮಾತು ಎರಡ ರಿಂದಲೂ ಮುಗ್ಧರಾಗಿ, "ದೇವ, ಎಷ್ಟಾಗಲೀ ಮಾನವರು ಅಲ್ಪಬುದ್ಧಿಗಳು. ಇಷ್ಟವಿಲ್ಲದೆ, ಸಂಕಲ್ಪವಿಲ್ಲದೆ ಅಪರಾಧಮಾಡುವ ಜಾತಿ ಇದು. ಕ್ಷಮಿಸಬೇಕು" ಎಂದು ಕೈಮುಗಿದರು.

"ಹಾಗಲ್ಲ. ಅಪರಾಧ ಮಾಡುವುದಕ್ಕೆ ಶಕ್ತಿಯಿರುವುದರಿಂದಲೇ ನಿಮ್ಮಿಂದ ಉಪಕಾರವೂ ಆಗುವುದು. ಮನುಷ್ಯನು ಸ್ವತಂತ್ರನೆಂದುಕೊಂಡು ಸ್ವೇಚ್ಛೆ ಯಾಗಿ ಹೊರಟರೆ ಆಗ ಅಪರಾಧ. ಹಿಂದು ಮುಂದು ನೋಡಿ ಕಾರ್ಯಪರ ನಾದರೆ, ಸ್ವಸಂಕಲ್ಪಕ್ಕಿಂತ ಹೆಚ್ಚಾಗಿ, ಆಜ್ಞಾಪರನಾದಾಗ ಅವನಿಂದ ಲೋಕಕ್ಕೆ ಉಪಕಾರ. ನಿನ್ನ ಸಂದೇಹವು ತಿಳಿಯಿತು. ಪ್ರೇರಕರು ನಾವೇ ! ದೇವತೆ ಗಳು ಪ್ರೇರಿಸದಿದ್ದರೆ ಯಾವ ಕಾರ್ಯವೂ ನಡೆಯುವುದಿಲ್ಲ. ಆದರೂ ನಮ್ಮದು ಕಾಣದ ಕೈ. ಅದಿರಲಿ, ವಿಶ್ವಾಮಿತ್ರ.. ನೀನು ನನ್ನನ್ನು ಮೊದಲು ಈ ನಿನ್ನ ಪ್ರಾಣಶಕ್ತಿ ವ್ಯೂಹದಿಂದ ಪಾರುಮಾಡು. ಇದು ನನ್ನನ್ನು ಹಿಡಿದು ನಿಶ್ಚೇಷ್ಟನನ್ನು ಮಾಡಿದೆ. ನಾನು ನಿನ್ನನ್ನು ಇದಕ್ಕಾಗಿಯೇ ಎಬ್ಬಿಸಿದುದು."

"ಅದನ್ನೂ ತಾವೇ ಹೇಳಿ ಕೊಡಬೇಕುತಾನೇ ?"

"ಹೌದು, ಈಗ ಪ್ರಾಣಧ್ಯಾನ ಮಾಡುತ್ತಿರುವೆಯಲ್ಲ. ಅದು ನಿನ್ನ ಹೃದಯದಲ್ಲಿ ನಡೆಯುತ್ತಿರುವುದು. ಅದು ಮುಖ್ಯಪ್ರಾಣ ಧ್ಯಾನ. ಈ ಮುಖ್ಯ ಪ್ರಾಣನ ಧ್ಯಾನದಿಂದಲೇ ನಿನಗೆ ಹೀಗೆ ಪ್ರತಿಸೃಷ್ಟಿಕರ್ತನಾಗುವ ಯೋಗ್ಯತೆ ಬಂದುದು. ಆದರೆ ಇದು, ನೀನು ಹಿಂದೆ ಮಾಡಬೇಕು ಎಂದುಕೊಂಡಿದ್ದಂತೆ ಸಂಕಲ್ಪಪ್ರಭಾವವಲ್ಲ. ಪ್ರಾಣವು ಬಲಿತು ಹೊರಬಿದ್ದು ಭೂತಪಂಚಕಗಳ ತನ್ಮಾತ್ರಕಗಳನ್ನು ಸುತ್ತಿನಿಂದ ಹೀರಿಕೊಂಡು ಬೇರೆ ಮೂರ್ತಿಗಳಾಗಿರುವುದು. ಈಗ ಮುಖ್ಯಪ್ರಾಣ ಧ್ಯಾನದಿಂದ ಮುಂದೆ ಹೋಗಿ ಮೂಲಪ್ರಾಣ ಧ್ಯಾನ ವನ್ನು ಮಾಡು. ಆಗ, ಈ ಪ್ರಾಣ ವಿಜೃಂಭಣವು ಉಪಶಾಂತವಾಗುವುದು. ನನಗೂ ಬಿಡುಗಡೆಯಾಗುವುದು."

ವಿಶ್ವಾಮಿತ್ರರು ಮತ್ತೆ ಧ್ಯಾನಾರೂಢರಾದರು. ಪ್ರಾಣದೇವನನ್ನು ಸಾಕ್ಷಾತ್ಕರಿಸಿಕೊಂಡು ದೇವಗುರುವಿನ ಅಪ್ಪಣೆಯನ್ನು ತಿಳಿಸಿದರು. ಪ್ರಾಣ

ದೇವನು ನಗುತ್ತಾ ಹೇಳಿದನು: "ಹೀಗಾಗುವುದೆಂದು ನನಗೆ ತಿಳಿದಿತ್ತು. ದೇವ ಗುರುಗಳೇ ಬಂದು ಹೇಳಿದುದು ಬಲು ಸೊಗಸಾಯಿತು. ನಮ್ಮ ಮುಂದಿನ ಕೆಲಸವೆಲ್ಲ ಸುಮುಖವಾಯಿತು. ಈಗ ಮೂಲಪ್ರಾಣನನ್ನು ಧ್ಯಾನಿಸು. ಆದರೆ ಒಂದು ಎಚ್ಚರಿಕೆ. ದೇಹಾದ್ಯಂತವೂ ಧ್ಯಾನವಿರಲಿ. ಹೃದಯದ ಸುತ್ತಿನ ನೂರೊಂದು ನಾಡಿಗಳಲ್ಲಿ ನನ್ನನ್ನು ಧ್ಯಾನಿಸುತ್ತಿದ್ದೆ. ಈಗ, ದೇಹಾ ದ್ಯಂತವೂ ಧ್ಯಾನ ನಡೆಯಬೇಕು. ಅದಕ್ಕೆ ಮುಂಚೆ, ದೇವಗುರುವಿನಪ್ಪಣೆ ಯನ್ನು ಕೇಳು. ಆತನಿಂದ ಮತ್ತೊಂದು ರಹಸ್ಯವು ನಿನಗೆ ಸಿಕ್ಕದಿದ್ದರೆ ಈ ಮೂಲಪ್ರಾಣ ಧ್ಯಾನವು ನಡೆಯುವುದಿಲ್ಲ."

ಭಗವಾನರು ಪ್ರಾಣದೇವನ ಅಪ್ಪಣೆಯಾದುದನ್ನು ದೇವಗುರುಗಳಿಗೆ ತಿಳಿಸಿದನು. ಅವರು ನಗುತ್ತಾ "ಒಳ್ಳೆಯ ಕೆಲಸಮಾಡಿದ ಹಾಗಾಯಿತಲ್ಲ! ನಾನಾಗಿ ಬಂದು ಸಿಕ್ಕಿಕೊಂಡು ದೇವರಹಸ್ಯಗಳನ್ನು ನಿನಗೆ ತಿಳಿಸಬೇಕಾಗಿ ಬಂತಲ್ಲಾ!" ಎಂದರು.

"ದೇವ! ನಿಜ, ನೀನಾಗಿ ಬಂದು ಸಿಕ್ಕಿಕೊಂಡಲ್ಲ, ಕೃಪೆಮಾಡಿ ನಿಮ್ಮ ರಹಸ್ಯಗಳನ್ನೆಲ್ಲ ತಿಳಿಸಿಕೊಡದಿದ್ದರೆ ಇನ್ನಾರು ತಿಳಿಸಿಕೊಡುವವರು? ಬ್ರಹ್ಮರ್ಷಿ ಪರಿಷತ್ತು ಅಪ್ಪಣೆಮಾಡಿದೆ. ಅದಕ್ಕಾಗಿ ನಾನೂ ಬಂದಿದ್ದೇನೆ. ದೊಡ್ಡ ಮನಸ್ಸು ಮಾಡಬೇಕು."

"ಅಲ್ಲಯ್ಯಾ! ನಿನ್ನ ಮಾತು ಹೇಳುತ್ತಿರುವೆಯಲ್ಲದೆ ನಾನು ಸಿಕ್ಕಿಕೊಂಡಿ ರುವುದೇನು ವಿಚಾರಿಸಿದೆಯಾ? ಇಲ್ಲಿ ನೋಡು, ನಿನ್ನ ಪ್ರಾಣಶಕ್ತಿಯು ತಪೋ ಬಲದಿಂದ ಬಲಿತು ನಾಗಪಾಶಗಳಾಗಿ ನನ್ನನ್ನು ಹಿಡಿದುಬಿಟ್ಟಿದೆ. ಇದರಿಂದ ನನ್ನನ್ನು ಬಿಡಿಸೈಯ್ಯಾ ಎಂದರೆ ಪರಿಷತ್ತಿನ ಅಪ್ಪಣೆ ಎನ್ನುತ್ತಿದ್ದೀಯಲ್ಲಾ! ನ್ಯಾಯವೇ?"

"ಪ್ರಭುವೆ, ನೀನಾಗಿ ಬಿಡಿಸಿಕೊಳ್ಳುವ ಪ್ರಭುವು ನೀನೇ ಆಗಿ ನನ್ನೊಡನೆ ಆಟವಾಡುತ್ತಿರುವೆ. ಏನು ಮಾಡಬೇಕೋ ಅಪ್ಪಣೆಯಾಗಲಿ ಮಾಡುವುದಕ್ಕೆ ಸಿದ್ಧವಾಗಿದ್ದೇನೆ."

"ಆಗಲಿ, ವಿಶ್ವಾಮಿತ್ರ, ನೀನು ಹೆಸರಿನಿಂದ ಮಾತ್ರವಲ್ಲ, ಮನೋಭಾವ ದಿಂದಲೂ ವಿಶ್ವಕ್ಕೆ ಆಮಿತ್ರನಾಗಿರುವೆಯೆಂದು ನಿನಗೆ ಇದನ್ನು ಹೇಳುತ್ತಿರು ವೆನು. ಇದೋ ಈ ದೇವತೆಗಳ ರಹಸ್ಯವು ವಿಶ್ವಕ್ಕೇ ಆಯುತ್ತವನ್ನು ಕರುಣಿಸು

ವುದು. ಆದರೆ, ಎಚ್ಚರಿಕೆ, ಇದನ್ನು ಶುದ್ಧ ಮನಸ್ಕನೂ ಶುದ್ಧ ಬುದ್ಧಿಯವನೂ ಮಾತ್ರ ಜೀರ್ಣಿಸಿಕೊಳ್ಳಬಲ್ಲರು. ಇತರರಿಗೆ ಇದು ಕರಗತವೇ ಆಗಿದ್ದರೂ ಫಲಿಸುವುದಿಲ್ಲ : ಇದಕ್ಕೆ ನಿನ್ನ ಸಮ್ಮತಿಯುಂಟೋ ?"

"ದೇವ, ದೇವತೆಗಳು ತಮ್ಮ ರಹಸ್ಯವನ್ನು ಕಾಯ್ದುಕೊಳ್ಳಲು ಸಮರ್ಥರಾಗಿರುವಾಗ, ನನ್ನ ಸಮ್ಮತಿಯಿಂದ ಆಗಬೇಕಾದುದೇನು ?"

"ಅದೂ ಒಂದು ರಹಸ್ಯ, ವಿಶ್ವಾಮಿತ್ರ, ನೀನು ಈ ರಹಸ್ಯವನ್ನು ಭೇದಿಸುವ ಪರಮರ್ಷಿ. ನೀನು ಹೀಗೆ ನನ್ನೊಡನೆ ಈ ನಿಬಂಧನಕ್ಕೆ ಒಪ್ಪಿದ್ದರೆ, ಮುಂದೆ ಯಾರಾದರೂ ನಿನ್ನ ಮಂತ್ರವನ್ನು ದುರುಪಯೋಗ ಮಾಡಿದರೆ ಅದಕ್ಕೆ ಅವರೇ ಬದ್ಧರಾಗುವರು. ಹಾಗಿಲ್ಲದೆ ಬಂದ ವಿಮೋಚನೆ ಮಾಡಿ ಮಂತ್ರವನ್ನು ನೀನು ಪಡೆದರೆ, ಅದನ್ನು ಯಾರು ದುರುಪಯೋಗಪಡಿಸಿದರೂ ನೀನೇ ಅದಕ್ಕೆ ಹೊಣೆಯಾಗಬೇಕಾಗುವುದು. ಅಲ್ಲದೆ ಬಂಧವಿಮೋಚನೆಯಾಗದ ಮಂತ್ರವನ್ನು ನಾವು ಕೊಡುವುದಿಲ್ಲ. ಅದರಿಂದಲೇ ಉಪನಿಷತ್ತಿನಲ್ಲಿರುವ ಧರ್ಮಗಳಲ್ಲಿ ತನ್ನಲ್ಲಿ ಬರುವವರೆಗೂ ಉಪನಿಷತ್ತು ಸಿದ್ಧಿಯಾಗದಿರುವುದು."

"ಪ್ರಭು, ಸ್ಪಷ್ಟವಾಗಿ ಹೇಳುವ ಅನುಗ್ರಹಮಾಡು. ಈಗ ನೀವು ನನಗೆ ಕೃಪೆಮಾಡುವ ಮಂತ್ರವಾವುದು ? ಏನು ನಿಬಂಧನೆಯಿಂದ ಅದನ್ನು ಅನುಷ್ಠಾನ ಮಾಡಬೇಕು ? ಅದರ ಸಿದ್ಧಿಯೇನು ?"

"ವಿಶ್ವಾಮಿತ್ರ, ಪರಿಷತ್ತು ನಿನ್ನ ಮೂಲಕವಾಗಿ ಅಪೇಕ್ಷಿಸಿರುವುದು ಗಾಯತ್ರವೆಂಬ ಮಂತ್ರ. ಅದನ್ನು ಅನುಷ್ಠಾನಮಾಡಲು ವಿಶ್ವಮಿತ್ರನಾಗಿರಬೇಕು. ಅದು ಅವನನ್ನು ಬ್ರಾಹ್ಮಣನನ್ನು ಮಾಡುವುದು. ಬ್ರಾಹ್ಮಣನೆಂದರೇನು ? ಎನ್ನುವೆಯೇನು ? ಅದನ್ನೂ ಹೇಳುವೆನು ಕೇಳು. ಈಗ ಮನುಷ್ಯರೆಲ್ಲರೂ ಆಗ್ನೇಯರು. ಎಂದರೆ ಯಾವಾಗಲೂ ಆ ದೇಹಕ್ಕೆ ಅನ್ನಪಾನಾದಿ ಭೋಗಗಳು ಬೇಕೇಬೇಕು. ಜೊತೆಗೆ ಗಂಧರ್ವರೂ ಸೋಮನೂ ಮಾನುಷ ದೇಹದಲ್ಲಿ ಮನೆಮಾಡಿಕೊಂಡಿರುವರು. ಗಂಧರ್ವರಿಂದ ಕಾಮವೂ ಸೋಮನಿಂದ ಸಂಗ್ರಹವೂ ಪ್ರಬಲವಾಗಿರುವುವು. ಗಂಧರ್ವರೂ ಸೋಮನೂ ಅಗ್ನಿಯೂ ಕಟ್ಟಿದ ಮನೆ ಈ ಮನುಷ್ಯದೇಹ. ಇವರು ಮೂವರ ಪ್ರಭಾವವನ್ನು ಮೀರಿ, ಎಂದರೆ, ಕಾಮವನ್ನೂ ಸಂಗ್ರಹವನ್ನೂ ಭೋಗವನ್ನೂ ದಾಟಿದವನು ಬ್ರಾಹ್ಮಣನು. ಇದಕ್ಕಾಗಿ ಪ್ರಾಜಾಪತ್ಯ ವ್ರತರೂಪವಾಗಿರುವ ಬ್ರಹ್ಮ

ಚರ್ಯನೇ ನಿಬಂಧನವು. ಬ್ರಹ್ಮಚಾರಿಯಾಗಿ ಈ ಮಂತ್ರಾನುಷ್ಠಾನ ಮಾಡಿ ದವನನ್ನು ಗಂಧರ್ವ ಸೋಮ ಅಗ್ನಿಗಳು ತಮ್ಮ ಕಟ್ಟುಬಿಚ್ಚಿ ಅನುಗ್ರಹಮಾಡು ವರು. ಇದೇ ವೃದ್ಧಿಯು. ಇಂತಹವನು ಆತ್ಮೋದ್ಧಾರಮಾಡಿಕೊಂಡವನು. ಇವನಿಂದ ವಿಶ್ವದ ಉದ್ಧಾರವು. ಸಿದ್ಧವಾಗಿರುವೆಯಾ ?"

"ಆಗಬಹುದು."

"ಸರಿ. ನೀನು ವಿಶ್ವೋದ್ಧಾರ ಮಾಡುವವನು ಎಂದೇ ನಿನಗೆ ವಿಶ್ವಾ ಮಿತ್ರನೆಂದು ನಾವು ಹೆಸರಿಟ್ಟುದು. ಅದು ಈಗ ಸಾರ್ಥಕವಾಯಿತು........"

"ಆ ಹೆಸರು ನಾನೇ ಇಟ್ಟುಕೊಂಡುದಲ್ಲವೆ ?"

"ಭಗವನ್, ನೋಡಿದಿರಾ ? ದೇವತೆಗಳ ಕೈವಾಡವನ್ನು? ಅವರು ನಿಮ್ಮ ಮನಸ್ಸಿನ ಹಿಂದೆ ಇದ್ದು ಸೂತ್ರಧಾರಿಗಳಾಗಿ ಸೂತ್ರಗಳನ್ನು ಎಳೆಯುವರು. ನೀವು ಮನುಷ್ಯರು ಆ ಪ್ರೇರಣೆಯನ್ನು ಅರಿಯದೆ, ನೀವೇ ಸಂಕಲ್ಪಮಾಡ ಬಲ್ಲವರಿಗಿಂತ ಹೆಚ್ಚಾಗಿ ಕುಣಿಯುವಿರಿ. ಈಗ ನೋಡು, ವಸಿಷ್ಠರೇ ನಿನಗೆ ನೇರವಾಗಿ ಕಾವೇರೀ ತೀರದಲ್ಲಿ ತಪಸ್ಸುಮಾಡು ಎಂದೇಕೆ ಹೇಳಲಿಲ್ಲ ? ಅವ ರೇಕೆ ಭಗವಾನ್ ಅಗಸ್ತ್ಯರನ್ನು ಕಾಣು ಎಂದರು ? ಅವರು ಏಕೆ ನನ್ನನ್ನು ಕರೆದು ಈತನಿಗೆ ಬೇಕಾದುದನ್ನು ಕೊಡಿ ಎಂದು ಕೇಳಲಿಲ್ಲ ? ಏಕೆ ನನ್ನ ಕ್ಷೇತ್ರಕ್ಕೆ ನಿನ್ನನ್ನು ಕಳುಹಿಸಿದರು ? ನೀನೂ ಲೋಪಾಮುದ್ರಾ ಅಗಸ್ತ್ಯರೂ ಮಾತನಾಡಿಕೊಂಡ ದಿನವೇ ನಿನ್ನ ವಿಷಯವೆಲ್ಲ ನನ್ನ ಮನಸ್ಸಿಗೆ ಬಂತು. ನಿನ್ನಪ್ರಾಣಶಕ್ತಿಯ ವ್ಯೂಹದಲ್ಲಿ ನಾನು ಸಿಕ್ಕಿಕೊಂಡೆನಲ್ಲಾ, ಇದೂ ನಮ್ಮದೇ ಆಟ. ಇದೋ ನೋಡು, ನಾನೇ ಬಿಡಿಸಿಕೊಳ್ಳಬಲ್ಲೆ. ಆದರೆ ನಾನು ನಿನ್ನ ವ್ಯೂಹವನ್ನು ಮುರಿದರೆ ಮತ್ತೆ ನೀನು ವ್ಯೂಹವನ್ನು ಕಟ್ಟಲಾರೆ. ಅದಕ್ಕಾಗಿ, ನೀನೇ ಬಿಡಿಸು ಎನ್ನುತ್ತಿದ್ದೇನೆ. ಇದು ನಿನ್ನ ಕೈಯಲ್ಲಾಗುವುದಿಲ್ಲವೆಂದೂ ನನಗೆ ಗೊತ್ತು. ನೋಡು ಈಗ ಹೃದಯದ ಸುತ್ತಲಿರುವ ನೂರೊಂದು ನಾಡಿಗಳ ಧ್ಯಾನಮಾಡುತ್ತಿರುವೆ. ದೇಹಾದ್ಯಂತವೂ ಈ ಧ್ಯಾನ ನಡೆಯಲಿ. ಪೂಷನನ್ನು ಧ್ಯಾನಿಸು. ಪೂಷನ ಅನುಗ್ರಹದಿಂದ ದೇಹಾದ್ಯಂತವೂ ಇರುವ ನಾಡೀಚಕ್ರ ಗಳೆಲ್ಲ ಶುದ್ಧವಾಗಿ ಪ್ರಾಣಶಕ್ತಿಯನ್ನು ಧರಿಸಲು ಸಿದ್ಧವೂ ಶಕ್ತವೂ ಆಗುವುವು. ಹಾಗೆ ಶುದ್ಧವಾದ ನಾಡೀಮಂಡಲವು ನಿನ್ನ ಮಹಾಪ್ರಾಣ ಧ್ಯಾನದಿಂದ ಸೃಷ್ಟಿಯಾದ ಪ್ರಾಣಶಕ್ತಿಯನ್ನು ಧಾರಣಮಾಡಬಲ್ಲುದು. ಪ್ರಾಣಶಕ್ತಿಯನ್ನು

ಸೃಷ್ಟಿಸುವುದು ಮಹಾಪ್ರಾಣಧ್ಯಾನ. ಹಾಗೆ ಸೃಷ್ಟಿಯಾದ ಶಕ್ತಿಯನ್ನು ಹೊರಬಿಡದೆ ದೇಹದಲ್ಲಿಯೇ ಸಂಗ್ರಹಿಸಿ ಧಾರಣಮಾಡುವುದೇ ಮೂಲಪ್ರಾಣ ಧ್ಯಾನವು. ನೀನು ಆ ಮೂಲಪ್ರಾಣನನ್ನು ಹಿಡಿಯಬೇಕಾದರೆ ಪೂಷನ ಅನುಗ್ರಹ ಬೇಕು. ಇದೋ ನೋಡು, ಪೂಷನು ಬಂದಿರುವನು."

ವಿಶ್ವಾಮಿತ್ರರು ಪೂಷನ ದರ್ಶನಮಾಡಿದರು. ಹಿರಣ್ಯವರ್ಣದ ಕುದುರೆ ಗಳಂತಿರುವ ಆಡುಗಳನ್ನು ಕಟ್ಟಿರುವ ಹಿರಣ್ಮಯ ರಥದಲ್ಲಿ ಕುಳಿತಿರುವ ಕಪರ್ದಿ ಯಾದ ಆ ಮಹಾಪುರುಷನನ್ನು ಕಾಣುತ್ತಿದ್ದ ಹಾಗೆಯೇ ದೇಹಾದ್ಯಂತವೂ ನಾಡೀಚಕ್ರವೆಲ್ಲವೂ ಹಾದಿಬಿಟ್ಟಿತು. ಇನ್ನೂ ಪೂಷದೇವನ ಪೂಜೆಯು ಮುಗಿಯುತ್ತಿದ್ದ ಹಾಗೆಯೇ ಪ್ರತಿಕೃತಿಗಳೆಲ್ಲವೂ ಎಣ್ಣೆಯು ಮುಗಿದು ಆರಿ ಹೋಗುವ ದೀಪಗಳಂತೆ ಅಸ್ತಗಳಾದುವು. ವಿಶ್ವಾಮಿತ್ರರ ದೇಹದಲ್ಲಿ ಪ್ರಾಣ ಶಕ್ತಿಯ ಸಂಚಯುವಾದುದು ಅವರಿಗೆ ಚೆನ್ನಾಗಿ ಅರಿವಾಯಿತು. ಬೃಹಸ್ಪತಿಯ ಸೆರೆಯ ಸೆರೆಬಿಟ್ಟಿತು.

ಪೂಷನು ವಿಶ್ವಾಮಿತ್ರರನ್ನು ಕೃಪಾದೃಷ್ಟಿಯಿಂದ ನೋಡಿ "ಬ್ರಹ್ಮರ್ಷಿ ಗಳಿಗೆ ನನ್ನಿಂದ ಏನಾಗಬೇಕು?" ಎಂದು ಕೇಳಿದನು. ವಿನಯದಿಂದ ಅವರು ಬ್ರಹ್ಮರ್ಷಿ ಪರಿಷತ್ತಿನ ಕೋರಿಕೆಯನ್ನು ಈಡೇರಿಸಿ ಕೊಡಬೇಕೆಂದು ಪ್ರಾರ್ಥಿಸಿ ದರು. ಪೂಷನು ಸುಪ್ರಸನ್ನನಾಗಿ ಮಂದಹಾಸ ಸುಂದರವದನದಿಂದ ಹೇಳಿ ದನು: "ದೇವಗುರುಗಳು ಹೇಳಿದಂತೆ ಈ ವಿಚಾರದಲ್ಲಿ ಬಂಧವಿಮೋಚನ ಮಾಡಿ ಮಂತ್ರವನ್ನು ಕೊಡಲಾಗುವುದಿಲ್ಲ. ಇದಕ್ಕೆ ಒಪ್ಪಿಗೆಯೋ?"

"ಅದು ಕೊಡುವವರ ಇಷ್ಟ. ನೀವು ಕೊಡುವುದನ್ನು ನಿಮಗೆ ತೋರಿ ದಂತೆ ಕೊಡುವಿರಲ್ಲದೆ, ನಮಗೆ ತೋರಿದಂತೆ ಕೊಡುವುದೂ ಉಂಟೆ?"

"ಸರಿ. ಇಲ್ಲಿ ನೋಡು. ಈಗ ನಿನ್ನ ದೇಹವು ಪ್ರಾಣಕೋಶವಾಗಿದೆ. ಹೀಗೆ ಪ್ರಾಣಕೋಶವಾದರೆ, ನಿನಗೆ ಮೂಲಪ್ರಾಣನ ದರ್ಶನವಾಗುವುದು. ಆ ಮೂಲಪ್ರಾಣನು ದೇಹದೇಹದಲ್ಲಿಯೂ ಇರುವನು. ಆತನು ಬಂದು ಕುಳಿತುಕೊಳ್ಳುವವರೆಗೆ ಪ್ರಾಣಗರ್ಭದಲ್ಲಿ ದೇಹವು ಬೆಳೆಯುವುದೇ ಇಲ್ಲ. ಆತನು ಬರಬೇಕೆಂದು ಸಂಕಲ್ಪಮಾಡುತ್ತಿದ್ದ ಹಾಗೆಯೇ ಅಗ್ನಿಷೋಮ ಶಕ್ತಿ ಗಳು ಕವಲೊಡೆದು ಸ್ತ್ರೀಪುರುಷ ಗರ್ಭವನ್ನು ಸೇರಿ ಅಲ್ಲಿ ತಮ್ಮ ಕಾರ್ಯವನ್ನು ಆರಂಭಿಸುವುವು. ಬಾಹ್ಯದಲ್ಲಿ ಸಮಷ್ಟಿಸ್ವರೂಪನಾಗಿರುವ ಈತನೇ ಸವಿತೃ

ನಾಮಧೇಯದಿಂದ ಸೂರ್ಯನಲ್ಲಿ ನಿಂತು, ಸ್ಥಾವರ ಜಂಗಮಗಳಿಗೆಲ್ಲ ಆತ್ಮ ನಾಗಿರುವನು. ಆತನು ತನ್ನೊಳಗೆ ನಿಂತು ಎಲ್ಲವನ್ನೂ ನಡೆಸುತ್ತಿರುವುದನ್ನು ಕಂಡು ಆತನ ಇಚ್ಛೆಗೆ ತನ್ನನ್ನು ಒಪ್ಪಿಸಿಕೊಂಡವನು ಬ್ರಾಹ್ಮಣನಾಗುವನು. ಉದಯಾಸ್ತಗಳಲ್ಲಿ ನಡುಹಗಲಲ್ಲಿ ಸೂರ್ಯನಲ್ಲಿರುವ ಸಾವಿತ್ರಾಂಶವು ಪ್ರಕಟ ವಾಗುವುದು. ಅದನ್ನು ಗ್ರಹಿಸಿ ತನ್ನಲ್ಲಿ ತುಂಬಿಟ್ಟುಕೊಳ್ಳುವವನು ಬ್ರಾಹ್ಮ ಣನು. ನೋಡು. ನೆನಪಿರಲಿ, ಮೂರು ಸಂಧ್ಯೆಗಳಲ್ಲಿ ಗ್ರಹಣಮಾಡದೆ ಹೋದರೆ ಮತ್ತೆ ಗ್ರಹಣಮಾಡುವುದು ಕಷ್ಟವಾಗುವುದು. ಇಷ್ಟಕ್ಕೂ ಸಿದ್ಧ ನಾಗಿದ್ದೀಯಾ ?"

"ಆಗಬಹುದು."

"ಸರಿ. ನೋಡು. ಸೂರ್ಯಮಂಡಲ ಮಧ್ಯವರ್ತಿಯಾಗಿರುವ ಸವಿತೃ ದೇವನನ್ನು ಬಾಹ್ಯ ಚಕ್ಷುಸ್ಸಿನಿಂದ ನೋಡುತ್ತ, ಅಲ್ಲಿಂದ ಹೊರಡುವ ಆ ಹಿರ ಣ್ಮಯ ತೇಜಸ್ಸನ್ನು ನಿನ್ನ ಹೃದಯದಲ್ಲಿ, ತುಂಬಿಕೊಂಡು, ಅದು ದೇಹಾ ದ್ಯಂತವೂ ವ್ಯಾಪಿಸುವಂತೆ ಮಾಡು. ದೇಹದಲ್ಲಿರುವ ಅಂಗಾಂಗಗಳು ಮಾತ್ರ ವಲ್ಲ: ರೋಮಕೂಪಗಳಲ್ಲೆಲ್ಲಾ ಈ ತೇಜಸ್ಸು ತುಂಬಲಿ. ಅಲ್ಲಿ ನಡೆಯು ತ್ತಿರುವ ಕಾರ್ಯಗಳೆಲ್ಲ ಈ ತೇಜಸ್ಸಿನಿಂದಲೇ ನಡೆಯುವುವು ಎಂಬುದು ತಿಳಿ ಯಿತೇ ? ಹೀಗೆ, ಪಿಂಡಾಂಡದಲ್ಲಿ ನಡೆಯುವಂತೆಯೇ ಬ್ರಹ್ಮಾಂಡದಲ್ಲಿಯೂ ನಡೆಯುವುದು. ಈಗ ಹೇಳು. ನಿನಗೆ ಕರ್ತೃತ್ವವುಂಟೆ ?

"ಇಲ್ಲ."

"ಈಗ ಏನು ನೋಡುತ್ತಿರುವೆ ?"

"ದೇವ, ದೇಹವೆಲ್ಲವೂ ಅನಿರ್ವಚನೀಯವಾದ ಪ್ರಕಾಶದಿಂದ ತುಂಬಿರು ವುದು."

"ಆ ಪ್ರಕಾಶದ ಮೂಲವೆಲ್ಲಿದೆ ಹುಡುಕಿ ನೋಡು."

"ಮೂಲ ನಾಭಿಯಲ್ಲಿದೆ. ಅದು ಹೃದಯದಲ್ಲಿ ಪ್ರಕಟವಾಗುತ್ತದೆ."

"ಸರಿ. ಅದೇ ! ಆಪೋಜ್ಯೋತಿ. ನೋಡು. ಅದು ಉರಿಯುತ್ತಿದ್ದರೂ ಅದರಲ್ಲಿ ಬೆಳಕಿರುವುದೇ ಹೊರತು, ಶಾಖವಿಲ್ಲ. ಇದು ಬ್ರಾಹ್ಮಣನ ಗುರಿಯಾಗ ಬೇಕು. ಇನ್ನೂ ಒಂದು ಹೆಜ್ಜೆ ಮುಂದಿಡು. ಸವಿತೃ ಮಂಡಲವನ್ನು ನೋಡು. ಅಲ್ಲಿ ದ್ವಿದಳಧಾನ್ಯಗಳಲ್ಲಿ ಅಡಗಿರುವ ಅಂಕುರದಂತೆ ಇತ್ತ ಅಗ್ನಿಮಂಡ

ಲದ ಕೆಂಪು, ಅತ್ತ ಸೋಮಮಂಡಲದ ನೀಲಿಗಳ ನಡುವೆ, ಸೂಕ್ಷ್ಮವಾಗಿ ಪೀತವರ್ಣವಾಗಿ ಕಾಣುತ್ತಿರುವುದೇ ಸವಿತೃಮಂಡಲ. ನೋಡು. ನೀನು ನೋಡುತ್ತಲೇ ಅದು ನಿನಗೆ ಅಭಿಮುಖವಾಗಿ ಕಿರಣವನ್ನು ಪ್ರಸಾರಿಸುವುದು. ಆ ಕಿರಣವೇ ಸಾವಿತ್ರವು. ಅದನ್ನು ಹಿಡಿದು ನೀನು ಮೂಲಪ್ರಾಣಕ್ಕೆ ತಂದು, ಮೂಲಪ್ರಾಣದಿಂದ ಮಹಾಪ್ರಾಣಕ್ಕೆ ತಂದು, ಅದರಿಂದ ಪ್ರಾಣಮಂಡಲಕ್ಕೆ ತಂದು, ಅಲ್ಲಿಂದ ಅದನ್ನು ಉದಾನವಾಯುವಿಗೆ ವಹಿಸು. ಆ ಉದಾನವು ಆ ತೇಜಸ್ಸನ್ನು ಶಬ್ದಮಾತ್ರವಾಗಿ ಪರಿಣಾಮಗೊಳಿಸಿ ನುಡಿಯುವುದು. ಆ ಮಂತ್ರವು ಲೋಕೋದ್ಧಾರ ಮಾಡುವುದು. ಎಚ್ಚರಿಕೆ. ಅಯೋಗ್ಯನಿಗೆ ಕೊಟ್ಟ ಮಂತ್ರವು ಕೊಟ್ಟವನನ್ನೂ ಕೊಲ್ಲುವುದು. ಪಾತ್ರದಲ್ಲಿ ಕೊಟ್ಟರೆ ಅದು ಎರಡು ಕೊನೆಗಳನ್ನು ಕಾಯುವುದು."

"ದೇವ, ಅಪಾತ್ರನನ್ನೂ ಅನುಗ್ರಹಿಸುವ ಶಕ್ತಿಯನ್ನು ಈ ಮಂತ್ರಕ್ಕೆ ಕೊಡು."

"ಭಲೆ, ವಿಶ್ವಾಮಿತ್ರ, ಭಲೆ, ಜಾಗರೂಕನಾಗಿರುವೆ. ಆಯಿತು. ಈಗ ಹೇಳು. ನಿನ್ನ ಬಾಯಲ್ಲಿ ಹೊರಟ ಈ ಮಾತು ನಿನ್ನದೇ ?"

"ಅಲ್ಲ. ಬೃಹಸ್ಪತಿಯು ನುಡಿಸಿದುದು."

"ಭಲೆ, ಭಲೆ, ಹೀಗೆಯೇ ಆರಂಭದಿಂದ ಅಂತ್ಯದವರೆಗೂ ಸರ್ವ ಭಾವನಗಳೂ ಪ್ರಚೋದಿತಗಳೇ ಎಂಬುದನ್ನು ಅರಿತು, ದೇಶ, ಕಾಲ, ಆಹಾರ, ಸಂಗ, ಧರ್ಮಗಳಿಂದ ಪ್ರಚೋದಿತವಾದುದನ್ನು ಬಿಟ್ಟು, ಆತ್ಮಹಿತಕ್ಕಾಗಿ, ಲೋಕಹಿತಕ್ಕಾಗಿ, ಬರುವ ಪ್ರಚೋದನವನ್ನು ಹಿಡಿದು ಕಾರ್ಯಮಾಡುವವನು ಬ್ರಾಹ್ಮಣನು. ಇಂತಹ ಬ್ರಾಹ್ಮಣನನ್ನು ನಾವು ದೇವತೆಗಳೂ ಕೂಡ ಬಲಿದಾನದಿಂದ ಆರಾಧಿಸುವೆವು. ಆತನು ಕಾಮವಶನಾಗಿ ಸ್ವಚ್ಛಂದವರ್ತಿಯಾಗುವವರೆಗೂ ವಿಶ್ವೇದೇವತೆಗಳೆಲ್ಲರೂ ಆತನ ದೇಹದಲ್ಲಿರುವೆವು. ನಾವು ಯಾವಾಗಲೂ ಪರೋಕ್ಷಪ್ರಿಯರು. ನಮ್ಮನ್ನು ದರ್ಶನಮಾಡಬೇಕೆಂದರೆ ನಮಗೆ ಬಲಿದಾನ ಕೊಡಬೇಕು: ನಮ್ಮನ್ನು ವರ ಕೇಳಬೇಕು. ಇದಿಷ್ಟನ್ನೂ ನಿಯಮವಾಗಿ ಆಚರಿಸಿಕೊಂಡು, ನಿನ್ನ ಸಾವಿತ್ರಮಂತ್ರವನ್ನು ಅನುಷ್ಠಾನಮಾಡಿದರೆ ಅದು ಗಾಯತ್ರವಾಗುವುದು. ತೃಪ್ತಿಯಾಯಿತೇ ?"

"ದೇವ, ಆಯಿತು. ನಿನ್ನ ಅನುಗ್ರಹದಿಂದ ಬ್ರಹ್ಮರ್ಷಿಗಳ ಕಾರ್ಯವು

ನೆರವೇರಿತು. ಆದರೂ ಇದಿಷ್ಟೂ ಪಾತ್ರರಾದವರ ಮಾತಾಯಿತು. ಅಪಾತ್ರರನ್ನು ಅನುಗ್ರಹಿಸುವ ವಿಧಾನವನ್ನು ಹೇಳು."

ಪೂಷನು ದಿಕ್ಕುದಿಕ್ಕುಗಳನ್ನೆಲ್ಲ ಬೆಳಗುವ ನಗೆಯನ್ನು ನಕ್ಕು "ಬ್ರಹ್ಮರ್ಷಿ, ನೋಡಿದೆಯಾ? ನಿನ್ನ ಅಂತಸ್ತಿನವರು ಈ ಕೃತಯುಗದಲ್ಲಿಯೂ ಹುಡುಕಿದರೆ ಒಂದು ನೂರು ಜನ ಸಿಕ್ಕಿದರೆ ಹೆಚ್ಚು. ಇಂತಹ ನಿನಗೂ ಸಂಶಯವಿದೆ ನೋಡಿದೆಯಾ? ಎಲ್ಲಿನವರೆಗೂ ಅಹಂಕಾರವಿರುವುದೋ ಅಲ್ಲಿನವರೆಗೂ ಸಂಶಯವು ಬಿಟ್ಟುದಲ್ಲ. ಇದೇ ಹೃದಯಗ್ರಂಥಿಯು. ಸವಿತೃವನ್ನು ಇನ್ನೊಮ್ಮೆ ಧ್ಯಾನಮಾಡಿ, ಈ ಹೃದಯ ಗ್ರಂಥಿಯನ್ನು ವಿಸರ್ಜಿಸಿ, ಪಾತ್ರರು ಯಾರು? ಅಪಾತ್ರರು ಯಾರು? ನೋಡು."

"ಹೌದು. ದೇವ, ತಪ್ಪಾಯಿತು. ಲೋಕದಲ್ಲಿ ಎಲ್ಲರೂ ಪಾತ್ರರೇ! ಕೆಲವರು ಸಿದ್ಧವಾಗಿದ್ದಾರೆ: ಇನ್ನು ಕೆಲವರು ಸಿದ್ಧವಾಗುತ್ತಿದ್ದಾರೆ. ಇಕೋ, ಇದಾರೋ ಹೇಳುತ್ತಿದ್ದಾರೆ: 'ಜಾತಮಾತ್ರಸ್ಯ ಗಾಯತ್ರೀ' ಎಂದು."

"ಹೌದು, ನಿಜ, ಹಾಗೆ ಹೇಳಿದವರನ್ನು ದರ್ಶನಕೊಡಿ ಎಂದು ಕೇಳು."

---

## ಅರವತ್ತೊಂಬತ್ತನೆಯ ತರಂಗ

ವಿಶ್ವಾಮಿತ್ರರು ಕೇಳಿದರು: ಆ ಹೊಸಬರ ದರ್ಶನವಾಯಿತು. ಸಾವಿತ್ರ ಕಿರಣವು ಮೂರ್ತಿಮತಿಯಾಗಿ ಎದುರು ನಿಂತಿದೆ. ಪಂಚಮುಖಗಳು, ಅದ್ಭುತವಾಗಿ ಕೇವಲ ಕಮಲಪತ್ರಗಳಿಂದಲೇ ಆಗಿರುವಂತಿರುವ ಆ ತಾಮ್ರವರ್ಣದ ದಿವ್ಯ ದೇಹ. ಅರುಣ ಕಾಂತಿಯನ್ನು ಸಂಗ್ರಹಿಸಿ ಎರಕ ಹೊಯ್ದಂತೆ ತೋರುವ ಪವಿತ್ರಮೂರ್ತಿ. ಮುಖಮುಖದಲ್ಲಿಯೂ ಮೂರು ಮೂರು ಕಣ್ಣುಗಳು. ಬೆಳ್ಳಿಯ ಗೆರೆಯಂತಿರುವ ಬಾಲಚಂದ್ರನು ಶಿರೋಭಾಗದಲ್ಲಿ ಶೋಭಿಸುತ್ತಿದ್ದಾನೆ. ಅನೇಕ ಬಾಹುಗಳು. ಅನೇಕಾಯುಧಗಳು. ಸಜ್ಜನರ ಮನಸ್ಸಿನಂತೆ ಚಂಚಲವಾದರೂ ನಿಶ್ಚಲವೆನ್ನಬಹುದಾದ ಜಲರಾಶಿಯಮೇಲೆ, ಮುಂಝಾವದಲ್ಲಿ ಬೆಳ್ಳಿಯ ಬೆಳಕು ಬಂದಾಗ ಹರಡುವ ಮಂದಪ್ರಭೆಯನ್ನೂ ಬೀರುತ್ತ, ಆ ದೇವಿಯು ಕಮಲಾಸನದಲ್ಲಿ ಕುಳಿತಿದ್ದಾಳೆ.

ಭಗವಾನರು ಒಪ್ಪಿಸಿದ ಪೂಜೆಯನ್ನು ಕೈಕೊಂಡು ದೇವಿಯು ಪ್ರಸನ್ನ ಮುಖಿಳಾಗಿ ಪ್ರಸಾದವನ್ನು ಅನುಗ್ರಹಿಸಲು ಸಿದ್ಧಳಾಗಿದ್ದಾಳೆ. ಪೂಷನು "ವಿಶ್ವಾಮಿತ್ರ, ಮಿಕ್ಕವರೆಲ್ಲರಿಗೂ ಮಂತ್ರದ ಅನುಷ್ಠಾನದಿಂದ ಸಾಕ್ಷಾತ್ಕಾರ ವಾಗಿ ದಿವ್ಯದರ್ಶನವಾಗುವುದು. ನಿನಗೆ ದೇವದರ್ಶನವಾಗಿ ಮಂತ್ರವು ಬರುವುದು. ಇದುವರೆಗೆ ನೀನು ಮಂತ್ರಪತಿಯಾಗಿದ್ದೆ: ಮಂತ್ರಕೃತ್ ಆಗಿದ್ದೆ: ಈಗ ಮಂತ್ರದ್ರಷ್ಟನಾಗು. ಆ ದೇವಿಯ ಸ್ವರೂಪವನ್ನೂ ಮಹಿಮೆ ಯನ್ನೂ ಆಕೆಯನ್ನೇ ಕೇಳು. ವೇದಪುರುಷನ ಸ್ತ್ರೀರೂಪವಿದು. ಈಕೆಯೇ ವೇದಮಾತೆಯು. ಈಕೆಯ ಅನುಗ್ರಹವಿಲ್ಲದಿದ್ದರೆ ವೇದಪುರುಷನ ಅನು ಗ್ರಹವು ಲಭಿಸುವುದಿಲ್ಲ. ನಾವೆಲ್ಲರೂ ಈಕೆಯನ್ನು ಕಂಡುಬಲ್ಲೆವಲ್ಲದೆ, ಈಕೆಯ ಪ್ರಭಾವವನ್ನು ಪೂರ್ಣವಾಗಿ ಅರಿಯೆವು. ಅದರಿಂದ ಆಕೆಯನ್ನೇ ಕೇಳು" ಎಂದು ವಿಶ್ವಾಮಿತ್ರರನ್ನು ಮುಟ್ಟಿದನು.

ಪೂಷನ ಸ್ಪರ್ಶದಿಂದ ವಿಶ್ವಾಮಿತ್ರರ ದೇಹವು ಪುಳಕಿತವಾಯಿತು. ಅಗ್ನಿಸಂಸ್ಪರ್ಶದಿಂದ ಕಾದ ಲೋಹವು ಕೆಂಪಾಗಿ ತೇಜೋಮಂಡಲವಾಗಿ ಉದ್ದೀಪ್ತವಾಗುವಂತೆ, ಭಗವಾನರೂ ತೇಜೋಮಂಡಲವಾದರು. ರೋಮ ಕೂಪಕೂಪವೂ ಒಂದೊಂದು ನಾಲಗೆಯಾಗಿ ಆ ದೇವಿಯನ್ನು ಸ್ತುತಿಸುವುದಕ್ಕೆ ಸಿದ್ಧವಾಗಿರುವಂತೆ ಆಗಿರಲು, ಅವರ ಬಾಯಿಂದ ಸ್ತೋತ್ರರೂಪವಾಗಿ ಮಾತು ಧಾರೆಯಾಗಿ ಹೊರಟಿತು. ಆ ಮಹಾದೇವಿಯು ಅಭಯ ವರದಮುದ್ರೆ ಗಳನ್ನು ತೋರಿಸಿದಳು. ತೆರೆದಿಟ್ಟ ಪುಸ್ತಕದಿಂದ ಓದುವಂತೆ ಭಗವಾನರು ಆನಂದದಿಂದ ಉದುರುತ್ತಿರುವ ಅಶ್ರುಗಳು ಬಾಹ್ಯದೃಷ್ಟಿಯನ್ನು ಮುಚ್ಚು ತ್ತಿದ್ದರೂ, ಅಂತಃಕರಣವು ಸೂರ್ಯಕಿರಣಗಳಿಂದ ಅರಳುತ್ತಿರುವ ತಾವರೆ ಯಂತೆ ಅರಳುತ್ತಿರಲು, ಭಗವಾನರು ಆ ವೇದಮಾತೆಯನ್ನು ಸ್ತೋತ್ರ ಮಾಡಿ ದರು:

"ದೇವಿ, ನಿನಗೆ ನಮಸ್ಕಾರವು. ಸೃಷ್ಟಿಕರ್ತನ ಪರಾಶಕ್ತಿಯಾಗಿ ಲೋಕ ಲೋಕಗಳನ್ನೆಲ್ಲ ಆವರಿಸಿ ಕುಳಿತಿರುವ ಪ್ರಾಣಶಕ್ತಿಯಾದ ನಿನಗೆ ನಮಸ್ಕಾರವು. ಅರಳಿದ ತಾವರೆಯನ್ನು ಆಶ್ರಯಿಸಿರುವ ದಳಗಳಂತೆ, ಕರ್ಮಕಾಂಡಕ್ಕೆ ಆಧಾರ ವಾದ ವಿದ್ಯೆಗಳೆಲ್ಲವೂ ನಿನ್ನನ್ನು ಆಶ್ರಯಿಸಿರುವುದರಿಂದ ನಿನ್ನನ್ನು ವಿದ್ವಾಂಸರು ಧರ್ಮಸ್ವರೂಪಿಣೀ, ಧರ್ಮ ಸಂವರ್ಧಿನೀ ಎಂದು ಆರಾಧಿಸುವರು. ಅರಳಿದ

ತಾವರೆಯ ಪರಿಮಳವನ್ನು ಬೀರುವಂತೆ ಶುದ್ಧ ಬ್ರಹ್ಮವಿದ್ಯೆಯನ್ನು ಅನುಗ್ರಹಿಸುವ ನಿನ್ನನ್ನು ಬಲ್ಲವರು ಬ್ರಹ್ಮಮಯಿ ಎನ್ನುವರು. ಬಿರಿದ ತಾವರೆಯು ಸುರಿಯುವ ಪುಷ್ಪರಾಜದಂತೆ ಸಿದ್ಧಿಗಳ ಮಳೆ ಸುರಿಯುವ ನಿನ್ನನ್ನು ಸಿದ್ಧಿಪ್ರದಾಯಿನಿ ಎನ್ನುವರು. ಸರ್ವ ಹೃದಯಗಳಲ್ಲೂ ಕುಳಿತು ಎಲ್ಲರನ್ನೂ ಪ್ರೇರಿಸುವ ಸಾವಿತ್ರೀದೇವಿಗೆ ನಮಸ್ಕಾರವು. ಎಲ್ಲರ ಮನೋಬುದ್ಧಿಗಳಲ್ಲಿ ಕುಳಿತು ವೃತ್ತಿಗಳನ್ನು ಬೆಳೆಸುವ ಸರಸ್ವತೀದೇವಿಗೆ ನಮಸ್ಕಾರವು. ಎಲ್ಲೆಲ್ಲಿಯೂ ಇದ್ದುಕೊಂಡು ಮಾಡಿದ ಕೆಲಸವು ಸಫಲವಾಗುವಹಾಗೆ ಮಾಡುವ ಗಾಯತ್ರೀದೇವಿಗೆ ನಮಸ್ಕಾರವು. ದೇವಿ, ಜಗದ್ಧಾತ್ರಿ, ಮನಸ್ಸುಮಾಡು, ಕೃಪೆತೋರು, ದಯವಿಡು, ಲೋಕವನ್ನೆಲ್ಲಾ ಆರ್ಯವನ್ನು ಮಾಡುವ ಮಂತ್ರರಾಜವನ್ನು ಕಂಡು ನುಡಿಯುವ ಭಾಗ್ಯವು ನನ್ನದಾಗಲಿ. ಬ್ರಹ್ಮರ್ಷಿಗಳ ಇಷ್ಟಾರ್ಥವು ನೆರವೇರಲಿ. ವಿಶ್ವವೆಲ್ಲವೂ ಉದ್ಧಾರವಾಗುವ ಹಾದಿಯನ್ನು ಕಂಡುಕೊಳ್ಳಲಿ."

ಭಗವತೀ ಗಾಯತ್ರೀದೇವಿಯು ವಿಶ್ವಾಮಿತ್ರರು ಹೊಗಳುತ್ತಿದ್ದ ಹಾಗೆಯೇ ತನ್ನ ಸಾವಿತ್ರೀ ಸರಸ್ವತೀ ಗಾಯತ್ರೀ ರೂಪಗಳನ್ನು ತೋರಿಸಿದಳು. ಪ್ರಣವವೊಂದೇ ಕವಲೊಡೆದು ಹದಿನಾರಾಗಿ, ಇಪ್ಪತ್ತೆರಡಾಗಿ, ಇಪ್ಪತ್ತನಾಲ್ಕಾಗಿ ಬ್ರಹ್ಮಾಂಡ ಬ್ರಹ್ಮಾಂಡವೆಲ್ಲವನ್ನೂ ಆವರಿಸಿರುವ ರಹಸ್ಯವನ್ನು ತೋರಿಸಿ, ಭೂಮ್ಯಂತರಿಕ್ಷ ಆಕಾಶಗಳಲ್ಲೆಲ್ಲಾ ತುಂಬಿಹೋಗಿರುವ ತನ್ನ ನಾದ ಸ್ವರೂಪವನ್ನು ತೋರಿಸಿ, "ವತ್ಸ, ಇದನ್ನು ಅನುಸಂಧಾನಮಾಡಿ ನಿನ್ನದು ಮಾಡಿಕೊ. ನೀನು ಕೃತಾರ್ಥನಾದುದರ ಗುರುತಾಗಿ ನಿನ್ನ ಬಾಯಲ್ಲಿ ಇಪ್ಪತ್ತನಾಲ್ಕು ಅಕ್ಷರಗಳ, ಮೂರು ಪಾದಗಳ ಮಂತ್ರವು ಪ್ರಕಟವಾಗುವುದು. ಅದನ್ನು ಅನುಸಂಧಾನಮಾಡಿ, ಅದನ್ನು ನಿನ್ನದು ಮಾಡಿಕೊ. ಈ ಮಂತ್ರಕ್ಕೆ ದೇವತೆಯು ಸವಿತೃವೇ ಆದರೂ ಪೂಷಾದೇವನ ಅನುಗ್ರಹದಿಂದ ನಿನಗೆ ಮೊದಲು ನನ್ನ ದರ್ಶನವಾಯಿತಾದ್ದರಿಂದ ನಿನ್ನ ಬಾಯಲ್ಲಿ ಹೊರಡುವ ಮಂತ್ರವು ಗಾಯತ್ರೀ ಎಂದೇ ಪ್ರಸಿದ್ಧವಾಗಲಿ. ಅಷ್ಟೇ ಅಲ್ಲ. ಗಾಯತ್ರೀ ವಿಶ್ವಾಮಿತ್ರ ಗಾಯತ್ರಿ ಎಂದೇ ಆಗಲಿ. ನೀನು ಯಾರಿಗಾದರೂ ನನ್ನನ್ನು ದಾನಮಾಡು : ನಾನು ಅವನನ್ನು ಕಾಪಾಡುವೆನು. ಅವನನ್ನು ಆರ್ಯನನ್ನು ಮಾಡುವೆನು. ಮೂರು ವೇದಗಳಿಗೆ ಅಧಿಕಾರಿಯನ್ನು ಮಾಡುವೆನು. ಆದರೆ, ಇಗೋ, ಇದೇ ಮಾತು. ನನ್ನನ್ನು ದುರುಪಯೋಗಪಡಿಸಿದವನ ವಂಶವು

ಒಣಗುವ ಮರದಂತೆ ಒಣಗಿಹೋಗುವುದು" ಎಂದು ಹೇಳಿ, ಬೃಹಣಸ್ಪತಿ, ಪೂಷರ ಅಪ್ಪಣೆಯನ್ನು ಕೇಳಿ, ವಿಶ್ವಾಮಿತ್ರರಿಗೂ ಹೇಳಿ; ಆತನ ಪೂಜೆಯನ್ನು ಪಡೆದು ಅಂತರ್ಧಾನವಾದಳು. ಅವರೂ ಪರಮಾನಂದಭರಿತರಾಗಿ ಕೃತ ಕಾರ್ಯರಾದ ವಿಶ್ವಾಮಿತ್ರರನ್ನು ಆನಂದಾಶ್ರುಪೂರ್ವವಾಗಿ ಹೊಗಳಿ ಆತನಿಂದ ಪೂಜೆಯನ್ನು ಪಡೆದು ಮರೆಯಾದರು.

ವಿಶ್ವಾಮಿತ್ರರೂ ನಡೆದುದೆಲ್ಲವನ್ನೂ ಆವೃತ್ತಿಹಾಕುವ ವಿದ್ಯಾರ್ಥಿಯಂತೆ, ಮತ್ತೆ ಮತ್ತೆ ಜ್ಞಾಪಕಮಾಡಿಕೊಳ್ಳುತ್ತ, ಮುಂದಿನ ಕಾರ್ಯವನ್ನು ಕುರಿತು ಚಿಂತಿಸುತ್ತಾ ಆನಂದಪರವಶರಾಗಿ ಹಾಗೇ ಮೈಮರೆದು ಅಲ್ಲಿಯೇ ಕುಳಿತಿದ್ದರು.

---

## ಎಪ್ಪತ್ತನೆಯ ತರಂಗ

ಕೃತಕೃತ್ಯರಾದ ವಿಶ್ವಾಮಿತ್ರರು ಲೋಪಾಮುದ್ರಾಗಸ್ತ್ಯರು ಒಪ್ಪಿಸಿದ ಪೂಜೆಯನ್ನು ಒಪ್ಪಿಸಿಕೊಂಡು ನರ್ಮದಾತೀರಕ್ಕೆ ಹೊರಟರು. ದಾರಿ ಯುದ್ದಕ್ಕೂ ಆಶ್ರಮ ಆಶ್ರಮದಲ್ಲಿಯೂ ಇರಲಿ, ಅಡಿಗಡಿಗೂ ಎಲ್ಲರೂ ಅವ ರಿಗೆ ಸತ್ಕಾರಮಾಡುತ್ತಿದ್ದಾರೆ. ತಿಳಿದವರು ಇರಲಿ, ತಿಳಿಯದವರೂ ಕೂಡ, ಆ ತೇಜಸ್ಸನ್ನು ಕಂಡು ಸಂತೋಷಭರಿತರಾಗಿ ಪ್ರಣಾಮಮಾಡುತ್ತಾರೆ. ಭಗವಾನರು ಕಣ್ಣು ಬಿಟ್ಟಿರುವುದುಂಟು: ಅವರಿಗೆ ರೂಪದರ್ಶನವಾಗುವು ದುಂಟು. ಆದರೆ ಆ ಕಣ್ಣು ಮಾತ್ರ ಕಾಣುತ್ತಿರುವ ರೂಪದ ಹಿಂದೆ ಅವಿತು ಕುಳಿತಿರುವ ಯಾವದೋ ಅರೂಪವನ್ನು ಕಾಣಬೇಕೆಂದು ಹವಣಿಸುತ್ತಿರು ವಂತಿದೆ. ಕಿವಿಯು ಕೇಳುವುದುಂಟು: ಆದರೆ ಕೇಳಿದ ಸದ್ದಿನ ಆ ಕೊನೆ ಈ ಕೊನೆಗಳನ್ನು ಹುಡುಕುವುದರಲ್ಲಿ ಕುತೂಹಲ ಹೆಚ್ಚು. ಶ್ವಾಸವಾಡುತ್ತಿರು ವುದುಂಟು: ಶ್ವಾಸದ ಕೊನೆ, ಮೊದಲುಗಳ ಹಿಂದಿರುವ ಇನ್ನು ಯಾವುದೋ ಒಂದನ್ನು ಧ್ಯಾನಗೋಚರಮಾಡಿಕೊಳ್ಳುವ ಪ್ರಯತ್ನ ಬಲವಾಗಿದೆ.

ಹೀಗೆಯೇ ಪ್ರಪಂಚ ಚಿತ್ರವನ್ನು ಪರಿಭಾವಿಸುತ್ತಾ ನರ್ಮದಾ ತೀರಕ್ಕೆ ಬಂದರು. ಅಲ್ಲಿ ಉತ್ತರ ದಕ್ಷಿಣ ದೇಶಗಳಿಗೆ ನಡುವೆ ದೇವತೆಗಳು ಹಾಕಿರುವ ಗೋಡೆಯೋ ಎಂಬಂತೆ ವಿಶಾಲವಾಗಿ ಎತ್ತರವಾಗಿರುವ ಆ ವಿಂಧ್ಯಪರ್ವತದ

ಸಾರವು ಕೆಳಗೆ ಇಳಿದುಬರುತ್ತಿರುವುದೋ ಎಂಬಂತಿರುವ ಆ ನರ್ಮದೆಯ ತೀರದಲ್ಲಿ ಒಂದು ಆಶ್ರಮವನ್ನು ರಚಿಸಿ ನಿಂತರು. ವಸಿಷ್ಠರು ಬಂದು ಹೋಗುವವರೆಗೂ ಅವರಿಗೆ ಶಿಷ್ಯಪರಿಗ್ರಹಮಾಡುವುದು ಇಷ್ಟವಿಲ್ಲ. ಆದರೆ, ಗಾಯತ್ರೀ ದೇವಿಯ ಅನುಗ್ರಹದಿಂದ ಲಭಿಸಿರುವ ಮಂತ್ರರಾಜವನ್ನು ಪ್ರಯೋಗಮಾಡಿ ನೋಡಬೇಕಾದುದು ಒಂದು ಕೆಲಸ ಉಳಿದಿದೆ. ಆದರಿಂದ ಮಿತವಾಗಿ ಶಿಷ್ಯ ಪರಿಗ್ರಹಮಾಡಿ, ಅವರನ್ನು ಪ್ರಯೋಗಸಿದ್ಧರನ್ನು ಮಾಡಬೇಕೆಂದು ಒಂದು ಸಣ್ಣ ಸಂಕಲ್ಪ.

ಇತರರು ಸಂಕಲ್ಪವನ್ನು ಮಾಡಿ ಸಾಧನಗಳನ್ನು ಹೊಂಚಿಕೊಂಡು ಕಾರ್ಯಗಳನ್ನು ಸಾಧಿಸಬೇಕು. ಮಹನೀಯರಿಗೆ ಆಗಬೇಕಾದ ಕಾರ್ಯಗಳ ಬೀಜಗಳಾಗಿ ಸಂಕಲ್ಪಗಳು ಬಂದು, ಅವಕ್ಕೆ ಬೇಕಾದ ಸಾಧನಗಳೆಲ್ಲ ತಾವಾಗಿ ಒದಗಿ, ಅಲ್ಪಪ್ರಯತ್ನದಿಂದ ಮಹತ್ತರವಾದ ಫಲವಾಗುವುದು. ಭಗವಾನರ ಸಂಕಲ್ಪವೂ ಹಾಗೆಯೇ ಆಯಿತು. ವರ್ಣಚತುಷ್ಟಯದವರೂ ಬಂದು ಸೇರಿದರು. ಎಲ್ಲರಿಗೂ ಉಪದೇಶವಾಯಿತು. ವಿಶ್ವಾಮಿತ್ರರ ಬಾಯಿಂದ ಮಂತ್ರ ಹೊರಡುತ್ತ ಇದ್ದಹಾಗೆಯೇ, ಅದು ಶಿಷ್ಯನ ಕರ್ಣಕುಹರವನ್ನು ಸೇರುತ್ತಿದ್ದ ಹಾಗೆಯೇ ಯಾವುದೋ ಒಂದು ತೇಜೋರಾಶಿಯು ಮುನ್ನುಗ್ಗಿ ರಾಜನು ಹೊರಡುವುದಕ್ಕಿಂತ ಮುಂಚೆ ಹೊರಟ ರಾಜಪರಿವಾರವು ಮುಂದಿನ ಶಿಬಿರದ ವರೆಗೂ ಹಾದಿಯನ್ನೆಲ್ಲ ಸರಿಮಾಡಿ ರಾಜಮಾರ್ಗವನ್ನು ಮಾಡುವಂತೆ, ದೇಹದಲ್ಲಿ ನಾಡಿನಾಡಿಯಲ್ಲಿರುವ ಮಲವನ್ನು ನಿರ್ಮೂಲಮಾಡಿ ತಾನು ರೂಢಮೂಲವಾಗಿ ತುಂಬುತ್ತದೆ. ಮಂತ್ರೋಪದೇಶವಾಗುತ್ತಿದ್ದ ಹಾಗೆಯೇ ಅಪೋಜ್ಯೋತಿಯ ದರ್ಶನವಾಗಿ ದೇಹಾದ್ಯಂತವೂ ಪ್ರಾಣವ್ಯೂಹವಾಗುತ್ತದೆ. ಮನಸ್ಸು ಏಕಾಗ್ರವಾಗುತ್ತದೆ. ಇಂದ್ರಿಯಗಳ ಸ್ವಾತಂತ್ರ್ಯವು ತಪ್ಪಿ ಅವುಗಳಲ್ಲಿದ್ದ ಚಾಂಚಲ್ಯವು, ಹುಡುಗರು ತಿಂದ ಮಾವಿನಹಣ್ಣಿನಲ್ಲಿ ಆಗುವಂತೆ ನಿಶ್ಶೇಷವಾಗುತ್ತದೆ. ಚಂಚಲವಾದ ಇಂದ್ರಿಯಗಳ ಕಾಟವು ಅಳಿದು ಮನವು ನಿರ್ಮಲವಾಗುತ್ತದೆ. ಮನಸ್ಸಿನ ಕೋಟಲೆಯು ತಪ್ಪಿ ಬುದ್ಧಿಯು ನಿರ್ಮಲವಾಗುತ್ತದೆ. ನಿರ್ಮಲವಾದ ಬುದ್ಧಿಯು ಜ್ಯೋತಿಯನ್ನು ಸಮಗ್ರವಾಗಿ ಕಂಡಂತಾಗಿ ಸಮಾಧಿಗೆ ಏರುತ್ತದೆ.

ಭಗವಾನರು ಈಗ ಸದ್ಯದಲ್ಲಿ ಹನ್ನೆರಡುಜನ ಶಿಷ್ಯರನ್ನು ಮಾತ್ರ ತೆಗೆದು ಕೊಂಡಿದ್ದಾರೆ. ಅವರಷ್ಟು ಜನವೂ ಪ್ರಾಜಾಪತ್ಯ ವ್ರತ ಮಾಡುತ್ತಿದ್ದಾರೆ. ಆಹಾರ ನಿಯಮದಿಂದ ಸ್ಥೂಲದೇಹವು ಶುದ್ಧವಾಗಿ ಆಚಾರ ನಿಯಮದಿಂದ ಸೂಕ್ಷ್ಮದೇಹವು ಶುದ್ಧವಾಗುತ್ತಿದೆ. ಜ್ಯೋತಿಯು ಸಮಗ್ರವಾಗಿ ಕಾಣುತ್ತದೆ. ಆದರೂ ಅಲ್ಲೊಂದು ಏನೋ ಇನ್ನೊಂದು ಕಪ್ಪು ಇದೆ. ಇದಿಷ್ಟೂ ಅವರು ನೋಡುತ್ತಾರೆ.

ವ್ರತವು ಒಂದು ಅಯನ ನಡೆಯಿತು. ಈಗ ಈ ಶಿಷ್ಯರಿಗೆ ಆಗಾಗ ದೇವತಾ ದರ್ಶನವಾಗುತ್ತದೆ. ಆದರೆ ಅದಿನ್ನೂ ಪೂರ್ಣವಾಗಿ ಸಾಂಗವಾಗಿ ಆಗುತ್ತಿಲ್ಲ. ಇನ್ನೂ ಒಂದು ಅಯನವಾಯಿತು. ಶಿಷ್ಯರೆಲ್ಲರೂ ತೇಜಸ್ವಿ ಗಳಾಗಿದ್ದಾರೆ. ಈಗ ಅವರಿಗೆ ದೇವತಾ ದರ್ಶನವಾಗುತ್ತದೆ.

ಒಂದು ದಿನ ಆಚಾರ್ಯರು ಒಂದು ಗಿಡದ ಬುಡದಲ್ಲಿ ಏನೋ ಧ್ಯಾನದಲ್ಲಿ ದ್ದಾರೆ. ಶಿಷ್ಯನೊಬ್ಬನು ಬಂದು ನಮಸ್ಕಾರಮಾಡಿ ಕೊಂಚ ದೂರದಲ್ಲಿ ವಚನ ನಿರೀಕ್ಷೆಯಲ್ಲಿ ನಿಂತಿದ್ದಾನೆ. ಭಗವಾನರು "ಏನಪ್ಪಾ?" ಎಂದರು. ಏನೋ ಹೇಳಬೇಕೆಂದಿದ್ದಾನೆ. ನಾಚುಗೆ. ಭಗವಾನರು ಹತ್ತಿರಕ್ಕೆ ಕರೆದು ಕುಳ್ಳಿರಿಸಿ ಕೊಂಡು "ಏನು? ಹೇಳು" ಎಂದರು. ಅವನು ಬಂದಿರುವುದು ಏತಕ್ಕೆ ಎಂಬುದು ಅವರಿಗೆ ತಿಳಿಯಿತು. ಆದರೂ ಅವನ ಮುಖದಿಂದಲೇ ಕೇಳ ಬೇಕೆಂದು "ಏನು? ಹೇಳು?" ಎಂದರು. ಶಿಷ್ಯನು ಹೇಳಿದನು: "ಇವೊತ್ತು ಸೂರ್ಯೋದಯದ ವೇಳೆಗೆ ಸರಿಯಾಗಿ ದೇವೀದರ್ಶನವಾಯಿತು. ಪ್ರಾತ ಸ್ಸೂರ್ಯನ ತೇಜಸ್ಸನ್ನೆಲ್ಲಾ ಹಿಡಿದು, ಕಡೆದು ಮಾಡಿರುವಂತೆ ಇರುವ ಮೂರ್ತಿಯೊಂದು, ಕೆಂಪು ಕಮಲದ ಮೇಲೆ, ಪದ್ಮಾಸನದಲ್ಲಿ ಕುಳಿತಿದ್ದಾಳೆ. ಒಂದು ಕಾಲು ಜೋಲುಬಿದ್ದು ಸಣ್ಣಗೆ ಅಲೆಯುತ್ತಿರುವ ನೀರನ್ನು ಮುಟ್ಟ ಬೇಕೆಂದು ನೀಡಿರುವಂತಿದೆ. ಆ ತಾಯಿಯು ನೋಡಿ ಸಣ್ಣಗೆ ನಕ್ಕಳು. ಆಗ ಆಕೆಯ ನಗುವಿನಿಂದಲೋ ನನ್ನ ಹೃದಯದಿಂದಲೋ ಒಂದು ಜ್ಯೋತಿಯು ಒಡೆದು ಮೂಡಿತು. ಆ ಜ್ಯೋತಿಯ ಈ ಕೊನೆಯಲ್ಲಿ ಒಂದು ಮುದ್ದಾದ ಚಿನ್ನದ ಗರಿಗಳುಳ್ಳ ಹಂಸೆಯೊಂದು ಆಟವಾಡುತ್ತಿತ್ತು. ಇನ್ನೊಂದು ಕ್ಷಣ ದೊಳಗಾಗಿ ಆ ಚಿಕ್ಕ ಹಂಸೆಯು ಆಟವನ್ನು ಬಿಟ್ಟು ಹಿಂತಿರುಗಿ ನೋಡಿತು. ಆ ಜ್ಯೋತಿಯ ಆ ಕೊನೆಯಲ್ಲಿ ಒಂದು ದೊಡ್ಡ ಹಂಸೆ. ಅದು ಬರುಬರುತ್ತ

ಬೆಳೆಯಿತು. ಬೆಳೆದು ಬೆಳೆದು ಭೂಮ್ಯಾಕಾಶವನ್ನೆಲ್ಲಾ ತುಂಬಿ ಹೋಯಿತು. ಈ ಸಣ್ಣ ಹಂಸೆಯು ಆ ದೊಡ್ಡ ಹಂಸೆಯಲ್ಲಿ ಸೇರಿ ಚಿತ್ರದ ಹಂಸೆಯಂತೆ ನಿಶ್ಚಲವಾಯಿತು."

ಭಗವಾನರು ನಡು ನಡುವೆ ಹುಂ ಹುಂ ಎಂದು ಕೇಳುತ್ತಿದ್ದವರು ಎದ್ದು ಕುಳಿತರು. ಶಿಷ್ಯನ ಮುಖವನ್ನು ಆನಂದದಿಂದ ನೋಡಿ, ಅವನು ಹೇಳಿರುವುದೆಲ್ಲ ನಿಜ ಎಂಬುದನ್ನು ಕಂಡು ಇನ್ನೂ ಆನಂದಪಟ್ಟರು. ಒಂದು ಗಳಿಗೆ ಹಾಗೆಯೇ ನೋಡುತ್ತಿದ್ದು, "ಈಗ ಏನು ಕಾಣುತ್ತಿದೆ?" ಎಂದರು.

"ಈಗ ಕಣ್ಣಿಗೆ ಏನೇ ಕಂಡರೂ ಆ ದೊಡ್ಡ ಹಂಸೆಯಲ್ಲಿ ಅಡಗಿ ಕುಳಿತಿರುವ ಸಣ್ಣ ಹಂಸೆಯು ನೆನೆಪಾಗುತ್ತದೆ. ಕಂಡುದು ಒಂದು ಗಳಿಗೆ ಕಾಣದಾಗಿ ಮತ್ತೆ ಕಾಣುತ್ತದೆ."

"ನೋಡು ಹೊರಗಿನದು ದೃಶ್ಯ. ಅದನ್ನು ಕಾಣುವ ನೀನು ದೃಕ್, ನೀವಿಬ್ಬರೂ ಒಬ್ಬರನ್ನೊಬ್ಬರು ಸಂಧಿಸಿದಾಗ ನಡೆಯುವ ಕಾರ್ಯ ದರ್ಶನ. ಇದನ್ನು ಮನಸ್ಸಿನಲ್ಲಿ ಧರಿಸಿಕೊಂಡು ಕಂಡುದು ಕಾಣದಾಗಿ ಮತ್ತೆ ಕಾಣುವುದರ ಅರ್ಥವೇನು ನೋಡು."

"ಭಗವಾನ್, ದೃಕ್‌ದೃಶ್ಯವನ್ನು ದರ್ಶನಮಾಡಿದಾಗ, ದರ್ಶನವು ತಾನೇ ತಾನಾಗಿ ಈ ಕೊನೆಯ ದೃಕ್ಕೂ ಆ ಕೊನೆಯ ದೃಶ್ಯವೂ ಇಲ್ಲದಾಗುವುದು. ಮತ್ತೆ ದರ್ಶನವು ಮರೆಯಾಗಿ ದೃಕ್-ದೃಶ್ಯಗಳು ಕಾಣುವುವು."

ಭಗವಾನರಿಗೆ ಪರಮಾನಂದವಾಯಿತು: "ವತ್ಸ, ಕೃತಾರ್ಥವಾದೆ. ವೇದಕ್ಕೆ ಅಧಿಕಾರಿಯಾದೆ. ಸರ್ವ ದೇವತೆಗಳೂ ಬಂದು ನಿನ್ನ ದೇಹದಲ್ಲಿರಲು ಯೋಗ್ಯನಾದೆ. ನಾನು ಮತ್ತೆ ಹೇಳುವವರೆಗೂ ಈ ವಿಷಯವನ್ನು ರಹಸ್ಯವಾಗಿಟ್ಟಿರು" ಎಂದು ಆಶೀರ್ವಾದಮಾಡಿ ಕಳುಹಿಸಿಕೊಟ್ಟರು.

ಅವರ ಆನಂದಕ್ಕೆ ಮೇರೆಯಿಲ್ಲ: "ಬ್ರಹ್ಮರ್ಷಿಗಳ ಅಪ್ಪಣೆಯು ನೆರವೇರಿತು. ವಿಶ್ವವನ್ನೇ ಆರ್ಯವನ್ನಾಗಿ ಮಾಡುವ ಸಾಧನವು ಸಿದ್ಧವಾಯಿತು. ಬ್ರಹ್ಮರ್ಷಿ ಮಂಡಲಕ್ಕೆ ಅದನ್ನೊಪ್ಪಿಸಿದರೆ ತಾವು ಕೃತಾರ್ಥರಾದ ಹಾಗಾಯಿತು." ಎಂಬ ಆನಂದದಲ್ಲಿ ಕುಳಿತಿದ್ದ ಕಡೆಯೇ ಸಂಜೆಯಾದುದನ್ನು ಕಂಡರು.

---

## ಎಪ್ಪತ್ತೊಂದನೆಯ ತರಂಗ

ವಿಶ್ವಾಮಿತ್ರರು ಅಂದು ನಿದ್ದೆಯಿಂದ ಏಳುತ್ತಿದ್ದ ಹಾಗೆಯೇ ಅವರಿಗೆ ಇಂದು ವಸಿಷ್ಠರು ದಯಮಾಡಿಸುವರೆಂದು ಬೋಧವಾಯಿತು. ಸರಿ, ಅವರು ಬರುವ ಉದ್ದೇಶವೂ ಗೊತ್ತಿದೆ. ಸಿದ್ಧರಾಗಿದ್ದರು.

ಸುಮಾರು ಒಂದೂವರೆ ಝಾವವಾಗಿರಬಹುದು. ಹಠಾತ್ತಾಗಿ ಭಗವಾನರು ತಲೆಯೆತ್ತಿ ನೋಡಿದರು. ದೂರದಿಂದ ಒಂದು ತೇಜೋಮಂಡಲವು ಆಶ್ರಮದ ಕಡೆಗೆ ಬರುತ್ತಿರುವುದು ಕಾಣಿಸಿತು. ಎದ್ದುನಿಂತು ಅದನ್ನು ಸ್ವಾಗತಿಸುತ್ತಿದ್ದಹಾಗೆಯೇ ಆ ಜ್ಯೋತಿರ್ಮಂಡಲವು ಇವರಿದ್ದಲ್ಲಿಗೇ ಬಂದು ಇಳಿಯಿತು. ಆ ತೇಜೋರಾಶಿಯನ್ನು ಭೇದಿಸಿಕೊಂಡು ಭಗವಾನ್ ವಸಿಷ್ಠರು ಈಚೆಗೆ ಬಂದರು.

ವಿಶ್ವಾಮಿತ್ರರು ಅವರಿಗೆ ಮಧುಪರ್ಕವನ್ನೊಪ್ಪಿಸಿದರು. ಯಥಾವಿಧಿಯಾಗಿ ಅತಿಥಿ ಸತ್ಕಾರಮಾಡಿದರು. ಪರಸ್ಪರ ಕುಶಲಪ್ರಶ್ನಗಳಾದ ಮೇಲೆ ವಸಿಷ್ಠರು ಪರಮಸಂತೋಷವು ಹೃದಯದಿಂದ ಉಕ್ಕಿ ಮುಖದಿಂದ ಹೊರಸೂಸುತ್ತಿರಲು "ಅಂತೂ ಗೆದ್ದಿರಿ. ಲೋಕವನ್ನು ಉದ್ಧಾರಮಾಡಿದಿರಿ" ಎಂದರು. ವಸಿಷ್ಠರ ಸ್ತೋತ್ರವನ್ನು ಸುಲಭವಾಗಿ ಒಪ್ಪಿಕೊಳ್ಳದೆ ವಿಶ್ವಾಮಿತ್ರರು "ಆ ಗೌರವವೆಲ್ಲ ಪರಿಷತ್ತಿಗೆ ಸೇರಿದುದು. ನಾನೇನಿದ್ದರೂ ಆಜ್ಞಾವಾಹಕ. ಪರಿಷತ್ತು ಬೇಕೆಂದಿತು. ಎಲ್ಲಿ ನಿಂತರೆ ಕಾರ್ಯವಾಗಬೇಕೆಂಬುದನ್ನು ತಾವು ಸೂಚಿಸಿದಿರಿ. ಏನು ಮಾಡಬೇಕು ಎಂಬುದನ್ನು ಲೋಪಾಮುದ್ರಾಗಸ್ತ್ಯರು ಹೇಳಿಕೊಟ್ಟರು. ಮಿಕ್ಕುದೆಲ್ಲ ದೇವಗುರುಗಳ ದಯೆಯಿಂದ ಆಯಿತು. ಇನ್ನು ಇದರಲ್ಲಿ ಯಾವುದಕ್ಕಾಗಿ ನಾನು ಹೊಗಳಿಸಿಕೊಳ್ಳಬೇಕು ?" ಎಂದು ನಕ್ಕರು.

ವಸಿಷ್ಠರು ಹೇಳಿದರು : "ಯುದ್ಧವೆಲ್ಲಾ ಸೈನಿಕರದು. ನಿಜ. ಗೆಲ್ಲುವರೂ ಸೋಲುವರೂ ಅವರೇ ! ಆದರೂ ಅದರ ಕೀರ್ತಿಯೆಲ್ಲಾ ಸೇನಾನಿಯದು. ಹಾಗೆ ಪರಿಷತ್ತು ಬೇಕೆಂದುದು, ಅದೂ ಇದೂ, ಎಲ್ಲಾ ನಿಜ. ಆದರೆ, ನಾವೆಲ್ಲರೂ ಇದು ತಮ್ಮಿಂದಲೇ ಆಗಬೇಕು, ಇನ್ನಾರಿಂದಲೂ ಸಾಧ್ಯವಿಲ್ಲ ಎಂಬುದನ್ನು ಅರಿತೇ ಈ ಕೆಲಸಮಾಡಿದೆವು. ಅದನ್ನು ಮರೆಯಬೇಡಿ. ಆಯಿತು, ತಮ್ಮ ಶಿಷ್ಯರೆಲ್ಲಿ ?"

ವಿಶ್ವಾಮಿತ್ರರು ತಮ್ಮ ಶಿಷ್ಯರನ್ನು ಕರೆದು ತೋರಿಸಿದರು. ವಸಿಷ್ಠರು ಅವರೆಲ್ಲರನ್ನೂ ನೋಡಿ, ಬಹು ಸಂತೋಷಪಟ್ಟು "ಎಲ್ಲರೂ ಋಷಿಕಲ್ಪರಾಗಿದ್ದಾರೆ. ಇವರಿಗೆ ಬೇಕಾದುದು ವೇದಾಧ್ಯಯನ. ಅದಷ್ಟಾದರೆ ಇವರೆಲ್ಲ ಬ್ರಾಹ್ಮಣರೇ! ಸಂದೇಹವಿಲ್ಲ. ಸರಿ. ಇವರಿಗೆ ಅಗ್ನಿವಿದ್ಯೆಯನ್ನು ಕೊಡಿ. ಮಿಕ್ಕುದನ್ನೆಲ್ಲ ಆ ಯಜ್ಞೇಶ್ವರನೇ ಮಾಡುವನು" ಎಂದು ಅವರೆಲ್ಲರಿಗೂ ಆಶೀರ್ವಾದಮಾಡಿ, ಅವರನ್ನು ಕಳುಹಿಸಿಕೊಟ್ಟರು. ಆಶ್ರಮದಲ್ಲಿ ವಸಿಷ್ಠ ವಿಶ್ವಾಮಿತ್ರರು ಇಬ್ಬರೇ ನಿಂತರು.

ವಸಿಷ್ಠರು ಹೇಳಿದರು; "ಈ ದಿನ ವೈಶ್ವಾನರನೇಕೋ ರೇಗಿದ್ದಾನೆ. ನಾನು ನರ್ಮದೆಗೆ ಹೋಗಿ ಸ್ನಾನಮಾಡಿ ಬಂದುಬಿಡುತ್ತೇನೆ. ಅಷ್ಟರೊಳಗಾಗಿ ಏನಾದರೂ ಪಾಕವಾಗಬೇಕಲ್ಲ?"

"ಏನು ಅಪ್ಪಣೆಯಾದರೆ ಅದು ಸಿದ್ಧವಾಗುತ್ತದೆ."

"ಮಾನಸಸೃಷ್ಟಿ ಬೇಡಿ. ಮಾನವಸೃಷ್ಟಿಯಾಗಲಿ. ಪರಮಾನ್ನವಾದರೆ ಸುಲಭ. ಬೇಗ ಆಗುತ್ತದೆ ಅಲ್ಲವೆ?"

"ಹೌದು."

"ಆದರೆ ಒಂದು ಮಾತು. ನಾನೇನೋ ಬೇಗನೇ ಬರಬೇಕು ಎಂದಿದ್ದೇನೆ. ಎಷ್ಟೇ ಆದರೂ ನಾನು ವೇದಾಭ್ಯಾಸ ಜಡ. ನರ್ಮದಾ ನದಿಯಂತೂ ಕೇವಲ ಶಿವಮಯವಾದುದು. ಆ ಶಿವಸನ್ನಿಧಿಯಲ್ಲಿ ಥಟ್ಟನೆ ಸಮಾಧಿ ಬಂದು ಕೊಂಚ ನಿದಾನವಾದರೂ, ಆ ಪರಮಾನ್ನ ಬಿಸಿಯಾಗಿರುವಂತೆ ಇಟ್ಟಿರಿ. ಆಗಬಹುದಷ್ಟೆ?"

"ಆಗಬಹುದು."

"ಸರಿ. ನಾನಿನ್ನು ಹೋಗಿ ಬರುತ್ತೇನೆ. ಆದಷ್ಟು ಬೇಗ ಬರುತ್ತೇನೆ. ಬ್ರಾಹ್ಮಣ ದೇಹ. ಇಲ್ಲದಿದ್ದರೆ, ಏನಾದರೂ ಶಾಂತಿ ಮಾಡಿಕೊಂಡೇ ಹೋಗಬೇಕು ಎನ್ನುವ ಮಟ್ಟಿಗಿದೆ, ವೈಶ್ವಾನರನ ಕೋಪ" ಎಂದು ನಗುತ್ತ ಕಮಂಡಲುವಿನೊಡನೆ ನದಿಯಕಡೆ ಹೊರಟರು. ಶಿಷ್ಯನು ದಾರಿಯನ್ನು ತೋರಿಸಿಕೊಂಡು ಕರೆದುಕೊಂಡು ಹೋದನು.

ವಿಶ್ವಾಮಿತ್ರರು ತಾವೂ ನದಿಗೆ ಹೋಗಿ ಸ್ನಾನವನ್ನು ಯಥಾವಿಧಿಯಾಗಿ ಆದಷ್ಟು ಬೇಗ ಮುಗಿಸಿಕೊಂಡು ಬಂದು ಒಲೆ ಹೊತ್ತಿಸಿಟ್ಟರು. ಒಂದು ಗಳಿಗೆ

ಯೊಳಗಾಗಿ ಪಾಯಸವು ಸಿದ್ಧವಾಯಿತು. ಮಾಡಿದವರ ಶ್ರದ್ಧಾಭಕ್ತಿಗಳ ಪ್ರಕಟರೂಪವೋ ಎಂಬಂತೆ, ಆ ಪಾಯಸದ ಸುವಾಸನೆ ಸುತ್ತಮುತ್ತಲೂ ಪಸರಿಸಿ, ಹಸಿವಿಲ್ಲದವರಿಗೂ ಹಸಿವುಂಟುಮಾಡುವಂತಿದೆ. ಅದರ ಸುಗಂಧ ಆಶ್ರಮದಲ್ಲೆಲ್ಲಾ ಹಬ್ಬಿದೆ.

ಅಷ್ಟು ಹೊತ್ತಾಯಿತು: ಇನ್ನೂ ಅಷ್ಟು ಹೊತ್ತಾಯಿತು. ವಸಿಷ್ಠರು ಬರಲಿಲ್ಲ. ಶಿಷ್ಯನೊಬ್ಬನು ಹೋಗಿ ನೋಡಿದನು. ಭಸ್ಮೋದ್ಧೂಳಿತ ಗಾತ್ರ ರಾಗಿ, ಪದ್ಮಾಸನದಲ್ಲಿ ವಸಿಷ್ಠರು ಕುಳಿತಿದ್ದಾರೆ. ಇನ್ನೂ ಅಷ್ಟು ಹೊತ್ತಾ ಯಿತು. ವಿಶ್ವಾಮಿತ್ರರು ತಾವೇ ಹೋಗಿ ನೋಡಿದರು. ಅವರಿಗೆ ಸಮಾಧಿ ಬಂದಿದೆ. ಅದೂ ಶಿಥಿಲ ಸಮಾಧಿಯಲ್ಲ: ದೃಢ ಸಮಾಧಿ. ಯಾವಾಗ ಬಹಿ ರ್ಮುಖರಾಗುವರೋ? ಮಾಡಿರುವುದು ಪಾಯಸ. ಅದೋ ಬೆಂಕಿಯ ಮೇಲಿಟ್ಟರೆ ತಳ ಹತ್ತುತ್ತದೆ: ತೆಗೆದಿಟ್ಟರೆ ಆರಿಹೋಗುತ್ತದೆ. ಆರಿಹೋದರೆ ತಂಗುಳಾಗಿ ಗ್ರಹಣಕ್ಕೆ ಅಯೋಗ್ಯವಾಗುತ್ತದೆ.

'ಅಡುಗೆಯು ಬಿಸಿಯಾಗಿರುವವರೆಗೂ ಅದರಲ್ಲಿ ಪ್ರಾಣಶಕ್ತಿಯಿರು ವುದು. ಅನಂತರ ಅದರಲ್ಲಿ ತಣ್ಣಗಾಗುತ್ತ ಬಂದಹಾಗೆಲ್ಲ ಅಪಾನಶಕ್ತಿಯು ಬರುವುದು. ಅದರಲ್ಲಿರುವ ಆಹಾರ ಯೋಗ್ಯತೆಯು ನಷ್ಟವಾಗುವುದು. ಪಾಯಸವೋ ಬಹು ಸುಲಭವಾಗಿ ಆರುವುದು. ಹಳಸುವುದು. ಭಗವಾನ ರೇಕೆ ಹೀಗೆ ಮಾಡಿದರು? ಬೇಕೆಂದೇ ಮಾಡಿರಬಹುದೇ? ಇರಬೇಕು. ಹೌದು. ಹೌದು. ಅಂದು ಪರಿಷತ್ತಿನಲ್ಲಿ ನಮ್ಮ ಪರೀಕ್ಷೆಯು ವಸಿಷ್ಠಮುಖ ವಾಗಿ ನಡೆಯಬೇಕೆಂದು ಗೊತ್ತಾಗಿತ್ತು. ಈಗ ಇವರು ದಯಮಾಡಿರುವುದು ಅದಕ್ಕೇ!'

"ಆಯಿತು. ಪಾಯಸದ ಪರೀಕ್ಷೆಯೇಕೆ? ಸರಿ. ಸರಿ. ದೇಶ ಕಾಲ ಸ್ವರೂಪನಾಗಿ ಎಲ್ಲವನ್ನೂ ಪಾಕಮಾಡುವ ವೈಶ್ವಾನರನನ್ನು ನಿರೋಧಿಸಿ, ಏಕ ಸ್ಥಿತಿಯನ್ನು ಕಾಪಾಡಬಲ್ಲೆನೇ ಇಲ್ಲವೇ ಎಂಬುದು ಈಗಿನ ಪರೀಕ್ಷೆ ನಡೆಯ ಬೇಕಾದುದು. ಲೋಕರಕ್ಷಣಕ್ಕೋಸ್ಕರ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿ ದವರು ಅವು ಪಾಕಾಭಿಮುಖವಾಗಿ ಮುಂದೆ ನುಗ್ಗುವುದನ್ನೂ ತಡೆಯಬಲ್ಲವ ರಾಗಿರಬೇಕು. ನಿಜ. ಭಗವಾನರು ಮಾಡಿದುದು ಸರಿ. ನಾನೂ ಈ ಪರೀಕ್ಷೆಯಲ್ಲಿ ಗೆಲ್ಲಲೇಬೇಕು. ಆಗಲಿ. ದೇವತೆಗಳಿದ್ದಾರೆ. ಗೆಲ್ಲಿಸುತ್ತಾರೆ. ನನಗೇಕೆ?

ವಿಶ್ವಾಮಿತ್ರರು ಶಿಷ್ಯನನ್ನು ಕರೆದರು: "ಆಗಲೇ ನಡುಹಗಲಾಗಿದೆ. ಇನ್ನು ಒಂದು ಝಾವ ನೋಡಿ. ಭಗವಾನರು ಬಂದರೆ ಸರಿ. ಇಲ್ಲವಾದರೆ, ನೀವು ಅಡುಗೆಮಾಡಿ ಊಟ ಮಾಡಿಬಿಡಿ. ನಾನೂ ಸಮಾಧಿಯನ್ನು ಅವಲಂಬಿಸುತ್ತೇನೆ. ಭಗವಾನರು ಬರುವವರೆಗೂ ನಾನೂ ಸಮಾಧಿಯಲ್ಲಿ ಇರುತ್ತೇನೆ. ಎರಡು ದಿನ ನಮಗಾಗಿ ಕಾದಿದ್ದು ಮೂರನೆಯ ದಿನ ನೀವೆಲ್ಲರೂ ಯಥೇಚ್ಛವಾಗಿ ಹೋಗಿ ಬನ್ನಿ. ಮುಂದೆ ಹಿಮಾಲಯದಲ್ಲಿ ಬ್ರಹ್ಮರ್ಷಿ ಪರಿಷತ್ತು ಸೇರುವುದು. ಆಗ ನಾವು ಒಬ್ಬರನ್ನೊಬ್ಬರು ನೋಡುವುದು" ಎಂದು ಅವರಿಗೆ ಹೇಳಬೇಕಾದುದನ್ನೆಲ್ಲಾ ಹೇಳಿ, ತಾವು ಪರ್ಣಶಾಲೆಯಲ್ಲಿ ಒಂದು ಮೂಲೆಯಲ್ಲಿ ಪಾಯಸದ ಪಾತ್ರೆಯನ್ನು ನೆತ್ತಿಯ ಮೇಲೆ ಇಟ್ಟುಕೊಂಡು ಸಮಾಧಿಯಲ್ಲಿ ಕುಳಿತರು. ದೇಹದಲ್ಲಿರುವ ವೈಶ್ವಾನರನನ್ನು ಪ್ರಜ್ವಾಲಿಸಿ, ಆ ಪರಮಾನ್ನದಲ್ಲಿರುವ ಅನ್ನಶಕ್ತಿಯು ಜರ್ಜರಿತವಾಗದಂತೆ ಅದನ್ನು ಕಾಪಾಡಬೇಕೆಂದು ಆತನನ್ನು ಪ್ರಾರ್ಥಿಸಿಕೊಂಡು ಪ್ರಾಣಾಪಾನಗಳನ್ನು ಒಂದರಲ್ಲಿ ಒಂದನ್ನು ಬೆಸೆದರು. ಉದಾನವನ್ನು ಪ್ರಣವನಾದ ಮಾಡುತ್ತಿರಬೇಕೆಂದು ಒಪ್ಪಿಸಿದರು. ವ್ಯಾನವು ಜಾಗ್ರತೆಯಾಗಿ ದೇಹವನ್ನು ಕಾಯ್ದುಕೊಂಡಿರುವಂತೆ ಕೇಳಿಕೊಂಡರು. ಸಮಾನವು ಶಾಂತವಾಗಿ ಕುಳಿತಿರಬೇಕೆಂದು ಬೇಡಿಕೊಂಡರು. ತಾವು ಪರಮಾನ್ನವಾಗಿ, ಪರಮಾನ್ನವು ತಾವಾಗಿ, ಸಮಾಧಿಯಲ್ಲಿ ಕುಳಿತರು.

ಹೀಗೆ ವಿಶ್ವಾಮಿತ್ರರು ಅಜರ, ಅಮರ ಭಾವದಲ್ಲಿ ಕುಳಿತುಕೊಳ್ಳಲು ಆ ಪರ್ಣಶಾಲೆಯು ಜಗದ್ಧರ್ಮವನ್ನು ಮೀರಿತು. ಎಲ್ಲವನ್ನೂ ಜಡಚೇತನವೆಂಬುದನ್ನು ಮರೆತು ಸರ್ವವನ್ನೂ ಪಾಕಾಭಿಮುಖವಾಗಿ ಮಾಡಿ ಪರಿಣಾಮಗೊಳಿಸುತ್ತಿರುವ ದಿಕ್ಕಾಲಗಳು ಆ ಮಹಾಮುನೀಂದ್ರನು ನಿಶ್ಚಲನಾಗಿ ಅಜರ, ಅಮರ, ದಿವ್ಯ, ಅನ್ನಸ್ವರೂಪನಾಗಿ ಕುಳಿತಿರುವ ದೇಶವನ್ನು ಅನುಗ್ರಹಿಸಿ, ತಮ್ಮ ಪ್ರಭಾವವು ಅಲ್ಲಿ ಪ್ರಸರಿಸದಂತೆ ಆತನ ಸುತ್ತಲೂ ಒಂದು ಕೋಟೆಯನ್ನು ಕಟ್ಟಿ ಅದಕ್ಕೆ ಕಾವಲಾಗಿ ತಾವೇ ಕುಳಿತರು.

---

## ಎಪ್ಪತ್ತೆರಡನೆಯ ತರಂಗ

ಭಗವಾನ್ ವಸಿಷ್ಠರು ಸುದೀರ್ಘ ಕಾಲವಾದಮೇಲೆ ಸಮಾಧಿಯಿಂದ ಎದ್ದರು. ಏನೋ ಒಂದು ಗಳಿಗೆ ಹೊತ್ತು ಪ್ರಬಲವಾದ ಯೋಚನೆಯಲ್ಲಿದ್ದು, ಅದನ್ನು ಬಿಟ್ಟು ಬಟ್ಟೆಯನ್ನು ಒದರಿಕೊಂಡು ಮೇಲಕ್ಕೆದ್ದವರಂತೆ, ಹಸನ್ಮುಖಿಗಳಾಗಿ ಸಮಾಧಿಯನ್ನು ಬಿಟ್ಟೆದ್ದು ವಿಶ್ವಾಮಿತ್ರರು ಆಶ್ರಮಮಾಡಿರುವಲ್ಲಿಗೆ ಬಂದರು.

ಅಲ್ಲಿ ವಿಶ್ವಾಮಿತ್ರರು ಕುಳಿತಿರುವ ಸ್ಥಿತಿಯನ್ನು ಕಂಡು ಅವರಿಗೆ ಬಹು ಸಂತೋಷವಾಯಿತು. 'ಈತನಲ್ಲವೆ ಬ್ರಹ್ಮರ್ಷಿ! ಇಂತಹ ಭಾಗ್ಯ ಯಾರಿಗುಂಟು? ಈತನು ಹೀಗಾಗುವುದನ್ನು ಕಾಣುವ ಭಾಗ್ಯವು ನಮ್ಮ ಪಾಲಿಗೆ ಬಂತಲ್ಲ! ಭಲೆ, ಭಲೆ' ಎಂದು ಅತಿಶಯವಾದ ಆನಂದವನ್ನು ಅನುಭವಿಸುತ್ತಾ ವಾಮದೇವರನ್ನು ನೆನೆದರು.

ವಾಮದೇವರು ಬರುವುದು ಕೊಂಚ ತಡವಾಯಿತು. ಅವರನ್ನು ನಿರೀಕ್ಷಿಸುತ್ತ ವಸಿಷ್ಠರು, ವೇದಾಧ್ಯಯನಮಾಡುತ್ತ ಕುಳಿತರು. ಅವರು ವೇದಮಂತ್ರಗಳನ್ನು ಹೇಳುತ್ತಿದ್ದರೆ, ಆಯಾ ಅಕ್ಷರಗಳು ಒಂದೊಂದಾಗಿ ಹೊರಬೀಳುತ್ತಿದ್ದ ಹಾಗೆಯೇ ನೀರಿಗೆಸೆದ ಕಲ್ಲುಗಳಂತೆ ಶಬ್ದತರಂಗಗಳನ್ನೆಬ್ಬಿಸಿ, ಆಯಾ ತರಂಗಗಳನ್ನು ಹಿಡಿದೆಳೆದು ತಂದು ಅವನ್ನೆಲ್ಲ ಕಲೆಹಾಕಿ, ಅವುಗಳನ್ನು ಒಂದು ಅಚ್ಚಿನಲ್ಲಿ ಹಾಕಿ ಮೂರ್ತಿಯನ್ನು ಎರಕಹೊಯ್ದಂತೆ ಆಗಿ ದೇವತೆಗಳೆಲ್ಲ ಅಲ್ಲಿ ಪ್ರಸನ್ನರಾಗಿ ದೃಗ್ಗೋಚರರಾಗುತ್ತಿದ್ದಾರೆ. ಆಶ್ರಮಭೂಮಿಯೆಲ್ಲ ದೇವಭೂಮಿಯಾಗಿ ಹೋಗಿದೆ.

ದೇವತೆಗಳು ಬಂದರು: ದೇವಗುರುವು ಬಂದನು. ಬ್ರಹ್ಮಣಸ್ಪತಿಯಾದ ಆತನ ಕೋರಿಕೆಯಂತೆ ಸಾಕ್ಷಾತ್ ಚತುರ್ಮುಖ ಬ್ರಹ್ಮನೂ ಬಂದಿದ್ದಾನೆ. ವಸಿಷ್ಠರು ಅವರಿಗೆಲ್ಲ ಯಥೋಚಿತವಾಗಿ ಅರ್ಚನೆಮಾಡಿದ್ದಾರೆ. ಆ ವೇಳೆಗೆ ವಾಮದೇವರೂ ಬಂದರು.

ಗುರುಗಳು ಶಿಷ್ಯನನ್ನು ಕರೆದು "ವಾಮದೇವ, ಈ ಭಾಗ್ಯವನ್ನು ನೋಡು" ಎಂದು ವಿಶ್ವಾಮಿತ್ರರನ್ನು ತೋರಿಸಿದರು. ದ್ಯಾವಾಪೃಥ್ವಿಯರೂ ರುದ್ರನೂ ಕಾವಲಾಗಿರಲು, ವಿಶ್ವಾಮಿತ್ರರ ರೂಪದಿಂದ ಸೋಮಮಂಡಲವೇ

ಕುಳಿತಿದೆ. ಅಗ್ನಿಯಂತೆ ಉಜ್ವಲವಾಗಿ ಬೆಳಗುತ್ತಿದ್ದರೂ ಹಿಮಕ್ಕಿಂತ ಶೀತ ವಾಗಿರುವ ಆ ಸೋಮರಾಶಿಯನ್ನು ಕಂಡು ವಾಮದೇವರಿಗೆ ಆನಂದದಿಂದ ಕಣ್ಣಲ್ಲಿ ನೀರು ಕರೆಯಿತು. ಭಗವಾನ್ ವಸಿಷ್ಠರು "ವಾಮದೇವ, ನೋಡಿ ದೆಯಾ ? ಈ ತಪೋರಾಶಿಯನ್ನು. ಅನ್ನವು ತನ್ನಲ್ಲಿರುವ ಅಗ್ನಿಗೇ ಆಹಾರ ವಾಗಿ ಜೀರ್ಣವಾಗಿ ಪರ್ಯುಷಿತವಾಗುವುದು. ಅದನ್ನು ತಡೆಯಬಲ್ಲವನು, ಅನ್ನದಲ್ಲಿರುವ ಅಗ್ನಿಯನ್ನೂ ಶಮನಮಾಡಬಲ್ಲವನು ಲೋಕ ಲೋಕಗಳನ್ನೆಲ್ಲ ಬ್ರಹ್ಮಾಂಡ ಬ್ರಹ್ಮಾಂಡಗಳನ್ನು ಒಂದು ಗಳಿಗೆಯೊಳಗಾಗಿ ಸೃಷ್ಟಿಮಾಡಿ ಸಂಹಾರಮಾಡಿ ಮತ್ತೆ ಸೃಷ್ಟಿಮಾಡಬಲ್ಲನು. ಇಂತಹವನಿಗೆ ಪಂಚಭೂತ ಗಳೆಲ್ಲವೂ ವಶವರ್ತಿಗಳಾಗಿರುವುವು. ಇಂತಹವನನ್ನು ದೇವತೆಗಳೆಲ್ಲರೂ ಪೂಜಿಸುವರು. ಈತನು ಬ್ರಹ್ಮರ್ಷಿ. ಇಗೋ, ದೇವತೆಗಳೆಲ್ಲರೂ ಅನುಗ್ರಹ ಮಾಡಿ ಬಂದಿರುವರು. ಚತುರ್ಮುಖನಾದಿಯಾಗಿ ನಾವೆಲ್ಲರೂ ನಿನ್ನನ್ನು ಕಾದಿರುವೆವು. ರುದ್ರನನ್ನು ಆರಾಧಿಸಿ ಪ್ರಸನ್ನನನ್ನು ಮಾಡಿಕೊಂಡು ಆತನ ಸಮಾಧಿಯನ್ನು ಮುಕ್ತಾಯಗೊಳಿಸಿ ಆತನನ್ನು ಬಹಿರ್ಮುಖಗೊಳಿಸು. ನೀನು ಆತನಿಗೆ ಮಿತ್ರನು : ರುದ್ರನ ಪರಮ ಭಕ್ತನು. ನೀನು ಆ ಕೆಲಸವನ್ನು ಮಾಡು" ಎಂದು ಆಜ್ಞಾಪಿಸಿದರು. ವಾಮದೇವರು ಹಾಗೆಯೇ ಮಾಡಿದರು.

ಭಗವಾನರು ಬಹಿರ್ಮುಖರಾಗಿ ಕಣ್ಣು ತೆರೆಯುತ್ತಿದ್ದಹಾಗೆಯೇ ದೇವತೆ ಗಳೆಲ್ಲರೂ ಅವರ ಕಣ್ಣೆದುರಾಗಿ ಒಂದು ಸಣ್ಣ ಮಂಜಿನ ಮೋಡವನ್ನಿಟ್ಟರು. ಅದು ಆ ಕಣ್ಣಿನ ನೋಟದ ತೀವ್ರತೆಯಲ್ಲಿ ಕರಗಿ ಸಣ್ಣ ಮಳೆಯಾಗಿ ಅವರ ಮೇಲೆ ಕರೆಯಿತು. ದೇವತೆಗಳು ಹೂ ಮಳೆಗರೆದರು. ಆ ಸಣ್ಣ ಮಳೆ, ಹೂವಿನ ಮಳೆಗಳಿಂದ ಭಗವಾನ್ ವಿಶ್ವಾಮಿತ್ರರು ಪ್ರಕೃತಿಸ್ಥರಾದಮೇಲೆ ಚತು ರ್ಮುಖನು ದರ್ಶನವಿತ್ತು "ವಿಶ್ವಾಮಿತ್ರ, ನೀನು ಬ್ರಹ್ಮರ್ಷಿಯೆಂದು ನಿನ್ನ ದರ್ಶನಕ್ಕಾಗಿ ನಾವೆಲ್ಲರೂ ಬಂದಿರುವೆವು. ಬ್ರಹ್ಮರ್ಷಿಗಳಾದ ವಸಿಷ್ಠ ವಾಮ ದೇವರನ್ನು ಕರೆದು ತಂದಿರುವೆವು. ನಮ್ಮ ಕಾಣಿಕೆಗಳನ್ನು ಒಪ್ಪಿಸಿಕೊಂಡು ನಮ್ಮನ್ನು ಅನುಗ್ರಹಿಸು" ಎಂದನು.

ಭಗವಾನರು ಎಲ್ಲರನ್ನೂ ದರ್ಶನಮಾಡಿ ಎಲ್ಲರಿಗೂ ನಮಸ್ಕಾರಾದಿ ಗಳಿಂದ ಅರ್ಚನೆಯನ್ನು ಒಪ್ಪಿಸಿದರು. ವಸಿಷ್ಠರು ಮುಂದೆ ಬಂದು ದೇವತೆ ಗಳನ್ನು ಸಂಬೋಧಿಸಿದರು : "ಜಗದ್ರಕ್ಷಣಕ್ಕೆ ನಿಯಾಮಕರಾಗಿರುವ ದೇವಾದಿ

ದೇವತೆಗಳೇ, ತಾವೆಲ್ಲರೂ ನನಗೆ ಕೊಟ್ಟಿರುವ ಅಧಿಕಾರದಿಂದ ತಮ್ಮೆಲ್ಲರ ಎದುರಿನಲ್ಲಿ ಈ ದಿನ ಈ ಘೋಷಣವನ್ನು ಮಾಡುತ್ತಿರುವೆನು. ಇಂದಿನಿಂದ ವಿಶ್ವಾಮಿತ್ರರು ಬ್ರಹ್ಮರ್ಷಿಗಳು. ಬ್ರಹ್ಮರ್ಷಿ ಪರಿಷತ್ತು ನಚಿಕೇತಾಶ್ರಮದಲ್ಲಿ ಸೇರಿ ಈತನು ಬ್ರಹ್ಮರ್ಷಿಯಾಗಿದ್ದಾನೆ : ಆದರೂ ವಸಿಷ್ಠಮುಖವಾಗಿ ಪರೀಕ್ಷೆ ಯಾದ ಮೇಲೆ ಇದನ್ನು ಎಲ್ಲರೂ ಒಪ್ಪಿಕೊಳ್ಳಬೇಕು ಎಂದು ಗೊತ್ತು ಮಾಡಿತು. ಬ್ರಹ್ಮರ್ಷಿಗೆ ಇರಬೇಕಾದ ಗುಣಗಳಲ್ಲೆಲ್ಲ ಮೊದಲನೆಯದು ಅಗ್ನೀ ಷೋಮ ಮಂಡಲದವರೆಗಿನ ಅಧಿಕಾರ. ಅಗ್ನಿಯನ್ನು ಸೋಮವನ್ನಾಗಿಯೂ, ಸೋಮವನ್ನು ಅಗ್ನಿಯನ್ನಾಗಿಯೂ ಮಾಡಬಲ್ಲ ಮಹನೀಯನು ಬ್ರಹ್ಮರ್ಷಿ. ದೇವತೆಗಳಾದ ತಾವು ತಮಗೆ ಬೇಕಾದಾಗ ಬಂದು ಕೇಳಿದರೆ ತಮಗೆ ಬೇಕಾದು ದನ್ನು ಕೊಡಬಲ್ಲವನು ಬ್ರಹ್ಮರ್ಷಿ. ಋಷಿಗಳೂ ಪಿತೃಗಳೂ ಬೇಕೆಂದಾಗ ಅವರಿಗೆ ಬೇಕಾದುದನ್ನು ಕೊಡಬಲ್ಲವನು ಬ್ರಹ್ಮರ್ಷಿ. ರಾಕ್ಷಸರ ಬಲವು ಒಂದುವೇಳೆ ಮಿತಿಮೀರಿ ದೇವತೆಗಳನ್ನು ಮುರಿದರೆ, ಆಗ ದೇವಪಕ್ಷದಲ್ಲಿ ನಿಂತು ರಾಕ್ಷಸರನ್ನು ತಿರಸ್ಕರಿಸಬಲ್ಲವನು ಬ್ರಹ್ಮರ್ಷಿ. ಜಗತ್ತಿನ ಸ್ಥಿತಿಯನ್ನು ಕಾಪಾಡುವುದಕ್ಕೆ ಪರ್ವತಗಳು ಹೇಗೆ ಮುಖ್ಯವೋ ಹಾಗೆಯೇ ಸತ್ಯ ಧರ್ಮ ಜ್ಞಾನ ವೈರಾಗ್ಯಗಳನ್ನು ಕಾಯುವುದಕ್ಕೆ ಅವಶ್ಯವಾಗಿ ಬೇಕಾದ ರಕ್ಷಣ ಪೋಷಣಾಧಿಕಾರಿ ಬ್ರಹ್ಮರ್ಷಿ. ನಾನು ಹರಿಶ್ಚಂದ್ರ ಯಜ್ಞದಲ್ಲಿಯೇ ಈತನು ಬ್ರಹ್ಮರ್ಷಿಯೆಂದು ಉದ್ಘೋಷಿಸಬೇಕಾಗಿತ್ತು. ಆದರೂ ಪರಿಷತ್ತು ಆಜ್ಞಾಪಿ ಸಿದ್ದ ಒಂದು ಮಹತ್ಕಾರ್ಯವನ್ನು, ಇತರರು ಸಾಧಿಸುವುದಕ್ಕೆ ಆಗದುದನ್ನು ಸಾಧಿಸಲಿ, ಏನು ಅವಸರ ಎಂದು ಸುಮ್ಮನಿದ್ದೆನು. ನಾವು ಜನ್ಮತಃ ಬ್ರಹ್ಮರ್ಷಿ ಗಳಾಗಿ ಬಂದು ಲೋಕರಕ್ಷಣಾ ಕಾರ್ಯದಲ್ಲಿ ನಿಯುಕ್ತರಾದವರು. ನಾವು ಸಂಪ್ರದಾಯಗಳಂತೆಯೇ ನಡೆಯಬೇಕು. ನಮಗೆ ಹಸು ಹಸು, ಕುದುರೆ ಕುದುರೆ, ಕುರಿ ಕುರಿ, ನಾವು ಜಾತಿಧರ್ಮಕ್ಕೆ ಬದ್ಧರು. ಆದರೆ ನಿಯತಿಯು ಲೋಕದಲ್ಲಿ ಆಗಾಗ ಪ್ರತಿವಾದವನ್ನು ತರುತ್ತದೆ. ಈಗ ಅಂತಹ ಕಾಲ ಬಂದಿದೆ. ಜಾತಿಯಿಂದ ಬರುವ ಗುಣವನ್ನು ದೀಕ್ಷೆಯಿಂದಲೂ ಪಡೆಯ ಬಹುದು ಎಂಬುದನ್ನು ನಿದರ್ಶನದಿಂದ ತೋರಿಸುವ ಕಾಲ ಬಂದಿದೆ. ಆದರಿಂದ ಬ್ರಹ್ಮರ್ಷಿ ಪರಿಷತ್ತು ಸುಲಭವಾಗಿ ಬ್ರಾಹ್ಮಣ್ಯವನ್ನು ಸಾಧಿಸುವ ದೀಕ್ಷಾವಿಧಿ

ಯೊಂದನ್ನು ಕಂಡುಹಿಡಿಯುವ ಭಾರವನ್ನು ವಿಶ್ವಾಮಿತ್ರರಿಗೆ ವಹಿಸಿತು. ಭಗವಾನ್ ವಿಶ್ವಾಮಿತ್ರರು ಚತುರ್ಮುಖ ಬ್ರಹ್ಮನ ಸೃಷ್ಟಿಯಲ್ಲಿ ಜಾತಿಯಿಂದ ಮಾತ್ರ ವ್ಯಕ್ತವಾಗುವ ಗುಣವನ್ನು ಪ್ರಕಟಮಾಡುವ ಮಂತ್ರಯೋಗ ವೊಂದನ್ನು ಬ್ರಹಣಸ್ಪತಿ ಪೂಷಾ ಗಾಯತ್ರೀದೇವಿಯರ ಅನುಗ್ರಹದಿಂದ ಪಡೆದಿದ್ದಾರೆ. ನಾವು ಅದನ್ನು ಒಪ್ಪಿಕೊಳ್ಳುವ ಹಾಗೆ ಪ್ರಯೋಗಮಾಡಿ ತೋರಿಸಿದ್ದಾರೆ. ಜಾತಿಯಿಂದ ಬ್ರಾಹ್ಮಣರಲ್ಲದ ಹನ್ನೆರಡು ಜನ ಶಿಷ್ಯರಿಗೆ ಆ ಮಂತ್ರವನ್ನು ಉಪದೇಶಮಾಡಿ ಅವರನ್ನು ಬ್ರಾಹ್ಮಣರನ್ನು ಮಾಡಿದ್ದಾರೆ. ಅವರಿಗೆ ಜಾತಿಬ್ರಾಹ್ಮಣರ ಯೋಗ್ಯತೆಯು ಸಂಪೂರ್ಣವಾಗಿದೆ. ಅದನ್ನು ಕಂಡು ನಾವು ಸಂಪೂರ್ಣವಾಗಿ ಸಂತೋಷಪಟ್ಟಿದ್ದೇವೆ. ಈ ಸಂದರ್ಭದಲ್ಲಿ "ವಿಶ್ವಾಮಿತ್ರರು ನಿರ್ವಹಿಸಿರುವ ಈ ಕಾರ್ಯವು ಅದ್ಭುತವಾದುದು: ಅಭೂತ ಪೂರ್ವವಾದುದು. ತಾವೆಲ್ಲರೂ ಅದನ್ನು ಸಮಷ್ಟಿಯಾಗಿ ಅಂಗೀಕರಿಸಬೇಕು: ಎಂದರೆ, ಈ ವಿಶ್ವಾಮಿತ್ರ ಬ್ರಾಹ್ಮಣರು ಹವ್ಯಕವ್ಯಗಳನ್ನು ಕೊಟ್ಟರೆ ತಾವು ಅದನ್ನು ಅಂಗೀಕರಿಸಬೇಕು. ಆಗ ಆ ಬ್ರಾಹ್ಮಣ್ಯವು ಸಾಂಗವಾಗುವುದು. ಇದನ್ನು ಅನುಗ್ರಹಮಾಡಬೇಕು. ಒಟ್ಟಿನಲ್ಲಿ ಈ ದಿನ ಭಗವಾನ್ ವಿಶ್ವಾಮಿತ್ರ ರಿಗೆ ಬ್ರಹ್ಮರ್ಷಿ ಪಟ್ಟಾಭಿಷೇಕ ನಡೆಯಬೇಕಾದುದು ಒಂದು. ಆತನ ಅನುಗ್ರಹ ದಿಂದ ಬ್ರಾಹ್ಮಣರಾಗುವವರೆಗೂ ಹವ್ಯಕವ್ಯ ಪ್ರಧಾನಾಧಿಕಾರ ಕೊಡಬೇಕಾ ದುದು ಒಂದು, ಹೀಗೆ ಎರಡು ಕಾರ್ಯಗಳನ್ನು ತಾವು ನಡೆಸಿಕೊಡಬೇಕು" ಎಂದು ವಸಿಷ್ಠನಾದ ನಾನು ತಮ್ಮನ್ನು ಎಂದರೆ ಚತುರ್ಮುಖಬ್ರಹ್ಮ ಪುರಸ್ಸರ ವಾದ ಈ ದೇವಸಭೆಯನ್ನು ಪ್ರಾರ್ಥಿಸುತ್ತೇನೆ."

ಚತುರ್ಮುಖ ಬ್ರಹ್ಮನು ನುಡಿದನು: "ಭಗವಾನ್ ವಸಿಷ್ಠರು ಹೇಳಿದ ಮೇಲೆ ದೇವರ್ಷಿ ಪಿತೃ ಗಣಗಳಲ್ಲಿ ಅದನ್ನು ಸುಮ್ಮನೆ ಮೌನವಾಗಿ ಅಂಗೀ ಕರಿಸದಿದ್ದರೆ ನಿಯತಿಗೆ ಕೋಪ ಬಂದೀತು. ಅಹಂಕಾರವನ್ನು ಗೆದ್ದಿರುವ ಮಹಾನುಭಾವನ ಮಾತು ಎಂದರೆ ಚತುರ್ಮುಖನೊಬ್ಬನಲ್ಲ; ಪರಬ್ರಹ್ಮವೇ ಅಂಗೀಕರಿಸುವುದು ಎಂದಮೇಲೆ, ಆ ಮಾತು ವೇದಕಲ್ಪವೆಂದಮೇಲೆ ನಾವು ಹೇಳುವುದೂ ಹೇಳಬೇಕಾದುದೂ ಏನೂ ಇಲ್ಲ. ಅದರಿಂದ ಭಗವಾನ್ ವಸಿ ಷ್ಠರು ಸೂಚಿಸಿದ ಎರಡು ಕಾರ್ಯಗಳನ್ನೂ ಮಾಡುವುದಕ್ಕೆ ಒಪ್ಪಿಗೆಯನ್ನು

ಕೊಡಲೇಬೇಕಾಗಿರುವ ಈ ಸಂದರ್ಭದಲ್ಲಿ ಸೃಷ್ಟಿಕರ್ತನ ಅಧಿಕಾರದಿಂದ ಎರಡು ಮಾತನಾಡುತ್ತೇನೆ. ನಾನು ಸೃಷ್ಟಿಮಾಡಿರುವುದು ಎಂದರೆ ಮರವು ಪಲ್ಲವಿಸಿ ಬೆಳೆಯುವುದು. ನಾನು ಮರವನ್ನು ಬೆಳೆಸಿದೆ ಎಂಬಂತೆ ಅದು ನಿಜವೂ ಹೌದು: ಸುಳ್ಳೂ ಹೌದು. ಬ್ರಹ್ಮವು ಅಖಂಡವಾಗಿದ್ದುದು ಖಂಡವಾಗಿ, ಏಕವು ಅನೇಕವಾದಾಗ,-ಹಾಗೆ ಏಕಾಯಿತು? ಯಾವಾಗ ಆಯಿತು? ಎಂಬುದನ್ನು ಯಾರೂ ಕಾಣರು – ಶಕ್ತಿ ಪ್ರಸಾರವಾಯಿತಂತೆ. ಹಾಗೆ ಪ್ರಸಾರವಾದ ಯಾವ ಬ್ರಹ್ಮಶಕ್ತಿಯುಂಟೋ, ಅದು ಶಕ್ತಿಯೋ ಅಶಕ್ತಿಯೋ ಅದನ್ನು ನಾನೂ ಕಾಣೆ. ಅದು ಸೃಷ್ಟಿ ಸ್ಥಿತಿ ಲಯವೆಂಬ ಮೂರು ರೂಪಗಳನ್ನು ಪಡೆದು ಬ್ರಹ್ಮ ವಿಷ್ಣು ರುದ್ರಾತ್ಮಕವಾಗಿ ಒಂದು ವ್ಯವಸ್ಥೆಯನ್ನು ಏರ್ಪಡಿಸಿತು. ಹೀಗೆ ತ್ರಿಮೂರ್ತಿಗಳಿಗೆ ಕಾರಣವಾದ ಆ ಶಕ್ತಿಯು – ವ್ಯವಸ್ಥಾಪಕತೆಯು – ಜಡಚೇತನವೆಲ್ಲದರಲ್ಲಿಯೂ ಇರುವುದು. ಹಿಮದಲ್ಲಿಯೂ ಅಗ್ನಿಯಲ್ಲಿಯೂ ಔಷ್ಣ್ಯವು ಇದ್ದೇ ಇದ್ದರೂ ಒಂದೆಡೆ ಅಭಾವರೂಪವಾಗಿ ಇನ್ನೊಂದೆಡೆ ಭಾವರೂಪವಾಗಿ ಇದ್ದುಕೊಂಡು ಎರಡು ವಿಧವಾದ ಕಾರ್ಯಗಳನ್ನು ಮಾಡುತ್ತಿಲ್ಲವೆ? ಶೀತ – ಉಷ್ಣ ಎಂದು ಎರಡು ನಾಮಗಳಿಂದ ಎರಡು ರೂಪವಾಗಿ ಭಾಸವಾಗುತ್ತಿಲ್ಲವೆ? ಹೀಗೆ ನಾಮರೂಪಗಳಿಂದ ಭಿನ್ನವಾಗಿದ್ದರೂ ನಿಜವಾಗಿಯೂ ಒಂದೇ ಆಗಿರುವ, ವಿರೋಧಾಭಾಸಗಳೆರಡೂ ಏಕವಾಗುವ ಆ ಸರ್ವೋದಯ ಮೂಲವು ಎಲ್ಲೆಲ್ಲಿಯೂ ಇರುವುದು. ಅದು ಎಲ್ಲರಲ್ಲೂ ಇದ್ದು ಎಲ್ಲರ ಕರ್ತೃತ್ವಕ್ಕೆ, ಭೋಕ್ತೃತ್ವಕ್ಕೆ ಕಾರಣವಾಗಿ, ಎಲ್ಲರ ಮನಸ್ಸನ್ನೂ ಕರ್ತೃತ್ವ ಭೋಕ್ತೃತ್ವಗಳಿಗೆ ಪ್ರಚೋದನ ಮಾಡುತ್ತಿರುವುದು. ಪ್ರಚೋದಕವೂ ಪ್ರಚೋದನವೂ ತಾನೇ ಆಗಿರುವ ಆ ಪರಬ್ರಹ್ಮವು ಈ ಮೂರ್ತಜಗತ್ತಿನಲ್ಲಿ ಸವಿತೃವಾಗಿರುವುದು. ಆ ಸವಿತೃ ಪ್ರತಿಯೊಂದು ಪ್ರಾಣಿಯಲ್ಲಿಯೂ ಗುಹಾಶಯನಾಗಿರುವನು. ಈ ತತ್ವವನ್ನು ಕಂಡವನು ಬ್ರಾಹ್ಮಣನು. ಜಾತಿಯಿಂದ ಬ್ರಾಹ್ಮಣನಾದವನು ಅಧ್ಯಯನ ಇಜ್ಯಾದಿಗಳಿಂದ ಇದನ್ನು ಸಾಧಿಸಿದರೆ, ದೀಕ್ಷಾಮಾರ್ಗದಿಂದ ಗುರುಮುಖವಾಗಿ ಇದನ್ನು ಇತರರು ಸಾಧಿಸಲಿ. ಇಂದಿನಿಂದ, ಜಾತಿಬ್ರಾಹ್ಮಣನೂ ಉಪನಯನ ಮಾಡಿಕೊಂಡು ಈ ಪ್ರಾಜಾಪತ್ಯ ವ್ರತವನ್ನು ಸಾಧಿಸಲಿ. ಇನ್ನು ಮುಂದೆ ಯಾರೇ ಆಗಲಿ ಈ ಪ್ರಾಜಾಪತ್ಯವನ್ನು ಸಾಧಿಸಿ ಸಿದ್ಧರಾದರೆ ಅವರಿಗೆ ಬ್ರಾಹ್ಮಣ್ಯ ಇಲ್ಲವಾದರೆ ಇಲ್ಲ ಎಂದಾ

ಗಲಿ. ಈ ಮಹಾನುಭಾವರಿಬ್ಬರ, ಎಂದರೆ ಭಗವಾನ್ ವಸಿಷ್ಠರ, ಭಗವಾನ್ ವಿಶ್ವಾಮಿತ್ರರ, ಅನುಗ್ರಹವನ್ನು ಸಂಪಾದಿಸಿದವರಿಗೆ ಮಾತ್ರ ಈ ವ್ರತವು ಸಿದ್ಧಿಯಾಗಲಿ. ಇದು ತಮ್ಮೆಲ್ಲರಿಗೂ ಸಮ್ಮತವೇ ?" *

ದೇವಸಭೆಯು ಈ ಮಾತನ್ನು ಒಪ್ಪಿತು. ಸವಿತೃದೇವನ ಪರವಾಗಿ ಆದಿತ್ಯರು ಆ ಮಾತಿಗೆ ಒಪ್ಪಿಗೆಯನ್ನಿತ್ತರು. ದೇವತೆಗಳು ಪರಮ ಸಂತೋಷ ದಿಂದ ವಸಿಷ್ಠ ಚತುರ್ಮುಖರನ್ನು ಎದುರಿಗಿಟ್ಟುಕೊಂಡು ಸಪ್ತರ್ಷಿಗಳನ್ನು ಕರೆಸಿಕೊಂಡು ಬ್ರಹ್ಮರ್ಷಿ ಪಟ್ಟಾಭಿಷೇಕವನ್ನು ಮಾಡಿದರು.

ಅತ್ತ ಪಟ್ಟಾಭಿಷೇಕವು ನಡೆಯುತ್ತಿದ್ದಾಗ ಭಗವಾನ್ ವಸಿಷ್ಠರು ಭಗವಾನ್ ವಾಮದೇವರನ್ನು ಕರೆದು "ಇದೆಲ್ಲ ನಿನ್ನ ಪ್ರಭಾವ. ಇದಕ್ಕಾಗಿಯೇ ನಿನ್ನನ್ನು ನಿಯೋಜಿಸಿದುದು. ಇದಿಷ್ಟೂ ಅಂದು ಯಜ್ಞೇಶ್ವರನು ಕಾಲದ ತೆರೆಯೆಳೆದು ತೋರಿಸಿದ್ದ. ಅದಿರಲಿ. ಇತ್ತನೋಡು" ಎಂದರು.

ದೇವ ಸಭೆಯಲ್ಲಿ ಕುಣಿಯುತ್ತಿದ್ದ ಅಪ್ಸರೆಯರಿಗಿಂತ, ಹೆಚ್ಚಾಗಿ, ಅಲ್ಲಿ ಗಾನಮಾಡುತ್ತಿರುವ ಗಂಧರ್ವರಿಗಿಂತ ಹೆಚ್ಚಾಗಿ, ಜಗತ್ತಿಗೆ ಜಗತ್ತೇ ಬ್ರಹ್ಮಾಂ ಡಕ್ಕೆ ಬ್ರಹ್ಮಾಂಡವೇ ಆನಂದದಿಂದ ಗಾನ ನರ್ತನಾದಿಗಳಲ್ಲಿ ತೊಡಗಿರುವು ದನ್ನು ವಾಮದೇವರು ಕಂಡರು. ವಿಶ್ವಕ್ಕೆ ವಿಶ್ವವೇ ತನ್ನ ಆನಂದವು ಕಾಯು ತ್ತಿರುವ ಹಾಲಿನಂತೆ ಉಕ್ಕುತ್ತಿರುವುದನ್ನು ಕಂಡಂತೆ ಅವರಿಗೆ ಬೋಧೆ ಯಾಯಿತು.

---

## ಎಪ್ಪತ್ತಮೂರನೆಯ ತರಂಗ

ಭಗವಾನ್ ಯಾಜ್ಞವಲ್ಕ್ಯರ ಆಹ್ವಾನದಂತೆ ಮಂದಾಕಿನೀ ಅಲಕನಂದಾ ನದಿಗಳ ಸಂಗಮದಲ್ಲಿ ಭಗವಾನ್ ಪಿಪ್ಪಲಾದರ ಆಶ್ರಮದಲ್ಲಿ ಬ್ರಹ್ಮರ್ಷಿ ಪರಿ ಷತ್ತು ಭಗವಾನ್ ನಚಿಕೇತರ ಅಧ್ಯಕ್ಷತೆಯಲ್ಲಿ ಸೇರಿದೆ. ಭಗವತೀ ಗಾರ್ಗಿ ಯವರು ಅತಿಥಿಪೂಜೆಗೆ ನಿಯುಕ್ತರಾಗಿದ್ದಾರೆ. ಒಂದು ವಿಶೇಷವೇನೆಂದರೆ,

---

* "ವಿಶ್ವಾಮಿತ್ರ ಗಾಯತ್ರಿಗೆ ವಸಿಷ್ಠ ಶಾಪವುಂಟು. ಅದರಿಂದ ಬಿಡುಗಡೆ ಯಾಗುವವರೆಗೂ ಗಾಯತ್ರಿಯು ಸಿದ್ಧಿಸುವುದಿಲ್ಲ" ಎಂದು ಹಿರಿಯರು.

ಸರಸ್ವತೀ ನದಿಯ ತೀರದಲ್ಲಿ ಯಾಗಮಾಡುತ್ತಿದ್ದ ಋಷಿಗಣವೊಂದು ಅನಾರ್ಯ ಋಷಿಗಣವೊಂದನ್ನು ಕಂಡಿದೆ: ಆ ಅನಾರ್ಯಗಣದಲ್ಲಿ ಹನ್ನೆರಡು ಜನರಿದ್ದಾರೆ. ಅವರಿಗೆ ಕ್ರಮಾಧ್ಯಯನವಾಗಿಲ್ಲ. ಆದರೂ ಅವರೆಲ್ಲ ಬ್ರಹ್ಮಜ್ಞರು. ಅವರು ಕರೆದ ಕಡೆಯಲ್ಲಿ ದೇವತೆಗಳು ಬರುತ್ತಾರೆ. ಅವರು ದೇವ ಭಾಷೆಯಲ್ಲಿರಲಿ, ಪ್ರಾಕೃತ ಭಾಷೆಯಲ್ಲಿಯೂ ಮಂತ್ರಗಳನ್ನು ರಚಿಸಬಲ್ಲ ಮಂತ್ರಕೃತ್ತುಗಳು. ಅವರ ವಿಚಾರದಲ್ಲಿ ಆರ್ಯರ್ಷಿಗಳು ಹೇಗೆ ನಡೆಯಬೇಕೆಂದು ಪರಿಷತ್ತು ನಿರೂಪವನ್ನು ಕೊಡಬೇಕು ಎಂದು ಮನವಿಯು ಬಂದಿದೆ. ಆ ಅನಾರ್ಯ ಗಣವೂ ಬಂದಿದೆ. ಜೊತೆಗೆ ಚಂದ್ರವಂಶದ ಯಯಾತಿ, ಸೂರ್ಯವಂಶದ ಜನಕ, ಇಬ್ಬರೂ ಸಭೆಗೆ ವಿಶೇಷಾಹ್ವಾನದ ಮೇಲೆ ಬಂದಿದ್ದಾರೆ.

ಮೊದಲನೆಯ ದಿನ ಹೋಮ ಹವನಗಳನ್ನು ಮಾಡಿ, ದೇವರ್ಷಿ ಪಿತೃಗಣ ಗಳನ್ನು ಅರ್ಚಿಸಿ, ಸಭಾಕಾರ್ಯಗಳನ್ನು ಆರಂಭಿಸಿದರು. ಭಗವಾನ್ ಪಿಪ್ಪಲಾದರ ಮಗ್ಗುಲಲ್ಲಿ ಬಲಗಡೆಗೆ ಭಗವಾನ್ ವಸಿಷ್ಠರು ಆಸನದಲ್ಲಿ ಮಂಡಿಸಿದ್ದಾರೆ: ಎಡ ಗಡೆ ಭಗವಾನ್ ವಿಶ್ವಾಮಿತ್ರರು. ಸಭೆಯ ಕಾರ್ಯಕಲಾಪಗಳು ಆರಂಭವಾದುವು.

ಭಗವಾನ್ ಯಾಜ್ಞವಲ್ಕ್ಯರು ಎದ್ದು ಹೇಳಿದರು: ಈ ದಿನ ಪರಿಷತ್ತು ಸೇರಿರುವುದು ಭಗವಾನ್ ವಿಶ್ವಾಮಿತ್ರರ ಅಭಿನಂದನಕ್ಕಾಗಿ. ಹಿಂದೆ ಪರಿಷತ್ತು ಸೇರಿದಾಗ ಭಗವತಿ ಗಾರ್ಗಿಯವರು ಆರ್ಯೀಕರಣಕ್ಕಾಗಿ ಒಂದು ಸುಲಭ ಸಾಧನವನ್ನು ಕಲ್ಪಿಸಿಕೊಡಬೇಕೆಂದು ಭಗವಾನ್ ವಿಶ್ವಾಮಿತ್ರರನ್ನು ಪ್ರಾರ್ಥಿಸಿ ದ್ದರು. ಈ ದಿನದ ಅಧ್ಯಕ್ಷರಾದಿಯಾಗಿ ಅನೇಕರು ಆ ಪ್ರಾರ್ಥನೆಯಲ್ಲಿ ಭಾಗ ವಹಿಸಿದ್ದರು. ಇವರೇ ತಪಸ್ಸೋ, ತಪಸ್ಸೇ ಇವರೋ ಎನ್ನುವಷ್ಟು ತಪಸ್ಸನ್ನು ಮಾಡಿರುವ ಈ ಪುಣ್ಯಪುರುಷರು ಅದನ್ನು ಸಾಧಿಸಿದ್ದಾರೆ. ನಾವು ಬ್ರಹ್ಮರ್ಷಿ ಗಳು ಸಾಮಾನ್ಯಕ್ಕೆ ಒಪ್ಪುವರಲ್ಲ. ನಮಗೆ ನಿದರ್ಶನವಿಲ್ಲದಿದ್ದರೆ ನಾವು ಅಂಗೀಕರಿಸುವುದಿಲ್ಲ. ಅದರಿಂದ ನಿದರ್ಶನವೂ ಆಗಿದೆ. ಸರಸ್ವತೀತೀರದ ಋಷಿಗಣವು ಇಲ್ಲಿಗೆ ಕಳುಹಿಸಿಕೊಟ್ಟಿರುವ ಋಷಿಗಣವು ಹಿಂದೆ ಅನಾರ್ಯರು. ಅವರು ವಿಶ್ವಾಮಿತ್ರರ ಅನುಗ್ರಹ ಪಡೆದು ಮಂತ್ರಕೃತ್ತುಗಳಾದ ಮಂತ್ರಪತಿ ಗಳಾಗಿದ್ದಾರೆ. ಅವರನ್ನು ಕರೆದುಕೊಂಡು ಬಂದಿರುವ ಪ್ರತಿನಿಧಿಗಳು ಈ ಸಭೆಯ ಮುಂದೆ ಬಂದು ಅಲ್ಲಿ ನಡೆದುದನ್ನು ಹೇಳುವರು. ಅದಕ್ಕೆ ಅಪ್ಪಣೆ ಯಾಗಬೇಕು."

ಸಭೆಯ ಅಪ್ಪಣೆಯನ್ನು ಪಡೆದು ಪಿಪ್ಪಲಾದರು ಪ್ರತಿನಿಧಿಯನ್ನು ಕರೆದರು: ಆತನು ಬಂದು ಸಭೆಗೆ ನಮಸ್ಕಾರಮಾಡಿ "ಮಹಾಂತರಿಗೆ ನಮಸ್ಕಾರವು. ಅರ್ಭಕರಿಗೆ ನಮಸ್ಕಾರವು. ತರುಣರಿಗೆ ನಮಸ್ಕಾರವು. ವೃದ್ಧರಿಗೆ ನಮಸ್ಕಾರವು. ಬ್ರಹ್ಮಕ್ಕೆ ನಮಸ್ಕಾರವು. ಬ್ರಹ್ಮಜ್ಞರಿಗೆ ನಮಸ್ಕಾರವು. ನಾನು ಸತ್ಯವಾಗಿ ಹೇಳುತ್ತೇನೆ. ನಾನಾಡುವ ಸತ್ಯವು ನನ್ನನ್ನು ಕಾಪಾಡಲಿ. ನಾನಾಡಿದ ಸತ್ಯವು ಅದನ್ನು ಕೇಳಿದವರನ್ನೆಲ್ಲ ಕಾಪಾಡಲಿ. ನಾನು ಋತುವನ್ನು ಹೇಳುತ್ತೇನೆ. ಆ ಋತುವು ಆಡಿದ ನನ್ನನ್ನೂ, ಕೇಳಿದ ಇತರರನ್ನೂ ಕಾಪಾಡಲಿ. ನನ್ನ ಬಾಯಲ್ಲಿ ಅಸತ್ಯವು ಅನೃತವು ಬಂದರೆ, ನನ್ನ ತಲೆಯೊಡೆದು ನೂರು ಪಾಲಾಗಲಿ" ಎಂದು ಪ್ರತಿಜ್ಞೆಮಾಡಿ, ಸಭೆಯ ಅಪ್ಪಣೆ ಪಡೆದು ಹೇಳಿದನು:—

"ನಾವು ಎಂದರೆ ಸರಸ್ವತೀ ತೀರದಲ್ಲಿರುವ ಋಷಿಗಳೆಲ್ಲರೂ ಸೇರಿ, ವಿಶ್ವಶಾಂತಿಗೆಂದು ಯಜ್ಞಮಾಡುತ್ತಿದ್ದೆವು. ಮೂರನೆಯ ದಿನ ಮಾಧ್ಯಂದಿನ ಹೋಮವು ನಡೆಯಬೇಕಾಗಿದ್ದಾಗ, ಒಂದು ಗುಂಪು ಅಲ್ಲಿಗೆ ಬಂದು ನಾವೂ ಯಜ್ಞದಲ್ಲಿ ಭಾಗಿಗಳಾಗುತ್ತೇವೆ. ಅಪ್ಪಣೆಯಾಗಬೇಕು ಎಂದು ಪ್ರಾರ್ಥಿಸಿದರು. ಆ ಗಣದ ಮುಖದಲ್ಲಿದ್ದವನು ಕವಷ ಐಲೂಷನೆಂಬ ಮಹನೀಯನು. ವಿಚಾರಮಾಡಿದ್ದರಲ್ಲಿ ಅವರಲ್ಲಿ ಅನೇಕರು ಶೂದ್ರೀಪುತ್ರರು; ಅದ್ವಿಜರು, ಅನಾರ್ಯರು, ಕ್ರಮಾಧ್ಯಯನವಿಲ್ಲದಿದ್ದವರು ಎಂದು ತಿಳಿಯಿತಾಗಿ ಅವರನ್ನು ಯಜ್ಞಭಾಗಾಧಿಕಾರಿಗಳೆಂದು ಅಂಗೀಕರಿಸಲಾಗಲಿಲ್ಲ. ಅವರೆಲ್ಲರೂ ತಮಗೆ ಅಸಮಾಧಾನವಾಗಿದ್ದರೂ ಮರುಮಾತಾಡದೆ ಹೊರಟುಹೋದರು. ಅವರ ವಿನಯವನ್ನೂ ಸೌಜನ್ಯವನ್ನೂ ಕಂಡ ಋಷಿಗಳು 'ಏನು ಮಾಡುವುದು? ವಿಧಿಯಲ್ಲಿ ಅವಕಾಶವಿಲ್ಲ' ಎಂದು ಬಲು ಮರುಗಿದರು.

"ಮಾಧ್ಯಂದಿನ ಹೋಮವು ಆರಂಭವಾಯಿತು. ಎಷ್ಟು ಕರೆದರೂ ಯಾವ ದೇವತೆಗಳೂ ಬರಲಿಲ್ಲ. ಇದೇನಿದು ಆಶ್ಚರ್ಯ ಎಂದು ದೇವಪತಿಯಾದ ಇಂದ್ರನನ್ನು ಕರೆದೆವು. ಆತನು ಅರ್ಧಾರ್ಧವಾಗಿ ಪ್ರಕಟವಾಗಿ, 'ನೀವು ಕಳುಹಿಸಿಬಿಟ್ಟಿರುವ ಋಷಿಗಳು ಪಟ್ಟಿರುವ ಅಸಮಾಧಾನವು ತೀರುವವರೆಗೂ ದೇವತೆಗಳು ಇಲ್ಲಿಗೆ ಬರುವುದಿಲ್ಲ: ನಾವೆಲ್ಲ ಅವರ ಜೊತೆಯಲ್ಲಿರುವೆವು' ಎಂದು, ನಾವು ಕೊಟ್ಟ ಹವಿಸ್ಸನ್ನೂ ಸ್ವೀಕರಿಸದೆ ಅಂತರ್ಧಾನನಾದನು.

"ಆ ಮೇಲೆ ಆ ಋಷಿಗಳೆಲ್ಲರೂ ಹೋಗಿ, ಆ ಕವಷ ಐಲೂಷ ಗಣವನ್ನು ಪ್ರಾರ್ಥಿಸಿಕೊಂಡು, ತಾವು ಪ್ರಾರಂಭಿಸಿದ್ದ ಯಜ್ಞವನ್ನು ಅವರ ಅಪ್ಪಣೆ ಯಿಂದ, ಯಥಾಯಥಾ ಮುಗಿಸಿ, ಅವರನ್ನೂ ಕರೆದುಕೊಂಡು ಇಲ್ಲಿಗೆ ಬಂದಿರುವೆವು. ಇನ್ನು ಮುಂದೆ ಏನು ಮಾಡಬೇಕೆಂಬುದು ಪರಿಷತ್ತು ಗೊತ್ತು ಮಾಡಬೇಕು."

ಭಗವಾನರೊಬ್ಬರು ಎದ್ದು "ಸಭಾಪತಿಗಳಲ್ಲಿ ವಿಜ್ಞಾಪನೆ. ಅನಾರ್ಯ ಋಷಿಗಣದ ವಿಷಯ ಸಭೆಯ ಮುಂದೆ ಬಂದು ಇತ್ಯರ್ಥವಾಗುವುದಕ್ಕೆ ಮುಂಚೆಯೇ ಅತಿಥಿಸತ್ಕಾರಕ್ಕೆ ನಿಯುಕ್ತರಾಗಿರುವವರು ಅವರಿಗೆ ಮಧುಪರ್ಕ ವನ್ನು ಕೊಟ್ಟುಬಿಟ್ಟಿದ್ದಾರೆ. ಇದು ಕ್ರಿಯಾಲೋಪವಲ್ಲವೇ ಎಂಬುದು ವಿಮರ್ಶೆಯಾಗಬೇಕು."

ಸಭಾಪತಿಗಳು ಭಗವತೀ ಗಾರ್ಗಿಯವರ ಮುಖ ನೋಡಿದರು. ಆಕೆಯು ಎದ್ದು, ಸಭಾಪತಿಗಳಿಗೂ ಸಭೆಗೂ ವಂದನಮಾಡಿ ಪ್ರಸನ್ನಮುಖದಿಂದ ಮಂದಹಾಸವನ್ನು ಬೀರುತ್ತಾ ವಿನಯವಾಗಿ ಹೇಳಿದರು : "ಭಗವಾನರೊಬ್ಬರು ಕ್ರಿಯಾಲೋಪವನ್ನೆತ್ತಿದ್ದಾರೆ. ಅತಿಥಿಗಳು ಬಂದಾಗ ಅವರವರ ಯೋಗ್ಯತೆಗೆ ಅನುಗುಣವಾಗಿ ಸತ್ಕಾರಮಾಡುವುದು ನನ್ನ ಕಾರ್ಯ. ನನಗೆ ವಹಿಸಿರುವ ಕಾರ್ಯದಲ್ಲಿ ನನ್ನ ಸಾಮರ್ಥ್ಯಕ್ಕನುಗುಣವಾಗಿ, ಪ್ರತಿಯೊಂದನ್ನೂ ಗಮನಿಸಿ ಕಾರ್ಯಮಾಡಿದ್ದೇನೆ. ಆ ಮಹರ್ಷಿಗಳು ಬರುತ್ತಿದ್ದಹಾಗೆಯೇ ಅವರ ಜೊತೆ ಯಲ್ಲಿಯೇ ಬರುತ್ತಿರುವ ಪಂಚಾಗ್ನಿಗಳನ್ನು ಕಂಡೆ. ಅವರನ್ನು ಆರ್ಯರೆಂದು ಪರಿಷತ್ತು ಅಂಗೀಕರಿಸಿಲ್ಲ ನಿಜ. ಆದರೆ ಪಂಚಾಗ್ನಿ ಸಮೇತರಾಗಿ ಬಂದಿರು ವವರಿಗೆ ಮಧುಪರ್ಕವನ್ನು ಕೊಡದಿದ್ದರೆ ಯಜ್ಞೇಶ್ವರನಿಗೆ ದ್ರೋಹವಾಗಿ ಸಭೆಗೂ ಸಭಾಪತಿಗಳಿಗೂ ಅಶ್ರೇಯಸ್ಸಾದೀತು ಎಂದು ಹೆದರಿ, ಆ ಅಗ್ನಿವಂತ ರಿಗೆ ನಾನು ಮಧುಪರ್ಕವನ್ನು ಕೊಟ್ಟಿದ್ದೇನೆ. ಇದು ಅಪರಾಧವಲ್ಲವೆಂಬುದು ತಮ್ಮೆಲ್ಲರಿಗೂ ಗೊತ್ತಿದೆ. ಆದರೂ ಸಭಾ ಮರ್ಯಾದೆಯೆಂದು ಇದೋ ಕೈಮುಗಿಯುತ್ತೇನೆ. ಅಪರಾಧವಾಗಿದ್ದರೆ ಕ್ಷಮಿಸುವುದು. ನಾವು ಬ್ರಹ್ಮ ವಾದಿಗಳು. ಕರ್ಮದಲ್ಲಿ ಪ್ರಮಾದ ವಶವಾಗಿ ನ್ಯೂನಾತಿರೇಕಗಳು ಬಂದರೂ ಅದನ್ನು ಸಹಿಸಿಕೊಳ್ಳುವವರು. ನಮ್ಮ ಹಾಗೆಯೇ ಈ ಪರಿಷತ್ತೂ ಕರ್ಮ ದೋಷವಿದ್ದರೆ ಸಹಿಸಿಕೊಳ್ಳಬೇಕು ಎಂದು ಪ್ರಾರ್ಥನೆ."

ಧರ್ಮಜ್ಞರೆಲ್ಲರೂ ಆಕೆಯು ಮಾಡಿದುದು ಸರಿಯೆಂದರು. ಪರಿಷತ್ತು ಗಳಲ್ಲಿ ಎಲ್ಲಾ ಕಾರ್ಯಕ್ಕಿಂತಲೂ ಪ್ರಧಾನವಾದುದು ಅತಿಥಿ ಸತ್ಕಾರ. ಅದರಲ್ಲಿ ಹೆಚ್ಚು ಕಡಿಮೆಯಾದರೆ ಪರಿಷತ್ತು ಉತ್ತರವಾದಿಯಾಗಿ ಅಶ್ರೇಯಸ್ಸು ಪಡೆಯ ಬೇಕಾಗುವುದು. ಅದರಿಂದ, ಅಗ್ನಿವಂತರಿಗೆ ಮಧುಪರ್ಕವು ಅವರು ಯಾರೇ ಆಗಲಿ ಸಲ್ಲಲೇಬೇಕಾದ್ದರಿಂದ ಆಕೆಯು ಮಾಡಿದುದು ಸರಿ ಎಂದಾಯಿತು.

ಮತ್ತೊಬ್ಬರು ಎದ್ದು ನಗುನಗುತ್ತಾ ಸಭಾಪತಿಗಳಿಗೆ ಅರಿಕೆ ಮಾಡಿದರು: "ಭಗವತೀ ಗಾರ್ಗಿಯವರು ಮಾಡಿದ ಕಾರ್ಯವನ್ನು ಸರಿಯೆಂದು ಅಂಗೀಕರಿಸಿದ ಸಭೆ ಅವರನ್ನು ಆರ್ಯರು, ಬ್ರಾಹ್ಮಣರು ಎಂದು ಒಪ್ಪಿಕೊಂಡತೆಯೇ ಆಯಿತು. ಅದರ ಜೊತೆಯಲ್ಲಿಯೇ ಭಗವಾನ್ ವಿಶ್ವಾಮಿತ್ರರು ಕಲ್ಪಿಸಿಕೊಟ್ಟು ಮಹದನುಗ್ರಹ ಮಾಡಿರುವ ಪ್ರಾಜಾಪತ್ಯ ವ್ರತದ ಮಹಿಮೆಯೇನು ಎಂಬು ದನ್ನು ಕಂಡುದೂ ಆಯಿತು. ಇನ್ನು ಸಭೆಯ ಮುಂದಿರುವ ಕಾರ್ಯ ಭಗವಾನ್ ವಿಶ್ವಾಮಿತ್ರರು ಮನುಷ್ಯ ಕುಲಕ್ಕೆ ಮಾಡಿರುವ ಪರಮೋಪಕಾರಕ್ಕಾಗಿ ಅವ ರನ್ನು ಅರ್ಚಿಸುವುದು. ಆ ಅರ್ಚನೆಯು ಯಾವ ರೂಪವಾಗಿ ನಡೆಯಬೇಕು ಎಂಬುದು ಗೊತ್ತಾಗಬೇಕು. ಅಷ್ಟೇ!" ಎಂದರು.

ಎಲ್ಲರೂ ಹೌದು ಹೌದು ಎಂದು ಆನಂದದಿಂದ ಕೈಚಪ್ಪಾಳೆಯನ್ನಿಕ್ಕಿ ದರು. ಭಗವತೀ ಗಾರ್ಗಿಯು ಎದ್ದುನಿಂತು "ಒಂದು ಪುಷ್ಪಮಂಟಪವನ್ನು ಕಟ್ಟಿ ಅದರಲ್ಲಿ ಭಗವಾನ್ ವಿಶ್ವಾಮಿತ್ರರನ್ನು ಕುಳ್ಳಿರಿಸಿ ನಾವೆಲ್ಲರೂ ಆ ರಥ ವನ್ನು ಎಳೆದುಕೊಂಡು ಹೋಗಬೇಕು. ಇದು ನಾವು ಅವರಿಗೆ ಸಲ್ಲಿಸುವ ಅರ್ಚನೆಯಾಗಲಿ." ಎಂದಳು.

ಮಹಾರಾಜನಾದ ಯಯಾತಿಯು, ಮಹಾರಾಜಾ ಜನಕನ ಅನುಮತಿ ಯನ್ನು ಪಡೆದು ಎದ್ದುನಿಂತು, "ಸೂರ್ಯವಂಶ ಭೂಷಣನಾದ ಜನಕಮಹಾ ರಾಜನು ಈ ಪರಿಷತ್ತಿಗೆ ಹೀಗೆ ವಿಜ್ಞಾಪಿಸು ಎಂದು ನನಗೆ ಆಜ್ಞೆ ಮಾಡಿದ್ದಾನೆ. ಈ ಬ್ರಹ್ಮಪೂಜೆಗೆ ಕ್ಷತ್ರಸಮಾಯೋಗವು ವಿಹಿತವಾದುದರಿಂದ ಪುಷ್ಪರಥವನ್ನು ಕಟ್ಟುವುದು ತಮ್ಮ ಕಾರ್ಯವಾಗಲಿ. ಅದನ್ನು ಎಳೆದುಕೊಂಡು ಹೋಗು ವುದು ನಮ್ಮ ಭಾಗವಾಗಲಿ. ಇದಕ್ಕೆ ಪರಿಷತ್ತು ಒಪ್ಪಿ ಅಪ್ಪಣೆಕೊಡಬೇಕು."

ಭಗವಾನ್ ಪಿಪ್ಪಲಾದರು ಎದ್ದು ಆ ಸೂಚನೆಯನ್ನು ಅಂಗೀಕರಿಸ ಬೇಕೆಂದು ಪರಿಷತ್ತನ್ನು ಪ್ರಾರ್ಥಿಸುತ್ತ "ಈ ಸಭೆಯ ಪರವಾಗಿ ಆ ಕಾರ್ಯ ದಲ್ಲಿ ಭಾಗವಹಿಸಲು ಸಭಾಪತಿಗಳಿಗೂ ಅಪ್ಪಣೆಯಾಗಬೇಕು" ಎಂದರು. ಭಗವತೀ ಗಾರ್ಗಿಯು ಎದ್ದು ಮುಸಿಮುಸಿ ನಗುತ್ತಾ "ಸಭಾಪತಿಗಳು ದಾಕ್ಷಿಣ್ಯದಿಂದ ನಮ್ಮ ಕಡೆ ತಿರುಗಬೇಕು. ಈ ಸೂಚನೆಯನ್ನು ತಂದವರು ಕಾರ್ಯದಲ್ಲಿ ಭಾಗವಹಿಸದಿದ್ದರೆ ಅದು ಪೂರ್ಣವಾಗುವುದೆಂತು? ಆದರಿಂದ ದಯವಿಟ್ಟು ಈ ಜನವನ್ನೂ ಸೇರಿಸಿಕೊಳ್ಳಬೇಕು" ಎಂದರು.

ಎಲ್ಲರೂ ಸರಿ ಸರಿಯೆಂದರು. ರಥವನ್ನು ಎಳೆಯುವ ಕೆಲಸಕ್ಕೆ ನಾಲ್ವರು ಎಂದು ಗೊತ್ತಾಯಿತು. ಸಭಾಪತಿಗಳು ಎದ್ದು "ಭಗವಾನ್ ವಿಶ್ವಾಮಿತ್ರರು ಇದನ್ನು ಅಂಗೀಕರಿಸಬೇಕು" ಎಂದು ಕೈಮುಗಿದರು. ಭಗವಾನರು ಎದ್ದು ನಿಂತರು. ಭವ್ಯವಾಗಿರುವ ಆ ಪುರುಷಾಕೃತಿಯನ್ನು ಕಂಡವರೆಲ್ಲರೂ ಲೋಕಾನುಗ್ರಹಾರ್ಥವಾಗಿ ಮೂರ್ತಿವೆತ್ತು ಬಂದಿರುವ ವೇದಗಳೇ ಇರಬೇಕು ಎಂದು ಮನಸಾ ಅಭಿವಾದನಮಾಡಿದರು. ಅವರು ಹೇಳಿದರು: "ಇಂದಿನ ಶ್ರೇಯಸ್ಸೆಲ್ಲವೂ ಭಗವಾನ್ ವಸಿಷ್ಠರದು. ದ್ವೇಷಮುಖವಾಗಿ ಅವರನ್ನು ಆರಾ ಧಿಸಹೊರಟ ನಾನು ಇಂದು ರಾಗಪೂರ್ವಕವಾಗಿ ಪರಮಪ್ರೀತಿಯಿಂದ ಈ ಮಾತು ಆಡುತ್ತಿದ್ದೇನೆ. ಈ ಪರಿಷತ್ತಿನ ಪರವಾಗಿ ಭಗವತೀ ಗಾರ್ಗಿಯವ ರಾದಿಯಾಗಿ ಸರ್ವರೂ ನನಗೆ ವಹಿಸಿದ ಕೆಲಸವನ್ನು ನಿರ್ವಹಿಸುವುದಕ್ಕೂ ಇವರೇ ಕಾರಣರು. ಅಗಸ್ತ್ಯಾಶ್ರಮಕ್ಕೆ ಹೋಗು ಎಂದು ಇವರು ನಿರೂಪ ಕೊಟ್ಟು ಮಾರ್ಗದರ್ಶಕರಾದರು. ಹಾಗೆಯೇ ಎಲ್ಲದಕ್ಕಿಂತ ಮೊದಲೂ ಭಗವಾನ್ ವಾಮದೇವರ ಮುಖದಿಂದ ಅನುಗ್ರಹಮಾಡಿದವರೂ ಇವರೇ! ಆದರಿಂದ ಇವರಿಗೇ ಈ ಪೂಜೆಯು ಸಮಗ್ರವಾಗಿ ಸಲ್ಲಬೇಕು" ಎಂದರು.

ಕೊನೆಗೆ ಭಗವಂತರಿಬ್ಬರೂ ಪುಷ್ಪರಥದಲ್ಲಿರಬೇಕು ಎಂದು ಆಯಿತು.

ಮರುದಿನ ಪುಷ್ಪರಥವು ಸಿದ್ಧವಾಯಿತು. ರಥದ ಅಲಂಕಾರಕ್ಕಾಗಿ ಹೂವು ತರಲು ಹೋದವರು ಬಂದು ತಮ್ಮ ಆಶ್ಚರ್ಯವನ್ನು ಹೇಳಲಾರರು. ಆಶ್ರಮದ ಸುತ್ತಮುತ್ತಲೂ ಇರುವ ವೃಕ್ಷಲತೆಗಳೆಲ್ಲವೂ ಬರಿಯ ಹೂವಿನ ಗೊಂಚಲುಗಳಾಗಿ ನಿಂತಿವೆ. ಕಾಲ ಅಕಾಲವೆಂಬ ನಿಯಮವೇ ಇಲ್ಲದಂತಾಗಿ, ಎಲ್ಲಾ ಋತುಗಳ ಎಲ್ಲಾ ಪುಷ್ಪಗಳೂ ಇವೆ. ಅಂದು ಅಲಂಕಾರಕ್ಕೆ ಹೂವು

ಬಂದುದು ಮಕ್ಕರಿಗಳಲ್ಲಿ ಅಲ್ಲ : ಬಂಡಿಗಳಲ್ಲಿ. ಎಲ್ಲರೂ ಹೋಗಿ ಆ ವನ ಲಕ್ಷ್ಮಿಯ ಪುಷ್ಪಾಲಂಕಾರವನ್ನು ನೋಡಿ ಬಂದರು. ಎತ್ತನೋಡಿದರೂ ಹೂವು. ಹೂವು ಮರದಲ್ಲಿ ಗಿಡದಲ್ಲಿ ಬಳ್ಳಿಯಲ್ಲಿ. ಎಲೆಯೇ ಕಾಣಿಸದು. ಆ ಹೂವಿನ ಸಾಗರದಲ್ಲಿ ಎಲೆಗಳೂ ಯಾವುದೋ ಪ್ರಭಾವಕ್ಕೆ ಸಿಕ್ಕಿ ಹೂವಾಗಿ ಹೋದಂತಿತ್ತು.

ಪುಷ್ಪರಥವನ್ನು ತಪಸ್ವಿಗಳು ಬ್ರಹ್ಮರಥವೆಂದು ಕರೆದರು. ವಸಿಷ್ಠ ವಿಶ್ವಾಮಿತ್ರರನ್ನು ಕುಳ್ಳಿರಿಸಿಕೊಂಡು ಆ ರಥವು ಬರುತ್ತಿರುವುದನ್ನು ಕಂಡವರು "ಎರಡು ಹಕ್ಕಿಗಳೊಂದು ಮರದಲ್ಲಿ ಕುಳಿತಿವೆ" ಎಂಬ ಶ್ರುತಿಯನ್ನು ಸ್ಮರಿಸಿದರು.

ಯಯಾತಿಯು ಧರ್ಮಿಷ್ಠ : ಜನಕನು ಬ್ರಹ್ಮಿಷ್ಠ. ಈ ಇಬ್ಬರೂ ರಥ ವನ್ನು ಎಳೆಯುತ್ತಿರುವುದು ನೋಡಿದರೆ, "ಬ್ರಹ್ಮಾಂಡದ ಕ್ಷೇಮವು ಧರ್ಮ ಬ್ರಹ್ಮ ಸಮಾಯೋಗದಲ್ಲಿದೆ" ಎಂಬ ವೇದಪುರುಷನ ಸಂದೇಶವನ್ನು ಬೀರು ವಂತೆ ಇತ್ತು.

ಆ ಮೆರವಣಿಗೆಯನ್ನು ಕಂಡು ಮಾನವರಿರಲಿ, ವಿಶ್ವಕ್ಕೆ ವಿಶ್ವವೇ ಸಂತೋಷಪಟ್ಟಿತು.

ವಸಿಷ್ಠರು ಸಮಾಧಿಯಲ್ಲಿದ್ದ ವಿಶ್ವಾಮಿತ್ರರನ್ನು ಎಚ್ಚರಿಸಿ ಅತ್ತ ನೋಡಿ ಎಂದರು. ವಿಶ್ವಾಮಿತ್ರರು ನೋಡಿದರು. ದೇವಗಣ ಸಹಿತನಾದ ದೇವೇಂ ದ್ರನು ಪರಮ ಸಂತೋಷದಿಂದ ಪರಮ ಭಕ್ತಿಯಿಂದ ಕೈಮುಗಿದುಕೊಂಡು ನಿಂತಿರುವುದು ಕಾಣಿಸಿತು. ವಸಿಷ್ಠರೂ ನಕ್ಕರು : ವಿಶ್ವಾಮಿತ್ರರೂ ನಕ್ಕರು.



# ಸಂಧ್ಯಾವಂದನೆ

ಲೋಕದಲ್ಲಿರುವ ಪ್ರಾಣಿಗಳೆಲ್ಲ ಸೂರ್ಯೋಪಾಸಕರು. ಕೆಲವರು ಇದನ್ನು ಬಲ್ಲರು. ಅನೇಕರು ಇದನ್ನು ಕಾಣರು. ತಾವು ಮಾಡುತ್ತಿರುವ ಕಾರ್ಯವನ್ನು ಅರಿತು, ಅದನ್ನು ಕ್ರಮಪಡಿಸಿಕೊಂಡು ಸಂಕಲ್ಪಪೂರ್ವಕವಾಗಿ ಸಾಂಗವಾಗಿ ಮಾಡುವಿಕೆಯೇ ಯೋಗವು. ಅಯೋಗದಿಂದ ಯೋಗದ ಕಡೆಗೆ ಚಿತ್ತವನ್ನು ತಿರುಗಿಸುವುದೇ ಪ್ರಗತಿಯು.

ಸೂರ್ಯನನ್ನು ವೇದಗಳಲ್ಲಿ 'ಸೂರ್ಯ್ಯಆತ್ಮಾ ಜಗತಃ ತಸ್ಥುಷಶ್ಚ' ಸ್ಥಾವರವಾಗಿ ನಿಂತಿರುವ, ಜಂಗಮವಾಗಿ ಚಲಿಸುತ್ತಿರುವ ಪ್ರಾಣಿಗಳೆಲ್ಲಕ್ಕೂ ಆತ್ಮನು ಸೂರ್ಯನು ಎಂದು ಮುಂತಾಗಿ ಹೊಗಳಿದೆ. ಸೂರ್ಯನಿಂದಲೇ ಬ್ರಹ್ಮಾಂಡದ ಮೊದಲು ಎಂದು ಆತನನ್ನು ಆದಿತ್ಯ ಎನ್ನುವರು. ಈ ವಿಶ್ವದಲ್ಲಿರುವ ತೇಜಸ್ಸೆಲ್ಲವೂ ಆತನದೇ ಎಂದು ಆತನನ್ನು ಭಾಸ್ಕರ ಎನ್ನುವರು. ಗ್ರಹಮಂಡಲ ನಾಯಕನಾದ ಈತನಿಂದ ಆರೋಗ್ಯಾದಿ ಭಾಗ್ಯಗಳೆಲ್ಲವೂ ಲಭಿಸುವುವು ಎಂಬುದು ಅನುಭವದ ಮಾತು.

ಈ ಸೂರ್ಯನಿಂದಲೇ ಮನುಷ್ಯಲೋಕದಲ್ಲಿ ಚರಾಚರಗಳೆಲ್ಲವೂ ವಿಕಾಸಗೊಳ್ಳುವುವು. ಅದರಿಂದಲೇ ಆತನನ್ನು ಪ್ರಾಣಿಗಳು ಮಾತೃಗರ್ಭದಿಂದ ಈಚೆಗೆ ಬರಬೇಕಾದರೆ ಈತನ ಅಪ್ಪಣೆಯಾಗಬೇಕು ಎಂದು ಸವಿತೃವೆಂದು ಆರ್ಯರು ಪೂಜಿಸಿದರು.

ಒಂದಾನೊಂದು ಕಾಲದಲ್ಲಿ ಈ ಸವಿತೃದೇವನ ಪೂಜೆಯು ಪ್ರಪಂಚದ ಮೂಲೆ ಮೂಲೆಯಲ್ಲಿಯೂ ನಡೆಯುತ್ತಿತ್ತು. ಧರ್ಮವು ಹ್ರಾಸವಾಗುತ್ತ ಬಂದಂತೆಲ್ಲ ಈ ಸವಿತೃ ಪೂಜೆಯೂ ಹ್ರಸ್ವವಾಗುತ್ತ ಬಂದು, ಈಗ ಎಲ್ಲೋ ಕೆಲವು ಕಡೆಗಳಲ್ಲಿ ಮಾತ್ರ ನಡೆಯುತ್ತಿದೆ.

ಹಾಗೆಂದು ಸವಿತೃದೇವನ ಪೂಜೆಯನ್ನು ಯಾರೂ ಬಿಟ್ಟಿಲ್ಲ, ಬಿಡುವಂತಿಲ್ಲ. ದೇಹದಲ್ಲಿ ಪ್ರತಿಕ್ಷಣವೂ ನಡೆಯುತ್ತಿರುವ ಶ್ವಾಸಕ್ರಿಯೆಗೆ ಆಧಾರವು ಪ್ರಾಣ. ಈ ಪ್ರಾಣದಲ್ಲಿ ಚರ ಸ್ಥಿರ ಅಂಶಗಳುಂಟು. ಈ ಪ್ರಾಣವು ಊರ್ಧ್ವಗತಿ ಅಧೋಗತಿಗಳಿಂದ ನಡೆಯುತ್ತ ಹೊರಗಿನ ವಾಯುವಿನಿಂದ ದೇಹದಲ್ಲಿರುವ ವಾಯುವನ್ನು ಪೋಷಿಸುತ್ತ ದೇಹದ ಅಸ್ತಿತ್ವಕ್ಕೆ ಕಾರಣವಾಗಿರುವುದು. ಈ ಪ್ರಾಣವನ್ನು ಊರ್ಧ್ವಗತಿಯಲ್ಲಿರುವಾಗ ಸೂರ್ಯನೆಂದೂ, ಅಧೋಗತಿಯಲ್ಲಿರುವಾಗ ಚಂದ್ರನೆಂದೂ ಕರೆಯುವರು. ಸ್ಥಿರವಾಗಿರುವ ಅಂಶವೇ ಸೂರ್ಯ. ಚಲಿಸುತ್ತ ಚಲನಕ್ರಮದಿಂದ ಹ್ರಾಸವೃದ್ಧಿಗಳನ್ನು ಪಡೆಯುವ ಚರವಾದ ಅಂಶವೇ ಚಂದ್ರ. ಈ ಸೂರ್ಯ ಚಂದ್ರರಲ್ಲಿ ಸೂರ್ಯನು ಬೀಜರೂಪವಾದ ಅಗ್ನಿಯನ್ನೂ ಚಂದ್ರನು ಆಹಾರವಾದ ಸೋಮವನ್ನೂ ಕೊಡುವರು. ಈ ಅಗ್ನಿಷೋಮ ಮಂಡಲಗಳ ಅನುಗ್ರಹದಿಂದಲೇ ಪ್ರಾಣಿಪ್ರಾಣಿಯೂ ಬದುಕಿರುವುದು ಎಂಬುದು ಯೋಗಮಾಡಿ ತಿಳಿಯಬಹುದಾದ ಅಂಶ.

ಪ್ರಾಣಿಪ್ರಾಣಿಯಲ್ಲೂ ಅಗ್ನಿಷೋಮ ಮಂಡಲವಿರುವಂತೆ ಲೋಕಲೋಕಕ್ಕೂ ಬ್ರಹ್ಮಾಂಡಕ್ಕೂ ಉಂಟು. ಈ ತತ್ತ್ವವನ್ನು ಹಿಡಿದೇ ವೇದವು "ಅಗ್ನೀಷೋಮಾತ್ಮಕಮಿದಂ ಜಗತ್" ಎಂದು ಸಾರಿತು. ಈ ಅಗ್ನಿಯೇ ಪುರುಷನು; ಸೋಮವೇ ಪ್ರಕೃತಿಯು. ಪುರುಷ ಪ್ರಕೃತಿಯರ ಲೀಲೆಯೇ ಈ ಸೃಷ್ಟಿ ಸ್ಥಿತಿ ಸಂಹಾರಗಳು.

ಹೀಗೆ ಪ್ರಕೃತಿ ಪುರುಷರ ಮೂಲಸ್ಥಾನವಾದ ಅಗ್ನಿಷೋಮ ಮಂಡಲದ ಯಜಮಾನನು ಸವಿತೃದೇವನು. ಆತನು ಸವಿತೃ ಎಂದರೆ ಯಾವುದು ಹುಟ್ಟಬೇಕಾದರೂ, ಹುಟ್ಟಿದರೂ ಮಾತೃಗರ್ಭದಿಂದ ಈಚೆಗೆ ಬರಬೇಕಾದರೆ ಆತನ ಅಪ್ಪಣೆಯಾಗಬೇಕು. ಇದು ಪ್ರಕೃತಿಯ ನಿಯಮ. ಈ ನಿಯಮವನ್ನು ತಿಳಿದವರೆಲ್ಲರೂ ಸವಿತೃದೇವನನ್ನು ಆರಾಧಿಸಬೇಕು. ಆರಾಧಿಸಬೇಕು ಎನ್ನುವುದಕ್ಕಿಂತ, ಆರಾಧಿಸುತ್ತಿರುವರು ಎನ್ನುವುದು ಸರಿ. ಪ್ರತಿಯೊಂದು ದೇಹದಲ್ಲಿಯೂ ಈ ಆರಾಧನೆ ಶ್ವಾಸಶ್ವಾಸದಲ್ಲಿಯೂ ನಡೆಯುತ್ತಿದೆ. ಸರಿಯಾಗಿ ನಡೆಯುತ್ತಿರುವಾಗ ಆ ದೇಹವು ಆರೋಗ್ಯದಲ್ಲಿರುವುದು. ಆ ಆರಾಧನೆಯಲ್ಲಿ ಕೊಂಚ ವಕ್ರವಾದರೂ ಆ ದೇಹಕ್ಕೆ ರೋಗವು ಬರುವುದು. ಈ ತತ್ತ್ವವನ್ನು ಬಲ್ಲ ಆಯುರ್ವೇದವು ರೋಗವನ್ನು ತಪ್ಪಿಸಿ ಆರೋಗ್ಯವನ್ನು ತರಬಲ್ಲ ಚಿಕಿತ್ಸಕ

ನನ್ನು ಪ್ರಾಣಾಚಾರ್ಯನೆಂದು ಕರೆದು ಈ ಆರಾಧನದ ಮೂಲಸ್ವರೂಪವನ್ನು ಗುರುತಿಸಿದೆ.

ಈ ಸವಿತೃದೇವನೇ ಆದಿತ್ಯನು. ಈತನು ನಾನಾರೂಪವಾಗಿ ಜಗತ್ತನ್ನು ಪಾಲಿಸುತ್ತಿರುವನು. ಈ ತೇಜೋರಾಶಿಯ ಕಿರಣವೊಂದೊಂದನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ನೋಡುವುದೇ ವೇದದ ವಿಸ್ತೃತ ಸ್ವರೂಪವು. ಏಕವಾಗಿ ನೋಡುವುದು ವೇದದ ಸಮಷ್ಟಿ ಸ್ವರೂಪವು. ವೇದದ ಸಮಷ್ಟಿ ಸ್ವರೂಪವಾದ ಈ ಸವಿತೃದೇವನ ತೇಜಸ್ಸು ಪ್ರತಿಯೊಂದು ಪ್ರಾಣಿಯಲ್ಲಿಯೂ ಇದ್ದು ಮನಸ್ಸನ್ನೂ ಬುದ್ಧಿಯನ್ನೂ ಕಾರ್ಯೋನ್ಮುಖವಾಗುವಂತೆ ಪ್ರಚೋದನ ಮಾಡುವುದು. ಹಾಗೆ ತನ್ನಲ್ಲಿಯೇ ಇದ್ದುಕೊಂಡು ತನ್ನನ್ನು ಪ್ರಚೋದಿಸುತ್ತಿರುವ ತೇಜೋರಾಶಿಯನ್ನು ಆರಾಧಿಸುವುದನ್ನು ಹೇಳಿಕೊಟ್ಟು ವಿಶ್ವಾಮಿತ್ರನು ಲೋಕೋದ್ಧಾರಕನಾದನು. ಆ ಮಹಾಪುರುಷನು ಕಂಡ ತತ್ತ್ವವು ಆತನು ಹೇಳಿರುವ ಗಾಯತ್ರಿಯಲ್ಲಿದೆ.

ಸಮಷ್ಟಿ ಬ್ರಹ್ಮಾಂಡದಲ್ಲಿ ಅಗ್ನಿಷೋಮ ಮಂಡಲದ ಸ್ವಾಮಿಯಾಗಿರುವ ಸವಿತೃದೇವನೇ ಪ್ರತಿಯೊಬ್ಬ ವ್ಯಕ್ತಿವ್ಯಕ್ತಿಯಲ್ಲಿಯೂ ಕುಳಿತಿರುವುದನ್ನು ಅರಿಯದೆ ವ್ಯಕ್ತಿವ್ಯಕ್ತಿಯೂ ಮನೋಬುದ್ಧಿಗಳಿಂದ ಪ್ರೇರಿತನಾಗಿ ಇಂದ್ರಿಯಗಳಿಂದ ವ್ಯಾಪಾರಮಾಡುತ್ತ ತನಗೆ ಪ್ರೇರಕಗಳಾದ ಮನೋಬುದ್ಧಿಗಳು ಸ್ವತಂತ್ರಗಳೇ, ಅವು ಏಕೆ ಹಾಗೆ ಪ್ರೇರಣೆ ಮಾಡಿದುವು? ಬೇರೆ ವಿಧವಾಗಿ ಏಕೆ ಪ್ರೇರಿಸಲಿಲ್ಲ? ಎಂಬುದನ್ನು ವಿಚಾರಮಾಡದೆ, ಪ್ರೇರಕನು ತಾನೇ ಎಂದು ಮೋಹದಿಂದ ವರ್ತಿಸುತ್ತಿರುವನು. ಆದರೆ ವಿಚಾರಮಾಡಿ ನೋಡುವವನು ಪ್ರತಿಯೊಬ್ಬನೂ "ಸರ್ವ ವ್ಯಾಪಾರಗಳನ್ನೂ ಮಾಡುವ ಇಂದ್ರಿಯಗಳನ್ನು ಮನೋಬುದ್ಧಿಗಳು ಪ್ರೇರಿಸುವುವು. ಆ ಮನೋಬುದ್ಧಿಗಳ ಪ್ರೇರಕನು ಇನ್ನೊಬ್ಬನು ಇರಬೇಕು" ಎಂಬುದನ್ನು ಸುಲಭವಾಗಿ ಗುರುತಿಸಬಲ್ಲನು. ಆ ಮನೋಬುದ್ಧಿಗಳ ಪ್ರೇರಕನೇ ಸವಿತೃ. ಇಂದ್ರಿಯ ವ್ಯಾಪಾರಗಳಿಗೆಲ್ಲ ಮೂಲವಾದ ಮನಸ್ಸಿನ ವ್ಯಾಪಾರಕ್ಕೂ ಕಾರಣವಾದ ಬುದ್ಧಿಯನ್ನು ಪ್ರೇರೇಪಿಸುವವನೇ ಆತನು.

ಈ ಸವಿತೃದೇವನು ತನ್ನ ದಿವಾಕಿರಣದಿಂದ ಸೂರ್ಯನಾಗಿ, ನಿಶಾಕಿರಣದಿಂದ ಚಂದ್ರನಾಗಿ, ಸ್ಥಿರಾಕಿರಣದಿಂದ ಭೂಮಿಯಾಗಿ, ರಸಕಿರಣದಿಂದ

ಜಲವಾಗಿ, ತೇಜಃಕಿರಣದಿಂದ ಅಗ್ನಿಯಾಗಿ, ಪ್ರಾಣನ ಕಿರಣದಿಂದ ವಾಯುವಾಗಿ, ಶೂನ್ಯಕಿರಣದಿಂದ ಆಕಾಶವಾಗಿ ಈ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿರುವನು. ಅದರಿಂದಲೇ ತಿಳಿದವರು "ಭಿನ್ನಾಪ್ರಕೃತಿ ರಷ್ಟಧಾ" ಎಂದು ಹೇಳಿ ಏಕವಾಗಿದ್ದು ಲೋಕಸ್ಥಿತಿಗೋಸ್ಕರ ಭಿನ್ನವಾದ ಸವಿತೃದೇವನನ್ನು ಗುರುತಿಸುವರು. ಕೆಲವೆಡೆ ನಿಷ್ಕ್ರಿಯೆಯಾಗಿಯೂ ಇನ್ನೂ ಕೆಲವೆಡೆ ಸಕ್ರಿಯೆಯಾಗಿಯೂ ಕಾಣುವ ಪ್ರಕೃತಿಯನ್ನು ಲೋಕದಲ್ಲಿ ಜಡಚೇತನವೆಂದು ವ್ಯವಹರಿಸುವರಾದರೂ ಜಡಚೇತನಗಳೆರಡೂ ಒಂದೇ ಪ್ರಕೃತಿಯ ಎರಡು ರೂಪಗಳು. ಈ ಪ್ರಕೃತಿ ಪುರುಷರ ವ್ಯಾಪಾರಕ್ಷೇತ್ರವೇ ಈ ಜಗತ್. ಜಗತ್ ಎಂದರೆ ನಿಲ್ಲದೆ ನಡೆಯುತ್ತಿರುವುದು ಎಂದು ಅರ್ಥ. ಎಂದರೆ ಜಗತ್ತು ಸ್ಥಿರವಾಗಿಲ್ಲ, ಓಡುತ್ತಿದೆ. ಹಾಗೆ ಓಡುತ್ತಿರುವ ಅಂಶ ಪ್ರಕೃತಿ. ಆ ಪ್ರಕೃತಿ ಕಣ್ಣಿಲ್ಲದ ಕುರುಡಿಯಂತೆ. ಆ ಪ್ರಕೃತಿಯು ಹೆಗಲಮೇಲೆ ಕುಳಿತು ಅವಳನ್ನು ಓಡಿಸುತ್ತಿರುವ ಸ್ಥಿರಾಂಶವೇ ಪುರುಷ. ಇವರಿಬ್ಬರೂ ಕಾಳಿದಾಸನು ಹೇಳುವಂತೆ "ಸ್ತ್ರೀ ಪುಂಸಾವಾತ್ಮಭಾಗೌ ತೇ । ಭಿನ್ನಮೂರ್ತೇಸ್ಸಿಸೃಕ್ಷಯಾ" — ಸೃಷ್ಟಿಮಾಡಬೇಕೆಂದು ಸಂಕಲ್ಪಿಸಿದ ಪರಬ್ರಹ್ಮದ ಸ್ತ್ರೀಪುರುಷ ರೂಪಗಳು.

ಈ ಸವಿತೃದೇವನ ರೂಪವೇ ಆದ ಸೂರ್ಯನಿಂದ ಅಹಃಕಿರಣವು ಹೊರಡುವುದು. ಅದು ಭೂಮಿಯನ್ನು ಸ್ಪರ್ಶಿಸಿದಾಗ ಪ್ರಾತಸ್ಸಂಧ್ಯೆಯು. ಚಂದ್ರನಿಂದ ಹೊರಟ ನಿಶಾಕಿರಣವು ಬಂದು ಭೂಮಿಯನ್ನು ಸ್ಪರ್ಶಿಸಿದಾಗ ಸಾಯಂಸಂಧ್ಯೆಯು. ಇದು ಬ್ರಹ್ಮಾಂಡದಲ್ಲಿ ನಡೆಯುತ್ತಿರುವಂತೆ ಪಿಂಡಾಂಡದಲ್ಲಿಯೂ ನಡೆಯುತ್ತಿರುವುದು. ಆದರೆ ಪಿಂಡಾಂಡದಲ್ಲಿ ಸಂಧ್ಯೆಗಳನ್ನು ಕಾಣಲು ಅಂತರ್ಮುಖಿಯಾಗಬೇಕು. ಜ್ಞಾನಿಯಾಗಬೇಕು. ಯೋಗಿಯಾಗಬೇಕು. ಹೊರಗಿನ ಸಂಧ್ಯೆಗಳನ್ನು ನೋಡಲು ಕಣ್ಣು ಮಾತ್ರ ಇದ್ದರೆ ಸಾಕು.

ಈ ಸಂಧ್ಯೆಗಳು ಜಗತ್ತಿನ ಗಡಿಯಾರಗಳು. ಸೃಷ್ಟಿಗೆ ಸೃಷ್ಟಿಯೇ ಈ ಗಡಿಯಾರಗಳನ್ನು ಹಿಡಿದು ತಮ್ಮ ವ್ಯಾಪಾರಗಳನ್ನು ನಡೆಸುವುವು. ಅಹಃ ಕಿರಣ ವ್ಯಾಪ್ತಿಯಾದಾಗ ಅಹಸ್ಸು. ಆಗ ಇಂದ್ರಿಯ ಮನೋಬುದ್ಧಿಗಳು ಬಹಿರ್ಮುಖಗಳಾಗಿ ಪ್ರವರ್ತಿಸುವುವು. ನಿಶಾಕಿರಣ ವ್ಯಾಪ್ತಿಯಾದಾಗ ಇಂದ್ರಿಯ ಮನೋಬುದ್ಧಿಗಳು ಅಂತರ್ಮುಖಗಳಾಗಿ ಅಡಗಿಕೊಳ್ಳುವುವು.

ವಿಕಾಸನ ಸಂಕೋಚನಗಳಿಗೆ ಕಾರಣವಾದ ಕಾಲಶಕ್ತಿಯ ರೂಪಗಳೆಂದು ಈ ಸಂಧ್ಯೆಗಳಿಗೆ ಆರ್ಯರು ಅಷ್ಟು ಪ್ರಾಶಸ್ತ್ಯ ಕೊಟ್ಟರು.

ಈ ಸಂಧ್ಯೆಗಳ ಈ ಸ್ವರೂಪವನ್ನು ಗುರುತಿಸಿ ಆ ಕಾಲದಲ್ಲಿ ತನ್ನ ದೇಹವನ್ನು ಶುಚಿಮಾಡಿಕೊಂಡು, ತನ್ನ ಜಗತ್ತನ್ನು ಶುದ್ಧಿಮಾಡಿಕೊಂಡು ಜಗತ್ತಿಗೆಲ್ಲ ಆತ್ಮರೂಪನಾದ ಸೂರ್ಯನಿಂದ ಆ ಗಾಯತ್ರಿಯನ್ನು ಆಕರ್ಷಿಸಿಕೊಂಡು, ಅದನ್ನು ತನ್ನ ಹೃದಯದಲ್ಲಿ ಧಾರಣಮಾಡಿ ಸವಿತೃದೇವನ ತೇಜೋರಾಶಿಯನ್ನು ಆರಾಧನಮಾಡಿ ಆ ತೇಜಸ್ಸಿನ ವಿಕೀರ್ಣಸ್ವರೂಪರಾದ ದೇವತೆಗಳನ್ನೂ ನಮಸ್ಕಾರಮಾಡಿ ತನ್ನ ಶ್ರೇಯಸ್ಸನ್ನು ಸಾಧಿಸಿಕೊಳ್ಳುವುದೇ ಸಂಧ್ಯಾವಂದನವು.

ಈ ಗುಟ್ಟನ್ನು ಆರ್ಯರು ಅರಿತರು. ಈ ಗುಟ್ಟನ್ನು ಅರಿತವರೇ ಆರ್ಯರು. ಈ ಗುಟ್ಟು ತಿಳಿದವರೆಲ್ಲರೂ ಆರ್ಯರೇ ಆಗುವರು. ಪ್ರಕೃತಿಯ ಗುಟ್ಟುಗಳನ್ನು ಅರಿಯುವುದು ಯೋಗ್ಯರಾದವರಿಗೆ ಅದನ್ನು ಬೋಧಿಸುವುದು, ಇದು ಆರ್ಯರ ಕರ್ತವ್ಯ. ಹಾಗೆ ಮಾಡುವುದೇ ಅಧ್ಯಯನ-ಅಧ್ಯಾಪನ ರೂಪವಾದ ಬ್ರಹ್ಮಯಜ್ಞ. ಬ್ರಹ್ಮಯಜ್ಞ ಮಾಡದವನಿಗೆ ಋಷಿ ದೇವ ಋಣಗಳು ತೀರುವುದಿಲ್ಲ. ಈ ಋಣಗಳು ಪ್ರತಿಯೊಬ್ಬರಿಗೂ ಹುಟ್ಟುತ್ತಲೇ ಬಂದಿರುವುವು. ಅವುಗಳನ್ನು ತೀರಿಸುವುದು ಎಂದರೆ ತನ್ನನ್ನು ಕಟ್ಟಿದ್ದ ಪಾಶಗಳನ್ನು ಹರಿದು ಸ್ವತಂತ್ರನಾಗುವುದು. ಹೀಗೆ ಅಪೂರ್ಣತೆಯಿಂದ ಪೂರ್ಣತೆಗೆ ಕರೆದೊಯ್ಯುವ ಹಾದಿಗಳು ಸಂಸ್ಕಾರಗಳು. ಆ ಸಂಸ್ಕಾರಗಳಲ್ಲಿ ಪುನರ್ಜನ್ಮವೆನ್ನಿಸಿಕೊಳ್ಳುವ ಉಪನಯನವಾದಾಗ ವಟುವಿಗೆ ಲಭಿಸುವ ಯೋಗ ಸಂಧ್ಯಾವಂದನ ಅಥವಾ ಸಂಧ್ಯೋಪಾಸನ. ಇದೇ ಪ್ರಾಜಾಪತ್ಯವ್ರತ.

ಇದನ್ನು ಎಲ್ಲರೂ ಆಚರಿಸಬೇಕು. ಸ್ಥಾವರಜಂಗಮಗಳಲ್ಲೆಲ್ಲ ನಡೆಯುತ್ತಿರುವ ಈ ಕ್ರಿಯೆಯನ್ನು ಸಂಕಲ್ಪಪೂರ್ವಕವಾಗಿ ಸಮಂತ್ರಕವಾಗಿ ಮಾಡುವುದೇ ಸಂಧ್ಯೋಪಾಸನ. ಆಗ ಅದು ಚೇತನವ್ಯಾಪಾರವಾಗುವುದು. ಹಾಗಿಲ್ಲದೆ ಅದನ್ನು ಗುರುತಿಸುವುದೂ ಇಲ್ಲದೆ, ತಾನಾಗಿ ನಡೆದರೆ ಅದು ಜಡವ್ಯಾಪಾರವಾಗುವುದು. ಚೇತನವ್ಯಾಪಾರ ಮಾಡುವವನು ತಾನೂ ಉದ್ಧಾರವಾಗಿ ಇತರರನ್ನೂ ಉದ್ಧಾರಮಾಡಬಲ್ಲವನಾಗಿ ನಿಯೋಜಕನಾಗುವನು. ಜಡವ್ಯಾಪಾರಿಯು ಜಡವಸ್ತುವಿನಂತೆ ನಿಯೋಜ್ಯನಾಗುವನು. ನಿಯೋಜಕನು

ಸ್ವತಂತ್ರ; ನಿಯೋಜ್ಯನು ಪರತಂತ್ರ. ಪಾರತಂತ್ರ್ಯವನ್ನು ತಪ್ಪಿಸಿಕೊಂಡು ಸ್ವಾತಂತ್ರ್ಯವನ್ನು ಪಡೆದವರೇ ಆರ್ಯರು. ಅವರು ಈ ವಿಶ್ವವನ್ನೇ ಆರ್ಯವನ್ನಾಗಿ ಮಾಡಬಲ್ಲರು. ಅಂತಹವರ ಸನ್ನಿಧಾನದಲ್ಲಿ ಅನಾರ್ಯವಾದ ವಿಶ್ವವೆಲ್ಲವೂ ಆರ್ಯವಾಗುವುದು. ಇಂತಹ ಆರ್ಯಋಷಿಗಳ ಆಶ್ರಮದಲ್ಲಿ ಉಗ್ರ ಜಂತುಗಳೂ ತಮ್ಮ ಸಹಜವಾದ ಹಿಂಸಾಗುಣವನ್ನು ಬಿಟ್ಟು ಸಾತ್ವಿಕವಾಗುತ್ತಿದ್ದುವು.

"ಜಗತ್ತೆಲ್ಲವೂ ಒಬ್ಬನೇ ಒಬ್ಬ ಸವಿತೃದೇವನ ತೇಜಃಪ್ರಸಾರಣವೆಂದರೆ ಈಗ ಕಾಣುವ ವೈವಿಧ್ಯ, ನಾನಾತ್ವ, ಅನೇಕತ್ವ ಎಲ್ಲಿಂದ ಬಂದುವು? ಜಗತ್ತಿನಲ್ಲಿರುವ ಉಚ್ಚನೀಚಾದಿ ಭಾವಗಳೆಲ್ಲಿಯವು?" ಎಂಬ ಪ್ರಶ್ನ ವಿಚಾರದ ಆರಂಭದಲ್ಲಿಯೇ ಬರುವುದು. ಅಥವಾ ಜಗತ್ತಿನ ನಾನಾರೂಪ ದರ್ಶನದಿಂದ ಮನಸ್ಸಿನಲ್ಲಿ ಮೂಡುವ ಮಂಥನವೇ ವಿಚಾರದ ಮೂಲವೆಂದರೂ ತಪ್ಪಿಲ್ಲ. ಈ ಪ್ರಶ್ನಕ್ಕೆ ಸಾಂಗವಾಗಿ ಉತ್ತರಕೊಡಬೇಕಾದುದು ಕರ್ತವ್ಯ.

ಹಿಂದೆ ಹೇಳಿರುವ ಪ್ರಕೃತಿ ಪುರುಷಸ್ವರೂಪರಾದ ಅಗ್ನಿಷೋಮ ಮಂಡಲವು ನಿರ್ಗುಣವು ಸಗುಣವಾದ ಘಟ್ಟ. ಈ ಮಂಡಲದಲ್ಲಿ ಚರ ಸ್ಥಿರ ಅಂಶಗಳೆರಡರ ಸಂಸರ್ಗದಿಂದಲೇ ಒಡೆಯುವುದಕ್ಕೆ ಆರಂಭವಾಗಿ ಗೀತೆಯು ಹೇಳುವಂತೆ ಪ್ರಕೃತಿಯು ಭಿನ್ನಭಿನ್ನವಾಗಿ ಎಂಟು ಆಯಿತು. ಅಲ್ಲದೆ ಪ್ರಕೃತಿಯು ಗುಣಮಯಿ. ಪ್ರಕೃತಿ ಪುರುಷರ ಸಂಸರ್ಗದಲ್ಲಿ ಪ್ರಕಟವಾಗುವುದು ಈ ಗುಣ. ಸವಿತೃದೇವನ ಎಂಟು ಕಿರಣಗಳು ಎಂಟು ರೂಪವಾದ ಹಾಗೆ ಎಂಟು ರೂಪಗಳು ಈ ಮೂರು ಗುಣಗಳಿಗೆ ವಶವಾಗಿ ಇವೆಲ್ಲವೂ ಒಂದಕ್ಕೊಂದು ಸೇರುತ್ತವೆ. ಅಗ್ನಿಷೋಮ ಮಂಡಲದಲ್ಲಿಯೇ ಈ ಗುಣಗಳಿವೆ. ಈ ಒಂದು ಎರಡಾದಾಗ ಬರುವ ಅಲ್ಪತೆ ಅಥವಾ ಅಪೂರ್ಣತೆ, ಆ ಅಪೂರ್ಣತೆಗೆ ಗುಣ ಸಂಬಂಧದಿಂದ ಉಂಟಾಗುವ ವಿಕಾರ, ಇವೆರಡೂ ಈ ಜಗತ್ತಿನ ನಾನಾತ್ವ, ಅನೇಕತ್ವ, ವೈವಿಧ್ಯಗಳಿಗೆ ಕಾರಣ.

ಪ್ರಕೃತಿಯಲ್ಲಿ ಜಡವಾಗಿ ಪಂಚಭೂತವಾಗಿರುವ ಅಂಶವೊಂದು ಚೇತನವಾಗಿ ಜೀವವಾಗಿರುವ ಅಂಶವೊಂದು ಹೀಗೆ ಎರಡು. ಈ ಪಂಚಭೂತಗಳು ಗುಣಗಳ ವಶವಾಗಿ ಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಾಗಿ, ಈ ಮೂರೂ ಒಟ್ಟು ಸೇರಿ ದೇಹವನ್ನು ಕಟ್ಟಿದುವು. ಗೀತೆಯ ಮಾತಿನಲ್ಲಿ

ಹೇಳುವುದಾದರೆ ಇದೇ ಕ್ಷೇತ್ರ. ಈ ಕ್ಷೇತ್ರದಲ್ಲಿ ಅಲ್ಪತ್ವ, ಅಪೂರ್ಣತ್ವ, ಗುಣಾಧೀನತ್ವ ಎಂಬ ವಿಕಾರಗಳಿಂದ ಕೂಡಿರುವ ಜೀವನುಂಟು. ಅವನೇ ಕ್ಷೇತ್ರಜ್ಞ. ಈ ವಿಕಾರಗಳು ಒಂದೂ ಇಲ್ಲದೆ ಇವೆಲ್ಲಕ್ಕೂ ಅತೀತನಾಗಿದ್ದರೂ ಪ್ರಕೃತಿಸಂಬಂಧವಿಟ್ಟುಕೊಂಡಿರುವವನು ಪುರುಷೋತ್ತಮು. ಇದಿಷ್ಟೂ ಸೇರಿ ಜಗತ್ತು. ಇದರಾಚೆನದು ನಿರ್ಗುಣ. ಬುದ್ಧಿಯಿಂದ ವಿಚಾರಮಾಡುವವರು ಪುರುಷೋತ್ತಮನವರೆಗೂ ಹೋಗಬಹುದು.

ಹೀಗೆ ಪುರುಷೋತ್ತಮು, ಕ್ಷೇತ್ರಜ್ಞನಾದ ಅಕ್ಷರಪುರುಷ, ಕ್ಷೇತ್ರವಾದ ಕ್ಷರಪುರುಷ ಈ ಮೂವರ ಸಂಘಾತವು ಈ ಜಗತ್ತು. ಇಂತಹ ಜಗತ್ತಿನಲ್ಲಿ ಉಚ್ಚ ನೀಚಗಳು, ಆದನ್ನು ಕಲ್ಪಿಸುವ ಕರ್ಮಗಳು ಸಹಜವಾಗಿ ತಲೆದೋರುವುವು.

ಬೀಜ ವೃಕ್ಷ ನ್ಯಾಯವನ್ನು ನೋಡಿ. ಬೀಜದಿಂದ ಅಂಕುರವು ಹೊರಟಾಗಲೇ ಎಲೆಕಡ್ಡಿಗಳಾಗಿ ಹೊರಡುವುದು. ಎಲೆಯು ಚರಾಂಶವಾಗಿದ್ದು ಬಿದ್ದುಹೋಗುವುದು. ಸ್ಥಿರಾಂಶವಾದ ಕಡ್ಡಿಯು ಬೆಳೆದುಬರುವುದು. ಮುಂದೆ ವೃಕ್ಷವಾಗಿ ನಿಂತಾಗ, ಈ ಕಡ್ಡಿಯೇ ಸ್ಥಿರವಾದ ಮೂಲವಾಗಿ, ಶಾಖೆ ಪ್ರಶಾಖೆಗಳಿಗೆ ಆಧಾರವಾಗಿ, ಚಿಗುರು, ಎಲೆ, ಕಾಯಿ, ಹಣ್ಣು, ಎಲ್ಲಕ್ಕೂ ಪ್ರಕಟಸ್ಥಾನವಾಗುವುದು. ಈ ವೈವಿಧ್ಯವೆಲ್ಲ ಬೀಜದಿಂದಲೇ, ಬೀಜವೊಂದರಿಂದ ತಾನೇ ಬಂದುದು? ಒಂದೇ ಮರದಲ್ಲಿ ಅವಸ್ಥಾಭೇದದಿಂದ ಬರುವ ರಸ ವೈವಿಧ್ಯ, ಗುಣವೈವಿಧ್ಯಗಳನ್ನೂ ಬೀಜವೂ ಕ್ಷೇತ್ರಬಲದಿಂದ ರಸ, ಪಾಕ, ಮೊದಲಾದವುಗಳಲ್ಲಿಯೂ ಭಿನ್ನಯಿಸುವುದನ್ನೂ ಗಮನಿಸಿ.

ಹಾಗೆಯೇ ಮನುಷ್ಯ ಗರ್ಭವನ್ನು ಕುರಿತು ವಿಚಾರಿಸಿ. ಸೂಕ್ಷ್ಮವಾಗಿ ಸೂಜಿಯ ಕೊನೆಯಲ್ಲಿ ನಿಲ್ಲುವ ತೈಲಬಿಂದುವಿನಲ್ಲಿ ನೂರರಲ್ಲಿ ಒಂದು ಪಾಲಾದ ರೇತೋಬೀಜವು ಗರ್ಭದಲ್ಲಿ ಬೆಳೆದು, ಬೆಳೆದು ಮಗುವಾಗಿ ಈಚೆಗೆ ಬರುವಾಗ ಅಸ್ಥಿ, ಮಾಂಸ, ರಕ್ತ, ಮಜ್ಜಾ, ಮೇದಸ್ಸು, ತ್ವಕ್ಕು, ಲೋಮವೆಂಬ ಸಪ್ತ ಭಿನ್ನರೂಪಗಳಿಂದ ಕೂಡಿರುವ ಪಿಂಡವಾಗಿ ಈಚೆಗೆ ಬರುವುದು. ಏಕೋದರದಲ್ಲಿಯೇ ಎಷ್ಟೋ ಭಿನ್ನತೆಯಿರುವುದು. ಈ ಪಿಂಡವು ಇಷ್ಟು ವೈವಿಧ್ಯವನ್ನು ಸಂಪಾದಿಸಿದಂತೆಯೆ ಏಕೈಕವಾಗಿದ್ದ ಬ್ರಹ್ಮವು ಬ್ರಹ್ಮಾಂಡದಲ್ಲಿ ಅನೇಕವಾಗಿ ಇಷ್ಟು ವೈವಿಧ್ಯವನ್ನು ತೋರುವುದು.

ಹೀಗೆ ಜೀವಜೀವರು-ನಾನಾವಿಧವಾಗಿರುವುದರಿಂದಲೇ, ಅವರ ಗುಣ ಕರ್ಮ, ಶ್ರದ್ಧಾ ಎಲ್ಲವೂ ಬೇರೆಬೇರೆಯಾಗಿರುವುದು. ಕರ್ಮಗಳಲ್ಲಿ ದಿನ ದಿನದ ಐಹಿಕಜೀವನಕ್ಕೆ ಮಾಡಬೇಕಾದ ಅಶನವಸನಾದಿ ಭೋಗಸಾಧನಗಳನ್ನು ಸಂಪಾದಿಸುವ ಕರ್ಮವೇ ಬಲವಾಗಿರುವುದು ಕೆಳಗಿನ ಮೆಟ್ಟಲಲ್ಲಿ. ಮೇಲು ಮೇಲಿನ ಹಂತಗಳಲ್ಲಿ ಕರ್ಮದ ಜೊತೆಗೆ ವಿಚಾರ, ವಿಚಾರದಿಂದ ಜ್ಞಾನ, ಜ್ಞಾನದಿಂದ ವಿಜ್ಞಾನ, ಇವು ಕಾಣುವುವು. ಹೀಗೆ ವಿಚಾರಪರರಾಗಿ, ಜ್ಞಾನ ವಿಜ್ಞಾನಗಳನ್ನು ಸಾಧಿಸಬೇಕು ಎಂದವರೆಲ್ಲ ಈ ಸಂಧ್ಯೋಪಾಸನವನ್ನು ಮಾಡಬೇಕು.

ಆಗಲೇ ಹೇಳಿರುವಂತೆ ಜೀವಜೀವರೂ ಸಂಧ್ಯೆಯನ್ನು ಸಮಂತ್ರಕವಾಗಿ ಆರಾಧಿಸುತ್ತಿದ್ದಾರೆ. ಸಂಧ್ಯೆಗಳಲ್ಲಿ ಮನಃಪ್ರಸಾದವು ಒಂದು ಗಳಿಗೆಯೇ ಆದರೂ ತಾನಾಗಿ ಬರುವುದು. ಆ ಮನಃಪ್ರಸಾದವು ಬರುವುದು ದೇಹದಲ್ಲಿ ರುವ ಸೂರ್ಯಚಂದ್ರರೂ, ಬ್ರಹ್ಮಾಂಡದಲ್ಲಿರುವ ಸೂರ್ಯಚಂದ್ರರೂ ತಮ್ಮ ತಮ್ಮ ಗತಿಗಳನ್ನು ಸರಿಮಾಡಿಕೊಳ್ಳುವುದರಿಂದ. ಹಾಗೆ ಸೂರ್ಯಚಂದ್ರರು ಪಿಂಡಾಂಡ ಬ್ರಹ್ಮಾಂಡಗಳಲ್ಲಿ ಸಂಧ್ಯಾಸಮಯದಲ್ಲಿ ಋಜುಗತಿಗೆ ಬರಲೇ ಬೇಕು ಎಂಬುದು ಸೃಷ್ಟಿಯ ನಿಯಮ. ರುಗ್ಣವಾಗಿರುವ ದೇಹದಲ್ಲಿಯೂ ಈ ಕ್ರಿಯೆಯು ನಡೆಯುವುದು. ಅದರಿಂದಲೇ ದೇಹವು, ಶಾಂತವಾಗಿ, ಶ್ವಾಸವು ಋಜುವಾಗಿ, ಮನಸ್ಸು ಪ್ರಸಾದವಾಗುವುದು. ಈ ಮನಃಪ್ರಸಾದವು ಯಾವಾಗಲೂ ಇರುವಂತೆ ಮಾಡಿಕೊಳ್ಳುವ ಕರ್ಮ ಕ್ಷಣಿಕವಾದ ಮನಃಪ್ರಸಾದವು ಸ್ಥಿರವಾಗಿ ಶಾಂತಿ, ಜ್ಞಾನ, ಆನಂದಗಳು ವಿಕಾಸವಾಗುವಂತೆ ಮಾಡಿ ಕೊಡುವ ಸಾಧನ, ಈ ಸಮಂತ್ರಕವಾದ ಸಂಧ್ಯೋಪಾಸನ.

ಅದರಿಂದ ಸರ್ವರೂ ಈ ಸಂಧ್ಯೋಪಾಸನ ಮಾಡಬೇಕು. ಮಾಡಿದರೆ, ಅಪಾರವಾದ ಲಾಭವುಂಟು ಎಂಬುದು ಎಲ್ಲರಿಗೂ ಅನುಭವವಾದರೆ, ಸಂಧ್ಯಾ ವಂದನೆ ಬೇಡವೆನ್ನುವವರು ಯಾರು ?

ಹಾಗಾದರೆ ಸ್ತ್ರೀ ಶೂದ್ರರೂ ಇದನ್ನು ಮಾಡಬೇಕೋ ಎಂದರೆ, ಹೌದು. ಸಂದೇಹವೇ ಇಲ್ಲದೆ ಹೌದು. ಕೃಷಿಮಾಡುವವರು ಹೇಗೆ ಬೀಜ ವೃಕ್ಷಗಳೆರಡಕ್ಕೂ ಸಂಸ್ಕಾರವನ್ನು ಅಪೇಕ್ಷಿಸುವರೋ ಹಾಗೆಯೇ ಮಾತಾ

ಪಿತೃಗಳಾಗುವ ಸ್ತ್ರೀಪುರುಷರಿಬ್ಬರಿಗೂ ಸಂಸ್ಕಾರವು ಬೇಕೇಬೇಕು ಎನ್ನುವುದು ಸರಿ.

ಉಪನಯನವಾದರೆ ಸ್ತ್ರೀಗೆ ಗೋತ್ರವು ಬರುವುದು, ವ್ಯಕ್ತಿತ್ವವು ಬರುವುದು, ಅದರಿಂದ ಗಂಡನು ಮಾಡುವ ವ್ರತಾದಿಗಳಿಗೆ ಲೋಪಬರುವುದು ಎಂಬ ಧರ್ಮವಿಚಾರ ಸದ್ಯದಲ್ಲಿ ಅಪ್ರಸಕ್ತ. ಅಲ್ಲದೆ, ಹಾಗೆ ಆದಾಗ ಏನು ಮಾಡಬೇಕು ಎಂಬುದು ಧರ್ಮಾಚಾರ್ಯರಿಗೆ ಗೊತ್ತೇ ಇದೆ.

ಇನ್ನು ಶೂದ್ರರ ಮಾತು. ಎಲ್ಲರೂ ಆಚಾರದಿಂದ ಶೂದ್ರರೇ ಆಗಿರುವಾಗ ಈ ಮಾತು ಎತ್ತುವುದೇ ಸರಿಯಲ್ಲ. ಅಲ್ಲದೆ, ಧರ್ಮರಾಯನು ಹೇಳಿದಂತೆ ನೋಡಬೇಕು ಎಂದರೆ ತಪ್ಪಿಲ್ಲ.

ಸತ್ಯಂ ದಾನಂ ಕ್ಷಮಾಶೀಲಮಾನೃಶಂಸ್ಯಂ ತಪೋಘೃಣಾ ದೃಶ್ಯಂತೇ ಯತ್ರ ನಾಗೇಂದ್ರ ಸ ಬ್ರಾಹ್ಮಣ ಇತಿ ಸ್ಮೃತಃ ||............ಶೂದ್ರೇತು ಯದ್ಭವೇಲ್ಲಕ್ಷ್ಮದ್ವಿಜೇ ತಚ್ಚನ ವಿದ್ಯತೇ | ನ ವೈಶೂದ್ರೋ ಭವೇಚ್ಛೂದ್ರೋ ಬ್ರಾಹ್ಮಣೋ ನಚಬ್ರಾಹ್ಮಣಃ | ಯತ್ರೈತಲ್ಲಕ್ಷ್ಯ ತೇ ಸರ್ಪ ವೃತ್ತಂ ಸ ಬ್ರಾಹ್ಮಣಃ ಸ್ಮೃತಃ | ಯತ್ರೈತನ್ನ ಭವೇತ್ ಸರ್ಪ ತಂ ಶೂದ್ರಮಿತಿ ನಿರ್ದಿಶೇತ್ ||...........ಜಾತಿರತ್ರ ಮಹಾ ಸರ್ಪ ಮನುಷ್ಯತ್ವೇ ಮಹಾಮತೇ | ಸಂಕರಾತ್ ಸರ್ವ ವರ್ಣಾನಾಂ ದುಷ್ಪರೀಕ್ಷ್ಯೇತಿ ಮೇ ಮತಿಃ | ಸರ್ವೇ ಸರ್ವಾಸ್ವಪತ್ಯಾನಿ ಜನಯಂತಿ ಸದಾನರಾಃ | ವಾಂಗ್ಮೈಥುನಮಥೋ ಜನ್ಮ ಮರಣಂ ಸಮಂ ನೃಣಾಂ | ಇದಮಾರ್ಷಂ ಪ್ರಮಾಣಂ ಚ ಯೇ ಯಜಾಮಹ ಇತ್ಯಪಿ | ತಸ್ಮಾಚ್ಛೀಲಂ ಪ್ರಧಾನೇಷ್ಟಂ ವಿದ್ಯುರೇ ತತ್ವದರ್ಶಿನಃ ||........ಪ್ರಾಙ್ನಾಭಿವರ್ಧನಾತ್ ಪುಂಸೋ ಜಾತಕರ್ಮ ವಿಧೀಯತೇ || ತಥೋಪನಯನಂ ಪ್ರೋಕ್ತಂ ದ್ವಿಜಾತೀನಾಂ ಯಥಾಕ್ರಮಂ || ತದಾಸ್ಯ ಮಾತಾ ಸಾವಿತ್ರೀ ಪಿತಾತ್ವಾಚಾರ್ಯ ಉಚ್ಯತೇ | ತಾವಚ್ಛೂದ್ರಸಮೋಹ್ಯೇಷ ಯಾವದ್ವೇದೇನ ಜಾಯತೇ | ತಸ್ಮಿನ್ನೇವಂ ಮತಿದ್ವೈಧೇ | ಮನುಃ ಸ್ವಾಯಂಭೂವೋಽಬ್ರವೀತ್ | ಕೃತಕೃತ್ಯಾಃ ಪುನರ್ವರ್ಣಾಯದಿ ವೃತ್ತಂ ನವಿದ್ಯತೇ | ಸಂಕರಸ್ತತ್ರ ನಾಗೇಂದ್ರ ಬಲವಾನ್ ಪ್ರಸಮೀಕ್ಷಿತಃ | ಯತ್ರೇ ದಾನೀಂ ಮಹಾಸರ್ಪ ಸಂಸ್ಕೃತಂ ವೃತ್ತಮಿಷ್ಯತೇ || ತಂ ಬ್ರಾಹ್ಮಣಂಮಹಂ ಪೂರ್ವ ಮುಕ್ತವಾನ್ ಭುಜಗೋತ್ತಮಂ ||

—ಅರಣ್ಯಪರ್ವ—ಅಜಗರ ಪರ್ವ—೧೮೦ನೆಯ ಅಧ್ಯಾಯ.

ಜೊತೆಗೆ ಆಚಾರ, ಕಾಲ, ದೇಶಗಳಿಂದ ಆಗುತ್ತಿರುವ ವಿಪ್ಲವಗಳನ್ನು ಕಂಡವರು ರಾಗದ್ವೇಷಾದಿ ರಹಿತರಾಗಿ ಸಪ್ರಮಾಣವಾಗಿ ಧರ್ಮವನ್ನು ವಿಚಾರ ಮಾಡಿದರೆ ಈ ಮಾತು ಸರಿಯೆಂದು ಅಂಗೀಕೃತವಾಗುವುದರಲ್ಲಿ ಸಂದೇಹವಿಲ್ಲ. ಅಲ್ಲದೆ, ಗೀತಾಚಾರ್ಯನು ಹೇಳುವಂತೆ, ಸ್ವಭಾವಸ್ತು ಪ್ರವರ್ತತೇ, ನಿರೋಧಃ ಕಿಂಕರಿಷ್ಯತಿ || ಯದ್ಯಹಂಕಾರಮಾಶ್ರಿತ್ಯ ನ ಯೋತ್ಸ್ಯೇ ಇತಿ ಮನ್ಯಸೇ || ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ || ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ ||—ಸದೃಶಂ ಚೇಷ್ಟತೇಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ || ಇತ್ಯಾದಿ ವಾಕ್ಯಗಳನ್ನೆಲ್ಲ ಸಮನ್ವಯ ಮಾಡಿದರೆ, ಜಾತಿಯೂ ಸ್ವಭಾವವೂ ಬೇರೆ ಬೇರೆಯಾಗಿರುವದನ್ನು ನೋಡಿದರೆ, ಜಾಬಾಲ ಸತ್ಯಕಾಮನ ಕಥೆಯನ್ನು ನೆನೆದು, ಯಾವನಿಗೆ ಯಾವುದು ಬೇಕೋ ಅದನ್ನು ಅವನಿಗೆ ಕೊಡುವುದು ನ್ಯಾಯ.

ಅಲ್ಲದೆ, ಈ ಲೇಖನದಲ್ಲಿ ಮೇಲೆ ಹೇಳಿರುವಂತೆ, ದೇಹದೇಹದಲ್ಲಿಯೂ ನಡೆಯುತ್ತಿರುವ ಕರ್ಮವನ್ನು ಮಾಡಿಕೊಳ್ಳಲು ಯಾರದೇನಡ್ಡಿ ?



ಬೆಂಗಳೂರು ಸಿಟಿ ಸುಬೋಧ ಮುದ್ರಣಾಲಯದಲ್ಲಿ ಬಿ. ರಂಗನಾಥರಾಯರಿಂದ ಮುದ್ರಿಸಲ್ಪಟ್ಟಿತು.—೧೯೫೧.